ಟಾಲ್‌ಸ್ಟಾಯ್ ಅವರ

ನಾಲ್ಕು ನೀಳ್ಗತೆಗಳು



# ಸಂಸಾರ ಸುಖ

ಕನ್ನಡಕ್ಕೆ ಡಾ. ಪಿ ವಿ ನಾರಾಯಣ

*Samsaara Sukha* : a collection of four novellas by Leo Tolstoy, rendered into Kannada by Dr. P.V Narayana ; published by Vasantha Enterprises; No. 265, Basement, 3rd Main Road, Chamarajpet, Bangalore - 560 018, India.
Telephone : 080-22443996,
email : vasantha_prakashana@yahoo.com
website : www.vasanthaprakashana.com

First edition : 2015


ಪ್ರಥಮ ಮುದ್ರಣ : 2015
ಉಪಯೋಗಿಸಿದ ಕಾಗದ : 70 ಜಿಎಸ್‌ಎಂ ಮ್ಯಾಪ್‌ಲಿಥೊ
ಪುಟಗಳು : 312 ಬೆಲೆ : ರೂ. 220

ಮುಖ ಪುಟ ಮತ್ತು ಒಳಪುಟ ವಿನ್ಯಾಸ : ವಸಂತ ಪ್ರಕಾಶನ
ಮುದ್ರಣ : ಪೂರ್ಣಿಮಾ ಪ್ರಿಂಟರ್ಸ್

## ಪ್ರಕಾಶಕರ ಮಾತು

ಹಿರಿಯ ಲೇಖಕರೂ ವಚನ ಸಾಹಿತ್ಯ ಕುರಿತಂತೆ ಆಳ ತಿಳಿವಳಿಕೆಯನ್ನು ಕೊಡುವ ವಿದ್ವತ್ ತುಂಬಿದ ಪ್ರೌಢ ಗ್ರಂಥಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡಿರುವವರೂ ಆದ ಡಾ. ಪಿ.ವಿ. ನಾರಾಯಣ ಅವರು ಪ್ರಸ್ತುತ ಲೋಕವಿಖ್ಯಾತ ಸಾಹಿತಿ ಟಾಲ್‌ಸ್ಟಾಯ್ ಅವರ ನಾಲ್ಕು ನೀಳ್ಗತೆಗಳನ್ನು ಕನ್ನಡಕ್ಕೆ ತಂದಿದ್ದಾರೆ. 'ಸಂಸಾರ ಸುಖ', 'ಕ್ರೂಸರ್ ಸೊನಾಟ', 'ಯಜಮಾನ-ಆಳು' ಮತ್ತು 'ಫಾದರ್ ಸರ್ಜಿಯಸ್' ಈ ಸಂಕಲನದಲ್ಲಿರುವ ಕತೆಗಳು.

ಈ ಕತೆಗಳನ್ನು ಪ್ರಕಟಿಸಲು ಅನುಮತಿ ನೀಡಿರುವ ಡಾ.ಪಿ.ವಿ.ನಾರಾಯಣ ಅವರಿಗೆ ಮತ್ತು ನಮ್ಮ ಪ್ರಕಾಶನ ಸಂಸ್ಥೆಯ ಪುಸ್ತಕಗಳನ್ನು ಓದಿ ಬೆಂಬಲ ನೀಡುತ್ತಿರುವ ಓದುಗರಿಗೆ ನಮ್ಮ ಧನ್ಯವಾದಗಳು.

# ಪರಿವಿಡಿ

# ಸಂಸಾರ ಸುಖ

## ಭಾಗ 1

ನಾವು ನಮ್ಮ ತಾಯಿಯ ಸಾವಿನ ಸೂತಕದಲ್ಲಿದ್ದೆವು. ಅವಳು ಸತ್ತದ್ದು ಕಾರ್ತಿಕ ಮಾಸದಲ್ಲಿ. ಆಗ ನಾನು ಹಳ್ಳಿಯಲ್ಲಿ ಕಾತ್ಯಾ ಹಾಗೂ ಸೋನ್ಯಾ ಜೊತೆ ಇದ್ದೆ.

ಕಾತ್ಯಾ ನಮ್ಮ ಕುಟುಂಬದ ಹಳೆಯ ಪರಿಚಯದವಳು. ನಮ್ಮನ್ನೆಲ್ಲ ಬೆಳೆಸಿದ ಒಬ್ಬಳೇ ದಾದಿ. ನನಗೆ ನೆನಪಿರುವ ಹಾಗೆ, ಮೊದಲಿನಿಂದಲೂ ನಾನವಳನ್ನು ಪ್ರೀತಿಸುತ್ತಿದ್ದೆ. ಸೋನ್ಯಾ ನನ್ನ ತಂಗಿ. ಪೊಕ್ರೋವ್ಸ್ಕೊದ ನಮ್ಮ ಹಳೆಯ ಮನೆಯಲ್ಲಿ ಕಳೆದಿದ್ದ ಆ ಮಾಗಿಯ ಕಾಲ ಕರಾಳವೂ ದುಃಖಪೂರಿತವೂ ಆಗಿತ್ತು. ವಿಪರೀತ ಚಳಿ, ಜೊತೆಗೆ ಗಾಳಿಯೂ ಹೆಚ್ಚು; ಕಿಟಕಿಗಳಿಗಿಂತ ಮೇಲಿನ ಮಟ್ಟದವರೆಗೂ ಮಂಜು ಸುರಿಯುತ್ತಿತ್ತು; ಕಿಟಕಿಯ ಗಾಜುಗಳು ಕಾವಳದಿಂದಾಗಿ ಯಾವಾಗಲೂ ಮಬ್ಬಾಗಿರುತ್ತಿದ್ದವು. ಹೀಗಾಗಿ ಚಳಿಗಾಲವಿಡೀ ನಾವು ಹೊರಗೆ ನಡೆದಾಗಲೀ ಗಾಡಿಯಲ್ಲಾಗಲೀ ಹೋಗುತ್ತಿದ್ದುದು ಅಪರೂಪ. ನಮ್ಮ ಮನೆಗೆ ಬರುತ್ತಿದ್ದವರೂ ಕೆಲವರು ಮಾತ್ರ, ಹಾಗೆ ಬಂದವರು ಕೂಡ ನಮಗೆ ಹೆಚ್ಚಿನ ಗೆಲುವನ್ನಾಗಲೀ ಸಂತೋಷವನ್ನಾಗಲೀ ತರುತ್ತಿದ್ದವರಲ್ಲ. ಅವರ ಮುಖದ ಮೇಲೆ ಪ್ರೇತಕಳೆ ತಾಂಡವವಾಡುತ್ತಿತ್ತು, ಅವರ ಮಾತು ಪಿಸುಗುಟ್ಟುವಂತೆ ಇರುತ್ತಿತ್ತು. ತಾವೆಲ್ಲಿ ಯಾರನ್ನಾದರೂ ಎಬ್ಬಿಸಿಬಿಡುತ್ತೇವೇನೋ ಎಂಬ ಕಾತರ ತುಂಬಿದಂತೆ ಅವರ ಮುಖಗಳು ಕಾಣುತ್ತಿದ್ದವು. ಅವರಾರೂ ನನ್ನನ್ನು ಕಂಡಾಗಲೆಲ್ಲ ನಗುತ್ತಿರಲಿಲ್ಲ, ಬದಲಿಗೆ ನಿಟ್ಟುಸಿರುಬಿಡುತ್ತಿದ್ದರು, ಕೆಲವು ವೇಳೆ ಕಣ್ಣೀರನ್ನೂ ಸುರಿಸುತ್ತಿದ್ದರು, ಅದರಲ್ಲೂ ಕಪ್ಪು ಫ್ರಾಕ್ ತೊಟ್ಟ ಪುಟ್ಟ ಸೋನ್ಯಾಳನ್ನು ನೋಡಿದಾಗಲಂತೂ ಇದು ಮತ್ತಷ್ಟು ಹೆಚ್ಚಾಗುತ್ತಿತ್ತು. ಸಾವಿನ ಮಸಿ ಮನೆಗೆಲ್ಲ ಅಂಟಿಕೊಂಡಿತ್ತು: ಸುಳಿದಾಡುವ ಗಾಳಿಯಲ್ಲೆಲ್ಲ

ಸಾವಿನ ದುಃಖ-ಭಯಗಳು ತುಂಬಿಕೊಂಡಿದ್ದವು. ನಮ್ಮಮ್ಮನ ಕೋಣೆಗೆ ಬೀಗ ಹಾಕಿದ್ದರು; ಮಲಗುವ ಮುನ್ನ ಅದರ ಮುಂದೆ ಹಾದುಹೋಗುವಾಗೆಲ್ಲ ಆ ತಣ್ಣನೆಯ ಖಾಲಿ ಕೋಣೆಯಲ್ಲಿ ಇಣುಕಬೇಕೆಂಬ ತವಕವುಂಟಾಗುತ್ತಿತ್ತು.

ನನಗಾಗ ಹದಿನೇಳು ವರ್ಷ. ಸತ್ತ ವರ್ಷ ನಮ್ಮಮ್ಮ ಪೀಟರ್ಸ್ಬರ್ಗ್‌ಗೆ ಹೋಗುವ ಬಯಕೆ ವ್ಯಕ್ತಪಡಿಸುತ್ತಿದ್ದಳು, ನನ್ನನ್ನು ಉನ್ನತ ಮಟ್ಟದ ಸಮಾಜದಲ್ಲಿ ಬೆಳೆಸಬೇಕೆಂಬ ಇಚ್ಛೆ ಅವಳದು. ನಮ್ಮಮ್ಮ ಸತ್ತದ್ದು ನನಗೆ ಅತೀವ ದುಃಖವನ್ನು ತಂದಿತ್ತು. ಆದರೆ ಆ ದುಃಖದ ಹಿಂದಿದ್ದ ಮತ್ತೊಂದು ಭಾವನೆಯನ್ನೂ ನಾನು ಹೇಳಿಕೊಳ್ಳಬೇಕು. ನಾನು ಚಿಕ್ಕ ವಯಸ್ಸಿನವಳೂ ಚೆಲುವೆಯೂ ಆಗಿದ್ದರೂ (ಹೀಗಂತ ಎಲ್ಲರೂ ಹೇಳುತ್ತಿದ್ದರು), ಹಳ್ಳಿಯ ಒಂಟಿತನದಲ್ಲಿ ಮತ್ತೊಂದು ವರ್ಷ ಕಳೆಯಬೇಕಲ್ಲ ಎಂಬ ಭಾವನೆ ಅದು. ಚಳಿಗಾಲ ಮುಗಿಯುವ ಮುನ್ನವೇ, ಈ ಬೇಗುದಿ, ಒಂಟಿತನ ಹಾಗೂ ಶುದ್ಧ ಬೇಸರಗಳು ಎಷ್ಟು ಹೆಚ್ಚಾದುವೆಂದರೆ, ನನ್ನ ಕೋಣೆ ಬಿಟ್ಟು ಬರಬೇಕೆಂದಾಗಲೀ ಪಿಯಾನೋ ಮೇಲೆ ಬೆರಳಾಡಿಸುವುದಕ್ಕಾಗಲೀ ಕೈಲಿ ಪುಸ್ತಕ ಹಿಡಿಯುವುದಕ್ಕಾಗಲೀ ನನಗೆ ಮನಸ್ಸಾಗುತ್ತಿರಲಿಲ್ಲ. ಏನಾದರೂ ಕೆಲಸ ಮಾಡು ಎಂದು ಕಾತ್ಯಾ ಹೇಳಿದಾಗ ನನ್ನ ಕೈಲಾಗುವುದಿಲ್ಲವೆಂದು ಹೇಳುತ್ತಿದ್ದೆ. ಆದರೆ, "ಅದರಿಂದೇನು ಪ್ರಯೋಜನ? ನನ್ನ ಬದುಕಿನ ಅತ್ಯಂತ ಮುಖ್ಯ ಭಾಗ ಹೀಗೆ ವ್ಯರ್ಥವಾಗುತ್ತಿರಬೇಕಾದರೆ ಏನನ್ನಾದರೂ ಮಾಡುವುದರಿಂದ ಏನುಪಯೋಗ?" ಎಂದು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತಿದ್ದೆ. ಈ ಪ್ರಶ್ನೆಗೆ ಉತ್ತರವೆಂಬಂತೆ ಕೆನ್ನೆಯ ಮೇಲೆ ಕಂಬನಿ ತೊಟ್ಟಿಕ್ಕುತ್ತಿತ್ತು.

ನಾನು ಬಡಕಲಾಗುತ್ತಿದ್ದೇನೆ, ಮುಖಕ್ಕೆ ಮಂಕು ಬಡಿದಿದೆ ಎಂದು ಕಂಡವರು ಹೇಳುತ್ತಿದ್ದರು; ಆದರೆ ಇದು ಕೂಡ ನನ್ನ ಆಸಕ್ತಿಯನ್ನು ಕುದುರಿಸಲು ಶಕ್ತವಾಗಿರಲಿಲ್ಲ. ಅದರಿಂದೇನಾಗಬೇಕು? ಯಾರಿಗೆ? ಈ ಒಂಟಿತನ, ಅಸಹಾಯಕ ಮಂಕುತನಗಳಲ್ಲಿಯೇ ನನ್ನ ಇಡೀ ಬದುಕು ಮುಗಿದುಹೋಗುತ್ತದೆ ಎನಿಸುತ್ತಿತ್ತು; ಆದರೆ ಇದರಿಂದ ಪಾರಾಗುವ ಸಾಮರ್ಥ್ಯ, ಅಷ್ಟೇಕೆ, ಆಸೆಯೂ ನನ್ನಲ್ಲಿರಲಿಲ್ಲ. ಚಳಿಗಾಲದ ಕೊನೆಯ ವೇಳೆಗೆ ಕಾತ್ಯಾ ನನ್ನ ಬಗ್ಗೆ ಆತಂಕಗೊಂಡಳು, ನನ್ನನ್ನು ದೂರ ದೇಶಕ್ಕೆ ಕರೆದೊಯ್ಯಲು ಪ್ರಯತ್ನಿಸಬೇಕೆಂದು ನಿರ್ಧರಿಸಿದಳು. ಆದರೆ ಇದಕ್ಕೆ ಹಣ ಬೇಕಲ್ಲ. ನಮ್ಮಮ್ಮ ತೀರಿಕೊಂಡ ಮೇಲೆ ನಮ್ಮ ಹಣಕಾಸಿನ ಪರಿಸ್ಥಿತಿ ಏನಾಗಿದೆ ಎಂಬ ಬಗ್ಗೆ ನಮಗೆ ಅರಿವಿರಲಿಲ್ಲ. ನಮ್ಮ ಸ್ಥಿತಿಯ ಬಗ್ಗೆ ಸ್ಪಷ್ಟ ಚಿತ್ರಣ ಕೊಡಬಲ್ಲ ಪೋಷಕರ ದಾರಿಯನ್ನು ನಾವು ಎದುರುನೋಡುತ್ತಿದ್ದೆವು.

ಅವರು ಬಂದದ್ದು ಮಾರ್ಚಿಯಲ್ಲಿ.

ಒಂದು ದಿನ ಬೆಳಿಗ್ಗೆ ಎದ್ದು ಕೆಲಸವಿಲ್ಲದೆ, ಆ ಯೋಚನೆಯೂ ಇಲ್ಲದೆ, ಅದರ ಆಸೆಯನ್ನೂ ಹೊಂದದೆ ಕೋಣೆಯಲ್ಲಿ ನೆರಳಿನಂತೆ ಅತ್ತಿತ್ತ ಶತಪಥ ಹಾಕುತ್ತಿದ್ದ ನನಗೆ ಕಾತ್ಯಾ, "ದೇವರು ದೊಡ್ಡವನು!" ಎಂದು ನಿಟ್ಟುಸಿರುಬಿಟ್ಟು,. ಸರ್ಜಿ ಮುಖೈಲ್ಯಿಚ್ ಬಂದಿದ್ದ ವಿಷಯ ತಿಳಿಸಿದಳು. "ನಮ್ಮ ಬಗ್ಗೆ ವಿಚಾರಿಸಿಕೊಂಡು ಹಾಗೇ ಊಟಕ್ಕೆ ಬರಬಹುದಾ ಅಂತ ಕೇಳಿಕೊಂಡು ಬರಾಕೆ ಹೇಳಿ ಕಳ್ಸಿದಾರೆ. ಮ್ಯಾಶ್ಚೆಂಕಾ, ನೀನು

ಗೆಲುವಾಗಬೇಕು, ಇಲ್ಲದಿದ್ದರೆ ಅವರು ನಿನ್ನ ಬಗ್ಗೆ ಏನಂದುಕೋತಾರೆ? ನಿಮ್ಮನ್ನೆಲ್ಲ ಕಂಡ್ರೆ ಅವರಿಗೆ ತುಂಬ ಇಷ್ಟ" ಎಂದು ಹೇಳಿದಳು.

ಸರ್ಜಿ ಮಿಖೈಲ್ಯಿಚ್ ನಮ್ಮ ಹತ್ತಿರದ ನೆರೆಹೊರೆಯವರು. ತುಂಬ ಚಿಕ್ಕ ವಯಸ್ಸಿನವರಾದರೂ ನಮ್ಮ ತಂದೆಯ ಗೆಳೆಯರಾಗಿದ್ದವರು. ಅವರ ಬರುವಿಕೆಯಿಂದ ನಮ್ಮ ಯೋಜನೆಗಳೆಲ್ಲ ಬದಲಾಗುವ ಹಾಗೂ ನಾವು ಹಳ್ಳಿಯನ್ನು ಬಿಟ್ಟು ಹೋಗಲು ಅನುಕೂಲವಾಗುವ ಸಂಭವವಿತ್ತು. ನನಗೆ ಅವರನ್ನು ಕಂಡರೆ ಮೊದಲಿನಿಂದಲೂ ಅಕ್ಕರೆ, ಗೌರವ. ಗೆಲುವಾಗಿ ಕಾಣಿಸಿಕೊಳ್ಳುವಂತೆ ಕಾತ್ಯಾ ಕೇಳಿಕೊಂಡಾಗ, ನಮ್ಮ ಮಿಕ್ಕೆಲ್ಲ ಸ್ನೇಹಿತರುಗಳಿಗಿಂತ ಅವರ ಮುಂದೆ ಜೋಲು ಮೋರೆ ಹಾಕಿಕೊಳ್ಳುವುದು ನನಗೇ ಸರಿಹೋಗದು ಎಂದವಳು ಸರಿಯಾಗಿಯೇ ಊಹಿಸಿದ್ದಳು. ಮನೆಯಲ್ಲಿ ಮಿಕ್ಕೆಲ್ಲರಂತೆ, ಕಾತ್ಯಾಳಿಂದ ಹಿಡಿದು ಅವರ ಧರ್ಮಪುತ್ರಿ (ಗಾಡ್-ಡಾಟರ್) ಸೋನ್ಯಾವರೆಗೆ ಹಾಗೂ ಲಾಯದ ಆಳಿನವರೆಗೆ, ಅವರ ಬಗ್ಗೆ ಎಲ್ಲರಿಗೂ ವಾಡಿಕೆಯ ಪ್ರೀತಿಯಿತ್ತು, ಅದರಂತೆಯೇ ನನಗೂ. ಅಲ್ಲದೆ ನನಗೆ ಅವರು ಅದಕ್ಕೂ ಮಿಗಿಲಾಗಿದ್ದವರು, ಅದಕ್ಕೆ ಕಾರಣ ನಮ್ಮ ತಾಯಿ ಅವರ ಬಗ್ಗೆ ಒಮ್ಮೆ ನನ್ನ ಮುಂದೆ ಆಡಿದ್ದ ಒಂದು ಮಾತು: "ನೀನು ಅವರಂತಹ ವ್ಯಕ್ತಿಯನ್ನು ಮದುವೆಯಾಗಬೇಕೆಂದು ನನ್ನಾಸೆ" ಎಂಬುದೇ ಆ ಮಾತು. ಆ ಹೊತ್ತಿಗೆ ನನಗೆ ಈ ಮಾತು ವಿಚಿತ್ರವೆನಿಸಿತ್ತು, ಅಷ್ಟೇ ಅಲ್ಲ ಒಂದು ರೀತಿಯ ಇರಿಸುಮುರಿಸೂ ಉಂಟಾಗಿತ್ತು. ನನ್ನ ಆದರ್ಶದ ಗಂಡ ಬೇರೆಯೇ ಬಗೆಯವನಾಗಿದ್ದ; ಅವನು ಸಪೂರವಾಗಿರಬೇಕು, ಮಂಕಾಗಿರಬೇಕು, ವಿಷಣ್ಣತೆಯಿಂದ ಕೂಡಿರಬೇಕು. ಆದರೆ ಸರ್ಜಿ ಮುಖೈಲ್ಯಿಚ್ ಮಧ್ಯವಯಸ್ಸಿನವರು, ಎತ್ತರವಾಗಿ ಭರ್ಜರಿಯಾಗಿದ್ದ ಆಳು, ಅಲ್ಲದೆ ನನಗೆ ತಿಳಿದಂತೆ ಸದಾ ಉತ್ಸಾಹದಿಂದ ಕೂಡಿದವರು. ಇಷ್ಟಾದರೂ ನಮ್ಮ ತಾಯಿಯ ಮಾತು ನನ್ನ ಮನಸ್ಸಿನಲ್ಲಿ ನೆಲೆಯೂರಿತ್ತು. ಇದಾಗುವ ಆರು ವರ್ಷ ಮುಂಚೆಯೂ, ನನಗಾಗ ಹನ್ನೊಂದು ವರ್ಷ, ನನ್ನನ್ನಾಗ 'ನೀನು' ಎಂದೇ ಏಕವಚನದಲ್ಲಿ ಕರೆಯುತ್ತಿದ್ದರು, ನನ್ನ ಜೊತೆ ಆಟವಾಡುತ್ತಿದ್ದರು, ನನ್ನ ಮುದ್ದಿನ ಹೆಸರಾದ ವಯೊಲೆಟ್ ಎಂದೇ ಕರೆಯುತ್ತಿದ್ದರು. ಆಗಲೂ ನನಗೆ ಕೆಲವು ಸಲ "ಅವರು ಇದ್ದಕ್ಕಿದ್ದ ಹಾಗೆ ನನ್ನನ್ನು ಮದುವೆಯಾಗಲು ಬಯಸಿದರೆ ಏನು ಗತಿ" ಅನ್ನಿಸಿತ್ತು.

ಊಟಕ್ಕೆ ಕಾತ್ಯಾ ಸಿಹಿ ಮತ್ತು ಸೊಪ್ಪಿನ ಯಾವುದೋ ಖಾದ್ಯವನ್ನು ವಿಶೇಷವಾಗಿ ಮಾಡಿದ್ದಳು. ಸರ್ಜಿ ಮಿಖೈಲ್ಯಿಚ್ ಮುಂಚೆಯೇ ಬಂದರು. ಸಣ್ಣ ಗಾಡಿಯೊಂದರಲ್ಲಿ ಕುಳಿತು ಅವರು ಬರುತ್ತಿದ್ದುದನ್ನು ನಾನು ಕಿಟಕಿಯಿಂದಲೇ ನೋಡಿದೆ. ಆದರೆ ಮನೆಯ ಹತ್ತಿರದ ಮೂಲೆಯಲ್ಲಿ ಗಾಡಿ ತಿರುಗಿದಾಕ್ಷಣ, ನಾನು ಪಡಸಾಲೆಗೆ ಓಡಿಹೋದೆ. ಅವರು ನಮ್ಮ ಮನೆಗೆ ಬರುವ ವಿಷಯ ನನಗೆ ಗೊತ್ತೇ ಇರಲಿಲ್ಲವೇನೋ ಎಂದು ತೋರಿಸಿಕೊಳ್ಳುವುದು ನನ್ನ ಉದ್ದೇಶವಾಗಿತ್ತು. ಆದರೆ ಅವರ ಹೆಜ್ಜೆಸಪ್ಪಳ ಮತ್ತು ಅವರ ಧ್ವನಿ ಹಾಗೂ ಹಾಲಿನಲ್ಲಿ ಕಾತ್ಯಾಳ ಓಡಾಟದ ಸದ್ದುಗಳನ್ನು ಕೇಳಿದಾಗ, ನನ್ನ ಸಹನೆ

ಕಟ್ಟೆಯೊಡೆದು ಅವರನ್ನು ನೋಡಲು ನಾನಾಗಿ ಹಾಲ್ಗೆ ಹೋದೆ. ಅವರು ಕಾತ್ಯಾಳ ಕೈಕುಲುಕುತ್ತ ಜೋರಾಗಿ ಮುಗುಳ್ನಗೆಯೊಡನೆ ಮಾತಾಡುತ್ತಿದ್ದರು. ನನ್ನನ್ನು ಕಂಡೊಡನೆ ಅವರು ಅದನ್ನೆಲ್ಲ ನಿಲ್ಲಿಸಿ ಸ್ವಲ್ಪ ಹೊತ್ತು ನನ್ನ ಕಡೆಯೇ ನೋಡುತ್ತಿದ್ದರೇ ವಿನಾ, ತಲೆ ಕೂಡ ಬಾಗಿಸಲಿಲ್ಲ. ನನಗೆ ಇರಿಸುಮುರಿಸಾಯಿತು, ನಾಚಿಕೆಯೆನಿಸಿತು.

"ನೀನೇನಾ ಇದು?" ಎನ್ನುತ್ತ ಅವರು ತಮ್ಮದೇ ವಿಶಿಷ್ಟ ರೀತಿಯಲ್ಲಿ ಹೇಳುತ್ತ ನನ್ನೆಡೆಗೆ ತೆರೆದ ತೋಳುಗಳೊಡನೆ ಬಂದರು. "ಇಷ್ಟೊಂದು ಬದಲಾಗೋಕ್ಕೆ ಸಾಧ್ಯವಾ? ಎಷ್ಟೊಂದು ಬೆಳೆದುಬಿಟ್ಟಿದ್ದೀಯಾ! ನಿನ್ನನ್ನ ನಾನು ವಯೊಲೆಟ್ ಅಂತ ಕರೀತಿದ್ದೆ, ಆದರೆ ನೀನೀಗ ತುಂಬು ಅರಳಿದ ಗುಲಾಬಿ!" ಎಂದರು.

ತಮ್ಮ ದೊಡ್ಡ ಕೈಗಳಲ್ಲಿ ನನ್ನ ಕೈಗಳನ್ನು ತೆಗೆದುಕೊಂಡು ಅದುಮಿದರು, ಎಷ್ಟೆಂದರೆ ನನಗೆ ನೋವು ಅನ್ನಿಸಿತು. ನನ್ನ ಕೈಗೆ ಮುತ್ತಿಡುವರೆಂದು ನಿರೀಕ್ಷಿಸಿ ನಾನು ಅವರೆಡೆಗೆ ಸ್ವಲ್ಪ ಬಾಗಿದೆ. ಆದರೆ ಅವರು ಕೈಯನ್ನು ಮತ್ತೆ ಅದುಮಿ ನನ್ನ ಕಣ್ಣುಗಳಲ್ಲೇ ತಮ್ಮ ದಿಟ್ಟಿ ನೆಟ್ಟರು. ಅವರ ಮುಖದಲ್ಲಿ ಎಂದಿನ ದೃಢತೆ, ಲವಲವಿಕೆಗಳು ತುಂಬಿದ್ದವು.

ಅವರನ್ನು ನಾನು ಈ ಹಿಂದೆ ನೋಡಿ ಆರು ವರ್ಷಗಳೇ ಆಗಿದ್ದವು. ಅವರೂ ಸಾಕಷ್ಟು ಬದಲಾಗಿದ್ದರು, ವಯಸ್ಸೂ ಹೆಚ್ಚಾಗಿತ್ತು, ಮೈಬಣ್ಣ ಸ್ವಲ್ಪ ಕಪ್ಪಾಗಿತ್ತು. ಅವರ ಮುಖದ ಮೇಲೆ ಹಿಂದೆ ಇರದಿದ್ದ ಮೀಸೆ ಕಂಗೊಳಿಸುತ್ತಿತ್ತು. ಮಿಕ್ಕುದೆಲ್ಲ ಹೆಚ್ಚುಕಡಿಮೆ ಹಿಂದಿನಂತೆಯೇ ಇದ್ದವು: ಸರಳ ನಡವಳಿಕೆ, ಪ್ರಾಮಾಣಿಕತೆ ಮುಖದ ಎದ್ದು ಕಾಣುವ ಲಕ್ಷಣಗಳು, ಸ್ನೇಹಪರತೆ ಹಾಗೂ ಹುಡುಗಾಟದ ನಸುನಗು - ಎಲ್ಲ.

ಐದು ನಿಮಿಷ ಕಳೆಯುವಷ್ಟರಲ್ಲಿ ಅವರು ಅತಿಥಿಗಳಾಗಿ ಉಳಿಯದೆ ನಮ್ಮೆಲ್ಲರ ಗೆಳೆಯರಾಗಿಬಿಟ್ಟಿದ್ದರು. ಆಳುಗಳ ಜೊತೆ ಸಹ ಹಾಗೆಯೇ. ಅವರಿಗೆ ಉಪಚಾರ ಮಾಡುವುದಕ್ಕೆಂದು ಕಾತರರಾಗಿ ಕಾದಿದ್ದ ಅವರ ಬರುವಿಕೆ ಎಲ್ಲರ ಮುಖದ ಮೇಲೆ ಸಂತಸ ಮೂಡಿಸಿತ್ತು.

ನಮ್ಮಮ್ಮ ಸತ್ತ ಮೇಲೆ ನಮ್ಮ ಮನೆಗೆ ಬಂದಿದ್ದ ಬೇರೆಲ್ಲ ನೆರೆಹೊರೆಯವರಿಗಿಂತ ಇವರು ಭಿನ್ನವಾಗಿ ವರ್ತಿಸಿದರು. ನಮ್ಮ ಬಳಿ ಬಂದು ಕೂತಾಗ ಬೇರೆಯವರು ಮೌನದಿಂದ ಕಣ್ಣೀರು ಸುರಿಸುವುದೇ ಸರಿ ಎಂದು ಮಾತಾಡದೆ ಕುಳಿತಿದ್ದರೆ, ಇವರು ಮಾತ್ರ ಗೆಲುವಿನಿಂದ ಕೂಡಿ ವಾಚಾಳಿಗಳೆ ಆಗಿದ್ದರು. ಇದು ನನಗೆ ಮೊದಮೊದಲು ವಿಚಿತ್ರವೆನಿಸಿತ್ತೆಂಬುದು ಮಾತ್ರವಲ್ಲ, ಅಷ್ಟೊಂದು ಹತ್ತಿರದವರು ಹೀಗೆ ಮಾಡಿದ್ದು ಸರಿಯಲ್ಲವೆಂದೇ ಭಾವಿಸಿದ್ದೆ. ಆದರೆ ಅನಾದರವೆಂಬಂತೆ ಕಂಡದ್ದು ಹೃತ್ಪೂರ್ವಕತೆಯಾಗಿತ್ತು ಎಂಬುದು ಆನಂತರ ನನಗೆ ಅರ್ಥವಾಯಿತು, ಅದಕ್ಕಾಗಿ ಅವರ ಬಗ್ಗೆ ನನ್ನ ಹೃದಯ ತುಂಬಿ ಬಂತು. ಅಮ್ಮ ಪ್ರತಿದಿನ ಕುಳಿತಿರುತ್ತಿದ್ದ ಜಾಗದಲ್ಲಿ ಸಾಯಂಕಾಲ ಕಾತ್ಯಾ ಪಡಸಾಲೆಯಲ್ಲಿ ಎಂದಿನಂತೆಯೇ ಕೂತು ಚಹಾ ನೀಡಿದಳು; ಸೋನ್ಯಾ ಮತ್ತು ನಾನು ಸರ್ಜಿ ಮಿಖೈಲ್ಯಿಚ್ ಅವರ ಪಕ್ಕದಲ್ಲಿಯೇ ಕೂತಿದ್ದೆವು; ನಮ್ಮ ಹಳೆಯ

ಅಡುಗೆಯವನಾದ ಗ್ರಿಗರಿ ನಮ್ಮ ತಂದೆಯ ಯಾವುದೋ ಒಂದು ಪೈಪ್ ಅನ್ನು ಪತ್ತೆ ಹಚ್ಚಿ ಸರ್ಜಿ ಮುಖೈಲ್ವಿಚ್ ಅವರಿಗೆ ಕೊಟ್ಟ. ಹಿಂದಿನಂತೆಯೇ ಅವರು ಕೋಣೆಯಲ್ಲಿ ಶತಪಥ ತುಳಿಯಹತ್ತಿದರು.

ತನ್ನ ಓಡಾಟವನ್ನು ನಿಲ್ಲಿಸಿದ ಅವರು, "ಯೋಚನೆ ಮಾಡಿದರೆ, ಈ ಮನೆಯಲ್ಲಿ ಅದೆಷ್ಟು ಭಯಂಕರ ಬದಲಾವಣೆಗಳಾಗಿಬಿಟ್ಟಿವೆ ಅನ್ನಿಸತ್ತೆ ನಂಗೆ" ಎಂದರು.

'ಹ್ಞೂ' ಎಂದಳು ಕಾತ್ಯಾ ನಿಟ್ಟುಸಿರಿನೊಡನೆ. ಆಮೇಲೆ ಚಹಾ ಪಾಟಿನ ಮುಚ್ಚಳ ಮುಚ್ಚಿ ಅವರ ಕಡೆ ನೋಡಿದಳು. ಇನ್ನೇನು ಅವಳು ಅಳಲು ತೊಡಗುವಳೆನೋ ಅನ್ನಿಸಿತು.

"ನಿಂಗೆ ನಿಮ್ಮಪ್ಪನ ಜ್ಞಾಪಕ ಇರ್ಬೇಕು, ಅಲ್ವಾ" ಎಂದರವರು ನನ್ನ ಕಡೆ ತಿರುಗಿ.

"ಮಸಕುಮಸಕಾಗಿ" ಎಂದೆ ನಾನು.

"ಈಗಾಗಿದ್ರೆ ಎಲ್ಲರೂ ಎಷ್ಟು ಸಂತೋಷವಾಗಿರಬಹುದಾಗಿತ್ತು!" ಎಂದರು ಕುಗ್ಗಿದ ದನಿಯಲ್ಲಿ, ಏನೋ ಯೋಚಿಸುತ್ತ ನನ್ನ ಕಡೆ ತಿರುಗಿ ಮೇಲುಗಣ್ಣಿನಿಂದ ನೋಡುತ್ತ. ತಮ್ಮ ದನಿಯನ್ನು ಇನ್ನೂ ತಗ್ಗಿಸಿ, "ಅವರನ್ನ ಕಂಡ್ರೆ ನಂಗೆ ತುಂಬ ಇಷ್ಟ" ಎಂದರು. ಅವರ ಕಣ್ಣುಗಳು ಎಂದಿಗಿಂತ ಹೆಚ್ಚು ಹೊಳಪಿನಿಂದ ಕೂಡಿದಂತೆ ನನಗನ್ನಿಸಿತು.

"ಈಗ ದೇವರು ಅಮ್ಮನನ್ನೂ ಕರಕೊಂಡು ಬಿಟ್ಟ" ಎಂದಳು ಕಾತ್ಯಾ. ತಟಕ್ಕನೆ ಕೈವಸ್ತ್ರವನ್ನು ಟೀಪಾಟಿನ ಮೇಲಿಟ್ಟು, ತನ್ನ ಕರ್ಚೀಫು ತೆಗೆದುಕೊಂಡು ಅಳಲಾರಂಭಿಸಿದಳು.

"ನಿಜ, ಈ ಮನೆಯಲ್ಲಾಗಿರೋ ಬದಲಾವಣೆಗಳು ಭಯಂಕರವಾದವು" ಎಂದವರು ಹೇಳಿ ಮುಖವನ್ನು ಬೇರೆಡೆಗೆ ತಿರುಗಿಸಿಕೊಂಡರು. ಕೆಲ ಕ್ಷಣಗಳ ಬಳಿಕ, "ಸೋನ್ಯಾ, ನಿನ್ನ ಆಟದ ಸಾಮಾನುಗಳನ್ನು ತೋರಿಸು" ಎನ್ನುತ್ತ ಅಲ್ಲಿಂದ ಎದ್ದು ನಡುಮನೆಗೆ ಹೋದರು. ಅವರು ಹೋದಮೇಲೆ, ನಾನು ಕಣ್ಣು ತುಂಬ ನೀರು ತುಂಬಿಕೊಂಡಿದ್ದ ಕಾತ್ಯಾಳ ಕಡೆ ನೋಡಿದೆ.

"ಎಂಥ ದೊಡ್ಡ ಮನಸ್ಸು ಅವರದು!" ಎಂದಳು ಅವಳು. ಅವರು ನಮ್ಮ ನೆಂಟರೇನಲ್ಲದಿದ್ದರೂ, ಈ ಸಜ್ಜನರ ಸಹಾನುಭೂತಿಯ ಮಾತುಗಳಲ್ಲಿ ನನಗೆ ಒಂದು ಬಗೆಯ ಬಿಸುಪು, ಸಮಾಧಾನ ಉಂಟಾದವು.

ನಡುಮನೆಯಿಂದ ಸೋನ್ಯಾ ಜೊತೆಗಿನ ಅವರ ಓಡಾಟ ಹಾಗೂ ಅವಳ ಬಾಲಿಶ ದೊಡ್ಡ ದನಿಯ ಸದ್ದು ಕೇಳಿಬರುತ್ತಿತ್ತು. ಅವರಿಗೆಂದು ಟೀ ಅಲ್ಲಿಗೇ ಕಳಿಸಿದೆ; ಅವರು ಪಿಯಾನೋ ಮುಂದೆ ಕೂತು ಸೋನ್ಯಾಳ ಪುಟ್ಟ ಬೆರಳುಗಳಿಂದ ಅದರ ಮೇಲೆಲ್ಲ ಆಡಿಸುತ್ತಿದ್ದ ದನಿ ಹೊರಬರುತ್ತಿತ್ತು.

ಆಮೇಲೆ ಅವರ ಕೂಗುವ ದನಿಯೇ ಕೇಳಿಸಿತು: "ಮಾರ್ಯಾ ಅಲೆಕ್ಸಾಂಡ್ರೋವ್ನಾ, ಇಲ್ಲಿ ಬಾ, ಏನಾದ್ರೂ ಆಟ ಆಡೋಣ."

ನನ್ನ ಜೊತೆ ಸಲುಗೆಯಿಂದ ಮಾತಾಡುವ ಅವರ ರೀತಿ ಹಾಗೂ ಗೆಳೆತನದ ಆಣತಿಗಳ ರೀತಿ ನನಗೆ ಹಿಡಿಸಿತು. ನಾನು ಮೇಲೆದ್ದು ಅವರ ಬಳಿಗೆ ಹೋದೆ.

ಬೀಥೋವನ್‌ನ 'ಅಡಾಜಿಯೋ'ದ 'ಮ್ಯೂಸಿಕಲ್ ಸೊನಾಟ'ದಲ್ಲಿ ಹಾಳೆಗಳನ್ನು ತೆರೆದು,"ಇದನ್ನು ನುಡಿಸು, ಹೇಗೆ ನುಡಿಸ್ತೀಯೋ ನೋಡೋಣ" ಎಂದು, ಕೈಲ್ಲಿ ಟೀ ಕಪ್ ಹಿಡಿದು ಆ ಕೋಣೆಯ ಒಂದು ಮೂಲೆಗೆ ಹೋಗಿ ಕೂತರು.

ಅವರ ಮಾತನ್ನು ಮೀರುವುದು ಅಥವಾ ನನಗೆ ಅಷ್ಟು ಚೆನ್ನಾಗಿ ನುಡಿಸಲು ಬರುವುದಿಲ್ಲ ಎಂದೂ ಹೇಳುವುದು ಅಸಾಧ್ಯವೇನೋ ಅನ್ನಿಸಿತು. ವಿಧೇಯಳಂತೆ ಹೋಗಿ ಪಿಯಾನೋ ಮುಂದೆ ಕುಳಿತು, ನನಗೆ ಬಂದಷ್ಟು ಚೆನ್ನಾಗಿ ನುಡಿಸಿದೆ. ಆದರೆ ಮನಸ್ಸಿನಲ್ಲಿಯೇ ಏನನ್ನುವರೋ ಎಂಬ ಅಳಕು ನನ್ನಲ್ಲಿತ್ತು, ಯಾಕೆಂದರೆ ಅವರಿಗೆ ಸಂಗೀತ ಚೆನ್ನಾಗಿ ಅರ್ಥವಾಗುವುದೆಂಬ ವಿಷಯ ನನಗೆ ತಿಳಿದಿತ್ತು. ಟೀ ಕುಡಿಯುತ್ತ ನಮ್ಮ ಮಾತುಗಳಲ್ಲಿ ಕೆದಕಿದ್ದ ಹಿಂದಿನ ನೆನಪುಗಳ ಸನ್ನಿವೇಶಕ್ಕೆ 'ಅಡಾಜಿಯೋ' ಹೊಂದುತ್ತಿತ್ತು. ನಾನು ತಕ್ಕಮಟ್ಟಿಗೆ ಚೆನ್ನಾಗಿಯೇ ನುಡಿಸಿದೆ ಎಂಬ ನಂಬಿಕೆ ನನಗಿತ್ತು. ಆದರೆ ಅವರು 'ಸ್ಕೆರ್ಜೋ' ನುಡಿಸಲು ಅವಕಾಶ ಕೊಡಲಿಲ್ಲ. ನನ್ನ ಬಳಿ ಬಂದು, "ನೀನದನ್ನು ಚೆನ್ನಾಗಿ ನುಡಿಸಲಾರೆ, ಬೇಡ. ಮೊದಲ ಪಲುಕೇನೋ ಪರವಾಯಿಲ್ಲ, ನಿಂಗೆ ಸಂಗೀತಜ್ಞಾನ ಇದ್ದ ಹಾಗಿದೆ" ಎಂದರು. ಅತಿಯಲ್ಲದ ಈ ಒಳ್ಳೆಯ ಮಾತುಗಳು ನನಗೆ ಖುಷಿ ತಂದವು, ಜೊತೆಗೆ ನಾಚಿಕೆಯನ್ನೂ ತಂದಿತು. ನಮ್ಮ ತಂದೆಯ ಸ್ನೇಹಿತರೊಬ್ಬರು, ಅವರ ಕಾಲದವರು, ನನ್ನನ್ನು ಮಗುವಿನ ಹಾಗೆ ಭಾವಿಸದೆ ನನ್ನೊಡನೆ ಗಂಭೀರವಾಗಿ ಮಾತಾಡುವುದು ನನಗೆ ಅಪರೂಪವೆನ್ನಿಸಿದರೂ ಸಂತಸ ತಂದಿತ್ತು. ಇಷ್ಟು ಹೊತ್ತಿಗೆ, ಸೋನ್ಯಾಳನ್ನು ಮಲಗಿಸಲೆಂದು ಕಾತ್ಯಾ ಮಹಡಿಯ ಮೇಲಕ್ಕೆ ಹೋದಳು; ಹೀಗಾಗಿ ನಡುಮನೆಯಲ್ಲಿ ನಾವಿಬ್ಬರೇ ಉಳಿದೆವು.

ನಮ್ಮ ತಂದೆಯ ಬಗ್ಗೆ, ತಮ್ಮಿಬ್ಬರ ಸ್ನೇಹ ಮೊದಲಾದುದರ ಬಗ್ಗೆ, ನಾನಿನ್ನೂ ನನ್ನ ಪುಸ್ತಕಗಳು ಹಾಗೂ ಆಟದ ಸಾಮಾನುಗಳನ್ನಿಟ್ಟುಕೊಂಡು ಆಟವಾಡುತ್ತಿದ್ದಾಗ ಅವರ ಜೊತೆ ತಾವು ಕಳೆದ ಸಂತಸದಾಯಕ ಕಾಲದ ಬಗ್ಗೆ ಮಾತನಾಡಿದರು. ಅವರು ಮಾತಾಡುತ್ತಿದ್ದಾಗ, ಸರಳವೂ ಪ್ರೇಮಲವೂ ಆದ ವ್ಯಕ್ತಿತ್ವದ ನಮ್ಮ ತಂದೆ ಹೊಸ ಬೆಳಕಿನಲ್ಲಿ ನನ್ನ ಕಣ್ಮುಂದೆ ನಿಲ್ಲುವಂತಾಯಿತು. ನನ್ನ ಅಭಿರುಚಿಗಳ ಬಗ್ಗೆ, ನಾನೇನು ಓದುತ್ತೇನೆ, ನನಗೇನು ಮಾಡಲು ಇಷ್ಟ ಎಂಬ ಬಗ್ಗೆಯೂ ಅವರು ವಿಚಾರಿಸಿದ್ದಲ್ಲದೆ, ಒಂದಷ್ಟು ಸಲಹೆಗಳನ್ನೂ ನೀಡಿದರು. ನನ್ನನ್ನು ಚುಡಾಯಿಸುತ್ತಿದ್ದ, ಲವಲವಿಕೆ ವಿನೋದಗಳು ತುಂಬಿಕೊಂಡು ನನಗೆ ಆಟಿಕೆಗಳನ್ನು ಮಾಡಿಕೊಡುತ್ತಿದ್ದ ವ್ಯಕ್ತಿ ಮಾಯವಾಗಿದ್ದರು; ಅದರ ಬದಲು ಈಗ ನನ್ನೆದುರಿಗಿದ್ದವರು ಗಾಂಭೀರ್ಯ-ಸರಳತೆಗಳನ್ನು ಮೈಗೂಡಿಸಿಕೊಂಡು ಕಕ್ಕುಲತೆಯುಳ್ಳ ಒಬ್ಬ ಗೆಳೆಯರು. ಇಂಥವರ ಬಗ್ಗೆ

ನನ್ನಲ್ಲಿ ಗೌರವ ಸಹಾನುಭೂತಿಗಳುಂಟಾಗದಿರಲು ಸಾಧ್ಯವೇ ಇರಲಿಲ್ಲ. ಅವರೊಡನೆ ಮಾತನಾಡುವುದು ಸುಲಭವಾಗಿತ್ತು, ಸಂತೋಷಯುಕ್ತವೂ ಆಗಿತ್ತು; ಆದರೆ ನನ್ನಲ್ಲಿ ಒಂದು ರೀತಿಯ ಒತ್ತಡವೂ ಉಂಟಾಗುತ್ತಿತ್ತು. ಮಾತನಾಡುವ ಒಂದೊಂದು ಪದವನ್ನೂ ನಾನು ಅಳೆದು ಸುರಿದು ಆಡಬೇಕಾಗಿತ್ತು, ನಮ್ಮ ತಂದೆಯವರ ಮಗಳು ಎಂಬ ಕಾರಣದಿಂದಾಗಿ ನನ್ನ ಬಗ್ಗೆ ಅವರು ಹೊಂದಿದ್ದ ಪ್ರೀತಿಯ ಜೊತೆಗೆ ನನ್ನ ಕಾರಣ ದಿಂದಲೇ ಮತ್ತೊಂದಷ್ಟನ್ನು ಸಂಪಾದಿಸುವ ಬಯಕೆ ನನ್ನಲ್ಲಿ ಮೊಳೆತಿತ್ತು.

ಸೋನ್ಯಾಳನ್ನು ಮಲಗಿಸಿದ ಬಳಿಕ ಕಾತ್ಯಾ ನಮ್ಮನ್ನು ಸೇರಿಕೊಂಡಳು; ನನ್ನ ನಿರಾಸಕ್ತಿಯ ಬಗ್ಗೆ ಅವರಿಗೆ ದೂರಿದಳು, ಆದರೆ ನಾನು ಮಾತ್ರ ಆ ಬಗ್ಗೆ ಏನೂ ಮಾತಾಡಲಿಲ್ಲ.

"ಅಂದರೆ ಅವಳು ಅತ್ಯಂತ ಮುಖ್ಯವಾದ ವಿಷಯದ ಬಗ್ಗೆ ಏನೂ ಹೇಳಲೇ ಇಲ್ಲ ಅಂದಂತಾಯಿತು" ಎಂದರವರು ನಗುತ್ತ, ನನ್ನ ಕಡೆ ತಿರುಗಿ ಅಸಮಾಧಾನದಿಂದೆಂಬಂತೆ ತಲೆಯಾಡಿಸುತ್ತ.

"ಸುಮ್ಮಸುಮ್ಮನೆ ನಿಮ್ಮ ಹತ್ರ ಅದನ್ನೆಲ್ಲ ಯಾಕೆ ಹೇಳ್ಕೋಬೇಕು? ಅದರ ಬಗ್ಗೆ ಮಾತಾಡೋದು ಅಂದ್ರೆ ತುಂಬ ಕಿರಿಕಿರಿ; ಅಲ್ದೆ ಅದು ಮಾಯವಾಗೋ ಅಂಥದು" ಎಂದೆ ನಾನು. (ನನ್ನ ವಿಷಣ್ಣತೆ ಮಾಯವಾಗುವುದೆಂಬುದು ಮಾತ್ರವಲ್ಲದೆ, ಅದು ಈಗಾಗಲೇ ಮಾಯವಾಗಿಬಿಟ್ಟಿದೆ ಅಥವಾ ಅದೆಂದೂ ಇರಲೇ ಇಲ್ಲ ಎಂದೂ ಅನ್ನಿಸತೊಡಗಿತ್ತು).

"ಅದು ಒಳ್ಳೇದಲ್ಲ, ಅದೇ ಒಂಟಿತನ ಸಹಿಸಿಕೊಳ್ಳಕ್ಕೆ ಆಗ್ದೇ ಇರೋದು. ಅದೂ ನಿನ್ನಂಥ ಚಿಕ್ಕವಳಿಗೆ ಹಾಗಾಗೋದು ಸಾಧ್ಯವಾ?" ಎಂದರು.

"ಹೌದು, ನಾನು ಚಿಕ್ಕವಳೇ" ಎಂದೆ ನಾನು, ನಗುತ್ತ.

"ತನ್ನನ್ನ ಜನ ಹೊಗಳ್ತಾ ಇರೋವಾಗ ಮಾತ್ರ ಲವಲವಿಕೆ ತೋರಿಸ್ತಾ ಒಬ್ಬಳೇ ಇದ್ದಾಗ ಆಕಾಶ ಕಳಚಿ ತಲೆ ಮೇಲೆ ಬಿದ್ದೋಳ ಹಾಗಿದ್ದು ಯಾವುದರಲ್ಲೂ ಆಸಕ್ತಿ ತೋರಿಸಕ್ಕಾಗ್ದೆ, ಅಂದ್ರೆ ತನ್ನಲ್ಲೇ ಜೀವನ ಪ್ರೀತಿ ಇಟ್ಟುಕೊಳ್ಳದೆ ಹೊರಗೆ ತೋರಿಸ್ಕೊಳ್ಳೋ ಅಂಥ ಯುವತಿಯ ಬಗ್ಗೆ, ನನಗೆ ಮೆಚ್ಚಿಕೆ ಇಲ್ಲ."

"ನನ್ನ ಬಗ್ಗೆ ನಿಮಗೆ ತುಂಬ ಮೆಚ್ಚಿಕೆ ಇರೋ ಹಾಗಿದೆ" ಎಂದೆ ನಾನು, ಏನಾದರೂ ಮಾತಾಡಲೆಂದು.

ಅವರು ಒಂದುಕ್ಷಣ ಸುಮ್ಮನಿದ್ದರು. ಆನಂತರ, "ಹೌದು, ನೀನು ನಿಮ್ಮ ತಂದೆ ಥರ ಇರೋದು ಅದಕ್ಕೆ ಕಾರಣ. ನಿನ್ನಲ್ಲಿ ಏನೋ ಒಂದು ಇದೆ..." ಎಂದ ಅವರ ಕಕ್ಕುಲತೆ ತುಂಬಿದ್ದ ನೋಟದಲ್ಲಿ ಮತ್ತೆ ನನ್ನ ಬಗ್ಗೆ ಮೆಚ್ಚಿಕೆ ಕಾಣಿಸಿತು, ಇದರಿಂದ ನನ್ನಲ್ಲಿ ಒಂದು ಬಗೆಯ ಹಿತಕರವಾದ ಇರಿಸುಮುರಿಸು ಉಂಟಾಯಿತು.

ನೋಡಿದವರಲ್ಲಿ ಬಹು ಉತ್ಸಾಹಿಯಾದುದೆಂಬ ಭಾವನೆಯುಂಟುಮಾಡುವ

ಅವರ ಮುಖವು, ಅವರಿಗೇ ವಿಶಿಷ್ಟವೆನ್ನಿಸುವಂತೆ ಮೊದಲು ಲಕಲಕಿಸುತ್ತಿದ್ದು ಕ್ರಮೇಣ ಗಂಭೀರವಾಗುತ್ತ ಕೊನೆಗೆ ವಿಷಾದವನ್ನು ಸೂಸುವುದನ್ನು ನಾನು ಮೊಟ್ಟಮೊದಲಿಗೆ ಗಮನಿಸಿದೆ.

"ನೀನು ಬೇಸರ ಮಾಡಿಕೊಳ್ಳಬಾರದು, ಮಾಡಿಕೊಳ್ಳಲಾರೆ. ಯಾಕಂದ್ರೆ, ನಿನ್ನಲ್ಲಿ ಸಂಗೀತ ಇದೆ, ಅದನ್ನು ನೀನು ಕೇಳಿ ಸಂತಸಪಡಬಲ್ಲೆ, ಪುಸ್ತಕಗಳಿವೆ, ಓದಬಲ್ಲೆ. ನಿನ್ನ ಮುಂದೆ ನಿನ್ನ ಇಡೀ ಜೀವನ ಇದೆ, ಈಗಲ್ಲದಿದ್ದರೆ ಯಾವಾಗಲೂ ಇಲ್ಲ ಎಂಬ ರೀತಿಯಲ್ಲಿ ನೀನದಕ್ಕೆ ಸಿದ್ಧವಾಗ್ಬೇಕು, ಇದರಿಂದ ಮುಂದೆ ಪರಿತಪಿಸೋದು ಇಲ್ಲವಾಗತ್ತೆ. ಒಂದು ವರ್ಷ ತಡವಾದರೂ ತೀರ ತಡವೇ."

ಅವರು ಮಾತಾಡಿದ್ದು ತಂದೆಯೋ ಮಾವನೋ ತಿಳಿವಳಿಕೆ ಹೇಳಿದ ಹಾಗೆ. ನನ್ನ ಮಟ್ಟದಲ್ಲಿಯೇ ತಿಳಿಹೇಳಲು ಅವರು ತನ್ನ ಮೇಲೆ ಸದಾ ನಿಯಂತ್ರಣವನ್ನಿಟ್ಟು ಕೊಂಡಿದ್ದವರಂತೆ ನನಗೆ ಕಾಣಿಸಿದರು. ತಮಗಿಂತ ನನ್ನನ್ನು ಕೀಳೆಂದು ಭಾವಿಸಿದರೆಂಬುದು ನನಗೆ ನೋವುಂಟುಮಾಡಿದರೂ, ನನಗಾಗಿಯೇ ಅವರು ವಿಭಿನ್ನವಾಗಿ ಮಾತಾಡುತ್ತಿದ್ದ ರೆಂಬುದರಿಂದ ನನಗೆ ಸಂತೋಷವೇ ಆಯಿತು.

ಸಂಜೆಯ ಉಳಿದ ವೇಳೆಯನ್ನವರು ಕಾತ್ಯಾಳೊಂದಿಗೆ ವ್ಯವಹಾರಕ್ಕೆ ಸಂಬಂಧ ಪಟ್ಟಂತೆ ಮಾತಾಡುತ್ತಿದ್ದರು.

"ಸರಿ, ಸ್ನೇಹಿತರೇ, ಗುಡ್ ಬೈ" ಎನ್ನುತ್ತ ಅವರು ಮೇಲೆದ್ದು ನನ್ನ ಬಳಿ ಬಂದು ನನ್ನ ಕೈಯನ್ನು ಹಿಡಿದುಕೊಂಡರು.

"ನಿಮ್ಮನ್ನು ನೋಡೋದು ಇನ್ನು ಯಾವಾಗ?" ಎಂದು ಕೇಳಿದಳು ಕಾತ್ಯಾ.

"ಚೈತ್ರ ಮಾಸದಲ್ಲಿ" ಎಂದವರು ಉತ್ತರಿಸಿದಾಗ ನನ್ನ ಕೈ ಇನ್ನೂ ಅವರದರಲ್ಲಿಯೇ ಇತ್ತು. "ನಾನೀಗ ದಾನಿಲೋವ್ಕಾಕ್ಕೆ ಹೋಗ್ತೀನಿ. (ಇಲ್ಲಿ ನಮ್ಮ ಕುಟುಂಬದ ಮತ್ತೊಂದು ಆಸ್ತಿ ಇತ್ತು) ಅಲ್ಲಿ ಪರಿಸ್ಥಿತಿ ಹೇಗಿದ್ಯೋ ನೋಡ್ತೀನಿ, ನನ್ನ ಕೈಲಾದ ವ್ಯವಸ್ಥೆ ಮಾಡ್ತೀನಿ. ಆಮೇಲೆ ನನ್ನ ಸ್ವಂತ ಕೆಲಸದ ಮೇಲೆ ಮಾಸ್ಕೋಗೆ ಹೋಗ್ತೀನಿ. ಮುಂದಿನ ಬೇಸಿಗೇಲಿ ಮತ್ತೆ ಭೇಟಿಯಾಗೋಣ."

"ಇಷ್ಟು ದಿನಗಳ ಕಾಲ ನೀವು ದೂರ ಹೋಗಿರಲ್ಲೇಬೇಕಾ?" ಎಂದು ಕೇಳಿದೆ ನಾನು. ನನಗೆ ಅತೀವ ದುಃಖವುಂಟಾಗಿತ್ತು. ಪ್ರತಿನಿತ್ಯ ಅವರನ್ನ ನೋಡ್ತೀನಿ ಅಂದ್ಕೊಂಡಿದ್ದೆ. ಈಗ ನನಗೆ ಇದ್ದಕ್ಕಿದ್ದಂತೆ ಆಘಾತವೆನಿಸಿತ್ತು, ವಿಷಣ್ಣತೆ ಮತ್ತೆ ನನ್ನ ಆವರಿಸಿಬಿಡತ್ತೇನೋ ಎಂದು ಭಯವಾಯಿತು. ನನ್ನ ಮುಖ ಮತ್ತು ದನಿಗಳಲ್ಲಿ ಇದು ಎದ್ದು ಕಾಣಿಸಿರಬೇಕು.

"ಮಾಡಕ್ಕೆ ನೀನು ಏನಾದ್ರೂ ಕೆಲಸ ಹುಡುಕ್ಕೋಬೇಕು, ಮಂಕಾಗಿ ಕೂತಿರಬಾರ್ದು. ಚೈತ್ರದಲ್ಲಿ ಬಂದಾಗ ನಾನು ನಿನ್ನ ಈ ಬಗ್ಗೆ ಪರೀಕ್ಷೆ ಮಾಡ್ತೀನಿ" ಎಂದರು. ಅವರ ಮಾತು ತೀರ ತಣ್ಣಗೆ ಏನೂ ಆಗದವರದು ಇದ್ದ ಹಾಗೆ ನನಗೆ

ಭಾಸವಾಯಿತು. ಈಗ ಅವರು ನನ್ನ ಕೈಬಿಟ್ಟರು, ಮುಖ ಕೂಡ ನೋಡಲಿಲ್ಲ.

ಹಾಲ್ನಲ್ಲಿ ನಿಂತು ನಾವೆಲ್ಲ ಅವರನ್ನು ಬೀಳ್ಕೊಡುವಾಗ ಅವರು ಅವಸರದಿಂದ ತಮ್ಮ ಫರ್ ಕೋಟ್ ಹಾಕಿಕೊಂಡರು, ಆಗಲೂ ನನ್ನ ಕಡೆ ನೋಡುವುದನ್ನು ತಪ್ಪಿಸಿಕೊಂಡರು. 'ಅವರು ಯಾವ ಪ್ರಯೋಜನವೂ ಇಲ್ಲದೆ ಕಷ್ಟಪಡ್ತಿದಾರೆ, ಅವರು ನನ್ನ ಕಡೆ ನೋಡಬೇಕೂ ಅನ್ನೋ ಕಾತರ ನನಗಿದೆ ಅಂತ ಅವರು ಅಂದುಕೊಂಡರಾ? ಅವರು ಒಳ್ಳೆಯ ವ್ಯಕ್ತಿ, ತುಂಬ ಒಳ್ಳೆ ವ್ಯಕ್ತಿ, ಅಷ್ಟೆ' ಅಂತ ಅನ್ನಿಸಿತು ನನಗೆ.

ಆವತ್ತು ಸಾಯಂಕಾಲ, ನಾನೂ ಕಾತ್ಯಾ ತುಂಬ ಹೊತ್ತು ಮಾತನಾಡುತ್ತ ಕುಳಿತಿದ್ದೆವು, ಅವರ ಬಗ್ಗೆ ಅಂತ ಅಲ್ಲ, ಮುಂದಿನ ಬೇಸಿಗೆಯ ನಮ್ಮ ಯೋಜನೆಗಳ ಬಗ್ಗೆ, ಮುಂದಿನ ಚಳಿಗಾಲವನ್ನು ನಾವೆಲ್ಲಿ ಕಳೀಬೇಕು ಅನ್ನುವುದರ ಬಗ್ಗೆ, ಆಗ ನಾವೇನು ಮಾಡಬೇಕು ಅನ್ನುವುದರ ಬಗ್ಗೆ - ಹೀಗೇ. ಇದರಿಂದೆಲ್ಲ ಏನುಪಯೋಗ ಅನ್ನುವ ಭಯಂಕರ ಪ್ರಶ್ನೆಯನ್ನು ಕೇಳಿಕೊಳ್ಳುವುದನ್ನು ನಾನು ನಿಲ್ಲಿಸಿಬಿಟ್ಟಿದ್ದೆ. ಈಗದು ತುಂಬ ನೇರವೂ ಆಳವೂ ಆದ ಪ್ರಶ್ನೆಯಂತೆ ಕಂಡಿತು. ಬದುಕಿನ ಏಕೈಕ ಉದ್ದೇಶ ಸಂತೋಷ, ನನಗೆ ಮುಂದೆ ತುಂಬ ಸಂತೋಷ ಕಾದಿದೆ ಅಂದುಕೊಂಡೆ. ಮಬ್ಬಿನಿಂದ ಕೂಡಿದ ನಮ್ಮ ಮನೆಯಲ್ಲಿ ಇದ್ದಕ್ಕಿದ್ದಂತೆ ಪ್ರಕಾಶಮಾನವಾದ ಬೆಳಕು ಹೊತ್ತಿಕೊಂಡು ಜೀವಂತಿಕೆಯಿಂದ ಕೂಡಿದ ಹಾಗೆ ತೋರಿತು.

## 2

ಕಾಲ ಸರಿಸರಿದು ಮತ್ತೆ ವಸಂತ ಕಾಲಿಟ್ಟಿತು. ನನ್ನ ಹಳೆಯ ವಿಷಾದವೆಲ್ಲ ಮಾಯವಾಗಿ, ವಸಂತ ತನ್ನ ಜೊತೆ ತರಬಹುದಾದ ಉಲ್ಲಾಸ ನನ್ನಲ್ಲಿ ಕಾಣಿಸಿಕೊಂಡಿತು; ಎಲ್ಲೆಲ್ಲೂ ಕನಸುಗಳೇ, ಅಸ್ಪಷ್ಟ ಬಯಕೆಗಳು, ನಿರೀಕ್ಷೆಗಳೇ. ಚಳಿಗಾಲದ ಆರಂಭದಲ್ಲಿ ನಾನಿದ್ದ ರೀತಿಗೆ ಬದಲಾಗಿ ನಾನು ಓದುತ್ತಿದ್ದೆ, ಪಿಯಾನೋ ನುಡಿಸುತ್ತಿದ್ದೆ, ಸೋನ್ಯಾಳಿಗೆ ಪಾಠ ಹೇಳಿಕೊಡುತ್ತಿದ್ದೆ. ಕೆಲವು ವೇಳೆ ತೋಟಕ್ಕೆ ಹೋಗಿ ಬಹುಕಾಲ ಒಬ್ಬಳೇ ಅಲೆದಾಡಿಕೊಂಡಿರುತ್ತಿದ್ದೆ ಅಥವಾ ಅಲ್ಲಿನ ಬೆಂಚಿನ ಮೇಲೆ ಕುಳಿತಿರುತ್ತಿದ್ದೆ. ಇಂಥ ಹೊತ್ತಿನಲ್ಲಿ ನನ್ನ ಮನಸ್ಸಿನಲ್ಲಿದ್ದ ಆಲೋಚನೆಗಳು ಎಂಥವು, ನನ್ನ ಆಸೆಗಳ ನಿರೀಕ್ಷೆಗಳ ಸ್ವರೂಪ ಹೇಗಿರುತ್ತಿದ್ದವು ಎಂಬುದನ್ನು ದೇವರೇ ಬಲ್ಲ. ರಾತ್ರಿಗಳಲ್ಲಿ, ಕೆಲವು ವೇಳೆ, ಬೆಳದಿಂಗಳು ಇದ್ದ ದಿವಸವಂತೂ, ಮಲಗುವ ಕೋಣೆಯ ಕಿಟಕಿಯ ಹತ್ತಿರವೇ ಬೆಳಗಿನ ಜಾವದವರೆಗೂ ಕೂತಿರುತ್ತಿದ್ದೆ. ಕಾತ್ಯಾ ಗಮನಿಸದೇ ಇದ್ದಾಗ ಎಷ್ಟೋ ಸಲ ಒಂದು ಹೊದಿಕೆ ಮೈಮೇಲೆಳೆದುಕೊಂಡು ಯಾರಿಗೂ ಗೊತ್ತಾಗದ ಹಾಗೆ ಹೊರಗೆ ಬಂದು ತೋಟದಲ್ಲಿದ್ದ ಕೊಳದವರೆಗೂ ಕಾವಳದಲ್ಲಿಯೇ ಓಡುತ್ತಿದ್ದೆ. ಒಂದು ಸಲವಂತೂ ನಾನು ಹೊರಗಿನ ಮೈದಾನದವರೆಗೂ ಹೋಗಿಬಿಟ್ಟಿದ್ದೆ, ದಾರಿಯಲ್ಲೆಲ್ಲ ತೋಟದ ಸುತ್ತು ಸುತ್ತಾಡಿದ್ದೆ.

ನನ್ನ ಮನಸ್ಸಿನಲ್ಲಿ ಆಗೆಲ್ಲ ತುಂಬಿಕೊಳ್ಳುತ್ತಿದ್ದ ಕನಸುಗಳು ಎಂತಹವು ಅನ್ನುವುದನ್ನು ನೆನಪಿಗೆ ತಂದುಕೊಳ್ಳುವುದು ಈಗ ಕಷ್ಟ. ನೆನಪಿಗೆ ಬಂದರೂ ನನ್ನ ಕನಸುಗಳು ಅಂಥವು ಎಂದು ನಂಬುವುದು ನನಗೆ ಕಷ್ಟವಾಗುತ್ತಿತ್ತು; ಅವು ವಿಚಿತ್ರವಾಗಿರುತ್ತಿದ್ದವು, ಬದುಕಿನಿಂದ ತುಂಬ ದೂರದವಾಗಿರುತ್ತಿದ್ದವು.

ಸರ್ಜಿ ಮುಖೈಲೈಚ್ ತಮ್ಮ ಮಾತಿಗೆ ತಕ್ಕಂತೆ ನಡೆದುಕೊಂಡರು. ಮೇ ಕೊನೆಯ ಹೊತ್ತಿಗೆ ತಮ್ಮ ಪ್ರವಾಸದಿಂದವರು ವಾಪಸಾದರು.

ಅವರು ಆ ಬಳಿಕ ನಮ್ಮ ಮನೆಗೆ ಬಂದದ್ದು ಒಂದು ಸಂಜೆ, ಅವರ ಬರುವಿಕೆ ತೀರ ಅನಿರೀಕ್ಷಿತವಾಗಿತ್ತು. ನಾವೆಲ್ಲ ಚಹಾಕ್ಕಾಗಿ ಕಾಯುತ್ತ ವರಾಂಡದಲ್ಲಿ ಕುಳಿತಿದ್ದೆವು. ಈ ಹೊತ್ತಿಗೆ ತೋಟವೆಲ್ಲ ಹಚ್ಚಹಸಿರಾಗಿ ಕಂಗೊಳಿಸುತ್ತಿತ್ತು. ಸೈಂಟ್ ಪೀಟರ್ಸ್ ಹಬ್ಬದ ಹೊತ್ತಿಗೆ ಮರಗಳ ದಟ್ಟ ಎಲೆಗಳಿರುವೆಡೆಗಳಲ್ಲೆಲ್ಲ ನೈಟಿಂಗೇಲ್ ಪಕ್ಷಿಗಳು ಮನೆ ಮಾಡಿಕೊಂಡಿದ್ದವು. ಗುಂಡಗಿನ ಲೈಲಾಕ್ ಪೊದೆಗಳ ತುದಿಗಳಲ್ಲಿ ಬಿಳಿ ಗುಲಾಬಿಗಳನ್ನು ಚಿಮುಕಿಸಿದಂತಿತ್ತು - ಅವುಗಳ ಮೊಗ್ಗುಗಳು ಅರಳಲು ಸಿದ್ಧವಾಗಿರುವ ಸೂಚನೆ ಅದು. ಬರ್ಚ್ ಮರಗಳ ಸಾಲಿನ ಬೀದಿಯ ಎಲೆಗಳೆಲ್ಲ ಮುಳುಗುವ ಸೂರ್ಯನ ಕಾಂತಿಯಿಂದ ಹೊಳೆಯುತ್ತಿದ್ದವು. ವರಾಂಡದಲ್ಲೆಲ್ಲ ನೆರಳು ತಾಜಾತನಗಳು ತುಂಬಿದ್ದವು. ಸಂಜೆಯ ಹಿಮ ಹುಲ್ಲಿನ ಮೇಲೆ ದಟ್ಟವಾಗಿ ಬೀಳುವುದು ಕಾಣಿಸುತ್ತಿತ್ತು. ಬಾಗಿಲ ಹೊರಗೆ ತೋಟದಲ್ಲಿ ಹಗಲಿನ ಕೊನೆಯ ಸ್ವರಗಳು ಕೇಳಿಸುತ್ತಿದ್ದವು; ಮನೆಯತ್ತ ಸಾಗುತ್ತಿದ್ದ ಕುರಿ ಹಾಗೂ ದನಗಳ ಮಂದೆಗಳಿಂದ 'ಮೇ' 'ಅಂಬಾ'ಗಳು ಹೊಮ್ಮುತ್ತಿದ್ದವು. ನೀರುಗಾಡಿಯನ್ನು ತರುತ್ತಿದ್ದ ಪೆದ್ದ ಹುಡುಗ ನಿಕಾನ್ ವರಾಂಡ ಉದ್ದದ ದಾರಿಯಲ್ಲಿ ಸಾಗುತ್ತಿದ್ದ. ಸ್ಪಿಂಕ್ಲರಿನಿಂದ ಹೊಮ್ಮುತ್ತಿದ್ದ ತಣ್ಣೀರ ತುಂತುರು ಡೇಲಿಯದ ಕಾಂಡ ಹೂತೊಟ್ಟುಗಳ ಮೇಲೆ ಬಿದ್ದು ಕಪ್ಪು ವರ್ತುಲವನ್ನು ನಿರ್ಮಿಸಿದ್ದವು. ನಮ್ಮ ವರಾಂಡದಲ್ಲಿ ಹೊಳಪಿನ ಚಹಾ ಪಾತ್ರೆಯು ಮೇಜುವಸ್ತ್ರದ ಮೇಲೆ ಕೂತು ಉಸ್ ಶಬ್ದ ಮಾಡುತ್ತಿತ್ತು; ಮೇಜಿನ ಮೇಲೆ ತರಹೇವಾರಿ ಬಿಸ್ಕತ್ತುಗಳು ಕೂತಿದ್ದವು. ಕಾತ್ಯಾ ತನ್ನ ದುಂಡು ಕೈಗಳಿಂದ ಕಪ್ಗಳನ್ನು ತೊಳೆಯುವುದರಲ್ಲಿ ನಿರತಳಾಗಿದ್ದಳು. ಸ್ನಾನ ಮುಗಿಸಿ ಬಂದಿದ್ದ ನನಗೆ ಎಷ್ಟು ಹಸಿವಾಗಿತ್ತೆಂದರೆ, ಚಹಾಕ್ಕಾಗಿ ಇತರರಿಗೆ ಕಾಯುವುದು ತಡವಾಗುತ್ತದೆನಿಸಿತ್ತು; ಹೀಗಾಗಿ ನಾನಾಗಲೇ ಹೆಚ್ಚು ಕೆನೆ ಸವರಿದ ಬ್ರೆಡ್ ಅನ್ನು ತಿನ್ನಲು ಶುರುಮಾಡಿದ್ದೆ. ನಾನು ಸಡಿಲಾದ ತೋಳುಗಳಿದ್ದ ಬ್ಲೌಸ್ ತೊಟ್ಟಿದ್ದೆ; ನನ್ನ ಕೂದಲು ಇನ್ನೂ ಒದ್ದೆಯಾಗಿದ್ದು, ತಲೆಗೊಂದು ಬಟ್ಟೆ ಸುತ್ತಿಕೊಂಡಿದ್ದೆ. ಮನೆಯೊಳಕ್ಕೆ ಕಾಲಿರಿಸುವ ಮುನ್ನವೇ ಅವರನ್ನು ಮೊದಲು ನೋಡಿದವಳು ಕಾತ್ಯಾನೇ.

"ಓ, ಸರ್ಗೀ ಮಿಖೈಲೈಚ್! ನಾವು ನಿಮ್ಮ ಬಗ್ಗೇನೇ ಮಾತಾಡಿಕೋತಿದ್ವು" ಎಂದು ಕಿರುಚಿದಳು.

ನಾನು ಎದ್ದು ನಿಂತೆ, ಒಳಗೆ ಹೋಗಿ ಬಟ್ಟೆ ಬದಲಾಯಿಸಿಕೊಳ್ಳುವುದಕ್ಕೆ, ಆದರೆ ಅವರು ನನ್ನನ್ನು ಬಾಗಿಲಲ್ಲೇ ತಡೆದರು.

"ಈ ಹಳ್ಳೀನಲ್ಲಿ ಇಂಥ ಸಂಪ್ರದಾಯಗಳೆಲ್ಲ ಯಾಕೆ?" ಎಂದರು, ಮುಗುಳ್ನಗುತ್ತ, ನನ್ನ ತಲೆ ಮೇಲಿದ್ದ ಬಟ್ಟೆಯ ಕಡೆ ನೋಡಿ. "ನಿಮ್ಮನೆ ಅಡುಗೆಯೋನ ಮುಂದೆ ನೀನು ಹೀಗೆ ತಾನೇ ಇರೋದು, ನಾನು ಗ್ರಿಗರಿ ಥರವೇ ಅಂತ ಅಂದ್ಕೋ" ಅಂದರು. ಆದರೆ ನನ್ನ ಕಡೆ ಅವರು ಬೀರಿದ್ದ ನೋಟ ಗ್ರಿಗರಿಯ ತರಹದ್ದಲ್ಲ ಎಂಬುದನ್ನು ಗಮನಿಸಿದೆ, ಹೀಗಾಗಿ ನನಗೆ ಒಂಥರ ಆಯಿತು.

"ಒಂದು ಕ್ಷಣದಲ್ಲಿ ಬಂದ್ಬಿಡ್ತೀನಿ" ಎಂದು ಅಲ್ಲಿಂದ ತಪ್ಪಿಸಿಕೊಂಡು ಒಳಕ್ಕೆ ಹೋದೆ.

"ಏನಾಗಿದೇಂತಾ? ಚಿಕ್ಕ ವಯಸ್ಸಿನ ರೈತಾಪಿ ಹೆಂಗಸಿನ ಉಡುಪು ತಾನೇ ಅದು?" ಎಂದರು ಹಿಂದಿನಿಂದ ನನ್ನ ಕಡೆಗೆ ಕೂಗಿ.

ಮೆಟ್ಟಿಲುಗಳನ್ನೇರಿ ಹೋಗುತ್ತಿರುವಾಗ 'ಎಂಥ ಅಪರೂಪದ ರೀತೀಲಿ ಅವರು ನನ್ನ ನೋಡ್ತಿದ್ದರು' ಅನ್ನಿಸಿತು ನನಗೆ. ಅವರು ಬಂದದ್ದು ನನಗೆ ಸಂತೋಷ ಅನ್ನಿಸಿತ್ತು; 'ಇನ್ನು ಮುಂದೆ ಗಾಳೀಲೆಲ್ಲ ಲವಲವಿಕೆ ತುಂಬಿಕೊಳ್ಳುತ್ತೆ' ಅಂದುಕೊಂಡೆ. ಕನ್ನಡಿಯಲ್ಲಿ ನನ್ನ ಮುಖ ನೋಡಿಕೊಂಡು ಗೆಲುವಿನಿಂದ ಮೆಟ್ಟಿಲಿಳಿದು ವರಾಂಡ ಕಡೆ ಹೋದೆ. ಉಸಿರು ಹಿಡಿದುಕೊಂಡು ಹೋಗಿದ್ದರಿಂದ ಏದುಸಿರು ಬಿಡೋ ಹಾಗಾಗಿತ್ತು, ಆದರೆ ಅದನ್ನೇನೂ ಮರೆಮಾಚಲಿಲ್ಲ. ಅವರು ಮೇಜಿನ ಬಳಿ ಕೂತು ಕಾತ್ಯಾಳ ಜೊತೆ ನಮ್ಮನೆ ವ್ಯವಹಾರಗಳ ಬಗ್ಗೆ ಮಾತಾಡುತ್ತಿದ್ದರು. ನನ್ನ ಕಡೆ ನೋಡಿ ಮುಗುಳ್ನಕ್ಕರು; ಆದರೆ ತಮ್ಮ ಮಾತನ್ನು ಮುಂದುವರಿಸಿದರು. ಅವರ ಮಾತಿನಿಂದ, ನಮ್ಮ ಮನೆ ವ್ಯವಹಾರವೆಲ್ಲ ಈಗೊಂದು ಖಚಿತ ರೂಪ ಪಡೆದುಕೊಂಡಿರುವ ಹಾಗೆ ಕಾಣಿಸಿತು. ಈ ಬೇಸಿಗೆಯನ್ನು ಹಳ್ಳಿಯಲ್ಲಿ ಕಳೆದ ಮೇಲೆ ಇಲ್ಲ ಸೋನ್ಯಾಳ ವಿದ್ಯಾಭ್ಯಾಸಕ್ಕಾಗಿ ಪೀಟರ್ಸ್‌ಬರ್ಗ್‌ಗೆ ಅಥವಾ ವಿದೇಶಕ್ಕೆ ಹೋಗುವುದು ಸಾಧ್ಯ ಅನ್ನಿಸಿತು.

"ನೀವೂ ಜೊತೆಗೆ ಬಂದರೆ ಮಾತ್ರ ವಿದೇಶಕ್ಕೆ ಹೋಗೋದು. ನೀವಿಲ್ಲದೆ ಅಲ್ಲಿ ನಮಗೆ ದಿಕ್ಕೇ ತೋಚೋದಿಲ್ಲ" ಅಂದಳು ಕಾತ್ಯಾ.

"ನಂಗೂ ನಿಮ್ಮ ಜೊತೆ ಪ್ರಪಂಚಾನೆಲ್ಲ ಸುತ್ತಬೇಕೂಂತಾನೇ ಆಸೆ" ಎಂದರವರು ಅರ್ಧ ತಮಾಷೆಯಿಂದ ಅರ್ಧ ಗಂಭೀರವಾಗಿ.

"ಸರಿ ಹಾಗಾದ್ರೆ, ನಾವೆಲ್ಲ ಪ್ರಪಂಚಾನ ಸುತ್ತಿ ಹಾಕಿಕೊಂಡು ಬರೋಣ" ಎಂದೆ ನಾನು.

ಅವರು ನಗುತ್ತ ತಮ್ಮ ತಲೆಯಲ್ಲಾಡಿಸಿದರು.

"ಆದರೆ ನಮ್ಮ ತಾಯಿ ವಿಚಾರ ಏನು? ನನ್ನ ವ್ಯವಹಾರದ ಗತಿ ಏನೂಂತ?" ಎಂದರವರು. "ಆದರೆ ಈಗಿನ ಪ್ರಶ್ನೆ ಅದೂ ಅಲ್ಲ: ನೀನು ಇಲ್ಲಿ ಕಾಲ ಹೇಗೆ ಕಳೀತಿದ್ದೀ ಅನ್ನೋದನ್ನು ತಿಳಕೊಳ್ಬೇಕು. ಇನ್ನೂ ಮಂಕುತನ ಕವಿದಿಲ್ಲ ತಾನೇ? ಇಲ್ಲ ಅಂದುಕೊಂಡಿದ್ದಿನಿ."

ಅವರಿಲ್ಲದಾಗ ನಾನು ಅದೂ ಇದೂ ಕೆಲಸದಲ್ಲಿ ತೊಡಗಿಕೊಂಡಿರೋದ್ರಿಂದ ಬೇಸರವೇ ಕಾಣುತ್ತಿಲ್ಲ ಎಂದು ಹೇಳಿದೆ. ನನ್ನ ಮಾತನ್ನು ಕಾತ್ಯಾಳೂ ತನ್ನ ಮಾತಿನಿಂದ ಸಮರ್ಥಿಸಿದಾಗ, ನನ್ನನ್ನು ಹೊಗಳಿದರು, ಹಾಗೆ ಮಾಡಲು ತಮಗೆ ಅಧಿಕಾರವಿದೆ ಅನ್ನುವ ಹಾಗೆ. ಅವರು ಮಾತುಗಳಲ್ಲಿ ಹಾಗೂ ನೋಟದಲ್ಲಿ ಪ್ರೀತಿ ತುಂಬಿತ್ತು, ಒಳ್ಳೆ ಚಿಕ್ಕಮಗುವಿನ ಬಗ್ಗೆ ಇರುವ ಹಾಗೆ. ನಾನು ಏನೇನು ಒಳ್ಳೆಯ ಕೆಲಸ ಮಾಡಿದೆ, ಅವರು ಒಪ್ಪದೆ ಇರುವಂತಹ ತಪ್ಪುಗಳನ್ನೇನು ಮಾಡಿದೆ ಎಂದು, ಚರ್ಚ್‌ನಲ್ಲಿ ತಪ್ಪೊಪ್ಪಿಗೆ ಸಮಯದಲ್ಲಿ ಮಾಡುವ ಹಾಗೆ ಅವರ ಮುಂದೆ ವಿವರವಾಗಿ ಮುಕ್ತ ಮನಸ್ಸಿನಿಂದ ಹೇಳಿಕೊಂಡೆ. ಸಾಯಂಕಾಲ ಎಷ್ಟು ಹಾಯಾಗಿತ್ತು ಅಂದರೆ, ಚಹಾ ಕುಡಿದ ಮೇಲೂ ನಾವೆಲ್ಲ ವರಾಂಡದಲ್ಲಿಯೇ ಕುಳಿತೆವು. ಮಾತುಕತೆಯೆಲ್ಲ ನನಗೆ ಎಷ್ಟು ಇಷ್ಟವಾದವು ಅಂದರೆ, ಒಳಗಿದ್ದ ಆಳುಗಳ ಮಾತುಕತೆ ಕೂಡ ಕ್ರಮೇಣ ನಮ್ಮ ಗಮನಕ್ಕೆ ಬರದೇ ಇರುವ ಹಾಗಾಯಿತು. ಹೂಗಳ ಪರಿಮಳ ಗಾಢವಾಗಿ ಎಲ್ಲೆಡೆಯಿಂದ ಹಾಯ್ದು ಬಂತು; ಹುಲ್ಲೆಲ್ಲ ಇಬ್ಬನಿಯಿಂದ ತೊಯಿದುಹೋಯಿತು; ಹತ್ತಿರದಲ್ಲಿಯೇ ಒಂದು ನೈಟಿಂಗೇಲ್ ಲೈಲಾಕ್ ಪೊದೆಯೊಳಗಿನಿಂದ ಕೂಗಿ ನಮ್ಮ ಧ್ವನಿ ಕೇಳಿಯೋ ಏನೋ ಸುಮ್ಮನಾಯಿತು. ನಕ್ಷತ್ರ ತುಂಬಿದ್ದ ಆಗಸವೆಲ್ಲ ಹತ್ತಿರ ಇಳಿದು ಬಂತೆಂಬಂತೆ ಕಂಡಿತು.

ಸಂಜೆ ಮಬ್ಬು ಆವರಿಸುತ್ತಿತ್ತು, ಒಂದು ಬಾವಲಿ ಇದ್ದಕ್ಕಿದ್ದಂತೆ ವರಾಂಡದ ವಸಾರೆಯಲ್ಲಿ ಕೆಳಹಂತದಲ್ಲಿಯೇ ಶಬ್ದಮಾಡುತ್ತ ನನ್ನ ಬಿಳಿಯ ಶಾಲಿನ ಸುತ್ತ ಹಾರಾಡಲು ತೊಡುವವರೆಗೂ ನನಗದರ ಗಮನವೇ ಇರಲಿಲ್ಲ. ನಾನು ಮೈಕುಗ್ಗಿಸಿ ಕೊಂಡು ಗೋಡೆಗೊರಗಿ ನಿಂತೆ, ಇನ್ನೇನು ಕಿರುಚಬೇಕು, ಅಷ್ಟರಲ್ಲಿ ಆ ಬಾವಲಿಯು ರಭಸದಿಂದ ನಿಶ್ಶಬ್ದವಾಗಿ ವಸಾರೆಯಡಿಯಿಂದ ಹೊರಕ್ಕೆ ಹಾರಿ ತೋಟದ ಮಬ್ಬುಗತ್ತಲಲ್ಲಿ ಕರಗಿಹೋಯಿತು.

"ನಿಮ್ಮ ಮನೆಯ ಈ ಜಾಗ ನನಗದೆಷ್ಟು ಪ್ರಿಯ ಅಂತ!" ಎಂದರವರು, ಮಾತಿನ ಸ್ವರೂಪವನ್ನು ಬದಲಾಯಿಸುತ್ತ. "ಇಡೀ ಜೀವನಪೂರ್ತಿ ಈ ವರಾಂಡದಲ್ಲಿ ಕೂತೇ ಕಾಲ ಕಳೀಬೇಕು ಅನ್ನಿಸತ್ತೆ ನಂಗೆ."

"ಹಾಗೇ ಮಾಡಿ ಹಾಗಾದ್ರೆ" ಎಂದಳು ಕಾತ್ಯಾ.

"ಹಾಗೆ ಮಾಡೋದೇನೋ ಸರಿಯೇ, ಆದರೆ ಬದುಕು ಒಂದೇ ಕಡೆ ಕುಕ್ಕರಬಡಿದಿರೋದಿಲ್ವಲ್ಲ" ಎಂದರವರು.

"ನೀವ್ಯಾಕೆ ಮದುವೆ ಆಗಬಾರದು? ನಿಮ್ಮ ಕೈಹಿಡಿಯೋಳು ಪುಣ್ಯ ಮಾಡಿರ್ಬೇಕು" ಎಂದಳು ಕಾತ್ಯಾ.

"ಯಾಕಂದ್ರೆ ಒಂದೇ ಥರ ಕೂತಿರ್ಬೇಕು ಅನ್ನೋದು ನನ್ನಾಸೆ ಅದಕ್ಕೆ ಎಂದರವರು ನಗುತ್ತ. "ಇಲ್ಲ, ಕಾಟೆರೀನ ಕಾರ್ಲೋವ್ನಾ ಅವರೇ, ಮದುವೆಯಾಗೋ ಕಾಲ ನಿಮಗೂ ನನಗೂ ಇಬ್ಬರಿಗೂ ಆಗಿಹೋಯಿತು. ಇವನು ಮದುವೆಯಾಗ್ತಾನೆ

ಅನ್ನೋದರ ಬಗ್ಗೆ ಜನ ಆಲೋಚನೆ ಮಾಡೋದನ್ನ ಹಿಂದೆಯೇ ನಿಲ್ಲಿಸಿಬಿಟ್ಟಿದಾರೆ. ಆ ವಿಷಯ ಬೇರೆಯವರಿಗಿಂತ ನನಗೇ ಖಚಿತವಾಗಿ ಗೊತ್ತಿದೆ. ಈ ವಿಷಯ ಈಗ ನಿರ್ಧಾರ ವಾಗಿರೋದ್ರಿಂದ ನಾನೀಗ ನಿರಾಳವಾಗಿದ್ದೀನಿ."

ಈ ಮಾತುಗಳು ಅಸಹಜವಾಗಿ ಮನವರಿಕೆ ಮಾಡಿಕೊಡುವ ರೀತಿಯೆಂದು ನನಗನ್ನಿಸಿತು.

"ಎಂಥಾ ಮಾತೂಂತ ಆಡ್ತೀರ! ಮೂವತ್ತಾರರ ಗಂಡಸು ತುಂಬ ವಯಸ್ಸಾದವನಾ?" ಎಂದಳು ಕಾತ್ಯಾ.

"ನಿಜವಾಗಿಯೂ ವಯಸ್ಸಾದೋನೇ. ಆ ವಯಸ್ಸಲ್ಲಿ ಒಂದು ಕಡೆ ಹಾಯಾಗಿ ಕೂತ್ಕೋಬೇಕು ಅನ್ನಿಸತ್ತೆ. ಮದುವೆಯಾದವನಿಗೆ ಹಾಗನ್ನಿಸಬಾರದು. ಅವಳನ್ನೇ ಕೇಳಿ, ಅವಳ ವಯಸ್ಸಿನೋರು ಮದುವೆಯಾಗೋದು ಸರಿ, ಅವರ ಸುಖದಲ್ಲಿಯೇ ಸಂತೋಷಪಡಬಹುದಾದವರು ನಾನು, ನಿಮ್ಮಂಥೋರು" ಎಂದರು, ನನ್ನ ಕಡೆ ತಿರುಗಿ ತಲೆಯಾಡಿಸುತ್ತ.

ಅವರ ದನಿಯಾಳದಲ್ಲಿದ್ದ ವಿಷಾದ ಹಾಗೂ ಸಂಯಮಗಳು ನನಗೆ ಗೊತ್ತಾಗದೇ ಇರಲಿಲ್ಲ. ಅವರು ಸ್ವಲ್ಪ ಹೊತ್ತು ಮೌನವಾದರು, ನಾನೂ ಕಾತ್ಯಾ ಕೂಡ ಮಾತಾಡಲಿಲ್ಲ.

"ಸ್ವಲ್ಪ ಯೋಚನೆ ಮಾಡಿ: ನಾನೇನಾದ್ರೂ ಯಾವುದೋ ಇನ್ನೂ ಹದಿನೇಳು ವರ್ಷದ ಮಾಷಾ, ಅಂದ್ರೆ ಮಾರ್ಯಾ ಅಲೆಕ್ಸಾಂಡ್ರೋವ್ನಾ, ಅಂಥ ಹುಡಿಗೀನ ಧರ್ಮಕರ್ಮ ಸುಯೋಗದಿಂದ ಮದುವೆ ಆದೆ ಅಂತ ಇಟ್ಕೊಳ್ಳಿ, ಏನಾಗತ್ತೆ? ನಾನು ಕೊಡ್ತಾ ಇರೋ ನಿದರ್ಶನ ಸರಿಯಾಗಿಯೇ ಇದೆ, ಇದಕ್ಕಿಂತ ಒಳ್ಳೆ ಉದಾಹರಣೆ ಸಿಕ್ಕಲ್ಲ" ಎಂದು ನನ್ನ ಕಡೆ ತುಂಟತನದಿಂದ ನೋಡುತ್ತ ನುಡಿದರು.

ನನಗೆ ಗಲಿಬಿಲಿಯಾಯಿತು, ಸುಮ್ಮನಿದ್ದೆ, ಅವರ ಮಾತಿಗೆ ಏನು ಹೇಳಬೇಕು ಅನ್ನುವುದು ನನಗೆ ಗೊತ್ತಾಗಲಿಲ್ಲ.

"ನಾನೇನು ನಿನ್ನ ಜತೆ ಮದುವೆ ಪ್ರಸ್ತಾಪ ಮಾಡ್ತಿಲ್ಲಮ್ಮ, ಆದರೆ ಸಂಜೆ ಹೊತ್ತಲ್ಲಿ ಚಿನ್ನದ ಬೆಳಕು ತುಂಬಿದ ಬೀದೀಲಿ ವಿಹರಿಸ್ತಿರೋವಾಗ ನಿನ್ನ ಮನಸ್ನಲ್ಲಿ ಮೂಡೋ ಕನಸಿನ ಗಂಡನ ಹಾಗಿದ್ದೀನಾ ನಾನು? ಹಾಗಾದ್ರೆ ದುರದೃಷ್ಟದ ವಿಷಯ, ಅಲ್ಲವಾ?" ಎಂದರು ನನ್ನ ಕಡೆ ನೋಡಿ ನಗುತ್ತ.

"ಹಾಗೇನಿಲ್ಲ, ದುರದೃಷ್ಟವೇನಲ್ಲ..." ಎಂದು ಮಾತಿಗೆ ತೊಡಗಿದೆ ನಾನು.

"ಆಗಬಾರದ್ದು" ಎಂದವರು ವಾಕ್ಯವನ್ನು ಮುಗಿಸಿದರು.

"ಇರಬಹುದು, ಆದರೆ ನನ್ನ ತಪ್ಪು ತಿಳಿಬಹುದು..." ಎಂದು ನಾನು ಮುಂದುವರಿಸಿದಾಗ ಅವರು ಮತ್ತೆ ನನ್ನ ತಡೆದು ಹೇಳಿದರು:

"ಇಲ್ಲಿ ನೋಡಿ, ಅವಳು ಹೇಳೋದು ನಿಜ. ಅವಳು ಮನಸ್ಸು ಬಿಚ್ಚಿ ಮಾತಾಡಿದ್ದಕ್ಕಾಗಿ ನಾನು ಕೃತಜ್ಞ, ಈ ಮಾತುಕತೆ ನಡೆದದ್ದು ನನಗೆ ತುಂಬ ಸಂತೋಷ ಉಂಟುಮಾಡಿದೆ. ಹೇಳೊ ವಿಷ್ಯ ಇನ್ನೂ ಒಂದಿದೆ - ನನಗೂ ಅದೊಂದು ದುರದೃಷ್ಟದ ಸಂಗತಿಯಾಗಿಬಿಡತ್ತೆ", ಎಂದರು.

"ನಿಮಗೀಗ ಎಷ್ಟು ವರ್ಷ? ನೀವಂತೂ ಸ್ವಲ್ಪಾನೂ ಬದಲಾಯಿಸಿಲ್ಲ" ಎಂದ ಕಾತ್ಯಾ, ಊಟ ಸಿದ್ಧಮಾಡೋದಕ್ಕೆಂದು ವರಾಂಡದಿಂದ ಮನೆಯೊಳಕ್ಕೆ ಹೋದಳು.

ಅವಳು ಹೋದ ಮೇಲೆ, ನಾವಿಬ್ಬರೂ ಸುಮ್ಮನೆ ಕುಳಿತೆವು, ನಮ್ಮ ಸುತ್ತಲೆಲ್ಲ ಮೌನವೇ ಆವರಿಸಿತ್ತು. ಇದಕ್ಕಿದ್ದುದು ಒಂದು ಅಪವಾದ; ಅದು ಅಂದರೆ ನಿನ್ನೆ ರಾತ್ರಿ ಬಿಟ್ಟು ಬಿಟ್ಟು ಬಾಯಿಬಿಟ್ಟಿದ್ದ ನೈಟಿಂಗೇಲ್ ಈಗ ಒಂದೇ ಸಮನೆ ತೋಟವನ್ನೆಲ್ಲ ಆವರಿಸುವ ಹಾಗೆ ಹಾಡುವುದಕ್ಕೆ ಆರಂಭಿಸಿತು. ಅದರ ದನಿ ಕೇಳಿ ಪೊದೆಯೊಳಗಿನಿಂದ ಇನ್ನೊಂದು ಅದಕ್ಕೆ ಉತ್ತರದ ಹಾಡು ಹಾಡಿತು, ಅದಂತೂ ಸಂಜೆಯವರೆಗೂ ಬಾಯಿ ಬಿಟ್ಟಿರಲಿಲ್ಲ. ತೀರ ಹತ್ತಿರವಿದ್ದ ಹಕ್ಕಿ ಸುಮ್ಮನಾಗಿ ಇನ್ನೊಂದರ ಹಾಡು ಕೇಳುವುದಕ್ಕೆಂದು ಒಂದು ಕ್ಷಣ ಸುಮ್ಮನಾಯಿತು. ಸ್ವಲ್ಪ ಹೊತ್ತಿನ ನಂತರ ಮತ್ತೆ ಹಾಡಲು ತೊಡಗಿತು, ಈ ಸಲ ಮತ್ತೂ ಗಟ್ಟಿಯಾಗಿ, ನೀಳವಾದ ಆಳವಾದ ದನಿಪಲುಕುಗಳಲ್ಲಿ. ರಾತ್ರಿಯ ರಾಜ್ಯದಲ್ಲಿ ತೇಲಿ ಬಂದ ಹಕ್ಕಿಗಳ ಕಂಠಗಳಲ್ಲಿ ನಿಜವಾದ ರಾಜಗತ್ತು ಇತ್ತು, ಯಾಕಂದರೆ ರಾತ್ರಿ ಅನ್ನುವುದು ಹಕ್ಕಿಗಳ ಜಗತ್ತೇ ಹೊರತು ಮನುಷ್ಯರದಲ್ಲ. ತೋಟಿ ತನ್ನ ಮನೆ ಕಡೆ ಹೋಗುವಾಗ ನಮ್ಮ ಮುಂದೆ ಹಾದು ಹೋದ. ಅವನ ಬೂಟುಗಳ ದಟ್ಟ ಸದ್ದು ದಾರಿಯುದ್ದಕ್ಕೂ ಬರಬರುತ್ತ ಕ್ಷೀಣವಾಯಿತು. ಬೆಟ್ಟದ ಬುಡದಲ್ಲಿ ಯಾರೋ ಎರಡು ಬಾರಿ ಗಟ್ಟಿಯಾಗಿ ಶಿಳ್ಳೆ ಹಾಕಿದರು; ಆಮೇಲೆ ಎಲ್ಲವೂ ನಿಸ್ಪಂದ, ಶಾಂತ. ಮರದೆಲೆಗಳ ಮರಮರ ಸದ್ದೂ ಕೇಳಿಸುತ್ತಿತ್ತು: ವರಾಂಡದ ವಸಾರೆ ಪಟಪಟ ಸದ್ದುಮಾಡಿತು: ಗಾಳಿಯಲ್ಲಿ ತೇಲಿ ಬಂದ ನರುಗಂಪು ವರಾಂಡವನ್ನೆಲ್ಲ ತುಂಬಿಕೊಂಡಿತು. ನಮ್ಮ ಮಾತುಕತೆ ಆದ ಮೇಲಿನ ಈ ಮೌನ ನನಗೆ ಇರಿಸುಮುರಿಸಿನದಾಗಿ ಕಂಡುಬಂತು, ಆದರೆ ಏನು ಮಾತಾಡಬೇಕು ಅನ್ನುವುದು ನನಗೆ ತೋಚದಾಯಿತು. ಅವರ ಕಡೆ ದೃಷ್ಟಿ ಹರಿಸಿದೆ. ಆ ಮಬ್ಬಿನಲ್ಲೂ ಹೊಳೆಯುತ್ತಿದ್ದ ಅವರ ಕಣ್ಣುಗಳು ನನ್ನೆಡೆಗೆ ತಿರುಗಿದವು.

"ಜೀವನ ಹೇಗಿದೆ, ಚೆನ್ನಾಗಿದೆಯಾ?" ಎಂದವರು ಪ್ರಶ್ನೆ ಹಾಕಿದರು.

ನನ್ನಿಂದ ಒಂದು ನಿಟ್ಟುಸಿರು ಹೊಮ್ಮಿತು, ಅದಕ್ಕೆ ಕಾರಣವೇನೋ ತಿಳಿಯದು.

"ಬದುಕು ಚೆನ್ನಾಗಿದೆ" ಅಂದೆ ನಾನು ಅವರ ಮಾತನ್ನೇ ಅನುರಣಿಸುತ್ತ.

ಮತ್ತೆ ನಮ್ಮಿಬ್ಬರ ನಡುವೆ ಮೌನ. ಮತ್ತೆ ನನಗೆ ಇರಿಸುಮುರಿಸು. ಅವರಿಗೆ ವಯಸ್ಸಾಗಿದೆ ಎಂಬ ಮಾತನ್ನು ಒಪ್ಪಿಕೊಂಡು ನಾನವರ ಮನಸ್ಸಿಗೆ ನೋವುಂಟು ಮಾಡಿದೆನೇನೋ ಅನ್ನಿಸಿತು. ಸಮಾಧಾನದ ಮಾತುಗಳನ್ನಾಡಬೇಕೆಂಬ ಬಯಕೆ ಕಾಡಿತು, ಆದರೆ ಹೇಗೋ ತಿಳಿಯಲಿಲ್ಲ.

"ಸರಿ, ಇನ್ನು ಹೊರಡಬೇಕು, ನಾನು" ಎಂದರು ಮೇಲೇಳುತ್ತ. "ಅಮ್ಮ ಊಟಕ್ಕಾಗಿ ನಂಗೋಸ್ಕರ ಕಾಯ್ತಿರ್ತಾಳೆ. ಇವತ್ತು ಪೂರ್ತಿ ಅವಳಿಗೆ ಮುಖ ತೋರಿಸೋಕ್ಕೇ ಆಗಿಲ್ಲ."

"ನಿಮಗೋಸ್ಕರ ಸೊನಾಟ ನುಡಿಸಬೇಕೂಂತ ಅಂದ್ಕೊಂಡಿದ್ದೆ" ಎಂದೆ ನಾನು.

"ಇನ್ನೊಂದ್ಸಲ" ಅಂದರು. ಅವರ ದನಿಯಲ್ಲಿ ಉತ್ಸಾಹವಿದ್ದಂತಿರಲಿಲ್ಲ.

"ಬೈ ಹಾಗಾದ್ರೆ..."

ಅವರ ಮನಸ್ಸಿಗೆ ನೋವಾಗಿರುವುದು ಖಚಿತವಾಯಿತು. ಇದರಿಂದ ನನಗೆ ಬೇಜಾರಾಯಿತು. ಅವರನ್ನು ಕಳಿಸಿಕೊಡುವುದಕ್ಕೆ ನಾನೂ ಕಾತ್ಯಾ ಮೆಟ್ಟಿಲುಗಳನ್ನಿಳಿದು ಹೋದೆವು. ಅವರು ಹೋದ ಮೇಲೆಯೂ, ಅವರು ಹೋದ ದಾರಿಯನ್ನೇ ನೋಡುತ್ತ ಅವರು ಕಣ್ಮರೆಯಾಗುವವರೆಗೂ ನೋಡುತ್ತ, ಬಯಲಲ್ಲೇ ನಿಂತಿದ್ದೆವು. ಅವರ ಕುದುರೆ ಗೊರಸಿನ ಸಪ್ಪಳ ಕೇಳಿಸದಾದಾಗ ಮತ್ತೆ ಮನೆಯ ಕಡೆಗೆ ತಿರುಗಿ ನಾನು ವರಾಂಡಕ್ಕೆ ಬಂದೆ, ಮತ್ತೆ ತೋಟದತ್ತ ನೋಡುತ್ತ ಅಲ್ಲಿಯೇ ಕುಳಿತೆ. ನಾನು ಕಾಣಬೇಕೆಂಬ ಕೇಳಬೇಕೆಂಬುದೆಲ್ಲ, ನಾನು ಕಂಡು ಕೇಳುತ್ತಿರುವುದೆಲ್ಲ ರಾತ್ರಿಯ ಸದ್ದಿನಲ್ಲಿ ಅಡಗಿಹೋದವು.

ಅವರು ಮತ್ತೊಮ್ಮೆ ಬಂದರು, ಮಗದೊಮ್ಮೆಯೂ ಬಂದರು. ಆ ದಿನದ ಇರಿಸುಮುರಿಸಿನ ಸಂಭಾಷಣೆಯ ಪರಿಣಾಮವೆಲ್ಲ ಸಂಪೂರ್ಣವಾಗಿ ಮಾಯವಾಗಿತ್ತು, ಮತ್ತೆಂದೂ ಕಾಡದ ಹಾಗೆ. ಆ ಬೇಸಿಗೆ ಪೂರ್ತಿ ಅವರು ವಾರಕ್ಕೆರಡು ಮೂರು ಬಾರಿ ನಮ್ಮ ಮನೆಗೆ ಬರುತ್ತಿದ್ದರು. ಅವರ ಇರುವಿಕೆಗೆ ನಾನೆಷ್ಟು ಒಗ್ಗಿಕೊಂಡುಬಿಟ್ಟೆನೆಂದರೆ, ಯಾವುದಾದರೂ ಕಾರಣಕ್ಕೆ ಅವರಿಗೆ ಬರಲಾಗದಿದ್ದರೆ, ನನಗೆ ಬಿಕೋ ಅನ್ನಿಸುತ್ತಿತ್ತು, ಅವರ ಮೇಲೆ ಕೋಪವೂ ಬರುತ್ತಿತ್ತು, ನನ್ನನ್ನು ಕೈಬಿಡುವ ಮೂಲಕ ಕೆಟ್ಟದಾಗಿ ನಡೆದುಕೊಳ್ಳುತ್ತಿದ್ದಾರೆ ಅನ್ನಿಸುತ್ತಿತ್ತು. ಜೊತೆಗಿರಲು ಇಷ್ಟಪಡುವ ಒಬ್ಬ ಹುಡುಗನಂತೆ ನನ್ನನ್ನವರು ಕಾಣುತ್ತಿದ್ದರು, ಪ್ರಶ್ನೆಗಳನ್ನು ಕೇಳುತ್ತಿದ್ದರು, ನಾನು ಹೃತ್ಪೂರ್ವಕವಾಗಿ ವರ್ತಿಸುವಂತೆ ಪ್ರೇರಿಸುತ್ತಿದ್ದರು, ನನಗೆ ಸಲಹೆಗಳನ್ನೂ ಪ್ರೋತ್ಸಾಹವನ್ನೂ ನೀಡುತ್ತಿದ್ದರು, ಕೆಲವು ವೇಳೆ ನನ್ನನ್ನು ಗದರಿಸಿ ತಡೆಯುತ್ತಿದ್ದರು. ನನ್ನ ಮಟ್ಟಕ್ಕೇ ವ್ಯವಹರಿಸಲು ಅವರು ನಿರಂತರ ಪ್ರಯತ್ನ ನಡೆಸುತ್ತಿದ್ದರೂ, ಅವರ ಆ ಭಾಗದ ವ್ಯಕ್ತಿತ್ವದ ಹಿಂದೆ ನಿಗೂಢ ವಲಯವೊಂದು ಅಡಗಿದ್ದು, ಅದನ್ನು ನನ್ನ ಬಳಿ ಹೇಳಿಕೊಳ್ಳುವುದು ಅವರಿಗೆ ಬೇಕಿರಲಿಲ್ಲವೆಂಬ ಅರಿವೂ ನನಗಿತ್ತು. ಇದೇ ನನ್ನಲ್ಲಿ ಅವರ ಬಗ್ಗೆ ಗೌರವ ಮೂಡಲು ಕಾರಣವಾದದ್ದು, ಅವರೆಡೆಗೆ ನನ್ನನ್ನು ಸೆಳೆಯುವಂತೆ ಮಾಡಿದ್ದು. ಅವರು ತಮ್ಮ ಜೊತೆಗಿದ್ದ ತಾಯಿಯನ್ನು ನೋಡಿಕೊಳ್ಳಬೇಕಾಗಿದ್ದುದರ ಜೊತೆಗೆ ತಮ್ಮ ಆಸ್ತಿಪಾಸ್ತಿಗಳ ಉಸ್ತುವಾರಿಯ ಹೊಣೆಯನ್ನು ಹೊರಬೇಕಾಗಿದ್ದುದು ಮಾತ್ರವಲ್ಲ, ಗಂಭೀರ ಸಮಸ್ಯೆಗಳ ಆಕರವಾಗಿದ್ದ ಕೆಲವು ಸಾರ್ವಜನಿಕ ವ್ಯವಹಾರಗಳನ್ನೂ ನೋಡಿಕೊಳ್ಳಬೇಕಾಗಿತ್ತು ಎಂಬ

ವಿಷಯ ಕಾತ್ಯಾ ಹಾಗೂ ನೆರೆಹೊರೆಯವರ ಮಾತುಗಳಿಂದ ನನಗೆ ಗೊತ್ತಾಗಿತ್ತು. ಆದರೆ ಇವೆಲ್ಲದರ ಬಗ್ಗೆ ಅವರಿಗಿದ್ದ ಮನೋಭಾವವಾವುದು, ಅವರ ನಂಬಿಕೆಗಳಾವುವು, ಯೋಜನೆಗಳಾವುವು, ನಿರೀಕ್ಷೆ-ಭರವಸೆಗಳಾವುವು ಎಂಬುದು ಮಾತ್ರ ನನಗೆ ಕಿಂಚಿತ್ತೂ ಗೊತ್ತಿರಲಿಲ್ಲ, ಅವರ ವ್ಯಹಾರಗಳ ಬಗ್ಗೆ ನಾನು ಮಾತು ತೆಗೆದಾಗಲೆಲ್ಲ ಅವರಿಗೇ ವಿಶಿಷ್ಟವಾದ ರೀತಿಯಲ್ಲವರು ನುಣುಚಿಕೊಳ್ಳುತ್ತಿದ್ದರು; ಇದರಿಂದ 'ಸುಮ್ಮನಿರು, ಇದಕ್ಕೂ ನಿನಗೂ ಸಂಬಂಧವಿಲ್ಲ' ಎಂದು ಹೇಳುವಂತೆ ತೋರುತ್ತಿತ್ತು, ಆನಂತರ ಮಾತು ಬದಲಾಯಿಸುತ್ತಿದ್ದರು. ಮೊದಮೊದಲು ಇದರಿಂದ ನನಗೆ ನೋವಾಗುತ್ತಿತ್ತು; ಬರಬರುತ್ತ ನಮ್ಮ ಮಾತುಕತೆಗಳನ್ನು ನನ್ನ ವಿಷಯಕ್ಕೆ ಸೀಮಿತಗೊಳಿಸಿಕೊಂಡು, ಮಿಕ್ಕದ್ದನ್ನೆಲ್ಲ ಸಹಜವೆಂದು ಕೈಬಿಡುವ ಅಭ್ಯಾಸ ಆಯಿತು.

ಮೊದಮೊದಲು ನನಗೆ ಅಸಂತೋಷವುಂಟುಮಾಡಿದ ಮತ್ತೊಂದು ವಿಷಯವೂ ಇತ್ತು, ಆದರೆ ಆಮೇಲೆ ಅದೇ ಆಪ್ಯಾಯಮಾನವಾಯಿತು. ಅದೆಂದರೆ, ನನ್ನ ಬಾಹ್ಯ ಸ್ವರೂಪದ ಬಗ್ಗೆ ಅವರಿಗಿದ್ದ ಪೂರ್ಣ ಅವಗಣನೆ, ಅಷ್ಟೇ ಏಕೆ ತಿರಸ್ಕಾರ. ನಾನು ಚೆಲುವಾಗಿದ್ದೇನೆಂದು ಅವರೆಂದೂ ಬಾಯಿ ಬಿಟ್ಟಾಗಲೀ ನೋಟದಲ್ಲಾಗಲೀ ತೋರ್ಪಡಿಸಿಕೊಂಡುದಿಲ್ಲ. ಅದಕ್ಕೆ ವ್ಯತಿರಿಕ್ತವಾಗಿ, ನನ್ನನ್ನು ಕುರಿತು ಯಾರಾದರೂ ಅಂಥದೊಂದು ಶಬ್ದವನ್ನು ಬಳಸಿದರೆ ಅವರು ಚೇಷ್ಟೆ ಮಾಡುತ್ತಿದ್ದರು, ಇಲ್ಲವೇ ಕೇಳಿ ನಕ್ಕುಬಿಡುತ್ತಿದ್ದರು. ನನ್ನ ರೂಪದಲ್ಲಿನ ಕುಂದುಗಳನ್ನು ಎತ್ತಿ ಹೇಳುವುದನ್ನೂ, ಆ ಬಗ್ಗೆ ನನ್ನನ್ನು ಛೇಡಿಸುವುದನ್ನೂ ಅವರು ಇಷ್ಟಪಡುತ್ತಿದ್ದರು. ವಿಶೇಷ ಸಂದರ್ಭಗಳಲ್ಲಿ ನನಗೆ ಸೊಗಸಾದ ರೀತಿಯಲ್ಲಿ ಅಲಂಕಾರ ಮಾಡುವುದನ್ನೂ ನನ್ನ ಕೂದಲನ್ನು ಹೊಸ ಬಗೆಯಲ್ಲಿ ವಿನ್ಯಾಸ ಮಾಡುವುದನ್ನೂ ಕಾತ್ಯಾ ಇಷ್ಟಪಡುತ್ತಿದ್ದಳು. ಆದರೆ ನನ್ನ ಈ ಪರಿಯ ಶೃಂಗಾರವನ್ನು ಅವರು ಗೇಲಿ ಮಾಡಿಬಿಡುತ್ತಿದ್ದರು. ಆದರೆ ಇದರಿಂದ ಮೃದು ಹೃದಯಿಯಾದ ಕಾತ್ಯಾ ನೊಂದುಕೊಳ್ಳುತ್ತಿದ್ದಳು, ಅದನ್ನು ಕಂಡು ಮೊದಮೊದಲು ನನಗೂ ಕೆಟ್ಟದೆನಿಸುತ್ತಿತ್ತು. ಅವರು ನನ್ನನ್ನು ಮೆಚ್ಚಬೇಕೆಂದು ಕಾತ್ಯಾ ಏನೆಲ್ಲ ಮಾಡುತ್ತಿದ್ದಳು; ಆದರೆ ಒಬ್ಬ ಗಂಡಸು ತಾನು ಇಷ್ಟಪಡುವ ಹೆಣ್ಣು ಹೇಗೆ ಕಾಣಿಸಬೇಕೆಂದು ಬಯಸುತ್ತಾನೋ ಎಂಬುದನ್ನು ಅರ್ಥಮಾಡಿಕೊಳ್ಳಲಾರದೇ ಹೋದಳು. ಆದರೆ ಅವರು ಬಯಸುವುದೇನು ಎಂಬುದು ಬಹು ಬೇಗ ನನಗೆ ತಿಳಿಯಿತು. ನನ್ನಲ್ಲಿ ಕಿಂಚಿತ್ತಾದರೂ ಕೃತಕತೆಯಿರಬಾರದೆಂಬುದು ಅವರ ಆಸೆ. ಅದಕ್ಕೇ ಕೃತಕತೆಯಿಲ್ಲದಂತಹ ಉಡುಪುಗಳನ್ನೇ ನಾನು ಹಾಕಿಕೊಳ್ಳುತ್ತಿದ್ದೆ, ತಲೆಗೂದಲನ್ನು ಬಾಚಿಕೊಳ್ಳುತ್ತಿದ್ದೆ, ನನ್ನ ನಡವಳಿಕೆಯೂ ಸಹಜವಾಗಿರುವಂತೆ ಎಚ್ಚರವಹಿಸುತ್ತಿದ್ದೆ. ಆದರೆ ಇವೆಲ್ಲದರ ನಡುವೆಯೇ ಎದ್ದು ಕಾಣುವ ಒಂದು ಕೃತಕತೆ ತಲೆಯೆತ್ತಿತು: ಕೃತಕ ಸರಳತೆ! ನಾನು ಸರಳವಾಗಿರಬೇಕೆಂದು ಇಷ್ಟಪಡದಿದ್ದಾಗಲೇ ತೋರಿಸಿಕೊಳ್ಳುತ್ತಿದ್ದ ಸರಳತೆ! ಅವರಿಗೆ ನನ್ನನ್ನು ಕಂಡರೆ ಇಷ್ಟ ಎಂಬುದು ನನಗೆ ತಿಳಿದಿತ್ತು; ಆದರೆ ಅವರು ನನ್ನನ್ನು ಪ್ರೀತಿಸುತ್ತಿದ್ದುದು ಒಂದು ಮಗುವನ್ನು ಪ್ರೀತಿಸುವ ರೀತಿಯಲ್ಲಿಯೋ ಹೆಣ್ಣನ್ನು

ಇಷ್ಟಪಡುವ ರೀತಿಯಲ್ಲಿಯೋ ಎಂಬುದನ್ನು ಕುರಿತು ನಾನು ಆಲೋಚಿಸಿರಲಿಲ್ಲ. ಅವರ ಪ್ರೀತಿ ನನಗೆ ಅಮೂಲ್ಯವಾಗಿತ್ತು, ಜಗತ್ತಿನ ಇತರ ಎಲ್ಲ ಯುವತಿಯರಿಗಿಂತ ನಾನೇ ಉತ್ತಮ ಎಂದವರು ಭಾವಿಸಿದ್ದಾರೆಂಬುದು ನನ್ನ ತಿಳಿವಳಿಕೆಯಾಗಿತ್ತು, ಅವರು ನನ್ನ ಬಗ್ಗೆ ಈ ಪರಿ ಭ್ರಮಿಸುವುದನ್ನು ನಾನು ಇಷ್ಟಪಡುತ್ತಿದ್ದೆ. ಅವರನ್ನು ಮೋಸಗೊಳಿಸುವ ಇಷ್ಟವಿಲ್ಲದಿದ್ದರೂ, ವಾಸ್ತವವಾಗಿ ಮೋಸಗೊಳಿಸುತ್ತಿದ್ದೆ; ಅವರನ್ನು ಮೋಸ ಗೊಳಿಸುವಾಗ ನಾನು ಉತ್ತಮಳಾಗಿಬಿಡುತ್ತಿದ್ದೆ. ದೇಹಕ್ಕಿಂತ ಮಿಗಿಲಾಗಿ ನನ್ನ ಎದೆಯಾಳದಲ್ಲಿನ, ಮನದಾಳದಲ್ಲಿನ ಸದ್ಗುಣಗಳನ್ನು ಅವರಿಗೆ ಮನವರಿಕೆ ಮಾಡಿಕೊಡಲು ಇದು ಅತ್ಯುತ್ತಮ ಮಾರ್ಗವೆಂದು ನಾನು ಭಾವಿಸಿದ್ದೆ. ನನ್ನ ಕೂದಲು, ಕೈಗಳು, ಮುಖ, ನಡವಳಿಕೆ - ಇವೆಲ್ಲವೂ ಒಳ್ಳೆಯವೋ ಅಲ್ಲವೋ - ಅವರು ತಕ್ಷಣವೇ ಗುರುತಿಸಿಬಿಡುತ್ತಿದ್ದರು, ತಿಳಿದುಕೊಂಡು ಬಿಡುತ್ತಿದ್ದರು; ಹೀಗಾಗಿ ನಾನು ನನ್ನ ಬಾಹ್ಯ ರೂಪಕ್ಕೆ ಹೊಸತೇನನ್ನೂ, ಅವರನ್ನು ಮೋಸಗೊಳಿಸುವುದನ್ನು ಬಿಟ್ಟರೆ, ಸೇರಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ನನ್ನ ಮನಸ್ಸು ಎದೆಗಳಲ್ಲಿ ಏನಿದೆಯೆಂಬುದನ್ನು ಅವರೇನು ಬಲ್ಲರು, ಯಾಕಂದರೆ ಅವುಗಳ ಬಗ್ಗೆ ಅವು ಬೆಳೆಯುವ ಬಲಗೊಳ್ಳುವ ಹಾದಿಯಲ್ಲಿದ್ದ ಬಗ್ಗೆ ಅವರಿಗೆ ಒಲವಿತ್ತು. ಈ ಅಂಶದಲ್ಲಿ ಮಾತ್ರ ನಾನವರನ್ನು ವಂಚಿಸಬಲ್ಲವಳಾಗಿದ್ದೆ, ಹಾಗೆ ಮಾಡಿಯೂ ಮಾಡಿದೆ. ಅವರ ಜೊತೆಗಿರುವುದೆಂದರೆ ನನಗದೆಷ್ಟು ಹಿತಕರ ಅನುಭವ; ಒಮ್ಮೆ ಇದು ಸ್ಫಟಿಕ ಸ್ಪಷ್ಟವಾಗಿಬಿಟ್ಟಿತು! ನನ್ನ ಕಾರಣರಹಿತ ನಾಚಿಕೆ ಹಾಗೂ ವಿಚಿತ್ರ ನಡವಳಿಕೆಗಳು ಸಂಪೂರ್ಣವಾಗಿ ಕಣ್ಮರೆಯಾಗಿಬಿಟ್ಟವು! ಎದುರಿನಿಂದಾಗಲೀ, ದೂರದಿಂದಾಗಲೀ, ನಿಂತಿರುವಾಗಲಾಗಲೀ, ಕುಳಿತಿರುವಾಗಲಾಗಲೀ, ಕೂದಲನ್ನು ತುರುಬು ಕಟ್ಟಿಕೊಂಡಿರುವಾಗಲಾಗಲೀ, ಜಡೆ ಹೆಣೆದುಕೊಂಡಿರುವಾಗಲಾಗಲೀ ಅವರು ನನ್ನನ್ನು ತಲೆಯಿಂದ ಕಾಲಿನವರೆಗೂ ಅರ್ಥಮಾಡಿಕೊಂಡಿದ್ದಾರೆಂಬ, ನಾನು ಇರುವಂತೆಯೇ ಅವರಿಗೆ ತೃಪ್ತಿ ಎಂಬ ಭಾವನೆ ನನ್ನಲ್ಲಿ ಮನೆಮಾಡಿತ್ತು. ಇದಕ್ಕೆ ವ್ಯತಿರಿಕ್ತವಾಗಿ, ಇತರರು ಮಾಡುವಂತೆ ಅವರೇನಾದರೂ ಅಕಸ್ಮಾತ್ತಾಗಿ ನನ್ನ ರೂಪಿನ ಬಗ್ಗೆ ಹೊಗಳಿಕೆಯ ಮಾತನ್ನಾಡಿದರೆ ನನಗದು ಖಂಡಿತ ಇಷ್ಟವಾಗುತ್ತಿರಲಿಲ್ಲ. ಅದಕ್ಕೆ ಬದಲು, ನಾನೇನಾದರೂ ಹೇಳಿದಾಗ ನನ್ನ ಕಡೆ ಗಡುಸಿನಿಂದ ನೋಡುತ್ತ ತಮ್ಮ ಭಾವನೆಗಳನ್ನು ಬಚ್ಚಿಟ್ಟುಕೊಂಡು ತಮಾಷೆಯಾಗಿ, "ನಿನ್ನಲ್ಲಿ ಏನೋ ವಿಶೇಷವಾದ್ದು ಇದೆ, ನೀನು ತುಂಬ ಚಾಲಾಕಿ ಹುಡುಗಿ" ಎಂದು ಹೇಳಿದರೆ ನನ್ನ ಹೃದಯ ಗರಿಹಗುರವಾಗುತ್ತಿತ್ತು, ಮನಸ್ಸು ಬಣ್ಣವೇರುತ್ತಿತ್ತು.

ನನ್ನ ಮನಸ್ಸಿನಲ್ಲಿ ಹೆಮ್ಮೆ ಸಂತಸಗಳನ್ನು ತುಂಬುವಂತಹ ಇಂಥ ಉಡುಗೊರೆಗಳು ನನಗೆ ಬರುತ್ತಿದ್ದವು. ಮುದುಕ ಗ್ರಿಗರಿ ತನ್ನ ಮೊಮ್ಮಗಳ ಬಗ್ಗೆ ಇಟ್ಟುಕೊಂಡಿದ್ದ ಪ್ರೀತಿಯ ಬಗ್ಗೆ ನಾನು ಆರ್ದ್ರತೆಯಿಂದ ಮಾತನಾಡುವುದಕ್ಕೋ; ಅಥವಾ ಯಾವುದಾದರೂ ಕತೆಯನ್ನೋ ಕವನವನ್ನೋ ಓದಿ ಕಣ್ಣೀರು ಸುರಿಸುವುದಕ್ಕೋ; ಅಥವಾ ನನಗೆ ಷುಲ್ಹಾಫ್" ಗಿಂತ ಮೊಜಾರ್ಟ್ ಹೆಚ್ಚು ಇಷ್ಟ ಎಂಬ ಕಾರಣಕ್ಕೋ? ಯಾವುದು

ನಿಜವಾಗಿ ಒಳ್ಳೆಯದು, ಯಾವುದನ್ನು ಇಷ್ಟಪಡಬೇಕು ಎಂಬುದು ನನಗೆ ತಿಳಿದಿಲ್ಲದಿದ್ದಾಗಲೂ, ಯಾವುದು ಒಳ್ಳೆಯದು, ಇಷ್ಟಪಡಬೇಕಾದದ್ದು ಎಂದು ಬಹು ಬೇಗ ಗುರುತಿಸುವ ನನ್ನ ರೀತಿಯ ಬಗ್ಗೆ ನನಗೇ ಅಚ್ಚರಿಯೆನಿಸಿತ್ತು. ನನ್ನ ಹಳೆಯ ಅಭಿರುಚಿ ಮತ್ತು ಹವ್ಯಾಸಗಳಲ್ಲಿ ಬಹುತೇಕ ಅವರಿಗೆ ಇಷ್ಟವಾಗುತ್ತಿರಲಿಲ್ಲ; ನಾನು ಹೇಳುವುದನ್ನು ಅವರು ಇಷ್ಟಪಡುತ್ತಿಲ್ಲ ಎಂಬುದನ್ನು ತೋರ್ಪಡಿಸಲು ಅವರ ಒಂದು ನೋಟ ಅಥವಾ ಹುಬ್ಬಿನ ಕೊಂಕು ಸಾಕಾಗಿತ್ತು; ನನ್ನ ಗುಣಮಟ್ಟವೇ ಬದಲಾಗಿಬಿಟ್ಟಿದೆ ಎಂಬದು ತಕ್ಷಣವೇ ಅರಿವಿಗೆ ಬರುತ್ತಿತ್ತು. ಅವರು ನನಗೇನಾದರೂ ಸಲಹೆ ನೀಡುವುದಕ್ಕೆ ತೊಡಗಿದಾಗ, ಅವರು ಏನು ಹೇಳಬಹುದೆಂಬುದು ನನಗೆ ತಿಳಿದುಹೋಗುತ್ತಿತ್ತು. ನನ್ನ ಕಣ್ಣಲ್ಲಿ ಕಣ್ಣಿಟ್ಟು ಅವರೇನಾದರೂ ಪ್ರಶ್ನೆ ಕೇಳಿದಾಗ, ಅವರ ನೋಟವೇ ಅವರಿಗೆ ಬೇಕಾದ ಉತ್ತರವನ್ನು ನನ್ನಿಂದ ಹೊರಡಿಸಿಬಿಡುತ್ತಿತ್ತು. ಆ ಹೊತ್ತಿನ ಆಲೋಚನೆಗಳೂ ಭಾವನೆಗಳೂ ನನ್ನವಾಗಿರುತ್ತಿರಲಿಲ್ಲ: ಅವೆಲ್ಲ ಅವರವೇ ಆಲೋಚನೆಗಳು, ಭಾವನೆಗಳು. ಅವೆಲ್ಲ ಒಂದೇ ಕ್ಷಣಕ್ಕೆ ನನ್ನವಾಗಿಬಿಟ್ಟು ನನ್ನ ಬದುಕಿನ ಭಾಗವಾಗಿ ಬೆಳಗುತ್ತಿದ್ದವು. ನನಗೇ ಅರಿವಿಲ್ಲದಂತೆ ಎಲ್ಲವನ್ನೂ ನಾನು ನೋಡುವ ದೃಷ್ಟಿಕೋನವೇ ಬದಲಾಗಿಬಿಟ್ಟಿತ್ತು - ಕಾತ್ಯಾ, ಸೋನ್ಯಾರ ಬಗ್ಗೆ, ನನ್ನ ಬಗ್ಗೆ, ಹಾಗೇ ನನ್ನ ಕೆಲಸದ ಬಗ್ಗೆ. ಬೇಸರವನ್ನು ಹೋಗಲಾಡಿಸಿಕೊಳ್ಳಲೆಂದು ನಾನು ಓದುತ್ತಿದ್ದ ಪುಸ್ತಕಗಳು ಈಗ ನನ್ನ ಬದುಕಿನ ಸಂತಸದ ಮೂಲಗಳಾದವು. ಅದಕ್ಕೆ ಕಾರಣ ಅವರು ನನಗಾಗಿ ಹುಡುಕಿ ತರುತ್ತಿದ್ದ ಪುಸ್ತಕಗಳು ಹಾಗೂ ನಾವು ಒಟ್ಟಿಗೇ ಓದಿ ಅವುಗಳ ಬಗ್ಗೆ ಚರ್ಚಿಸುತ್ತಿದ್ದುದು. ಸೋನ್ಯಾಗೆ ನಾನು ಹೇಳಿಕೊಡುತ್ತಿದ್ದ ಪಾಠದ ಕೆಲಸ ಭಾರವೆನಿಸಿತೊಡಗಿತು, ಇದನ್ನು ನಾನು ಕರ್ತವ್ಯವೆಂಬ ದೃಷ್ಟಿಯಿಂದ ಹೊತ್ತುಕೊಂಡಿದ್ದೆ. ಆದರೆ ಪಾಠ ಹೇಳಿಕೊಡುವಾಗ ಅವರೂ ಇರುತ್ತಿದ್ದುದರಿಂದ ಅದೂ ಸಂತಸದಾಯಕವಾಗಿ, ಸೋನ್ಯಾಳ ಪ್ರಗತಿ ಸಂತಸದಾಯಕವೆನಿಸಿತು. ಇಡೀ ಸಂಗೀತವನ್ನೆಲ್ಲ ಬಾಯಿಪಾಠ ಮಾಡಿಕೊಳ್ಳುವುದು ಅಸಾಧ್ಯವೆಂಬ ಭಾವನೆ ನನ್ನಲ್ಲಿತ್ತು, ಆದರೆ ಈಗವರು ಅದನ್ನು ಕೇಳುತ್ತಾರೆ, ಹೊಗಳಲೂಬಹುದು ಎಂಬ ಕಾರಣದಿಂದಾಗಿ ನಾನು ಒಂದೇ ಪಲುಕನ್ನು ಒಂದೇ ಸಮನೆ ನಲವತ್ತು ಬಾರಿ ನುಡಿಸುತ್ತಿದ್ದೆ. ಅದು ಎಷ್ಟರಮಟ್ಟಿಗಾಯ್ತೆಂದರೆ ಬಡಪಾಯಿ ಕಾತ್ಯಾ ಕಿವಿಗಳಲ್ಲಿ ಹತ್ತಿ ತುಂಬಿಕೊಳ್ಳುವಂತಾಯಿತು, ಆದರೆ ನನಗಂತೂ ಇದು ಬೇಸರವೆನಿಸಲಿಲ್ಲ. ಅವೇ ಸೊನಾಟಗಳು ವಿವಿಧ ಬಗೆಯ ಅಭಿವ್ಯಕ್ತಿಗಳನ್ನು ಹೊಂದಿರುವಂತೆ ತೋರುತ್ತಿತ್ತು, ಹೀಗಾಗಿ ಒಂದೊಂದು ಸಾರಿಯೂ ವಿಭಿನ್ನವಾಗಿಯೂ ಉತ್ತಮ ರೀತಿಯಲ್ಲಿಯೂ ಮೂಡಿಬರುತ್ತಿತ್ತು. ನನ್ನ ಎರಡನೆಯ ಅಸ್ತಿತ್ವವೆಂಬಂತೆ ನಾನು ಭಾವಿಸುತ್ತಿದ್ದ ಕಾತ್ಯಾ ಕೂಡ ನನ್ನ ಕಣ್ಣುಗಳಿಗೆ ಬೇರೆಯದೇ ಬಗೆಯಲ್ಲಿ ಕಾಣಿಸ ತೊಡಗಿದಳು. ಅವಳು ನಮ್ಮ ತಾಯಿ, ಗೆಳತಿ ಹಾಗೂ ಆಳು ಎಂಬಂತೆ ಅವಳೇನೂ ಇರಬೇಕಾದ ಅಗತ್ಯವಿಲ್ಲ ಎಂದು ನನಗೆ ಮೊದಲ ಬಾರಿಗೆ ಮನವರಿಕೆಯಾಯಿತು. ಈ ಸ್ನೇಹಜೀವಿಯ ತ್ಯಾಗ ಮುತುವರ್ಜಿ ಇವುಗಳನ್ನು ನಾನು ಕೃತಜ್ಞತೆಯಿಂದ

ಕಾಣುವಂತಾಯಿತು; ಇದರಿಂದಾಗಿ ಅವಳ ಬಗೆಗಿನ ನನ್ನ ಪ್ರೀತಿ ಮತ್ತಷ್ಟು ಆಳವಾಯಿತು. ಆಳುಗಳು, ಕೆಲಸಗಾರರು, ಕೆಲಸಗಿತ್ತಿಯರು ಇವರುಗಳ ಬಗ್ಗೆ ಕೂಡ ಹೊಸ ದೃಷ್ಟಿಕೋನವನ್ನು ಬೆಳೆಸಿಕೊಳ್ಳಲೂ ಇವರೇ ಕಾರಣರಾದರು. ಇವರೆಲ್ಲರೊಡನೆ ನಾನು ಹದಿನೇಳು ವರ್ಷಗಳಷ್ಟು ದೀರ್ಘ ಕಾಲ ಕಳೆದಿದ್ದೆ, ಆದರೆ ಅವರ ಬಗ್ಗೆ ನನಗೆ ಗೊತ್ತಿದ್ದುದು ತೀರ ಅಲ್ಪ, ಎಂದೂ ನೋಡದೇ ಇದ್ದ ಅಪರಿಚಿತರಿಗಿಂತ ಹೆಚ್ಚೇನೂ ಅಲ್ಲ. ಅವರಿಗೂ ನನಗಿರುವಂತೆಯೇ ತಮ್ಮದೇ ಆದ ಪ್ರೀತಿ ಕಕ್ಕುಲತೆಗಳು ಆಸೆ-ಆಕಾಂಕ್ಷೆಗಳು ನೋವುದುಃಖಗಳು ಇರುತ್ತವೆಂಬ ಅರಿವು ನನಗುಂಟಾಯಿತು - ಹೀಗೆಂದು ಒಪ್ಪಿಕೊಳ್ಳುವುದೇ ನನಗೆ ಮುಜುಗರವೆನಿಸುತ್ತದೆ. ನಾನು ಬಹುಕಾಲದಿಂದ ಬಲ್ಲ ನಮ್ಮ ಮನೆಯ ತೋಟ, ಹೊಲಗಳು, ಕಾಡು, ನನಗೀಗ ಇದ್ದಕ್ಕಿದ್ದಂತೆ ಹೊಸದಾಗಿ, ಎಂದಿಗಿಂತ ಚೆಲುವಾಗಿರುವಂತೆ ತೋರುತ್ತಿತ್ತು. ನಿಶ್ಚಿತ ಸುಖ ಸಿಕ್ಕುವುದು ಬೇರೆಯವರಿಗಾಗಿ ಬಾಳುವುದರಲ್ಲಿ ಮಾತ್ರವೇ ಎಂಬ ಅವರ ಮಾತು ನಿಜವೆನ್ನಿಸಿತು. ಅವರು ಆ ಮಾತುಗಳನ್ನಾಡಿದಾಗ ನನಗೆ ವಿಚಿತ್ರವೆನಿಸಿತ್ತು, ಆಗ ನನಗೆ ಅದರ ಅರ್ಥ ಆಗಿರಲಿಲ್ಲ; ಆದರೆ ಪೂರ್ವಾಲೋಚನೆಯಿಲ್ಲದೆಯೇ ಕ್ರಮೇಣ ಇದು ನನಗೂ ಮನವರಿಕೆಯಾಯಿತು. ಈಗಿನ ನನ್ನ ಬದುಕನ್ನು ಎಳ್ಳಷ್ಟೂ ಬದಲಾಯಿಸದೆಯೇ, ತಮ್ಮ ಪ್ರಭಾವವನ್ನು ಬಿಟ್ಟು ನನ್ನ ಮನಸ್ಸಿನಲ್ಲಿ ಬೇರೇನನ್ನೂ ಸೇರಿಸದೆಯೇ, ಅದರಲ್ಲಿನ ಸಂತಸದ ಜಗತ್ತನ್ನು ನನಗವರು ಅನಾವರಣ ಮಾಡಿದರು. ಬಾಲ್ಯದಿಂದಲೂ ನನಗೆ ಏನನ್ನೂ ತಿಳಿಸಿಕೊಡದಿದ್ದ ಸುತ್ತಮುತ್ತಲಿನ ವಸ್ತುಗಳೆಲ್ಲ ಇದ್ದಕ್ಕಿದ್ದಂತೆ ಜೀವ ತಳೆದಂತಾಯಿತು. ಅವರನ್ನು ನೋಡಿದರೆ ಸಾಕು, ಎಲ್ಲಕ್ಕೂ ಬಾಯಿ ಬಂದು ಮಾತಾಡತೊಡಗಿವೆಯೇನೋ ಅನ್ನಿಸುತ್ತಿತ್ತು, ನನ್ನ ಮನದಾಳದಲ್ಲಿ ಹೊಕ್ಕಿಬಿಡುತ್ತಿತ್ತು, ಆನಂದವನ್ನು ತುಂಬುತ್ತಿತ್ತು.

ಬೇಸಿಗೆಯಲ್ಲಿ ಎಷ್ಟೋ ವೇಳೆ, ನಾನು ಮಹಡಿಯ ಮೇಲಿನ ನನ್ನ ಕೋಣೆಗೆ ಹೋಗಿ ಹಾಸಿಗೆಯ ಮೇಲೆ ಉರುಳಿಕೊಂಡಾಗ, ಕಳೆದ ವಸಂತದ ಸಂತೋಷ, ಬಯಕೆಗಳು, ಭವಿಷ್ಯದ ಭರವಸೆಗಳು ಇವುಗಳ ಜಾಗದಲ್ಲಿ ಸದ್ಯದ ಸುಖವೇ ತುಂಬಿಕೊಳ್ಳುತ್ತಿತ್ತು. ನಿದ್ರೆ ಬಾರದೆ, ಮೇಲೆದ್ದು ಕಾತ್ಯಾಳ ಹಾಸಿಗೆಯ ಬಳಿ ಹೋಗಿ ನಿಲ್ಲುತ್ತಿದ್ದೆ, ನಾನೆಷ್ಟು ಸುಖಿ ಎಂದು ಹೇಳುತ್ತಿದ್ದೆ. ಆದರೆ ಇದೆಲ್ಲ ಅನವಶ್ಯಕವಾಗಿತ್ತು ಎಂದು ಈಗ ನನಗೆ ಅನಿಸುತ್ತಿದೆ, ಯಾಕಂದರೆ ಅದನ್ನು ಅವಳೇ ಕಣ್ಣಾರೆ ಕಾಣುತ್ತಿದ್ದಳು. ತನಗೂ ಸಂತೋಷ, ತೃಪ್ತಿ ಎರಡೂ ಉಂಟಾಗಿವೆ ಎಂದು ಹೇಳುತ್ತ ನನಗೆ ಮುತ್ತಿಕ್ಕುತ್ತಿದ್ದಳು. ಅವಳ ಮಾತನ್ನು ನಾನು ನಂಬುತ್ತಿದ್ದೆ - ಪ್ರತಿಯೊಬ್ಬರೂ ಸಂತೋಷ ವಾಗಿರಬೇಕಾದುದು ಆವಶ್ಯಕ ಎಂದು ನನಗೆ ತೋರುತ್ತಿತ್ತು. ಆದರೆ ಕಾತ್ಯಾಳಿಗೆ ನಿದ್ದೆಯ ಆಲೋಚನೆಯೂ ಬರುತ್ತಿತ್ತು; ಕೆಲವು ವೇಳೆ ಹುಸಿಮುನಿಸು ತೋರಿಸುತ್ತ ತನ್ನ ಹಾಸಿಗೆಯಿಂದ ನನ್ನನ್ನು ಕಳಿಸಿ ತಾನು ಮಲಗಿಕೊಳ್ಳುತ್ತಿದ್ದಳು. ಆದರೆ ನನ್ನ ಮನಸ್ಸಿನಲ್ಲಿ ಈ ಸಂತೋಷಕ್ಕೆ ಕಾರಣವೇನು ಎಂಬ ಆಲೋಚನೆ ಕೊರೆಯುತ್ತಿತ್ತು. ಎಷ್ಟೋ ವೇಳೆ ನಾನು

ಮೇಲೆದ್ದು ಮತ್ತೆ ಮತ್ತೆ ದೇವರ ಪ್ರಾರ್ಥನೆ ಮಾಡುತ್ತಿದ್ದೆ, ನನಗೆ ಇತ್ತಿರುವ ಈ ಎಲ್ಲ ಸುಖಕ್ಕಾಗಿ ಅವನಿಗೆ ಕೃತಜ್ಞತೆ ಅರ್ಪಿಸುತ್ತಿದ್ದೆ.

ಕೋಣೆಯಲ್ಲಿ ನಿಶ್ಶಬ್ದ ತುಂಬಿತ್ತು; ಕಾತ್ಯಾಳ ಲಯಬದ್ಧ ಉಸಿರಾಟವೊಂದೇ ಅಲ್ಲಿದ್ದುದು, ಜೊತೆಗೆ ಅವಳ ಹಾಸಿಗೆಯ ಬಳಿಯಿದ್ದ ಗಡಿಯಾರದ ಟಿಕ್ ಟಿಕ್ ಸದ್ದು. ನಾನು ಮಾತ್ರ ಆ ಪಕ್ಕದಿಂದ ಈ ಪಕ್ಕಕ್ಕೆ, ಈ ಕಡೆಯಿಂದ ಆ ಕಡೆಗೆ ಹೊರಳಾಡುತ್ತಲೇ ನನ್ನ ಕೊರಳಿನಲ್ಲಿದ್ದ ಶಿಲುಬೆಗೆ ಮುತ್ತಿಕ್ಕಿ ಅಥವಾ ಶಿಲುಬೆಯಾಕಾರ ರಚಿಸಿಕೊಂಡು ಪ್ರಾರ್ಥನೆಯನ್ನು ಪಿಸುಗುಟ್ಟಿಕೊಳ್ಳುತ್ತಿದ್ದೆ. ಬಾಗಿಲು ಹಾಕಿತ್ತು, ಕಿಟಕಿ ಬಾಗಿಲುಗಳು ಮುಚ್ಚಿದ್ದವು; ಯಾವುದೋ ನೊಣವೋ ಮಿಡತೆಯೋ ಗುಂಯ್ಗುಟ್ಟುತ್ತ ಹಾರಾಡುತ್ತಿತ್ತೆಂದು ಕಾಣುತ್ತದೆ. ಈ ಕೋಣೆಯನ್ನು ಬಿಟ್ಟು ಹೊರಗೆ ಹೋಗಲೇಬಾರದೆಂಬ, ಬೆಳಗಾಗಲೇಬಾರದೆಂಬ, ನನ್ನ ಈಗಿನ ಮನಃಸ್ಥಿತಿ ಬದಲಾಗಲೇಬಾರದೆಂಬ ಬಯಕೆ ನನ್ನಲ್ಲಿ ಮೂಡಿತು. ನನ್ನ ಕನಸುಗಳು, ಆಲೋಚನೆಗಳು ಹಾಗೂ ಪ್ರಾರ್ಥನೆಗಳು ಜೀವಂತವಾಗಿದ್ದಂತೆ, ನನ್ನ ಜೊತೆಯಲ್ಲಿಯೇ ಕತ್ತಲಲ್ಲಿ ಬದುಕುತ್ತಿರುವಂತೆ, ನನ್ನ ಹಾಸಿಗೆ ಸುತ್ತ ಸುಳಿದಾಡುತ್ತಿರುವಂತೆ, ನನ್ನ ಮೇಲೆ ಬಾಗಿಕೊಂಡಿದ್ದಂತೆ ತೋರಿದವು. ನನ್ನ ಆಲೋಚನೆಗಳೆಲ್ಲ ಅವರವೇ, ನನ್ನ ಭಾವನೆಗಳೆಲ್ಲವೂ ಅವರವೇ. ಅದು ಪ್ರೇಮವೇ ಎಂಬ ಬಗ್ಗೆ ನನಗಿನ್ನೂ ಗೊತ್ತಿರಲಿಲ್ಲ. ಹೀಗೆಯೇ ಎಲ್ಲವೂ ಮುಂದುವರಿಯುತ್ತವೆ ಎಂದೇ ನನ್ನ ಭಾವನೆಯಾಗಿತ್ತು, ಈ ಭಾವನೆಗಳಿಗೆ ಪರಿಣಾಮವೇ ಇಲ್ಲ ಎನ್ನಿಸಿತ್ತು.

## 3

ಒಂದು ದಿನ ಧಾನ್ಯವನ್ನು ಸಾಗಿಸುವಾಗ ನಾನು ಕಾತ್ಯಾ ಮತ್ತು ಸೋನ್ಯಾ ಜೊತೆಗೆ ತೋಟದಲ್ಲಿ ನಿಂಬೆಯ ಮರಗಳ ನೆರಳಿನಲ್ಲಿ ಹಾಗೂ ಮರಗಳ ನಡುವಣ ಕಿರುಗಣಿವೆಯ ಮೇಲಿದ್ದ ನಮ್ಮ ಎಂದಿನ ಜಾಗಕ್ಕೆ ಹೋದೆ, ಅದರಾಚೆ ಹೊಲವೂ ಕಾಡೂ ತೆರೆದುಕೊಂಡು ಹರಡಿದ್ದವು. ಸರ್ಗೀ ಮಿಖೈಲಿಚ್ ನಮ್ಮ ಮನೆಗೆ ಬಂದು ಈಗಾಗಲೇ ಮೂರು ದಿನಗಳಾಗಿಬಿಟ್ಟಿದ್ದವು; ನಾವೆಲ್ಲ ಅವರ ನಿರೀಕ್ಷೆಯಲ್ಲಿಯೇ ಇದ್ದೆವು, ತವಕದಿಂದ ಕಾಯಲು ಮತ್ತೂ ಒಂದು ಕಾರಣವಿತ್ತು: ತೆನೆ ಬಿಟ್ಟ ನಮ್ಮ ಹೊಲಗಳನ್ನು ನೋಡಲು ಅವರು ಬರಲೊಪ್ಪಿದ್ದಾರೆಂದು ನಮ್ಮ ಬೇಲಿಫ್ ಹೇಳಿದ್ದರು. ಅವತ್ತು ಎರಡು ಗಂಟೆಯ ಹೊತ್ತಿಗೆ ಗೋಧಿ ಹೊಲದ ಕಡೆಯಿಂದ ಅವರ ಸವಾರಿ ಬರುತ್ತಿದ್ದುದು ಕಾಣಿಸಿತು. ಮುಖದಲ್ಲಿ ಮುಗುಳ್ನಗೆ ಹೊತ್ತು ನನ್ನ ಕಡೆ ಒಮ್ಮೆ ದೃಷ್ಟಿ ಬೀರಿದ ಕಾತ್ಯಾ ಪೀಚ್ ಹಣ್ಣುಗಳು ಮತ್ತು ಚೆರಿಗಳನ್ನು ಸಿದ್ಧಪಡಿಸಲು ಹೇಳಿದಳು - ಅವುಗಳೆಂದರೆ ಅವರಿಗೆ ಇಷ್ಟ - ಆಮೇಲೆ ಅವಳು ಬೆಂಚಿನ ಮೇಲೆ ಯೋಚಿಸುತ್ತ ಕೂತಳು. ನಿಂಬೆ ಮರದ ಬಾಗಿದ ಉದ್ದವಾದ ರೆಂಬೆಯೊಂದನ್ನು ಎಲೆಗಳ ಸಮೇತ ಕಿತ್ತೆ; ಇದರಿಂದ ನನ್ನ ಕೈ ಒದ್ದೆಯಾಗಿ ಕೈಗೆಲ್ಲ ರಸಮಯ ತೊಗಟೆ ಮೆತ್ತಿಕೊಂಡಿತು. ಆ ರೆಂಬೆಯಿಂದ ಕಾತ್ಯಾಳಿಗೆ ಬೀಸುತ್ತ ಪುಸ್ತಕದ ಓದಿನಲ್ಲಿ ಮಗ್ನಳಾದೆ. ಆದರೆ ಮಧ್ಯೆ ಮಧ್ಯೆ ತಲೆಯೆತ್ತಿ ಅವರು ಸಾಗಿ

ಬರಬೇಕಾದ ದಾರಿಯ ಕಡೆ ನೋಡುತ್ತಿದ್ದೆ. ಒಂದು ಹಳೆಯ ನಿಂಬೆ ಮರದಡಿ ಸೋನ್ಯಾ ಬೊಂಬೆಗಾಗಿ ಒಂದು ಹಾರ ಕಟ್ಟುತ್ತಿದ್ದಳು. ಅವತ್ತು ತುಂಬ ಸೆಕೆ, ಗಾಳಿಯೇ ಇರಲಿಲ್ಲ, ಹಬೆ ಉಕ್ಕುತ್ತಿತ್ತು; ಮೋಡಗಳು ಒಗ್ಗೂಡಿ ಕಪ್ಪಗಾಗತೊಡಗಿದ್ದವು; ಬೆಳಿಗ್ಗೆ ಪೂರ್ತಿ ಜೋರಾಗಿ ಗುಡುಗು ಸಹಿತ ಮಳೆ ಬಿದ್ದಿತ್ತು. ಅಂಥ ಹೊತ್ತಿನಲ್ಲಿ ಎಂದಿನ ಹಾಗೆಯೇ ನಾನು ತಳಮಳಗೊಂಡಿದ್ದೆ. ಆದರೆ ಮಧ್ಯಾಹ್ನದ ಹೊತ್ತಿಗೆ ಮೋಡವೆಲ್ಲ ಚೆದುರತೊಡಗಿತ್ತು, ಶುಭ್ರ ಆಗಸದಲ್ಲಿ ಸೂರ್ಯ ಕಾಣಿಸಿಕೊಂಡ, ಎಲ್ಲೋ ಒಂದು ಮೂಲೆಯಲ್ಲಿ ಮಾತ್ರ ಇನ್ನೂ ಗುಡಗುಡ ಸದ್ದು ಕೇಳಿಸುತ್ತಿತ್ತು. ಮೋಡದ ಒಂದು ಭಾರಿ ತುಂಡು ದಿಗಂತದಲ್ಲಿ ತೇಲುತ್ತ ಹೊಲಗಳ ಮಣ್ಣಿನಲ್ಲಿ ಬೆರೆಯುತ್ತ ಆಗೊಮ್ಮೆ ಈಗೊಮ್ಮೆ ಬಳ್ಳಿಮಿಂಚುಗಳನ್ನು ಭೂಮಿಯ ಕಡೆಗೆ ಎಸೆಯುತ್ತಿತ್ತು. ಇವತ್ತಿನ ಮಟ್ಟಿಗೆ ಗುಡುಗಾಟ ನಿಂತುಹೋಗುತ್ತದೆ ಅನ್ನಿಸಿತು, ಕನಿಷ್ಠ ಪಕ್ಷ, ನಮ್ಮ ಮಟ್ಟಿಗೆ. ತೋಟದಾಚೆಗಿನ ದಾರಿ ಮಧ್ಯೆ ಮಧ್ಯೆ ಕಾಣಿಸುತ್ತಿತ್ತು. ಗಾಡಿಗಳು ತೆನೆಗಳನ್ನು ಹೊತ್ತು ಮೆರವಣಿಗೆಯಲ್ಲಿ ಸದ್ದುಮಾಡುತ್ತ ಸಾಗಿ ಬರುತ್ತಿದ್ದವು, ಖಾಲಿ ಬಂಡಿಗಳು ಅವುಗಳೆಡೆಗೆ ಜೋರಾಗಿ ಸದ್ದು ಮಾಡುತ್ತ ಓಡಿಬರುತ್ತಿದ್ದವು. ಅವುಗಳಿಂದ ಜೋಲಾಡುವ ಕಾಲುಗಳೂ ತೇಲಾಡುವ ಷರ್ಟ್‌ಗಳೂ ಕಾಣುತ್ತಿದ್ದವು. ದಟ್ಟ ಧೂಳು ತೇಲಿಯೂ ಹೋಗದೆ, ಅಡಗಿಯೂ ಹೋಗದೆ ಬೇಲಿ ಆಚೆ ನಿಂತುಬಿಟ್ಟಿತು. ಇದೆಲ್ಲ ನಮಗೆ ನಮ್ಮ ತೋಟದ ಗಿಡಮರಗಳ ಎಲೆಗಳ ನಡುನಡುವೆ ಕಾಣಿಸುತ್ತಿತ್ತು. ಇನ್ನೂ ಕೊಂಚ ಆಚೆ, ಮೆದೆಗಳಿದ್ದೆಡೆ ಅದೇ ಧ್ವನಿ ಹಾಗೂ ಕೀಚಲು ಶಬ್ದ ಕೇಳಿಸುತ್ತಿತ್ತು; ಅಂತೆಯೇ ಹಳದಿ ತೆನೆ ಹೊತ್ತ ಗಾಡಿಗಳು ಈಗ ಧಾವಿಸಿ ಬರುವಂತೆ ಕಾಣಿಸಿದವು. ಬರಬರುತ್ತ ಗುಂಡಾದ ತೆನೆಗಳ ರಾಶಿಗಳು ಎತ್ತರೆತ್ತರವಾಗಿ ಕಾಣಿಸಿದವು, ಅವುಗಳ ತುದಿ ಹೆಚ್ಚು ಖಚಿತವಾಗಿತ್ತು, ಕೆಲಸಗಾರರು ಅವುಗಳ ಸುತ್ತ ಗುಂಪಿನಲ್ಲಿ ಬರುತ್ತಿದ್ದರು. ಮುಂದಿನ ಧೂಳು ತುಂಬಿದ ದಾರಿಯಲ್ಲಿ ಹೆಚ್ಚು ಗಾಡಿಗಳು ಬರುತ್ತಿದ್ದವು, ಅವುಗಳ ಮೇಲೆ ಮತ್ತಷ್ಟು ಹಳದಿ ತೆನೆಗಳು. ಗಾಡಿಗಳ ಸದ್ದು, ಜನರ ಮಾತಿನ ಶಬ್ದ, ಹಾಡುಗಳ ದನಿ, ದೂರದಿಂದ ನಮ್ಮೆಡೆಗೆ ತೇಲಿಬಂದವು. ಒಂದೆಡೆ ತೆನೆಕೂಳೆಗಳು, ಅವುಗಳ ಮೇಲೆ ಹೊದಿಸಿದ್ದ ಮಾಚಿಪತ್ರೆ ಮತ್ತಷ್ಟು ಸ್ಫುಟವಾಗಿ ಕಾಣಿಸಿತು. ಹಿಂದೆ ಬಲಭಾಗದಲ್ಲಿ ಹೆಂಗಸರ ಬಣ್ಣಬಣ್ಣದ ಬಟ್ಟೆಗಳ ಪ್ರದರ್ಶನ, ಅವರೆಲ್ಲ ಬಾಗಿಕೊಂಡು ತೆನೆಗಳು ಬೀಳದಂತೆ ತಮ್ಮ ತೋಳುಗಳಿಂದ ಅದುಮಿ ಹಿಡಿದಿದ್ದರು. ಈಗ ತೆನೆಕೂಳೆಗಳು ಅಸ್ತವ್ಯಸ್ತವಾಗಿ ಕಂಡವು; ಆದರೆ ಆ ಅಸ್ತವ್ಯಸ್ತತೆಯು ಕ್ರಮೇಣ ತೊಲಗಿತು, ಯಾಕಂದರೆ ತೆನೆಗಳನ್ನು ಹತ್ತಿರ ಹತ್ತಿರದಲ್ಲಿ ನೀಟಾಗಿ ಜೋಡಿಸಿದ್ದರು. ನನ್ನ ಕಣ್ಣಮುಂದೆಯೇ ಇದ್ದಕ್ಕಿದ್ದಂತೆ ಬೇಸಿಗೆ ಮಾಗಿಕಾಲವಾಗಿ ಬದಲಾದಂತೆನ್ನಿಸಿತು. ಧೂಳು, ಸೆಕೆ ಎಲ್ಲೆಡೆ ತುಂಬಿತ್ತು, ಅದಕ್ಕೆ ಹೊರತಾಗಿದ್ದುದು ತೋಟದ ನಮ್ಮ ಇಷ್ಟದ ತಾಣ. ಮಿಕ್ಕೆಲ್ಲ ಆ ಕಡೆ ಆ ಧೂಳು ಸೆಕೆಗಳಲ್ಲೇ, ಬಿಸಿಲಿನಲ್ಲೇ ಕೆಲಸಗಾರರು ತಮ್ಮ ಕೆಲಸಕಾರ್ಯಗಳಲ್ಲಿ ಮಾತು ಗದ್ದಲಗಳ ನಡುವೆಯೇ ಮುಂದುವರಿಸಿದ್ದರು.

ಈ ಮಧ್ಯೆ ಕಾತ್ಯಾ ತನ್ನ ಮುಖದ ಮೇಲೆ ಬಿಳಿ ಕಾಂಬ್ರಿಕ್ ಕರವಸ್ತ್ರವನ್ನು ಹಾಕಿಕೊಂಡು ನೆರಳಿನಲ್ಲಿದ್ದ ಬೆಂಚಿನ ಮೇಲೆ ಹಾಯಾಗಿ ಮಲಗಿದ್ದಳು, ಪ್ಲೇಟಿನಲ್ಲಿ ಚೆರಿ ಹಣ್ಣುಗಳು ಬಾಯಲ್ಲಿ ನೀರೂರಿಸುತ್ತ ಹೊಳೆಯುತ್ತಿದ್ದವು, ನಮ್ಮ ಉಡುಪುಗಳೆಲ್ಲ ಶುಭ್ರವಾಗಿ ಗರಿಗರಿಯಾಗಿದ್ದವು, ಹೂಜಿಯಲ್ಲಿದ್ದ ನೀರು ಸೂರ್ಯನ ಬೆಳಕಿನಿಂದ ಕಾಮನಬಿಲ್ಲನ್ನು ಮಾಡಿಕೊಂಡು ಅಡಗಿಸಿಕೊಂಡಿತ್ತು-ಇವೆಲ್ಲ ನನಗೆ ಖುಷಿ ತಂದಿದ್ದವು! 'ಇದರಿಂದ ನಾನು ಪಾರಾಗಬಹುದೇ? ಖುಷಿಯಾಗಿರೋದ್ರಿಂದ ನಾನು ಹಳಿದುಕೊಳ್ಳಬೇಕೇ? ನನ್ನ ಖುಷಿಯನ್ನು ಬೇರೆಯವರೊಂದಿಗೆ ಹೇಗೆ ಹಂಚಿಕೊಳ್ಳಲಿ? ನನ್ನನ್ನೂ ನನ್ನ ಸಂತಸವನ್ನೂ ನಾನು ಯಾರಿಗೆ ಅರ್ಪಿಸಿಕೊಳ್ಳಲಿ?' ಎಂದೆಲ್ಲ ಅನ್ನಿಸಿತು.

ಈ ಹೊತ್ತಿಗೆ ಸೂರ್ಯನು ಬರ್ಚ್ ಮರಗಳ ದಾರಿಯ ತುದಿಯಲ್ಲಿ ಮುಳುಗ ತೊಡಗಿದ್ದ, ಧೂಳು ನೆಲದಲ್ಲಿ ನೆಲೆಗೊಳ್ಳುತ್ತಿತ್ತು, ಓರೆ ಬಿಸಿಲಿನಲ್ಲಿ ದಾರಿಯು ಹೆಚ್ಚು ಸ್ಪಷ್ಟವಾಗಿತ್ತು, ಕಾಂತಿಯುಕ್ತವಾಗಿತ್ತು. ಮೋಡಗಳೆಲ್ಲ ಸಂಪೂರ್ಣವಾಗಿ ಚದುರಿ ಹೋಗಿದ್ದವು, ಮೂರು ಹೊಸ ತೆನೆಗಳ ಬಣವೆಗಳ ತುದಿಗಳು ಮರಗಳ ಮೂಲಕ ನಿಚ್ಚಳವಾಗಿ ಕಾಣುತ್ತಿದ್ದವು. ಕೆಲಸಗಾರರು ಬಂಡಿಯಿಂದ ಕೆಳಗಿಳಿದರು, ಕೊನೆಯ ಬಾರಿ ಬಂಡಿಗಳೆಲ್ಲ ಗದ್ದಲ ಮಾಡುತ್ತ ಮುಂದೆ ಸಾಗಿದವು, ತಮ್ಮ ಭುಜಗಳ ಮೇಲೆ ಹಲಬೆಗಳನ್ನು ಹೊತ್ತು, ತಮ್ಮ ಸೊಂಟದಲ್ಲಿ ಹುಲ್ಲುಹಗ್ಗಗಳನ್ನು ಸುತ್ತಿಕೊಂಡ ಹೆಂಗಸರು ಜೋರಾಗಿ ಹಾಡುತ್ತ ಮನೆಯ ಮುಂದೆ ಹಾದುಹೋದರು. ಆದರೂ ಸರ್ಗೀ ಮಿಖೈಲಿಚ್ ಸುಳಿವೇ ಇರಲಿಲ್ಲ! ಬಹಳ ಹಿಂದೆಯೇ ಈ ದಾರಿಯಲ್ಲಿ ಸವಾರಿ ಬರುತ್ತಿದ್ದುದು ಹಿಂದೆಯೇ ಕಾಣಿಸಿತ್ತಲ್ಲ! ಆದರೆ ಇದ್ದಕ್ಕಿದ್ದಂತೆ ದಾರಿಯಲ್ಲಿ ಅವರ ದರ್ಶನವಾಯಿತು, ನಾನು ಎದುರುನೋಡುತ್ತಿದ್ದ ಮೂಲೆಯಲ್ಲೇ ಕಾಣಿಸಿಕೊಂಡರು. ಮರಗಣಿವೆಯ ಹಾದಿ ಯಲ್ಲವರು ನಡೆಯುತ್ತ ಬಂದಿದ್ದರು. ತಲೆಯ ಮೇಲಿಂದ ಹ್ಯಾಟ್ ತೆಗೆದು ಕೈಯಲ್ಲಿ ಹಿಡಿದುಕೊಂಡು ಮುಖದಲ್ಲಿ ಉತ್ಸಾಹವನ್ನು ತುಳುಕಿಸುತ್ತ ನನ್ನ ಕಡೆ ಬೇಗ ಬೇಗ ಬಂದರು. ಕಾತ್ಯಾ ಅಲ್ಲೇ ಮಲಗಿದ್ದುದನ್ನು ಕಂಡು, ತುಟಿ ಕಚ್ಚಿಕೊಂಡು, ಕಣ್ಣುಗಳನ್ನು ಮುಚ್ಚಿಕೊಂಡು ಮೆಟ್ಟಿಂಗಾಲಿಡುತ್ತ ಸಾಗಿ ಬಂದರು. ಸಾದಾ ತಮಾಷೆಯಲ್ಲಿ ನಿರತರಾಗುವ ಹುಕಿ ಅವರಿಗೆ ಬಂದಂತಿತ್ತು; ಅವರು ಹೀಗೆ ಮಾಡುವುದಂತೂ ನನಗೆ ಯಾವತ್ತೂ ಖುಷಿ ತರುವಂಥದು. ಇದನ್ನು ನಾವು 'ಒರಟು ಆನಂದ' ಎನ್ನುತ್ತಿದ್ದೆವು. ತುಂಟತನದಲ್ಲಿ ನಿರತನಾದ ಥೇಟ್ ಶಾಲಾ ಹುಡುಗನೊಬ್ಬನಂತೆಯೇ ಅವರು ಕಾಣಿಸಿದರು. ಅಡಿಯಿಂದ ಮುಡಿಯರೆಗಿನ ಅವರ ಆಕೃತಿಯಲ್ಲಿ ತೃಪ್ತಿ, ಸಂತಸ, ಹುಡುಗುತನಗಳು ಜಿಗಿದಾಡುತ್ತಿದ್ದವು.

"ಏನಮ್ಮ, ಪುಟ್ಟ ವಯೊಲೆಟ್, ಹೇಗಿದ್ದೀಯಾ? ಚೆನ್ನಾಗಿದ್ದೀ ತಾನೇ?" ಎಂದು ನನ್ನ ಬಳಿ ಬಂದು ಪಿಸುಮಾತಲ್ಲಿ ಕೇಳಿ ನನ್ನ ಕೈ ಹಿಡಿದುಕೊಂಡರು. ಅದೇ ಪ್ರಶ್ನೆಯನ್ನು ನಾನು ಕೇಳಿದ್ದಕ್ಕೆ ಅವರು, "ಓ, ನಾನಂತೂ ಇವತ್ತು ಅಮೋಘವಾಗಿದ್ದೀನಿ. ಹದಿಮೂರು ವರ್ಷದ ಹುಡುಗನ ಹಾಗೆ ಆಗ್ಬಿಟ್ಟಿದ್ದೀನಿ, ಕುದುರೆಗಳ ಜೊತೆ ಆಡಕ್ಕೆ,

ಮರ ಹತ್ತಕ್ಕೆ ಆಸೆ ಆಗ್ತಾ ಇದೆ" ಅಂದರು.

"ಇದೇನು ಒರಟು ಆನಂದವಾ?" ಎಂದು ಕೇಳಿದೆ ನಾನು, ನಗುವ ಅವರ ಕಣ್ಣುಗಳನ್ನೇ ನೋಡುತ್ತ, ನನಗೂ ಈ 'ಒರಟು ಆನಂದ' ತಗುಲಿಕೊಂಡುಬಿಟ್ಟಿತೇನೋ ಎಂಬಂತೆ.

"ಹ್ಞೂ" ಎಂದರು ಕಣ್ಣು ಮಿಟುಕಿಸುತ್ತ, ಕೆನ್ನೆಗಳಲ್ಲಿ ನಗುವನ್ನು ತುಳುಕಿಸಿಕೊಂಡು. "ಆದರೆ ಕಾಟೆರೀನಾ ಕಾರ್ಲೋವ್ನಾರನ್ನೇಕೆ ಹೊಡೀಬೇಕು, ಕಾರಣವೇ ಇಲ್ವಲ್ಲ."

ಅವರೆಡೆಗೇ ಕಣ್ಣನ್ನು ಕೀಲಿಸಿದ್ದ ನಾನು ಕೈಯಲ್ಲಿದ್ದ ರೆಂಬೆಯನ್ನು ಅಲ್ಲಾಡಿಸುತ್ತಿದ್ದೆ, ಇದರಿಂದ ಕಾತ್ಯಾಳ ಮುಖದ ಮೇಲೆ ಹಾಕಿಕೊಂಡಿದ್ದ ಕರವಸ್ತ್ರವನ್ನು ನೂಕಿ, ಅವಳ ಮುಖದ ಮೇಲಾಡುತ್ತಿತ್ತು ಎಂಬುದು ನನ್ನ ಗಮನಕ್ಕೇ ಬರಲಿಲ್ಲ. ನಾನು ನಕ್ಕೆ.

"ನಾನು ನಿದ್ದೆ ಮಾಡ್ತಾನೇ ಇರಲಿಲ್ಲ, ಎದ್ದೇ ಇದ್ದೆ ಅಂತಾಳೆ ನೋಡಿ" ಎಂದು ನಾನು ಪಿಸುಗುಟ್ಟಿದೆ, ಕಾತ್ಯಾಳನ್ನು ಎಚ್ಚರಿಸಬಾರದು ಅಂತ. ಆದರೆ ಅದು ನಿಜವಾದ ಕಾರಣವಾಗಿರಲಿಲ್ಲ, ಅವರೊಂದಿಗೆ ಪಿಸುಮಾತನ್ನಾಡುವುದು ನನಗೆ ಇಷ್ಟ ಅದರಿಂದ.

ನನ್ನನ್ನು ಅಣಕಿಸುವವರಂತೆ ಅವರು ತುಟಿಗಳನ್ನು ಚಲಿಸಿ, ನನ್ನ ಮಾತುಗಳು ಅವರಿಗೆ ಕೇಳಿಸದಷ್ಟು ಮೆಲುವಾಯಿತೇನೋ ಎಂಬಂತೆ ನಟಿಸಿದರು. ಚೆರಿಗಳಿದ್ದ ತಟ್ಟೆಯ ಕಡೆಗೆ ನೋಡಿ, ಅದನ್ನು ಕದಿಯುವವರಂತೆ ಮುನ್ನಡೆದು, ಅದನ್ನೆತ್ತಿಕೊಂಡು ಸೋನ್ಯಾ ಇದ್ದ ನಿಂಬೆ ಮರದ ನೆರಳಿಗೆ ಹೋಗಿ ಅವಳ ಬೊಂಬೆಗಳ ಮೇಲೆ ಕುಳಿತರು. ಮೊದಲು ಸೋನ್ಯಾ ಕೋಪಿಸಿಕೊಂಡಳು, ಆದರೆ ಆಟವೊಂದನ್ನು ಆರಂಭಿಸುವುದರ ಮೂಲಕ ತಕ್ಷಣವೇ ಅವಳನ್ನು ಶಾಂತಪಡಿಸಿದರು. ಯಾರು ಬೇಗ ಬೇಗ ಚೆರಿಗಳನ್ನು ತಿನ್ನುತ್ತಾರೋ ನೋಡೋಣ ಅನ್ನುವುದೇ ಆ ಆಟ.

"ಚೆರಿ ಹಣ್ಣು ನಿಮಗಷ್ಟು ಇಷ್ಟವಾದ್ರೆ ಇನ್ನೊಂದಷ್ಟು ತರಕ್ಕೆ ಹೇಳಲಾ? ಅಥವಾ ನಾವೇ ಅಲ್ಲಿಗೆ ಹೋಗಾಣ್ವಾ?"

ಹಣ್ಣುಗಳಿದ್ದ ತಟ್ಟೆಯಲ್ಲಿ ಅವರು ಬೊಂಬೆಗಳನ್ನು ಜೋಡಿಸಿದರು. ನಾವು ಮೂವರು ತೋಟದ ಕಡೆ ಹೊರಟೆವು. ಸೋನ್ಯಾ ನಗುವಿನೊಡನೆ ಅವರ ಕೋಟು ಹಿಡಿದು ಎಳೆಯುತ್ತ ನಮ್ಮ ಹಿಂದೆಯೇ ಓಡಿಬಂದಳು, ಬೊಂಬೆಗಳನ್ನು ತನಗೆ ಕೊಟ್ಟು ಹೋಗಬೇಕು ಅನ್ನುವುದು ಅವಳ ನಿರೀಕ್ಷೆ. ಅವಳಿಗೇ ಅವುಗಳನ್ನು ಅವರು ನನ್ನ ಕಡೆ ನೋಡಿ, ಹೆಚ್ಚು ಗಂಭೀರ ದನಿಯಿಂದ, "ನೀನು ನಿಜವಾಗಿಯೂ ವಯೊಲೆಟ್ಟ?" ಅಂದರು. ಈಗ ಯಾರದಾದರೂ ನಿದ್ದೆಗೆ ಭಂಗ ತರುವಂತಿಲ್ಲದಿದ್ದರೂ ಅವರಿನ್ನೂ ತಗ್ಗುದನಿಯಲ್ಲೇ ಮಾತನಾಡಿದರು: "ಅಷ್ಟೊಂದು ಧೂಳು ಧಗೆ ಶ್ರಮಗಳಿಂದ ಕೂಡಿ ಬಂದಿದ್ದರೂ ಬಂದ ತಕ್ಷಣ ನನಗೆ ವಯೊಲೆಟ್ ವಾಸನೆ ಬಂತು. ಆದರೆ ಅದು ಸಿಹಿ ವಯೊಲೆಟ್ಟಲ್ಲ, ಗೊತ್ತಲ್ಲ, ಕರಗೋ ಮಂಜು ಹಾಗೂ ವಸಂತದ ಹುಲ್ಲುಗಳ ವಾಸನೆಯಿಂದ ಕೂಡಿರುತ್ತಲ್ಲ ಕತ್ತಲೆಗೆ ಮುಂಚಿನ ವಯೊಲೆಟ್ ಅದು."

"ಸುಗ್ಗಿ ಚೆನ್ನಾಗಿ ಆಗ್ತಾ ಇದ್ಯಾ?" ಎಂದೆ ನಾನು, ಅವರ ಮಾತುಗಳು ನನ್ನಲ್ಲಿ ಉಂಟುಮಾಡಿದ್ದ ಭಾವತರಂಗಗಳನ್ನು ಬಚ್ಚಿಟ್ಟುಕೊಳ್ಳುವ ತವಕದಿಂದ.

"ಸೊಗಸಾಗಿ! ನಮ್ಮ ಜನ ಯಾವಾಗಲೂ ಅಚ್ಚುಕಟ್ಟಾದವರೇ. ಅವರ ಪರಿಚಯ ಹೆಚ್ಚಾದಷ್ಟೂ ಅವರು ನಮಗಿಷ್ಟವಾಗ್ತಾರೆ."

"ನಿಜ. ನೀವು ಬರೋಕೆ ಮುಂಚೆ ನಾನವರನ್ನು ಕೈತೋಟದಿಂದಲೇ ನೋಡ್ತಿದ್ದೆ, ಅವರೆಲ್ಲ ಅಷ್ಟು ಶ್ರಮಪಡ್ತಿರೋವಾಗ ನಾನು ಹಾಯಾಗಿದ್ದೀನಲ್ಲ ಅಂತ ಒಂಥರ ನಾಚಿಕೆ ಅನ್ನಿಸ್ತು. ಅದಕ್ಕೇ...."

ನನ್ನ ಮಾತುಗಳನ್ನವರು ತುಂಡರಿಸಿದರು, ಅವರ ಮುಖದಲ್ಲಿ ಒಂದು ಬಗೆಯ ಬಿಗುವು ಕಾಣಿಸಿಕೊಂಡಿತು. "ಹಾಗೆಲ್ಲ ಮಾತಾಡ್ಬೇಡ, ನನ್ನ ಮುದ್ದು ಮರಿ. ಹಗುರವಾಗಿ ಮಾತಾಡೋ ಅಷ್ಟು ಸಾಮಾನ್ಯ ವಿಷಯ ಅಲ್ಲ ಅದು. ಅದರ ಬಗ್ಗೆಯೆಲ್ಲ ಭಾರಿ ಭಾರಿ ಶಬ್ದಗಳನ್ನು ಬಳಸಬಾರದು!" ಎಂದರು.

"ನಾನು ಹೇಳ್ತಾ ಇದ್ದದ್ದು ನಿಮಗೆ ತಾನೇ?"

"ಅದ್ಸರಿ, ಗೊತ್ತಾಯ್ತು. ಆದರೆ ಆ ಚೆರಿ ವಿಷಯ ಏನು?"

ತೋಟಕ್ಕೆ ಬೀಗ ಹಾಕಿತ್ತು, ಯಾರೂ ತೋಟಿ ಕಾಣಿಸಲಿಲ್ಲ. ಅವರನ್ನೆಲ್ಲ ಅವರು ಕುಯ್ಲಿಗೆ ಕಳಿಸಿಬಿಟ್ಟಿದ್ದರು. ಬೀಗದ ಕೈ ತೆಗೆದುಕೊಂಡು ಬರಲು ಸೋನ್ಯಾ ಓಡಿದಳು. ಆದರೆ ಅವರು ಅವಳು ಬರುವವರೆಗೂ ಕಾಯಲಿಲ್ಲ. ಒಂದು ಮೂಲೆಯಲ್ಲಿ ಗೋಡೆಯನ್ನು ಹತ್ತಿ ಬಲೆಯನ್ನು ಮೇಲಕ್ಕೆತ್ತರಿಸಿ ಆ ಕಡೆ ಧುಮುಕಿದರು.

ಗೋಡೆಯಾಚೆಯಿಂದ ಅವರ ದನಿ ಕೇಳಿಸಿತು: "ನಿಂಗೂ ಒಂದಷ್ಟು ಬೇಕಾದ್ರೆ ಆ ತಟ್ಟೆ ಈ ಕಡೆ ಕೊಡು."

"ಬೇಡ, ನಾನೇ ಅವುಗಳನ್ನ ಆರಿಸ್ಕೋಬೇಕೂಂತ ಆಸೆ. ನಾನೇ ಬೀಗದ ಕೈ ಇಸ್ಕೊಂಬರ್ತೀನಿ. ಸೋನ್ಯಾ ಎಲ್ಲೂ ಕಾಣ್ತಾನೇ ಇಲ್ಲ" ಎಂದೆ.

ಅವರು ಆ ಕಡೆ ಏನು ಮಾಡುತ್ತಿದ್ದಾರೆ ಅನ್ನುವುದನ್ನು ನೋಡಬೇಕೆಂಬಾಸೆ ಇದ್ದಕ್ಕಿದ್ದಂತೆ ನನ್ನಲ್ಲಿ ಹುಟ್ಟಿತು. ಯಾರೂ ತಮ್ಮನ್ನ ನೋಡುತ್ತಿಲ್ಲ ಎಂದವರು ಭಾವಿಸಿಕೊಂಡಿರುವಾಗ ನಾನು ಗಮನಿಸಬೇಕು. ಅಲ್ಲದೆ, ಒಂದು ಕ್ಷಣವೂ ಅವರು ನನ್ನ ಕಣ್ಣಿಂದ ಮರೆಯಾಗಬಾರದು ಎಂಬ ಬಯಕೆ. ಗೋಡೆಯ ಎತ್ತರ ಕಡಿಮೆ ಇರುವವರೆಗೂ ಬೇಲಿಯಗುಂಟ ನಿಧಾನವಾಗಿ ಹೆಜ್ಜೆಯಿಡುತ್ತ ಸಾಗಿದೆ, ಒಂದು ಖಾಲಿ ಡಬ್ಬದ ಮೇಲೆ ಹತ್ತಿದೆ; ಆದರೂ ಗೋಡೆಯ ಎತ್ತರ ನನ್ನ ಸೊಂಟದವರೆಗೂ ಇತ್ತು; ಅದರ ಮೇಲೆ ಬಾಗಿ ತೋಟದೊಳಗೆ ನೋಡಿದೆ. ಒರಟಾದ ಹಳೆಯ ಮರಗಳ ಕಡೆ ದಿಟ್ಟಿ ಹಾಯಿಸಿದೆ; ಅವುಗಳ ಅಗಲವಾದ ಎಲೆಗಳ ನಡುವೆ ಕಪ್ಪು ಚೆರಿಗಳು ಇಡಿಕಿರಿದು ರೆಂಬೆಗಳು ಬಾಗಿದ್ದವು. ನಾನು ತಲೆಯನ್ನು ಬಲೆಯ ಕೆಳಗೆ ಇಟ್ಟು ಒಂದು ರೆಂಬೆ ಬಾಗಿಸಿ ಸರ್ಗೀ ಮಿಖೈಲಿಚ್ ಅವರಿದ್ದ ಕಡೆ ನೋಡಿದೆ: ಅವರು ಒಂದು ಚೆರಿ ಮರದ ಕೆಳಗಿದ್ದರು.

ನಾನು ಎಲ್ಲೋ ಹೋಗಿಬಿಟ್ಟಿದ್ದೇನೆ, ಹೀಗಾಗಿ ತಮ್ಮನ್ನಾರೂ ಗಮನಿಸುತ್ತಿಲ್ಲ ಎಂದೇ ಅವರು ಭಾವಿಸಿದ್ದರು. ತಮ್ಮ ತಲೆಯ ಮೇಲಿನ ಹ್ಯಾಟು ತೆಗೆದು ಕಣ್ಣುಗಳನ್ನು ಮುಚ್ಚಿಕೊಂಡು ದೊಡ್ಡ ಮರವೊಂದರ ಕೊಂಬೆಯ ಕವೆಯಲ್ಲಿ ಕುಳಿತುಕೊಂಡು, ಚೆರಿ ಮರದ ಅಂಟನ್ನು ಸಂಗ್ರಹಿಸಿ ಒಂದು ಉಂಡೆಯಾಗಿ ಮಾಡುತ್ತಿದ್ದರು. ಇದ್ದಕ್ಕಿದ್ದಂತೆ ಅವರು ಭುಜ ಕೊಡವಿಕೊಂಡು ಕಣ್ಣುಗಳನ್ನು ತೆರೆದು ಏನನ್ನೋ ಗೊಣಗಿಕೊಂಡರು, ಮುಗುಳ್ನಕ್ಕರು. ಅವರ ಗೊಣಗುವಿಕೆ ಹಾಗೂ ಮುಗುಳ್ನಗುಗಳು ಅವರದರಂತೆ ಕಾಣುತ್ತಿರಲಿಲ್ಲ, ನಾನು ಕದ್ದು ಕೇಳುತ್ತಿರುವುದಕ್ಕಾಗಿ ನಾಚಿಕೆಯೆನಿಸಿತು. 'ಮಾಷಾ' 'ಉಹ್ಞೂ, ಸಾಧ್ಯವೇ ಇಲ್ಲ' ಎಂದವರು ಗೊಣಗುಟ್ಟಿಕೊಳ್ಳುತ್ತಿದ್ದಂತೆ ನನಗನ್ನಿಸಿತು. ಮತ್ತೆ 'ಡಾರ್ಲಿಂಗ್, ಮಾಷಾ!' ಅಂದುಕೊಂಡರು ಮತ್ತೆ; ಅವರ ದನಿ ಮತ್ತಷ್ಟು ಮೆಲುವಾಗಿತ್ತು, ಮಧುರವಾಗಿತ್ತು. ಈ ಸಲ ನನಗೆ ಕೇಳಿಸಿದ್ದು ಆ ಎರಡು ಶಬ್ದಗಳೇ ಅನ್ನುವುದರಲ್ಲಿ ನನಗೆ ಅನುಮಾನವೇ ಉಳಿಯಲಿಲ್ಲ. ನನ್ನ ಎದೆ ಜೋರಾಗಿ ಬಡಿದುಕೊಳ್ಳಲಾರಂಭಿಸಿತು, ಭರಪೂರ ಆನಂದ - ಕಳ್ಳ ಆನಂದ ಅನ್ನಿಸಿತು ನನಗೆ - ನನ್ನನ್ನಾವರಿಸಿತು. ಬಿದ್ದುಬಿಡುವೆನೇನೋ, ಅವರಿಗೆಲ್ಲಿ ಗೊತ್ತಾಗಿಬಿಡುತ್ತದೋ ಎಂಬ ಆತಂಕದಿಂದ ನಾನು ಗೋಡೆಯನ್ನು ಆತುಕೊಂಡೆ. ನನ್ನ ಚಲನದಿಂದಾದ ದನಿಯಿಂದ ಗಲಿಬಿಲಿಗೊಂಡ ಅವರು ಸುತ್ತಮುತ್ತ ನೋಡಿದರು, ಕಣ್ಣರಳಿಸಿದರು, ಮಗುವಿನದರಂತೆ ಮುಖ ಕೆಂಪಾಯಿತು, ಅಷ್ಟೇಕೆ ಕಡುಗೆಂಪಿಗೆ ತಿರುಗಿತು! ಮಾತಾಡಲು ಪ್ರಯತ್ನಿಸಿದರು, ಸಾಧ್ಯವಾಗಲಿಲ್ಲ; ಅವರ ಮುಖ ಮತ್ತೆ ಮತ್ತೆ ಕೆಂಪೇರುತ್ತಿತ್ತು. ನನ್ನನ್ನು ಕಂಡಾಗಲೂ ಅವರು ಮುಗುಳ್ನಕ್ಕರು, ನಾನೂ ನಕ್ಕೆ. ಆಗಂತೂ ಅವರ ಮುಖ ಸಂತಸದಿಂದ ಸಂಜೆಗೆಂಪಾಯಿತು. ನನ್ನನ್ನು ಮುದ್ದುಮಾಡುವ ಇಲ್ಲವೇ ಛೇಡಿಸುವ ಮಾವನಾಗಿ ಅವರು ಉಳಿದಿರಲಿಲ್ಲ; ಈಗವರು ನನ್ನ ಸಮಾನಸ್ಕಂದರಾಗಿಬಿಟ್ಟಿದ್ದರು; ನಾನು ಅವರನ್ನು ಪ್ರೀತಿಸುತ್ತ ಭಯದಿಂದಿದ್ದೆನೋ ಅವರಿಗೂ ಹಾಗೆಯೇ ನನ್ನ ಬಗ್ಗೆ ಪ್ರೀತಿ ಹಾಗೂ ಭಯ ತುಂಬಿದ್ದವು. ಇಬ್ಬರೂ ಮಾತಿಲ್ಲದೆ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡೆವು. ಆದರೆ ಇದ್ದಕ್ಕಿದ್ದಂತೆ ಅವರ ಮುಖ ಗಂಟಿಕ್ಕಿಕೊಂಡಿತು, ಅವರ ಕಣ್ಣುಗಳಲ್ಲಿದ್ದ ನಗು-ಕಾಂತಿಗಳು ಮಾಯವಾಗಿದ್ದವು, ಮತ್ತೆ ಅವರಲ್ಲಿ ಹಿಂದಿನ ಯಜಮಾನಿಕೆಯ ಗತ್ತು ಕಾಣಿಸಿಕೊಂಡಿತು. ನಾವೇನು ತಪ್ಪುಮಾಡಿಬಿಟ್ಟೆವೋ ಎಂಬ ಅಳುಕಿನಿಂದವರು ವಿಷಾದಿಸುತ್ತ ನನ್ನನ್ನೂ ಹಾಗೆ ಮಾಡುವಂತೆ ಪ್ರೇರಿಸುವಂತಾದರು.

"ಕೆಳಗಿಳಿ, ಇಲ್ಲದಿದ್ರೆ ಬಿದ್ದುಬಿಡ್ತೀಯಾ. ನಿನ್ನ ಕೂದಲು ಸರಿಪಡಿಸಿಕೋ, ನೀನು ಹೇಗೆ ಕಾಣಿಸ್ತಾ ಇದ್ದೀಯ ಯೋಚನೆ ಮಾಡು" ಎಂದರು.

'ಅವರು ನಾಟಕ ಯಾಕೆ ಮಾಡ್ತಿದಾರೆ? ನನಗೆ ನೋವುಂಟುಮಾಡೋ ಹಾಗೆ ಅವರೇಕೆ ಆಡ್ತಿದಾರೆ' ಎಂದು ನನ್ನ ಮನಸ್ಸಲ್ಲಿ ಗಲಿಬಿಲಿಯುಂಟಾಯಿತು. ಆದರೆ ಮರುಕ್ಷಣದಲ್ಲಿಯೇ ಅವರ ಗಂಭೀರತೆಯನ್ನು ತಲೆಕೆಳಗು ಮಾಡಿ ಅವರ ಮೇಲಿದ್ದ ನನ್ನ ಹಿಡಿತವನ್ನು ಪರೀಕ್ಷಿಸುವ ಗಾಢ ಬಯಕೆ ಉದಿಸಿತು.

"ಉಹ್ಞೂ, ನಾನೇ ಹಣ್ಣುಗಳನ್ನ ಬಿಡಿಸ್ಕೋತೀನಿ ಎನ್ನುತ್ತ ಹತ್ತಿರವಿದ್ದ ಕೊಂಬೆಯೊಂದನ್ನು ಹಿಡಿದುಕೊಂಡು ಗೋಡೆಯ ಮೇಲಕ್ಕೆ ಹತ್ತಿದೆ. ನನ್ನನ್ನವರು ತಡೆಯುವುದಕ್ಕೆ ಮುಂಚೆಯೇ ನಾನು ಆ ಕಡೆಗೆ ಧುಮುಕಿಬಿಟ್ಟಿದ್ದೆ.

"ಎಂಥ ಮೂರ್ಖ ಕೆಲಸ ಮಾಡ್ತೀಯಾ ನೀನು!" ಎಂದು ಗೊಣಗಿದರು. ಅವರ ಮುಖ ಮತ್ತೆ ಕೆಂಪೇರಿತ್ತು, ಆದರೆ ಗೊಂದಲಗೊಂಡವರಂತೆ ತೋರಿಸಿಕೊಂಡು ಅದನ್ನವರು ಮರೆಮಾಚಿಕೊಂಡರು. "ನಿಜವಾಗಲೂ ನಿಂಗೆ ಏನಾದ್ರೂ ಆಗಿದ್ದರೆ ಗತಿಯೇನು? ಈಗ ಹೊರಗಡೆಗೆ ಹೇಗೆ ಹೋಗ್ತೀಯಾ?"

ಈಗವರು ಹಿಂದಿಗಿಂತ ಹೆಚ್ಚಿನ ಗೊಂದಲದಲ್ಲಿ ಸಿಲುಕಿದ್ದರು. ಆದರೆ ಈಗಿನ ಅವರ ಗೊಂದಲ ನನಗೆ ಸಂತಸಕ್ಕಿಂತ ಭಯವನ್ನೇ ಉಂಟುಮಾಡಿತು. ಅವರ ರೀತಿ ಸಾಂಕ್ರಾಮಿಕವಾಗಿ ನನಗೂ ಅಂಟಿಕೊಂಡು ನಾನೂ ಕೆಂಪಾದೆ; ಅವರ ಕಡೆ ನೋಡಲಾರದೆ ಮಾತನಾಡಲಾರದೆ ಮೂಕಳಾದೆ. ಚೆರಿ ಹಣ್ಣುಗಳನ್ನು ಕಿತ್ತುಕೊಳ್ಳ ತೊಡಗಿದೆ, ಆದರೆ ಬೋಗುಣಿಯಲ್ಲಿ ಹಾಕಲು ಜಾಗವೇ ಇರಲಿಲ್ಲ. ನನ್ನ ನಾನೇ ಹಳಿದುಕೊಂಡೆ, ನಾನೇನು ಮಾಡಿದೆ ಅನ್ನುವುದನ್ನು ಕಂಡು ಪಶ್ಚಾತ್ತಾಪಪಟ್ಟೆ, ನನ್ನಲ್ಲಿ ಹೆದರಿಕೆ ತುಂಬಿಕೊಂಡಿತು. ನನ್ನ ತಪ್ಪಿನಿಂದಾಗಿ ಅವರು ನನ್ನ ಬಗ್ಗೆ ಇಟ್ಟುಕೊಂಡಿದ್ದ ಒಳ್ಳೆಯ ಭಾವನೆಯನ್ನೆಲ್ಲ ಎಂದೆಂದಿಗೂ ಹಾಳುಮಾಡಿಕೊಂಡೆ ಅನ್ನಿಸಿತು. ಇಬ್ಬರೂ ಮೌನವಹಿಸಿದೆವು, ಇಬ್ಬರಲ್ಲಿಯೂ ಗೊಂದಲ, ಇರಿಸುಮುರಿಸು. ಈ ಸಂದಿಗ್ಧದಿಂದ ನಮ್ಮಿಬ್ಬರನ್ನೂ ಪಾರುಮಾಡಿದವಳು ಸೋನ್ಯಾ, ಕೈಲಿ ಬೀಗದ ಕೈ ಹಿಡಿದುಕೊಂಡು ನಮ್ಮೆಡೆಗೆ ಓಡಿಬಂದಳು. ಸ್ವಲ್ಪ ಹೊತ್ತು ನಾವಿಬ್ಬರೂ ಅವಳ ಜೊತೆಯಲ್ಲಿ ಮಾತ್ರ ಮಾತಾಡುತ್ತಿದ್ದೆವೇ ಹೊರತು ಒಬ್ಬರಿಗೊಬ್ಬರು ಏನನ್ನೂ ಹೇಳಲಿಲ್ಲ. ಮತ್ತೆ ನಾವು ಕಾತ್ಯಾ ಇದ್ದ ಕಡೆ ಬಂದೆವು. ತಾನು ನಿದ್ದೆ ಹೋಗಿಯೇ ಇರಲಿಲ್ಲವೆಂದೂ ನಾವು ಒಬ್ಬರಿಗೊಬ್ಬರು ಆಡಿಕೊಂಡ ಮಾತನ್ನೆಲ್ಲ ತಾನು ಕೇಳಿಸಿಕೊಂಡೆನೆಂದೂ ಹೇಳಿದಳು. ನಾನು ಸಮಾಧಾನಗೊಂಡಿದ್ದೆ, ಅವರು ಎಂದಿನ ಹಿರಿತನದ ಮುದ್ರೆ ತಾಳಲು ಯತ್ನಿಸುತ್ತಿದ್ದರು. ಆದರೆ ಅದರಿಂದ ನನ್ನ ಮನಸ್ಸೇನೂ ಬದಲಾಗಲಿಲ್ಲ. ಕೆಲವು ದಿನಗಳ ಹಿಂದೆ ನಮ್ಮಲ್ಲಿ ನಡೆದಿದ್ದ ಮಾತುಕತೆ ನನ್ನ ಕಣ್ಣೆದುರು ಸ್ಪಷ್ಟವಾಗಿ ಮರಳಿ ಬಂತು.

ತನ್ನ ಪ್ರೀತಿಯನ್ನು ಗಂಡಸು ಹೇಳಿಕೊಳ್ಳುವಷ್ಟು ಸುಲಭವಾಗಿ ಹೆಣ್ಣು ಹೇಳಿಕೊಳ್ಳಲಾಗುವುದಿಲ್ಲವೆಂದು ಕಾತ್ಯಾ ಹೇಳುತ್ತಲೇ ಇದ್ದಳು.

"ಈ ಮಾತನ್ನ ನಾನು ಒಪ್ಪೋದಿಲ್ಲ. ತನ್ನ ಮನಸ್ಸಿನ ಪ್ರೀತೀನ ಗಂಡಸು ಹೇಳಿಕೊಳ್ಳಕೂಡದು, ಹೇಳಿಕೊಳ್ಳಲಾರ."

"ಯಾಕೆ?"

"ಯಾಕೇಂದ್ರೆ, ಅದು ನಿಜವಲ್ಲದೆ ಇರಬಹುದು. ಗಂಡಸೊಬ್ಬ ಪ್ರೀತಿಸ್ತಾ ಇದಾನೆ ಅನ್ನೋದು ಹೇಗೆ ಗೊತ್ತಾಗತ್ತೆ? ಆ ಮಾತನ್ನ ಆಡಿದಾಗ ಏನೋ ಆಗಿಬಿಡತ್ತೆ, ಏನೋ

ಪವಾಡ ನಡೆದುಬಿಡತ್ತೆ, ಬಂದೂಕಿನಿಂದ ಗುಂಡುಗಳು ಹಾರಿಬಿಡತ್ವೆ ಅಂದ್ಕೊಳ್ಳೊ ಹಾಗೆ ಗಂಡಸಿಗೆ ತೋಚತ್ತೆ. ನನ್ನ ಅಭಿಪ್ರಾಯದಲ್ಲಿ, 'ನಾನು ನಿನ್ನ ಪ್ರೀತಿಸ್ತೀನಿ' ಅಂತ ಯಾರು ಶಾಸ್ತ್ರೋಕ್ತವಾಗಿ ಹೇಳ್ತಾರೋ ಅವರು ಇಲ್ಲ ಆತ್ಮವಂಚನೆ ಮಾಡ್ಕೋತಿರ್ತಾರೆ, ಇಲ್ಲವೇ ಅದಕ್ಕಿಂತ ಮಿಗಿಲಾಗಿ ಇತರರನ್ನೂ ವಂಚಿಸ್ತಿರ್ತಾರೆ."

"ತಾನು ಬಾಯಿಬಿಟ್ಟು ಹೇಳದೆ ಇದ್ರೆ, ತನ್ನನ್ನು ಗಂಡಸೊಬ್ಬ ಪ್ರೀತಿಸುತ್ತ ಇದ್ದಾನೆ ಅನ್ನುವುದನ್ನು ಹೆಣ್ಣು ತಿಳಿದುಕೊಳ್ಳೋದು ಹೇಗೆ?" ಎಂದು ಕಾತ್ಯಾ ಪ್ರಶ್ನಿಸಿದ್ದಳು.

"ಅದು ನಂಗೆ ಗೊತ್ತಿಲ್ಲ. ಪ್ರತಿಯೊಬ್ಬನಿಗೂ ತನ್ನ ಭಾವನೆಗಳನ್ನು ಹೇಳಿ ಕೋಳ್ಳೋದಕ್ಕೆ ಅವನದೇ ಮಾರ್ಗ ಇರತ್ತೆ. ಪ್ರೀತಿ ಇರೋದೇ ಆದರೆ, ಹೇಗೋ ಗೊತ್ತಾಗಿಬಿಡತ್ತೆ. ಆದರೆ ಕಾದಂಬರಿಗಳನ್ನು ಓದೋವಾಗ, 'ನಾನು ನಿನ್ನನ್ನ ಪ್ರೀತಿಸ್ತೀನಿ, ಎಲೀನೋರಾ' ಅಂತ ಒಬ್ಬ ಲೆಫ್ಟಿನೆಂಟ್ ಸ್ಟೆಲ್ಸ್ಕಿನೋ ಆಲ್ಫ್ರೆಡ್ಡೋ ಜೋಲು ಮೋರೆಯಿಂದ ಹೇಳಿದ ತಕ್ಷಣವೇ ಏನಾದ್ರೂ ಅದ್ಭುತವಾದದ್ದು ಸಂಭವಿಸಿಬಿಡತ್ತೆ ಅಂತ ನಿರೀಕ್ಷಿಸಿದರೆ, ಉಹ್ಞೂ, ಅವರಿಬ್ಬರಲ್ಲೂ - ಅವರ ಮೂಗಲ್ಲೋ ಬಾಯಲ್ಲೋ ಕಣ್ಣಲ್ಲೋ ಅಥವಾ ಇಡೀ ವ್ಯಕ್ತಿತ್ವದಲ್ಲೋ - ಏನೂ ಬದಲಾಣೆ ನಡೆಯೊಲ್ಲ, ಎಲ್ಲ ಹಿಂದೆ ಇದ್ದ ಹಾಗೆ ಇರತ್ವೆ" ಎಂದವರು ಹೇಳಿದ್ದರು.

ಈ ಗೇಲಿ ಮಾತಿನ ಹಿಂದೆ ನನಗೆ ಸಂಬಂಧಪಟ್ಟಿರೋ ಯಾವುದೋ ಗಂಭೀರ ಅಂಶ ಅಡಕವಾಗಿದೆ ಎಂದು ಆಗಲೂ ನನಗೆ ಅನ್ನಿಸಿತ್ತು. ಆದರೆ ಅವರು ಕಾದಂಬರಿಗಳ ನಾಯಕರುಗಳ ಬಗ್ಗೆ ಆ ತರಹ ಕೀಳುಮಾತುಗಳನ್ನಾಡಿದ್ದು ಸರಿಬಂದಿರಲಿಲ್ಲ.

"ನೀವೆಂದೂ ಗಂಭೀರವಾಗಿ ಮಾತಾಡೋದೇ ಇಲ್ಲ. ಆದರೆ ಈಗ ಸತ್ಯವಾಗಿ ಹೇಳಿ, ನಿಮ್ಮ ಪ್ರೀತೀನ ನೀವು ಇದುವರೆಗೆ ಯಾವತ್ತೂ ಯಾರ ಹತ್ರಾನೂ ಹೇಳಿಕೊಂಡಿಲ್ವಾ?"

"ಎಂದೆಂದೂ ಇಲ್ಲ, ನಾನೆಂದೂ ಕೇಳಿಕೊಂಡಿಲ್ಲ, ಮುಂದೇನೂ ಹಾಗೆ ಮಾಡೋದಿಲ್ಲ" ಎಂದೂ ಹೇಳಿದ್ದರು.

ಈ ಮಾತೆಲ್ಲ ನನಗೆ ನೆನಪಿಗೆ ಬಂತು. ನನ್ನನ್ನ ಪ್ರೀತಿಸುತ್ತಿದ್ದಾರೆ ಎಂದು ಅವರೇನೂ ಹೇಳಿಕೊಳ್ಳಬೇಕಾಗಿರಲಿಲ್ಲ. 'ಅವರು ನನ್ನ ಪ್ರೀತಿಸ್ತಿರೋದು, ನಿಜ. ಆ ವಿಷಯ ತಲೆ ಕೆಡಿಸಿಕೊಂಡಿಲ್ಲದವರ ಹಾಗೆ ತೋರಿಸಿಕೊಳ್ಳೋ ಪ್ರಯತ್ನ ನನ್ನ ಮನಸ್ಸನ್ನೇನೂ ಬದಲಾವಣೆ ಮಾಡಕ್ಕೆ ಸಾಧ್ಯವಿಲ್ಲ' ಅಂದುಕೊಂಡೆ ನಾನು.

ಆ ಸಂಜೆ ಪೂರ್ತಿ ಅವರು ನನ್ನ ಜೊತೆ ಮಾತಾಡಿದ್ದು ತೀರ ಕಡಿಮೆ, ಆದರೆ ಅವರು ಕಾತ್ಯಾ ಮತ್ತು ಸೋನ್ಯಾಳಿಗೆ ಹೇಳಿದ ಪ್ರತಿಯೊಂದು ಶಬ್ದದಲ್ಲೂ, ತಮ್ಮ ಪ್ರತಿ ಚಲನೆ ಹಾಗೂ ನೋಟದಲ್ಲಿಯೂ ನನಗೆ ಅವರ ಪ್ರೀತಿ ಕಾಣಿಸುತ್ತಿತ್ತು, ಅದರಲ್ಲಿ ಅನುಮಾನವೇ ಇರಲಿಲ್ಲ. ಈಗಲೂ ತಮ್ಮ ಭಾವನೆಗಳನ್ನು ಮರೆಮಾಚಿ ಏನೂ ಆಗಿಲ್ಲವೇನೋ ಎಂಬಂತೆ ನಟಿಸುವುದು ಅವಶ್ಯಕ ಎಂದು ಭಾವಿಸಿದ್ದ ಅವರಿಗಾಗಿ ನನ್ನ

ಮನಸ್ಸು ಪರಿತಪಿಸಿತು, ಖಿನ್ನಗೊಂಡಿತು. ಅದು ತೀರ ಸ್ಪಷ್ಟವಾಗಿದ್ದು ಎಣೆಯಿಲ್ಲದ ಸಂತೋಷವನ್ನು ಹೊಂದುವುದು ತೀರ ಸರಳವಾಗಿರುವಾಗ ಅವರೇಕೆ ಹೀಗೆ ಮಾಡಬೇಕು? ಆದರೆ ತೋಟದಲ್ಲಿ ಧುಮುಕಿ ಅವರ ಮುಂದೆ ನಿಲ್ಲುವುದು ಅಪರಾಧವೇನೋ ಎಂಬ ಭಾವನೆ ನನ್ನಲ್ಲಿ ಪ್ರಬಲವಾಯಿತು. ನನ್ನ ಬಗೆಗೆ ಅವರಿಗೆ ಗೌರವ ಹೊರಟು ಹೋಗಿ ನನ್ನ ಮೇಲೆ ಕೋಪಗೊಳ್ಳುವರೇನೋ ಎಂದು ಭಯವಾಯಿತು.

ಟೀ ಕುಡಿದಾದ ಮೇಲೆ ನಾನು ಪಿಯಾನೋ ಬಳಿ ಹೋದೆ, ಅವರು ನನ್ನನ್ನು ಹಿಂಬಾಲಿಸಿದರು.

"ನನಗೋಸ್ಕರ ಏನನ್ನಾದರೂ ನುಡಿಸು - ನೀನು ಹಾಗೆ ಮಾಡಿ ಎಷ್ಟು ದಿವಸಗಳಾದವು" ಎಂದರು, ನಡುಮನೆಯಲ್ಲಿ ನನ್ನ ಬಳಿ ಬಂದು.

"ಹಾಗೇ ಮಾಡ್ತಿದ್ದೆ" ಎಂದೆ ನಾನು. ಆಮೇಲೆ ನಾನು ನೇರವಾಗಿ ಅವರ ಮುಖವನ್ನೇ ನೋಡುತ್ತ ಇದ್ದಕ್ಕಿದ್ದಂತೆ ಹೇಳಿದೆ: "ಸರ್ಗೀ ಮಿಖೈಲಿಚ್, ನಿಮಗೆ ನನ್ನ ಮೇಲೆ ಕೋಪ ಇಲ್ಲ ತಾನೇ?"

"ಕೋಪ ಯಾಕೆ?" ಎಂದವರು ಕೇಳಿದರು.

"ಇವತ್ತು ಮಧ್ಯಾಹ್ನ ನಾನು ನಿಮ್ಮ ಮಾತು ಕೇಳಲಿಲ್ಲವಲ್ಲ, ಅದಕ್ಕೆ" ಎಂದೆ ನಾನು ನಾಚಿಕೆಯಿಂದ.

ನನ್ನ ಮಾತಿನ ಅರ್ಥ ಅವರಿಗಾಯಿತು; ತಮ್ಮ ತಲೆಯಾಡಿಸುತ್ತ ಮುಖ ಸೊಟ್ಟಗೆ ಮಾಡಿದರು, ಅಂದರೆ ನನ್ನನ್ನು ನ್ಯಾಯವಾಗಿ ಬೈಯಬೇಕಾಗಿತ್ತು, ಆದರೆ ಹಾಗೆ ಮಾಡುವುದು ತನ್ನಿಂದ ಸಾಧ್ಯವಾಗಲಿಲ್ಲ ಎಂಬುದು ಅದರ ಇಂಗಿತ.

"ಅಂದರೆ ಎಲ್ಲ ಸರಿಹೋಯ್ತಾ? ನಾವು ಮತ್ತೆ ಒಂದಾಗಿದ್ದೀವಾ?" ಎಂದೆ ನಾನು, ಪಿಯಾನೋ ಮುಂದೆ ಕುಳಿತುಕೊಳ್ಳುತ್ತ.

"ಹ್ಞೂ ಮತ್ತೆ!"

ಪಡಸಾಲೆಯಲ್ಲಿ - ಅದು ವಿಶಾಲವಾದುದು - ಪಿಯಾನೋ ಬಳಿ ಎರಡು ದೀಪಗಳನ್ನು ಹಚ್ಚಿಡಲಾಗಿತ್ತು, ಉಳಿದ ಭಾಗವನ್ನೆಲ್ಲ ಅರೆಮಬ್ಬು ಆವರಿಸಿತ್ತು. ಕಿಟಕಿಗಳಾಚೆ ಬೇಸಿಗೆಯ ರಾತ್ರಿ ಕಾಂತಿಮಯವಾಗಿತ್ತು. ಕಾತ್ಯಾ ದೀಪವಿಲ್ಲದ ನಡುಮನೆಯಲ್ಲಿ ಆಗೊಮ್ಮೆ ಈಗೊಮ್ಮೆ ನಡೆದಾಡುವ ಹೆಜ್ಜೆಸಪ್ಪಳವನ್ನು ಬಿಟ್ಟರೆ ಅಥವಾ ಕಿಟಕಿಯ ಹತ್ತಿರ ಕಟ್ಟಿಹಾಕಿದ್ದ ಅವರ ಕುದುರೆ ಕೆನೆದಾಗಲೋ ಬರ್ಡಕ್ ಗಿಡದ ಮೇಲೆ ತನ್ನ ಗೊರಸಿನಿಂದ ಒದ್ದಾಗಲೋ ಆಗುವ ಸದ್ದಿನ ಹೊರತು, ಎಲ್ಲೆಲ್ಲೂ ಮೌನ ಆವರಿಸಿತ್ತು. ಅವರು ನನ್ನ ಹಿಂದೆ ಕುಳಿತರು, ನನಗವರು ಕಾಣಿಸುತ್ತಿರಲಿಲ್ಲ; ಆದರೆ ಕೋಣೆಯ ಆ ಅರೆಮಬ್ಬಿನಲ್ಲಿ, ಪ್ರತಿ ಸದ್ದಿನಲ್ಲಿ, ನನ್ನಲ್ಲಿ - ಎಲ್ಲೆಲ್ಲೂ ಅವರೇ ತುಂಬಿರುವ ಭಾವ ನನ್ನಲ್ಲಿತ್ತು. ಅವರು ನನಗೆ ಕಾಣುತ್ತಿರಲಿಲ್ಲವಾದರೂ, ಅವರ ಪ್ರತಿ ನೋಟ,

ಚಲನೆ ನನ್ನ ಹೃದಯದಲ್ಲಿ ಮಾರ್ದನಿಸುತ್ತಿತ್ತು. ನಾನು ಮೊಜಾರ್ಟ್‌ನ ಒಂದು ಸೊನಾಟವನ್ನು ನುಡಿಸಿದೆ, ಅದನ್ನವರೇ ತಂದದ್ದು, ಅವರಿಗಾಗಿ ಅವರ ಮುಂದೆಯೇ ನಾನು ಕಲಿತದ್ದು ಅದು. ನಾನು ಏನು ನುಡಿಸುತ್ತಿದ್ದೇನೆಂಬ ಅರಿವು ನನ್ನಲ್ಲುಳಿದಿರಲಿಲ್ಲ, ಆದರೆ ಚೆನ್ನಾಗಿ ನುಡಿಸುತ್ತಿದ್ದೆ ಅನ್ನಿಸಿತ್ತು, ಅವರಿಗೆ ಸಂತೋಷವಾಗಿದೆ ಅನ್ನಿಸುತ್ತಿತ್ತು. ಅವರ ಸಂತೋಷದ ಬಗ್ಗೆ ನನಗೆ ಅರಿವಿತ್ತು, ಅವರು ನನ್ನ ಬೆನ್ನ ಹಿಂದೆ ಕುಳಿತಿದ್ದುದರಿಂದ ನನಗೆ ಕಾಣುತ್ತಿರಲಿಲ್ಲವಾದರೂ ಅವರು ನನ್ನನ್ನೇ ನೋಡುತ್ತಿರುವುದರ ಅರಿವೂ ನನಗುಂಟಾಗಿತ್ತು. ಆದರೂ ಯಾಂತ್ರಿಕವಾಗಿ ಬೆರಳುಗಳನ್ನಾಡಿಸುತ್ತ ನಾನು ಅರಿವಿಲ್ಲದೆಯೇ ಹಿಂದಿರುಗಿ ಅವರೆಡೆ ದೃಷ್ಟಿ ಬೀರಿದೆ. ಇಷ್ಟು ಹೊತ್ತಿಗೆ ರಾತ್ರಿ ಹೆಚ್ಚು ಕಾಂತಿಯುಕ್ತವಾಗಿತ್ತು, ಅವರ ತಲೆ ಕತ್ತಲ ಹಿನ್ನೆಲೆಯಲ್ಲಿ ಕಂಡಿತು. ತಮ್ಮ ಕೈಗಳ ಮೇಲೆ ತಲೆಯನ್ನೂರಿ ಕುಳಿತಿದ್ದರು, ನನ್ನೆಡೆಗೆ ನೋಡಿದಾಗ ಅವರ ಕಣ್ಣುಗಳಲ್ಲಿ ಹೊಳಪು ತುಂಬಿತ್ತು. ಅವರ ದೃಷ್ಟಿಯನ್ನು ಕಂಡು ನಾನು ಮುಗುಳ್ನಕ್ಕೆ, ನುಡಿಸುವುದನ್ನು ನಿಲ್ಲಿಸಿದೆ. ಅವರೂ ಮಂದಹಾಸ ಬೀರಿದರು, ನುಡಿಸುವಿಕೆ ನಿಲ್ಲಿಸಿದ್ದನ್ನು ಟೀಕಿಸುವವರಂತೆ ತಲೆಯಲ್ಲಾಡಿಸಿದರು, ಮುಂದುವರೆಸಲು ಸೂಚನೆಯೂ ಆಗಿತ್ತು. ನಾನು ನಿಲ್ಲಿಸಿದಾಗ, ಚಂದ್ರ ಮತ್ತಷ್ಟು ಕಾಂತಿಯನ್ನು ಗಳಿಸಿಕೊಂಡಿದ್ದ, ಆಗಸದ ನೆತ್ತಿಯಲ್ಲಿ ರಾರಾಜಿಸುತ್ತಿದ್ದ. ದೀಪಗಳ ಕ್ಷೀಣ ಬೆಳಕಿನಲ್ಲಿ ಕಿಟಕಿಯಿಂದ ತೂರಿ ಬರುತ್ತಿದ್ದ ಅಚ್ಚ ಬೆಳದಿಂಗಳು ಸೇರಿಕೊಂಡು ನೆಲದ ಮೇಲೆ ಚೆಲ್ಲಾಡುತ್ತಿತ್ತು. ಕಾತ್ಯಾ ಕೂಗಿ ಕೇಳಿದಳು? "ತುಂಬ ಚೆನ್ನಾದ ಭಾಗವನ್ನು ನುಡಿಸುತ್ತಿರುವಾಗ ನಿಲ್ಲಿಸಿಬಿಟ್ಟೆ" ಎಂದು ಆಕ್ಷೇಪಣೆಯ ದನಿಯಲ್ಲಿ; ಆದರೆ ನಾನು ಚೆನ್ನಾಗೇನೂ ನುಡಿಸುತ್ತಿರಲಿಲ್ಲ. ನಾನಷ್ಟು ಚೆನ್ನಾಗಿ ಯಾವತ್ತೂ ನುಡಿಸಿರಲಿಲ್ಲ ಎಂದವರು ಹೊಗಳಿದರು; ಆಮೇಲೆ ಮೇಲೆದ್ದು ಕೋಣೆಗಳಲ್ಲಿ ಓಡಾಡತೊಡಗಿದರು, ದೀಪವಿಲ್ಲದ ನಡುಮನೆಯಿಂದ ಪಡಸಾಲೆಗೆ, ಮತ್ತೆ ಅಲ್ಲಿಂದ ಇಲ್ಲಿಗೆ. ಪ್ರತಿ ಬಾರಿ ನೋಡಿದಾಗಲೂ ನನ್ನೆಡೆಗೆ ಮಂದಹಾಸ ಬೀರುತ್ತಿದ್ದರು. ನಾನು ಮುಗುಳ್ನಕ್ಕೆ. ಯಾಕೋ ಜೋರಾಗಿ ನಗಬೇಕೆಂದೂ ನನಗನ್ನಿಸುತ್ತಿತ್ತು. ಅವತ್ತು ನಡೆದಿದ್ದುದರ ಬಗ್ಗೆ ನನಗೆ ತುಂಬ ಸಂತೋಷವಾಗಿತ್ತು. ಕಾತ್ಯಾ ಮತ್ತು ನಾನು ಪಿಯಾನೋ ಬಳಿ ನಿಂತಿದ್ದೆವು, ಅವರು ಪಡಸಾಲೆಯಿಂದ ಹೊರಗೆ ಹೋದಾಗಲೂ ನಾನು ಅವಳನ್ನು ಮುತ್ತಿಡುತ್ತಿದ್ದೆ, ಗದ್ದದ ಕೆಳಗಿನ ಮೃದುವಾದ ಭಾಗದಲ್ಲಿ. ಅವರು ಪ್ರತಿಸಲ ಮತ್ತೆ ಬಂದಾಗಲೂ ಗಂಭೀರ ಮುಖಮುದ್ರೆಯನ್ನು ತಾಳುತ್ತಿದ್ದೆ, ಕಷ್ಟಪಟ್ಟು ನನ್ನಲ್ಲಿ ಉಕ್ಕುತ್ತಿದ್ದ ನಗುವನ್ನು ತಡೆದುಕೊಂಡಿದ್ದೆ.

"ಅವಳಿಗೇನಾಗಿದ್ಯಂತೆ ಇವತ್ತು?" ಎಂದವರನ್ನು ಕಾತ್ಯಾ ಕೇಳಿದಳು.

ಅವರು ಉತ್ತರವನ್ನೇನೂ ಕೊಡದೆ ನನ್ನ ಕಡೆ ತಿರುಗಿ ಬರಿ ಮುಗುಳ್ನಕ್ಕರು. ನನಗೇನಾಗಿದೆ ಅನ್ನುವ ವಿಷಯ ಅವರಿಗೆ ಚೆನ್ನಾಗಿ ತಿಳಿದಿತ್ತು.

"ನೋಡಿ, ರಾತ್ರಿ ಹೇಗಿದೆ ಅಂತ!" ಅಂತ ಅವರು ಪಡಸಾಲೆಯಿಂದ ನನ್ನನ್ನು ಕೂಗಿ ಕರೆದರು. ಅವರು ತೆರೆದ ಫ್ರೆಂಚ್ ಕಿಟಕಿಯ ಬಳಿ ನಿಂತು ತೋಟವನ್ನು

ನೋಡುತ್ತಿದ್ದರು.

ನಾವು ಅವರ ಬಳಿ ಹೋಗಿ ಸೇರಿಕೊಂಡೆವು. ನಿಜವಾಗಿಯೂ ನಾನಂತೂ ಹಿಂದೆಂದೂ ಕಾಣದಿದ್ದಂತಹ ರಾತ್ರಿ ಅದು. ಮನೆಯ ಮೇಲುಗಡೆ ನಮ್ಮ ಹಿಂದಿನಿಂದ ಪೂರ್ಣ ಚಂದ್ರ ಹೊಳೆಯುತ್ತಿದ್ದ, ನಮಗೆ ಅದು ಕಾಣಸುತ್ತಿರಲಿಲ್ಲ, ಮನೆಯ ಕಂಬಗಳು ಹಾಗೂ ಸೂರು ಮತ್ತು ಪಡಸಾಲೆಯ ಮುಂಜೂರಿನ ನೆರಳು ಓರೆಯಾಗಿ ಸಣ್ಣ ಸಣ್ಣ ಕಲ್ಲುಗಳು ತುಂಬಿದ್ದ ಹಾದಿ ಮತ್ತು ಆಮೇಲಿನ ಹುಲ್ಲುಹಾಸಿನ ಮೇಲೆ ಅರ್ಧ ಬಿದ್ದಿತ್ತು. ಅಷ್ಟನ್ನುಳಿದು ಮಿಕ್ಕೆಲ್ಲ ಹೊಳೆಯುತ್ತಿದ್ದವು, ಬೆಳದಿಂಗಳು ಹಾಗೂ ಇಬ್ಬನಿಯ ಹೊಳಪು ಕೂಡಿ ಹಾಲಿನಂತಾಗಿತ್ತು. ತೋಟದ ಅಗಲವಾದ ಹಾದಿಯ ಒಂದು ಭಾಗದಲ್ಲಿ ಡೇಲಿಯ ಮತ್ತವುಗಳ ಆಸರೆಯ ನೆರಳು ಓರೆಯಾಗಿ ಹರಡಿಕೊಂಡು ಎಲ್ಲ ಮಿಂಚುತ್ತ ತಂಪಾಗಿ ಜಲ್ಲಿಯ ಉಬ್ಬುತಗ್ಗುಗಳ ಮೇಲೆ ಬಿದ್ದಿತ್ತು. ಅದೆಲ್ಲ ಕಾವಳದಲ್ಲಿ ಬೆರೆತುಹೋಗುವ ದೂರವೂ ಕಣ್ಣಿಗೆ ಬೀಳುತ್ತಿತ್ತು. ಮರಗಳ ಎಲೆಗಳ ನಡುವಿನಿಂದ ಆ ಹಸುರುಮನೆಯ ಮೇಲುಗಡೆ ಹೊಳೆಯುವ ದಟ್ಟವಾಗುತ್ತಿದ್ದ ಮಂಜು ಹಬ್ಬಿಕೊಂಡಿತ್ತು. ಇಷ್ಟು ಹೊತ್ತಿಗಾಗಲೇ ಅರ್ಧ ಎಲೆಗಳುದುರಿದ್ದ ಲೈಲಕ್ ಪೊದೆಗಳು ಮಧ್ಯದಲ್ಲಿ ಮಿರುಗುತ್ತ ನಿಂತಿದ್ದವು. ಪ್ರತಿ ಹೂವು ಬೇರೆಯಾಗಿಯೇ ಕಾಣುವಷ್ಟು ಸ್ಪಷ್ಟತೆಯಿಂದಿದ್ದರೂ ಅವುಗಳೆಲ್ಲ ಇಬ್ಬನಿಯಲ್ಲಿ ತೋಯ್ದಿದ್ದವು. ದಾರಿಗಳಲ್ಲಿ ನೆರಳು ಬೆಳಕುಗಳು ಒಂದಾಗಿ ಬೆರೆತು ಅವುಗಳು ದಾರಿಗಳಾಗಿ ಕಾಣಿಸದೆ ಅತ್ತಿತ್ತ ಓಲಾಡುವ ಪಾರದರ್ಶಕ ಮನೆಗಳಾಗಿ ತೋರುತ್ತಿದ್ದವು. ನಮ್ಮ ಬಲಭಾಗದಲ್ಲಿ, ಮನೆಯ ನೆರಳಿನ ಮೇಲೆ ಎಲ್ಲವೂ ಕಪ್ಪಗಿದ್ದು ಏನೂ ಸ್ಪಷ್ಟವಾಗಿ ಕಾಣಿಸದೆ ಅಸ್ತವ್ಯಸ್ತವಾಗಿದ್ದವು. ಸುತ್ತಲೂ ಕವಿದಿದ್ದ ಕತ್ತಲ ಹಿನ್ನೆಲೆಯಲ್ಲಿ ಮತ್ತಷ್ಟು ಹೊಳಪಿನಿಂದ ನಿಂತಿದ್ದುದು ಒಂದು ಪಾಪ್ಲರ್ ಮರದ ತುದಿ, ಅದ್ಭುತವಾದ ಎಲೆಗಳ ಕಿರೀಟ ಧರಿಸಿ ಕಡುನೀಲ ಆಗಸದ ಮಬ್ಬು ದೂರಕ್ಕೆ ಹೊರಟುಹೋಗದೆ, ಹೊಳಪು ಬೆಳಕಿನ ತುದಿಯೇರಿ, ಯಾವುದೋ ಕಾರಣದಿಂದ ಮನೆಗೆ ಸನಿಹದಲ್ಲಿ ನಿಂತಿತ್ತು.

"ಒಂದಷ್ಟು ದೂರ ನಡಕೊಂಡು ಹೋಗಾಣ್ವಾ?" ಎಂದೆ ನಾನು. ಕಾತ್ಯಾ ಒಪ್ಪಿದಳು, ಆದರೆ ನಾನು ಗೊಲೋಷ್ಗಳನ್ನು ಹಾಕಿಕೊಳ್ಳಬೇಕೆಂದು ಹೇಳಿದಳು.

"ನಂಗವು ಬೇಡ, ಕಾತ್ಯಾ, ಸರ್ಗೀ ಮುಖೈಲ್ಯಿಚ್ ತಮ್ಮ ತೋಳಿನಾಸರೆ ಕೊಡ್ತಾರೆ" ಎಂದೆ ನಾನು.

ಇದರಿಂದ ನನ್ನ ಕಾಲುಗಳು ಒದ್ದೆಯಾಗುವುದಿಲ್ಲ ಎಂಬ ಹಾಗೆ! ಆದರೆ ಇದು ಸಹಜವೆಂಬಂತೆ ನಮ್ಮ ಮೂವರಿಗೂ ಅನ್ನಿಸಿತು. ಆದರೆ ಅವರೆಂದೂ ನನಗೆ ತಮ್ಮ ತೋಳಿನಾಸರೆ ಕೊಡಲು ಮುಂದಾಗಿರಲಿಲ್ಲ. ಈಗ ನಾನಾಗಿಯೇ ಅದರ ಪ್ರಸ್ತಾಪ ಮಾಡಿದ್ದೆ, ಅವರಿಗೆ ಅದು ವಿಚಿತ್ರವೆಂದೇನೂ ಅನ್ನಿಸಲಿಲ್ಲ. ನಾವು ಮೂವರೂ ಒಟ್ಟಿಗೇ ಪಡಸಾಲೆಯಿಂದ ಹೊರಬಿದ್ದೆವು. ನನಗೆ ಹಿಂದೆ ಪರಿಚಿತವಾಗಿದ್ದ ಜಗತ್ತು, ಆಕಾಶ, ಆ ತೋಟ, ಆ ಗಾಳಿ ಇವೆಲ್ಲ ಈಗ ನನಗೆ ಸಂಪೂರ್ಣವಾಗಿ ವಿಭಿನ್ನವೆಂಬಂತೆ ಕಾಣಿಸಿದವು.

ನಾವೊಂದು ಬೀದಿಯಗುಂಟ ಸಾಗಿದ್ದೆವು; ನಾನು ಮುಂದೆ ನೋಡಿದಾಗಲೆಲ್ಲ ಅದೇ ದಾರಿಯಲ್ಲಿ ಮುಂದುವರಿಯಬಹುದು, ಸಾಧ್ಯತೆಯ ಜಗತ್ತು ಅಲ್ಲಿ ಕೊನೆಗಾಣಬಹುದು, ಇಡೀ ದೃಶ್ಯವು ತನ್ನೆಲ್ಲ ಚೆಲುವಿನೊಡನೆ ಸ್ಥಿರವಾಗಿ ನೆಲಸಬೇಕು ಎಂದೆಲ್ಲ ಅನ್ನಿಸುತ್ತಿತ್ತು. ನಾವು ಮುಂದೆ ಹೋಗುತ್ತಲೇ ಇದ್ದೆವು, ನಮ್ಮ ನಡುವಣ ಮಾಯಾ ಗೋಡೆ ನಮ್ಮನ್ನು ಒಳಹೋಗದಂತೆ ಬೇರ್ಪಡಿಸಿತ್ತು: ಆದರೂ ನಮಗೆ ಪರಿಚಿತ ತೋಟ ಹಾಗೂ ಒಣ ಎಲೆಗಳು ತುಂಬಿದ್ದ ದಾರಿಗಳೇ ಕಾಣಿಸಿದವು. ನಾವು ನಿಜವಾಗಿಯೂ ಬೆಳಕು ನೆರಳುಗಳ ಪಟ್ಟೆಗಳು ಹರಡಿದ್ದ ದಾರಿಯಲ್ಲಿಯೇ ಹೋಗುತ್ತಿದ್ದೆವು; ಒಣ ಎಲೆಗಳು ನನ್ನ ಕಾಲಕೆಳಗೆ ಪರಪರವೆನ್ನುತ್ತಿದ್ದರೆ ಸಣ್ಣಪುಟ್ಟ ರೆಂಬೆಗಳು ಮುಖವನ್ನುಜ್ಜುತ್ತಿದ್ದವು. ನನ್ನ ತೋಳನ್ನು ಎಚ್ಚರದಿಂದ ಆನಿಸಿಕೊಂಡು ಅವರು ನಿಧಾನವಾಗಿ ಒಂದೇ ಸಮನೆ ನನ್ನ ಜೊತೆಯಲ್ಲಿ ಸಾಗುತ್ತಿದ್ದವರು ವಾಸ್ತವದ ಅವರೇ; ಪಕ್ಕದಲ್ಲಿ ತನ್ನ ಶೂಗಳನ್ನು ಕಿರುಗುಟ್ಟಿಸುತ್ತ ನಡೆಯುತ್ತಿದ್ದವಳು ಅದೇ ವಾಸ್ತವ ಕಾತ್ಯಾಳೇ. ನಿಶ್ಚಲ ಕೊಂಬೆಗಳ ನಡುವೆ ತೂರಿಕೊಂಡು ಒಂದೇ ಸಮನೆ ನಮ್ಮ ಮೇಲೆ ಕಾಂತಿ ಬೀರುತ್ತಿದ್ದವಳು ಮೇಲಿದ್ದ ಅಮ್ಮನೇ ಇರಬೇಕು.

ಪ್ರತಿ ಹೆಜ್ಜೆಯಲ್ಲೂ ಮಾಯಾ ಗೋಡೆ ಮತ್ತೆ ಧುತ್ತೆಂದು ನಮ್ಮ ಹಿಂದೆ ಮುಂದೆ ಎದ್ದು ನಿಂತಿತು; ಮುಂದೆ ಸಾಗಲು ಸಾಧ್ಯವೇ ಇಲ್ಲವೇನೋ ಎಂಬ ನಂಬಿಕೆ ಯುಂಟಾಯಿತು ನನಗೆ, ಎಲ್ಲದರ ವಾಸ್ತವದಲ್ಲಿ ನನಗೆ ನಂಬಿಕೆಯೇ ಹೊರಟುಹೋಗಿತ್ತು.

"ಓ, ಅಲ್ಲೊಂದು ಕಪ್ಪೆ ಇದೆ!" ಎಂದು ಕಿರಿಚಿದಳು ಕಾತ್ಯಾ.

"ಹಾಗಂದೋರು ಯಾರು? ಎಲ್ಲಿ?" ಎನ್ನಿಸಿತು ನನಗೆ. ಆಮೇಲೆ ಹಾಗೆ ಕೂಗಿದವಳು ಕಾತ್ಯಾ ಎಂದು ತಿಳಿಯಿತು, ಅವಳಿಗೆ ಕಪ್ಪೆಗಳೆಂದರೆ ಭಯ ಎಂಬುದು ನೆನಪಾಯಿತು. ಆ ಬಳಿಕ ನಾನು ನೆಲದತ್ತ ನೋಡಿದೆ, ಒಂದು ಚಿಕ್ಕ ಕಪ್ಪೆ ಕುಪ್ಪಳಿಸಿ ನನ್ನ ಮುಂದೆಯೇ ಕುಳಿತಿತು, ಅದರ ಪುಟ್ಟ ನೆರಳು ದಾರಿಯ ಹೊಳೆಯುವ ಮಣ್ಣಿನ ಮೇಲೆ ಕಂಗೊಳಿಸಿತು.

"ನಿನಗೂ ಕಪ್ಪೆ ಅಂದ್ರೆ ಭಯನಾ, ಅಲ್ಲಾ?" ಎಂದು ಕೇಳಿದವರವರು.

ನಾನು ತಿರುಗಿ ಅವರೆಡೆ ನೋಡಿದೆ. ನಾವು ಇದ್ದ ಜಾಗದಿಂದ ನಿಂಬೆ ಸಾಲಿಗೆ ಇದ್ದುದು ಒಂದೇ ಮರ, ನನಗೆ ಅವರ ಮುಖ ಸ್ಪಷ್ಟವಾಗಿ ಕಾಣುತ್ತಿತ್ತು; ಅದು ಸುಂದರವಾಗಿತ್ತು, ಸಂತಸದಿಂದ ಅರಳಿತ್ತು!

ಅವರು ನನ್ನ ಕಪ್ಪೆಯ ಭಯದ ಬಗ್ಗೆ ಮಾತಾಡಿದ್ದರೂ, "ನಿನ್ನ ಕಂಡರೆ ನನಗೆ ಪ್ರೀತಿ ಕಣೆ, ಮುದ್ದೇ!" ಎಂದು ಹೇಳುವಂತಿತ್ತು ಅವರ ನೋಟ ಹಾಗೂ ತೋಳುಗಳು 'ಐ ಲವ್ ಯೂ! ಐ ಲವ್ ಯೂ' ಎಂದು ಪುನರುಚ್ಚರಿಸಿದುವು. ಬೆಳಕು, ನೆರಳು ಹಾಗೂ ಗಾಳಿ ಎಲ್ಲವೂ ಆ ಮಾತುಗಳನ್ನೇ ಪ್ರತಿಧ್ವನಿಸಿದುವು.

ನಾವು ತೋಟವನ್ನೆಲ್ಲ ಸುತ್ತಿದೆವು. ಕಾತ್ಯಾಳ ಸಣ್ಣ ಹೆಜ್ಜೆಗಳು ನಮ್ಮನ್ನು ಹಿಂಬಾಲಿಸಿದ್ದುವು, ಆದರೆ ಇಷ್ಟು ಹೊತ್ತಿಗೆ ಅವಳಿಗೆ ಸುಸ್ತಾಗಿ ಏದುಸಿರುಬಿಡುತ್ತಿದ್ದಳು.

ಇನ್ನೇನು ಒಳಗೆ ಹೋಗೋಣ ಎಂದವಳು ಹೇಳಿದಳು, ಅವಳನ್ನು ನೋಡಿ ನನಗೆ ಅಯ್ಯೋ ಪಾಪ ಅನ್ನಿಸಿತು. ಬಡಪಾಯಿ, ನಮಗೆ ಅನ್ನಿಸಿದಂತೆ ಅವಳಿಗೇಕೆ ಅನ್ನಿಸುತ್ತಿಲ್ಲ! ಈ ರಾತ್ರಿ, ನಾನೂ ಮತ್ತು ಅವರು ಇರುವ ಹಾಗೆ ಎಳೆಯಳ ಹಾಗೆ ಸಂತೋಷದಿಂದ ಇರಬಾರದು ಅಂದುಕೊಂಡೆ.

ನಾವು ಮನೆಯೊಳಕ್ಕೆ ಹೋದೆವು. ಅಷ್ಟು ಹೊತ್ತಿಗೆ ಅವರಾಗಲೇ ಹೊರಟು ಹೋಗಿದ್ದರು, ಆಗಲೇ ಕೋಳಿ ಕೂಗುತ್ತಿತ್ತು, ಮನೆಯಲ್ಲಿ ಎಲ್ಲರೂ ನಿದ್ದೆ ಮಾಡುತ್ತಿದ್ದರು. ಅವರ ಕುದುರೆಯಂತೂ ಕಿಟಕಿಯ ಹತ್ತಿರ ಕೆನೆಯುತ್ತಿತ್ತು, ಒಂದೇ ಸಮನೆ ಗುಟುರುತ್ತಿತ್ತು, ತನ್ನ ಗೊರಸನ್ನು ಬರ್ಡಕ್ ಗಿಡದ ಬಳಿಯ ನೆಲಕ್ಕೆ ಅಪ್ಪಳಿಸುತ್ತಿತ್ತು. ಗಂಟೆ ಎಷ್ಟಾಯಿತು ಎಂಬುದರ ಬಗ್ಗೆ ಕಾತ್ಯಾ ನಮ್ಮನ್ನು ಎಚ್ಚರಿಸಿರಲೇ ಇಲ್ಲ, ನಾವು ಸಣ್ಣಪುಟ್ಟ ವಿಷಯಕ್ಕೆಲ್ಲ ಕುಳಿತು ಮಾತಾಡುತ್ತಿದ್ದೆವು, ಹೀಗಾಗಿ ನಮಗೆ ಸಮಯದ ಪರಿವೆಯೇ ಇರಲಿಲ್ಲ, ಆಗಲೇ ಎರಡು ಗಂಟೆಯಾಗಿಬಿಟ್ಟಿತ್ತು. ಕೋಳಿಗಳು ಮೂರನೆಯ ಬಾರಿ ಕೂಗಿದವು, ಅವರು ಕುದುರೆಯೇರಿ ಹೊರಟಾಗ ಇನ್ನೇನು ಬೆಳಗು ಮೂಡುವುದರಲ್ಲಿತ್ತು. ಎಂದಿನಂತೆಯೇ ಅವರು ಬೈ ಹೇಳಿದರು, ವಿಶೇಷವಾದುದನ್ನೇನೂ ಸೂಚಿಸಲಿಲ್ಲ; ಆದರೆ ನನಗೆ ಮಾತ್ರ ಅವರು ಅಂದಿನಿಂದ ನನ್ನವರಾದರೆಂಬ ಭಾವನೆ ಬಂದಿತ್ತು, ಅವರನ್ನೆಂದೂ ಕಳೆದು ಕೊಳ್ಳಬಾರದೆನಿಸಿತ್ತು. ನನಗೆ ಅವರ ಬಗ್ಗೆ ಒಲವಿದೆ ಎಂಬುದನ್ನು ನನಗೆ ನಾನೇ ಒಪ್ಪಿಕೊಂಡ ಮೇಲೆ, ನಾನು ಕಾತ್ಯಾಳ ಮುಂದೆ ನನ್ನ ಮನಸ್ಸನ್ನು ತೋಡಿಕೊಂಡೆ. ಅದನ್ನು ಕೇಳಿ ಅವಳು ಸಂತಸಗೊಂಡಳು, ನಾನು ಹೇಳಿದ್ದರಿಂದ ಅವಳ ಬಳಿ ಹೇಳಿಕೊಂಡದ್ದರಿಂದ ಅಕ್ಕರೆ ಉಕ್ಕಿಬಂದಿತ್ತು. ಆದರೆ ಅವಳು - ಬಡಪಾಯಿ! - ನೇರವಾಗಿ ಹಾಸಿಗೆಗೆ ಹೋಗಿ ಮಲಗಿದಳು. ಆದರೆ ನಾನು ವರಾಂಡದಲ್ಲಿಯೇ ಬಹು ಕಾಲ ನಡೆದಾಡಿದೆ, ಆಮೇಲೆ ತೋಟದೊಳಕ್ಕೆ ಹೋದೆ; ಅಲ್ಲಿ ಪ್ರತಿ ಮಾತು, ಪ್ರತಿ ಕ್ಷಣವನ್ನೂ ನೆನಪಿಸಿಕೊಳ್ಳುತ್ತ ಅವರೊಡನೆ ಹೋಗಿದ್ದ ದಾರಿಯಲ್ಲಿಯೇ ಮತ್ತೆ ನಡೆದೆ. ಆ ರಾತ್ರಿಯೆಲ್ಲ ನನಗೆ ನಿದ್ದೆಯೇ ಬರಲಿಲ್ಲ, ಅದರಿಂದ ನನ್ನ ಬದುಕಿನಲ್ಲಿಯೇ ಮೊದಲ ಬಾರಿಗೆ ಅರುಣೋದಯ ಮತ್ತು ಸೂರ್ಯೋದಯಗಳನ್ನು ಕಾಣುವಂತಾಯಿತು. ಮತ್ತೆಂದೂ ಅಂಥ ಸೂರ್ಯೋದಯ ಮತ್ತು ಬೆಳಗುಗಳನ್ನು ನಾನು ಕಾಣಲಿಲ್ಲ. ನನ್ನನ್ನು ಪ್ರೀತಿಸುತ್ತೇನೆ ಎಂದು ಅವರೇಕೆ ನನ್ನ ಬಳಿ ನೇರವಾಗಿ ಹೇಳಬಾರದು ಎಂದುಕೊಂಡೆ. ಎಲ್ಲ ಸರಳವಾಗಿಯೂ ಸುಸೂತ್ರವಾಗಿಯೂ ಇರುವಾಗ ಅವರೇಕೆ ಏನೇನೋ ಸಬೂಬುಗಳನ್ನು ಸೃಷ್ಟಿಸಿಕೊಳ್ಳುತ್ತ, ತನಗೆ ವಯಸ್ಸಾಗಿದೆ ಎಂದು ಹೇಳಿಕೊಳ್ಳಬೇಕು? ಮತ್ತೆ ಬಾರದ ತಮ್ಮ ಸುವರ್ಣ ಗಳಿಗೆಗಳನ್ನವರೇಕೆ ವ್ಯರ್ಥ ಮಾಡುತ್ತಿದ್ದಾರೆ? 'ನಿನ್ನ ಪ್ರೀತಿಸ್ತೀನಿ' ಅಂತ ಅವರು ನನಗೆ ನೇರವಾಗಿ ಸಾದಾ ಮಾತುಗಳಲ್ಲಿ ಹೇಳಿಬಿಡಲಿ; ನನ್ನ ಕೈಹಿಡಿದುಕೊಂಡು ನಸುಬಾಗಿ 'ನಿನ್ನ ಪ್ರೀತಿಸ್ತೀನಿ' ಅಂತ ಹೇಳಲಿ. ಕಣ್ಣಲ್ಲಿ ನಾಚಿಕೆ ತುಂಬಿಕೊಂಡು ನನ್ನ ಕಡೆ ನೋಟ ಬೀರಲಿ; ಆಗ ನಾನವರಿಗೆ ಎಲ್ಲವನ್ನೂ ಹೇಳಿಬಿಡುತ್ತೇನೆ. ಉಹ್ಞೂಂ, ಹೇಳುವುದಿಲ್ಲ, ನನ್ನ ತೋಳುಗಳಿಂದ ಅವರನ್ನು

ಬಳಸಿಕೊಂಡು ನನಗೆ ಒತ್ತಿಕೊಳ್ಳುತ್ತ ಅತ್ತುಬಿಡುತ್ತೇನೆ. ಆನಂತರ ನನ್ನ ಮನಸ್ಸಿನಲ್ಲಿ ಒಂದು ಆಲೋಚನೆ ಸುಳಿಯಿತು: ನಾನು ತಪ್ಪು ತಿಳಿದಿದ್ದು, ಅವರಿಗೆ ನನ್ನ ಮೇಲೆ ಪ್ರೀತಿಯೇ ಇಲ್ಲವೇ?

ಈ ಭಯದಿಂದಾಗಿ ನಾನು ತತ್ತರಿಸಿಹೋದೆ, ಇದರಿಂದ ಏನೇನಾಗ ಬಹುದೆಂಬುದನ್ನು ಊಹಿಸಲೂ ಆಗದಾದೆ. ನಾನು ತೋಟದ ಗೋಡೆಯ ಮೇಲಿಂದ ಒಳಕ್ಕೆ ಹಾರಿದಾಗ ನನಗೆ ಮತ್ತು ಅವರಿಗೆ ಆಗಿದ್ದ ಮುಜುಗರವನ್ನು ನೆನಪಿಸಿಕೊಂಡೆ. ನನ್ನ ಹೃದಯ ತುಂಬ ಭಾರವಾಯಿತು. ಕಣ್ಣುಗಳಲ್ಲಿ ನೀರು ಉಕ್ಕಿ ಬಂತು, ದೇವರಲ್ಲಿ ಮೊರೆಯಿಟ್ಟೆ. ನನ್ನನ್ನು ಸಮಾಧಾನಪಡಿಸುವ ಹಾಗೂ ನನ್ನಲ್ಲಿ ಭರವಸೆಯುಂಟು ಮಾಡುವ ಆಲೋಚನೆಯೊಂದು ಮನಸ್ಸಲ್ಲಿ ಸುಳಿಯಿತು. ಅಂದು ಉಪವಾಸ ವ್ರತವನ್ನು ಆರಂಭಿಸಿ, ನನ್ನ ಹುಟ್ಟಿದ ಹಬ್ಬದಂದು ಪ್ರಭುಭೋಜನ (ಕಮ್ಯೂನಿಯನ್) ಸ್ವೀಕರಿಸಿ, ಅವತ್ತೇ ಅವರೊಡನೆ ಮದುವೆ ನಿಶ್ಚಯವಾಗಬೇಕೆಂದು ನಿಶ್ಚಯಿಸಿದೆ.

ಇದೆಲ್ಲ ಹೇಗೆ ಆಗುವುದೋ ಎಂಬ ಬಗ್ಗೆ ನನಗೆ ಕಲ್ಪನೆಯಿರಲಿಲ್ಲ; ಆದರೆ ಆ ಕ್ಷಣದಿಂದಲೇ ಹಾಗೆ ನಡೆಯಬೇಕೆಂದು ನಾನು ನಿಶ್ಚಯಿಸಿದೆ, ಹಾಗೆ ನಡೆಯುವುದೆಂದೂ ಅನ್ನಿಸಿತು. ನಾನು ಮತ್ತೆ ನನ್ನ ಕೋಣೆಗೆ ಹೋಗುವ ಹೊತ್ತಿಗಾಗಲೇ ಪೂರ್ತಿ ಬೆಳಗಾಗಿತ್ತು, ಕೆಲಸಗಾರರೆಲ್ಲ ಏಳುತ್ತಿದ್ದರು.

## 4

ಆಗಸ್ಟ್‌ನಲ್ಲಿ ಅಸಂಪ್ಷನ್ ಉಪವಾಸ ಬರುವುದಿತ್ತು, ನಾನು ಉಪವಾಸ ಕೈಗೊಳ್ಳುತ್ತೇನೆಂದಾಗ ಮನೆಯವರಾರಿಗೂ ಅಚ್ಚರಿಯೆನಿಸಲಿಲ್ಲ.

ಇಡೀ ವಾರ ಅವರು ನಮ್ಮನ್ನು ಕಾಣಲು ಬರಲಿಲ್ಲ; ಆದರೆ ಆಶ್ಚರ್ಯವೋ ವ್ಯಥೆಯೋಪಡುವುದರ ಬದಲು ನನಗೆ ಸಂತೋಷವೇ ಆಯಿತು, ನನ್ನ ಹುಟ್ಟು ಹಬ್ಬದವರೆಗೆ ಅವರು ಬಾರದಿರಲು ಬಯಸಿದೆ. ವಾರದ ಪ್ರತಿದಿನವೂ ನಾನೇ ಬೇಗ ಏಳುತ್ತಿದ್ದೆ. ಕುದುರೆಗಳನ್ನು ಒಳಗೆ ಕಟ್ಟುವಾಗ ನಾನು ಒಂಟಿಯಾಗಿ ತೋಟದಲ್ಲಿ ಓಡಾಡುತ್ತ ಹಿಂದಿನ ದಿನ ಮಾಡಿರಬಹುದಾದ ತಪ್ಪುಗಳನ್ನು ನೆನಪಿಸಿಕೊಳ್ಳುತ್ತ ಇವತ್ತೇನು ಮಾಡಬೇಕೆಂಬುದನ್ನು ಲೆಕ್ಕಾಚಾರ ಹಾಕುತ್ತಿದ್ದೆ, ಒಂದೂ ತಪ್ಪು ಮಾಡದೆ ದಿನ ಕಳೆಯುವ ತೃಪ್ತಿಯನ್ನು ಕಲ್ಪಿಸಿಕೊಳ್ಳುತ್ತಿದ್ದೆ. ತಪ್ಪುಗಳನ್ನೇ ಮಾಡದೆ ಇರಬಹುದಾದುದು ಕಷ್ಟಕರವಲ್ಲ ಎಂಬ ಭಾವನೆ ನನಗಾಗ ಬಂತು, ಅದಕ್ಕೆ ಬೇಕಾದುದು ಒಂದು ಪುಟ್ಟ ಪ್ರಯತ್ನ, ಅಷ್ಟೆ. ಕುದುರೆ ಗಾಡಿ ಸಜ್ಜಾದಾಗ ನಾನು ಕಾತ್ಯಾಳೊಂದಿಗೋ ಒಬ್ಬ ಕೆಲಸಗಾತಿಯೊಂದಿಗೋ ಗಾಡಿಯಲ್ಲಿ ಕುಳಿತು ಎರಡು ಮೈಲಿ ದೂರದಲ್ಲಿದ್ದ ಚರ್ಚ್‌ಗೆ ಹೋದೆ. ಚರ್ಚ್ ಒಳಕ್ಕೆ ಹೋಗುವಾಗಲೆಲ್ಲ ನನಗೆ 'ದೇವರ ಭಯದಿಂದ ದೇವಸ್ಥಾನಕ್ಕೆ ಬರುವವ'ರಿಗಾಗಿ ಮಾಡುವ ಪ್ರಾರ್ಥನೆ ನೆನಪಿಗೆ ಬರುತ್ತಿತ್ತು; ಕಟ್ಟಡದೊಳಗೆ ಹೋಗಲು

ಅಲ್ಲಿನ ಹುಲ್ಲು ಬೆಳೆದಿದ್ದ ಎರಡು ಮೆಟ್ಟಿಲುಗಳನ್ನೇರುವಾಗ ನಾನು ಅದೇ ಮನಃಸ್ಥಿತಿಯನ್ನು ಹೊಂದಲು ಪ್ರಯತ್ನಿಸಿದೆ. ಆ ಹೊತ್ತಿಗೆ ಅಲ್ಲಿ ಹತ್ತು ಹನ್ನೆರಡು ಮಂದಿಗಿಂತ ಹೆಚ್ಚು ಜನರಿರುತ್ತಿರಲಿಲ್ಲ, ಅವರೆಲ್ಲ ಉಪವಾಸ ವ್ರತ ಕೈಗೊಂಡ ಕೆಲಸಗಾತಿಯರೋ ರೈತ ಹೆಂಗಸರೋ ಆಗಿರುತ್ತಿದ್ದರು. ಅವರು ಬಾಗಿ ಗೌರವ ತೋರಿಸುತ್ತಿದ್ದರು, ನಾನು ಅದನ್ನು ವಿನಯದಿಂದ ಪ್ರತಿಕ್ರಿಯಿಸುತ್ತಿದ್ದೆ. ಆನಂತರ, ಅತೀವ ಧೈರ್ಯದ ಕೆಲಸವೆಂದು ನನಗೆ ಕಂಡುಬಂದ, ನಾನೇ ಹೋಗಿ ಮೇಣದ ಬತ್ತಿಗಳನ್ನಿಟ್ಟುಕೊಂಡ ಮುದುಕ ಸೈನಿಕ ಮತ್ತೊಬ್ಬ ಹಿರಿಯನಿಂದ ಅವುಗಳನ್ನು ಪಡೆದುಬರುತ್ತಿದ್ದೆ, ವಿಗ್ರಹಗಳ ಮುಂದೆ ಅವುಗಳನ್ನು ಹೊತ್ತಿಸಿಡುತ್ತಿದ್ದೆ. ಬಲಿಪೀಠದ ತೆರೆಯಿದ್ದ ಮಧ್ಯದ ಬಾಗಿಲಿನಿಂದ ನಮ್ಮ ತಾಯಿ ಮಾಡಿದ್ದ ಬಲೀಪೀಠದ ವಸ್ತ್ರ ಕಾಣಿಸುತ್ತಿತ್ತು; ಅದರ ಮೇಲೆ ಚಿಕ್ಕವಳಾಗಿದ್ದಾಗ ತುಂಬ ದೊಡ್ಡವೆಂದು ಅನ್ನಿಸುತ್ತಿದ್ದ ಹಾಗೂ ನಿಡುಗಾಲದಿಂದ ನನ್ನ ಮನಸ್ಸಿನಲ್ಲಿ ರಮ್ಯಕಲ್ಪನೆಗಳನ್ನುಂಟುಮಾಡುತ್ತಿದ್ದ ಇಬ್ಬರು ಯಕ್ಷಿಯರಿದ್ದರು, ಜೊತೆಗೆ ಸ್ವರ್ಣವರ್ಣದ ಪ್ರಭಾವಳಿಯಿದ್ದ ಪಾರಿವಾಳ. ಮೇಳಗಾಯಕರ ಹಿಂದೆ ಶಿಥಿಲಗೊಂಡ ಪವಿತ್ರೋದಕ ಪಾತ್ರೆಯಿತ್ತು, ನನಗೂ ಅಲ್ಲಿಯೇ ನಾಮಕರಣವಿಧಿ ನಡೆದದ್ದು, ಅನೇಕ ಸೇವಕರ ಮಕ್ಕಳಿಗೆ ದೇವಮಾತೆಯಾಗಿ ನಿಂತದ್ದು. ಹಿರಿಯ ಪುರೋಹಿತರು ಹೊರಬಂದರು, ಅವರು ನಮ್ಮ ತಂದೆ ಶವಪೆಟ್ಟಿಗೆಗೆ ಹೊದಿಸಿದ್ದ ಬಟ್ಟೆಯಿಂದ ಮಾಡಿದ್ದ ನಿಲುವಂಗಿಯನ್ನು ಧರಿಸಿದ್ದರು, ನನ್ನ ಜೀವಮಾನವಿಡೀ-ನಮ್ಮ ಮನೆಯಲ್ಲಿ ನಡೆದಿದ್ದ ಧಾರ್ಮಿಕವಿಧಿಗಳಲ್ಲಿ, ಸೋನ್ಯಾಳ ನಾಮಕರಣದಲ್ಲಿ, ತಂದೆಯ ಸ್ಮರಣ ಪ್ರಾರ್ಥನೆಗಳಲ್ಲಿ, ಅಮ್ಮನ ಅಂತ್ಯಕ್ರಿಯೆಗಳಲ್ಲಿ - ಕೇಳಿದ್ದ ಧ್ವನಿಯಲ್ಲೇ ಪಠಿಸತೊಡಗಿದರು. ಅದೇ ಕಂಪಿಸುವ ಕಂಠ ಮೇಳದಿಂದ ಹೊಮ್ಮಿ ಜೋರಾಯಿತು; ಪ್ರತಿ ವಿಧಿಯಲ್ಲಿ ಆ ಚರ್ಚಿನಲ್ಲಿ ನಾನು ಕಂಡಿದ್ದ ಗೋಡೆಯ ಬಳಿ ಬಾಗಿಕೊಂಡು ಮೇಳದಲ್ಲಿನ ಮೂರ್ತಿಯೆಡೆಗೆ ತದೇಕವಾಗಿ ನೋಡುತ್ತ, ತನ್ನ ಮಡಿಸಿದ ಬೆರಳುಗಳನ್ನು ಕರವಸ್ತ್ರದ ಮೇಲೆ ಒತ್ತಿಕೊಳ್ಳುತ್ತ, ಬೊಚ್ಚುಬಾಯಲ್ಲಿ ಏನೋ ಗೊಣಗಿಕೊಳ್ಳುತ್ತಿದ್ದ ಅದೇ ಮುದುಕಿ. ಈ ವಸ್ತುಗಳು ನನಗೆ ಕೇವಲ ಕುತೂಹಲಕಾರಿಗಳಾಗಿ ಮಾತ್ರ ಇರಲಿಲ್ಲ, ಹಳೆಯ ನೆನಪಿನ ಕಾರಣದಿಂದ ಮಾತ್ರ ಆಸಕ್ತಿದಾಯಕವಾಗಿರಲಿಲ್ಲ; ಅವು ನನ್ನ ಕಣ್ಣಲ್ಲಿ ಮುಖ್ಯವಾಗಿಯೂ ಪವಿತ್ರವಾಗಿಯೂ ಗಾಢ ಅರ್ಥವಂತಿಕೆಯಿಂದ ಕೂಡಿದವಾಗಿಯೂ ಕಾಣುತ್ತಿದ್ದವು. ನಾನು ಪ್ರಾರ್ಥನೆಯ ಪ್ರತಿ ಶಬ್ದವನ್ನೂ ಕೇಳಿಸಿಕೊಂಡು ಅದಕ್ಕೆ ನನ್ನ ಭಾವನೆಗಳನ್ನು ಮೇಳವಿಸುತ್ತ ಬಂದೆ; ಯಾವ ಭಾಗವಾದರೂ ಅರ್ಥವಾಗದಿದ್ದಾಗ, ನನಗೆ ತಿಳಿವಳಿಕೆ ಕೊಡಲಿ ಎಂದು ಮೌನವಾಗಿ ಪ್ರಾರ್ಥಿಸಿದೆ ಅಥವಾ ಅರ್ಥವಾಗದುದರ ಬದಲು ನನ್ನದೇ ಪ್ರಾರ್ಥನೆಯನ್ನು ಸೇರಿಸಿಕೊಳ್ಳುತ್ತಿದ್ದೆ. ದುಃಖಪೂರಿತ ಪ್ರಾರ್ಥನೆಯನ್ನು ಕೇಳಿದಾಗ ನನಗೆ ಹಳೆಯ ಬದುಕು ನೆನಪಾಗುತ್ತಿತ್ತು, ಈಗಿನ ದೀಪ್ತ ಆತ್ಮಕ್ಕೆ ಹೋಲಿಸಿಕೊಂಡಾಗ ಬಾಲ್ಯದ ಮುಗ್ಧ ಅವಧಿಯು ಕರಾಳವಾಗಿ ಕಾಣಿಸುತ್ತಿತ್ತು. ಅದಕ್ಕಾಗಿ ಅತ್ತು ಆ ಬಗ್ಗೆ ಭಯದಿಂದ ನಡುಗಿದೆ: ಆದರೆ ಅವನ್ನೆಲ್ಲ ದೇವರು ಕ್ಷಮಿಸುವನೆಂಬ ನಂಬಿಕೆಯೂ ಇತ್ತು, ನನ್ನ ಪಾಪಗಳು

ಮತ್ತಷ್ಟು ಹಿರಿದಾಗಿದ್ದರೆ ನನ್ನ ಪಶ್ಚಾತ್ತಾಪವು ಮತ್ತಷ್ಟು ಮಧುರವೆನಿಸುತ್ತಿದ್ದವು. ಆರಾಧನೆಯ ಕೊನೆಗೆ ಧರ್ಮಗುರುಗಳು, "ನಿಮ್ಮ ಮೇಲೆ ದೇವರ ಕರುಣೆಯಿರಲಿ!" ಎಂದಾಗ ಇದ್ದಕ್ಕಿದ್ದಂತೆ ನನ್ನ ದೇಹಸ್ಥಿತಿಯು ಉತ್ತಮಗೊಂಡಂತೆ, ನನ್ನೆದೆಯಲ್ಲಿ ನಿಗೂಢವಾದ ಬೆಳಕು ಹಾಗೂ ಬಿಸುಪುಗಳು ತುಂಬಿಕೊಂಡಂತೆ ಅನ್ನಿಸಿತು. ಆರಾಧನೆ ಮುಕ್ತಾಯಗೊಂಡಿತು, ಗುರುಗಳು ನನ್ನ ಬಳಿ ಬಂದು ಪ್ರಾರ್ಥನೆ ಮಾಡಿಸಲು ನಮ್ಮ ಮನೆಗೇನಾದರೂ ಬರಬೇಕೆ, ಅದಕ್ಕೆ ಯಾವ ಸಮಯ ಸೂಕ್ತ ಎಂದು ಕೇಳಿದರು. ನನ್ನನ್ನು ಸುಪ್ರೀತಗೊಳಿಸಲು ಅವರು ಹಾಗನ್ನುತ್ತಿದ್ದಾರೆಂದು ಭಾವಿಸಿ ಅದಕ್ಕಾಗಿ ಅವರಿಗೆ ವಂದನೆ ಹೇಳಿ, ನಡೆದುಕೊಂಡೋ ಗಾಡಿಯಲ್ಲೋ ನಾನೇ ಚರ್ಚ್‌ಗೆ ಬರುವುದಾಗಿ ನುಡಿದೆ.

"ಅದು ತುಂಬ ಕಷ್ಟವಲ್ಲವೇನಮ್ಮಾ" ಎಂದು ಕೇಳಿದರು. ಏನು ಉತ್ತರ ಕೊಡಬೇಕೋ ನನಗೆ ಹೊಳೆಯಲಿಲ್ಲ, ನಾನೆಲ್ಲಿ ಹೆಮ್ಮೆಯ ತಪ್ಪು ಮಾಡಿಬಿಡುತ್ತೇನೋ ಎಂದು ಹೆದರಿದೆ.

ಆರಾಧನೆ ವಿಧಿಯೆಲ್ಲ ಮುಗಿದ ಬಳಿಕ, ಕಾತ್ಯಾ ಜೊತೆಗಿರದಿದ್ದರೆ, ಗಾಡಿಯನ್ನು ಮನೆಗೆ ಕಳಿಸಿ ನಾನೊಬ್ಬಳೇ ವಾಪಸಾಗುತ್ತಿದ್ದೆ, ಬರುವಾಗ ಎದುರಾದವರಿಗೆಲ್ಲ ನಮ್ರತೆಯಿಂದ ಬಾಗುತ್ತಿದ್ದೆ, ಅವರಿಗೆ ಏನಾದರೂ ಸಹಾಯವೋ ಸಲಹೆಯೋ ನೀಡಲು ಸಾಧ್ಯವೇ ಎಂದು ಯೋಚಿಸುತ್ತಿದ್ದೆ. ಯಾರಿಗಾದರೂ ನನ್ನನ್ನು ಬಲಿದಾನ ಮಾಡಿಕೊಳ್ಳುವ, ಬಿದ್ದ ಗಾಡಿಯನ್ನು ಮೇಲೆತ್ತುವ, ಮಗುವಿನ ತೊಟ್ಟಿಲು ತೂಗುವ, ಪಕ್ಕದ ಕೆಸರಲ್ಲಿ ಕಾಲಿಟ್ಟು ಇತರರಿಗೆ ದಾರಿ ಬಿಟ್ಟುಕೊಡುವ ಕಾತರ ನನ್ನಲ್ಲಿತ್ತು. ಒಂದು ಸಂಜೆ, ಸೇವಕನೊಬ್ಬ ಬಂದು ತನ್ನ ಮಗಳಿಗಾಗಿ ಶವಪೆಟ್ಟಿಗೆಯನ್ನು ಮಾಡಲು ಒಂದಷ್ಟು ಮರದ ಹಲಗೆಗಳು ಹಾಗೂ ಪುರೋಹಿತರು ಅಂತ್ಯಕ್ರಿಯೆ ನಡೆಸುವ ದಕ್ಷಿಣೆ ಕೊಡಲು ಒಂದು ರೂಬಲ್ ಬೇಕೆಂದು ಕೇಳಿಕೊಂಡ ವಿಷಯವನ್ನು ಬೇಲಿಫ್ ಕಾತ್ಯಾಳಿಗೆ ಹೇಳುತ್ತಿದ್ದ. ಬೇಲಿಫ್ ಅವನು ಕೇಳಿದ್ದನ್ನು ಕೊಟ್ಟಿದ್ದನಂತೆ. "ಅವರು ಅಷ್ಟೊಂದು ಬಡವರೇ?" ಎಂದು ಕೇಳಿದೆ ನಾನು. "ತುಂಬ ಬಡವರು, ಮಿಸ್, ಊಟಕ್ಕೆ ಉಪ್ಪಿಗೂ ಗತಿಯಿಲ್ಲದವರು" ಎಂದು ಬೇಲಿಫ್ ಉತ್ತರಿಸಿದ್ದ. ಇದನ್ನು ಕೇಳಿ ನನಗೆ ಸಂಕಟವಾಯಿತು, ಜೊತೆಗೆ ಒಂದಷ್ಟು ಸಂತೋಷವೂ! ಕಾತ್ಯಾಳಿಗೆ ಒಂದಷ್ಟು ದೂರ ನಡೆದಾಡಿಕೊಂಡು ಬರುವೆನೆಂಬ ನೆಪ ಹೇಳಿ, ನಾನು ಸರ್ರನೆ ಮಹಡಿಗೆ ಓಡಿಹೋಗಿ ನನ್ನ ಬಳಿ ಇದ್ದ ಹಣವನ್ನೆಲ್ಲ (ಇದ್ದುದೇ ಸ್ವಲ್ಪ, ಆದರೆ ಇದ್ದುದನ್ನೆಲ್ಲ) ತೆಗೆದುಕೊಂಡು, ದೇಹದ ಮೇಲೆ ಶಿಲುಬೆ ರಚಿಸಿ, ಒಬ್ಬಳೇ ಹೊರಟು, ವರಾಂಡ ಹಾಗೂ ತೋಟಗಳನ್ನು ದಾಟಿ ಸಿಮೋನ್‌ನ ಗುಡಿಸಲ ಕಡೆಗೆ ನಡೆದೆ. ಅದಿದ್ದುದು ಹಳ್ಳಿಯ ಮತ್ತೊಂದು ತುದಿಯಲ್ಲಿ, ಅದರ ಕಿಟಕಿಯ ಬಳಿ ಹೋಗುವವರೆಗೂ ಯಾರೂ ನನ್ನನ್ನು ನೋಡಲೇ ಇಲ್ಲ. ನಾನು ಕಿಟಕಿಯ ಅಂಚಿನಲ್ಲಿ ದುಡ್ಡನ್ನಿಟ್ಟು ಅದರ ಕದ ಬಡಿದೆ. ಕಿರುಗುಟ್ಟುವ ಬಾಗಿಲು ತೆರೆದು ಯಾರೋ ಹೊರಗೆ ಬಂದು ಏನೆಂದು ವಿಚಾರಿಸಿದರು. ಆದರೆ ನಾನು ಅಪರಾಧಿಯಂತೆ ಭಯದಿಂದ ಕಂಪಿಸುತ್ತ ಮನೆಯ ಕಡೆ ಧಾವಿಸಿದೆ. 'ಎಲ್ಲಿಗೆ ಹೋಗಿದ್ದೆ,

ಏನಾಗಿದೆ ನಿನಗೆ' ಎಂದು ಕಾತ್ಯಾ ವಿಚಾರಿಸಿದಳು; ಆದರೆ ನಾನದಕ್ಕೆ ಉತ್ತರ ಕೊಡಲಿಲ್ಲ, ಅಷ್ಟೇಕೆ ಅವಳೇನು ಹೇಳುತ್ತಿದ್ದಳೆಂಬುದೇ ನನಗೆ ತಿಳಿಯಲಿಲ್ಲ. ನನ್ನ ಕಣ್ಣಲ್ಲಿ ಎಲ್ಲರೂ ಕ್ಷುಲ್ಲಕರಾಗಿ ನಗಣ್ಯರಂತೆ ಕಾಣಿಸಿದರು. ನನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡು ಒಬ್ಬಳೇ ನಿಡುಗಾಲ ಶತಪಥ ತುಳಿಯುತ್ತಿದ್ದೆ. ಏನು ಮಾಡಲೂ ನನಗೆ ತೋಚಲಿಲ್ಲ, ಯೋಚಿಸಲೂ ಆಗದಾದೆ, ನನಗೇನಾಗುತ್ತಿದೆ ಎಂಬುದೂ ಅರ್ಥವಾಗಲಿಲ್ಲ. ಈ ಪರೋಪಕಾರಿಯನ್ನು ಕಂಡು ತಮ್ಮ ಮನೆಯ ಮನೆಯವರೆಲ್ಲ ಕೊಂಡಾಡುವರೆನಿಸಿತು, ಹೊಗಳಿಕೆಯ ಮಾತನ್ನಾಡಬಹುದು ಎನ್ನಿಸಿತು. ಅವರಿಗೆ ನೇರವಾಗಿ ಹಣ ಕೊಡದಿದ್ದುದಕ್ಕೆ ನನಗೆ ಖೇದವೆನಿಸಿತ್ತು. ನಾನು ಮಾಡಿದುದನ್ನು ತಿಳಿದರೆ ಸರ್ಗೀ ಮಿಖೈಲಿಚ್ ಏನು ಹೇಳಬಹುದೆಂಬ ಯೋಚನೆಯೂ ಸುಳಿಯಿತು. ಆದರೆ ಇದು ಯಾರಿಗೂ ತಿಳಿಯುವುದು ಸಾಧ್ಯವಿಲ್ಲವೆಂದು ನನಗೆ ಸಂತಸವೆನಿಸಿತು. ನನಗೆ ಸಂತೋಷವಾಗಿತ್ತು, ನನ್ನ ಬಗ್ಗೆ ಹಾಗೂ ಇತರರ ಬಗ್ಗೆ ನನಗೆ ಕೆಡುಕೆನಿಸಿತು, ಆದರೆ ನನ್ನ ಹಾಗೂ ಇತರರ ಬಗ್ಗೆ ಮರುಕವೆನಿಸಿತು; ಕನಸಿನ ಸುಖದಂತೆ ನನಗೆ ಸಾವಿನ ಆಲೋಚನೆ ಬಂತು. ನಾನು ಮುಗುಳ್ನಕ್ಕೆ, ಪ್ರಾರ್ಥಿಸಿದೆ, ಅತ್ತೆ, ನಾನೂ ಸೇರಿದಂತೆ ಇಡೀ ಜಗತ್ತಿನ ಬಗ್ಗೆ ನನಗೆ ಆ ಕ್ಷಣದಲ್ಲಿ ಅಪಾರ ಪ್ರೀತಿ ಉಕ್ಕಿ ಬಂತು. ಆರಾಧನೆಗಳ ನಡುನಡುವೆ ನಾನು ಸುವಾರ್ತೆಗಳನ್ನೋದುತ್ತಿದ್ದೆ; ಕಾಲಕ್ರಮೇಣ ಅದರಲ್ಲಿದ್ದು ಹೆಚ್ಚೆಚ್ಚು ಅರ್ಥವಾಗತೊಡಗಿತ್ತು, ಆ ಪವಿತ್ರ ಜೀವದ ಬದುಕು ಸರಳವೂ ಹೆಚ್ಚು ಹೃದಯಂಗಮವೂ ಆಯಿತು; ಅದನ್ನೋದಿದಾಗ ಉಂಟಾಗುತ್ತಿದ್ದ ಭಾವನೆಗಳು ಹಾಗೂ ಆಲೋಚನೆಗಳ ಆಳವು ನನಗೆ ಅಗಾಧವಾದುದೂ ದುರ್ಗಮವೂ ಆದುದೆನಿಸಿತು. ಮತ್ತೊಂದು ಕಡೆ, ಸುವಾರ್ತೆಯನ್ನೋದಿ ಮುಗಿಸಿ ಬದುಕಿನ ಬಗ್ಗೆ ಆಲೋಚಿಸಿದಾಗ ಎಲ್ಲವೂ ಅದೆಷ್ಟು ಸರಳವೂ ಸ್ಪಷ್ಟವೂ ಆಗಿ ಗೋಚರಿಸಿದ್ದವು! ಎಲ್ಲರೂ ನನ್ನ ಬಗ್ಗೆ ಪ್ರೀತಿಯಿಂದಿದ್ದರು, ಆತ್ಮೀಯತೆಯನ್ನು ತೋರಿಸುತ್ತಿದ್ದರು. ನಾನು ಪಾಠ ಹೇಳಿಕೊಡುವುದನ್ನು ಇನ್ನೂ ಮುಂದುವರಿಸಿದ್ದ ಸೋನ್ಯಾ ಕೂಡ ನನ್ನನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಂತೆ, ನನಗೆ ಕಾಟ ಕೊಡದ ಹಾಗೆ ಬೇರೆ ರೀತಿ ಕಾಣಿಸಿದಳು. ನಾನು ಅವರನ್ನು ಕಂಡಂತೆ ಅವರೂ ನನ್ನನ್ನು ಕಾಣುತ್ತಿದ್ದರು. ತಪ್ಪೊಪ್ಪಿಗೆಗಿಂತ ಮುಂಚೆ ಅವರ ಕ್ಷಮೆ ಬೇಡಿ, ನನ್ನ ಶತ್ರುಗಳ ಬಗ್ಗೆ ಆಲೋಚಿಸಿದಾಗ, ನನಗಿದ್ದುದು ಒಬ್ಬ ಶತ್ರುವೇ ಎಂಬುದು ನೆನಪಿಗೆ ಬಂತು; ಅವಳೆಂದರೆ ನಮ್ಮ ನೆರೆಯಲ್ಲಿಯೇ ಇದ್ದ ಒಬ್ಬ ಹುಡುಗಿ - ಒಂದು ವರ್ಷದ ಹಿಂದೆ ಅವಳ ಜೊತೆಯಿದ್ದಾಗ ನಾನವಳನ್ನು ತಮಾಷೆ ಮಾಡಿದ್ದೆ - ಆಮೇಲೆ ಅವಳು ನಮ್ಮ ಮನೆಗೆ ಬರುವುದನ್ನು ನಿಲ್ಲಿಸಿದ್ದಳು. ತಪ್ಪನ್ನು ಒಪ್ಪಿಕೊಂಡು ನನ್ನನ್ನು ಕ್ಷಮಿಸಬೇಕೆಂದು ಅವಳಿಗೊಂದು ಕಾಗದ ಬರೆದೆ. ಅವಳು ಉತ್ತರ ಬರೆದು ತಾನು ನನ್ನನ್ನು ಕ್ಷಮಿಸಿರುವುದಾಗಿಯೂ ನಾನವಳನ್ನು ಕ್ಷಮಿಸಬೇಕೆಂದೂ ಕೇಳಿಕೊಂಡಿದ್ದಳು. ಅವಳ ಸರಳ ಉತ್ತರವನ್ನು ಕಂಡು ನನಗೆ ಆನಂದವಾಯಿತು, ಅವಳ ಮಾತುಗಳಲ್ಲಿ ಆಳವಾದ ಕಕ್ಕುಲತೆ ಇದ್ದಂತೆ ಆ ಕ್ಷಣ

ಅನ್ನಿಸಿತು. ನನ್ನನ್ನು ಕ್ಷಮಿಸಬೇಕೆಂದು ನನ್ನ ಹಳೆಯ ದಾದಿಯನ್ನು ಕೇಳಿದಾಗ ಅವಳು ಅತ್ತೇಬಿಟ್ಟಳು. 'ಎಲ್ಲರೂ ನನ್ನ ಬಗ್ಗೆ ಇಷ್ಟೇಕೆ ಪ್ರೀತಿ ತೋರಿಸುತ್ತಾರೆ? ನಾನು ಅವರಿಗೆ ಅಂಥದ್ದೇನು ಮಾಡಿದ್ದೀನಿ?' ಎಂದು ಕೇಳಿಕೊಂಡೆ. ಸರ್ಗೀ ಮಿಖೈಲಿಚ್ ನೆನಪಾದರು, ಅವರ ಬಗ್ಗೆ ದೀರ್ಘ ಕಾಲ ಆಲೋಚಿಸಿದೆ. ಯೋಚಿಸದೆ ಇರಲು ನನಗೆ ಸಾಧ್ಯವಿರಲಿಲ್ಲ, ಈ ಆಲೋಚನೆಗಳು ಪಾಪಪೂರಿತವೆಂದು ನನಗನ್ನಿಸಲಿಲ್ಲ. ಆದರೆ ಅವರ ಬಗೆಗಿನ ಆಲೋಚನೆಗಳು ನಾನವರನ್ನು ಪ್ರೀತಿಸುತ್ತೇನೆಂಬ ಸಂಗತಿಯನ್ನು ಮೊದಲ ಬಾರಿಗೆ ಕಂಡುಕೊಂಡ ರಾತ್ರಿಯದಕ್ಕಿಂತ ಭಿನ್ನವಾಗಿದ್ದವು. ಅವರೀಗ ನನ್ನ ಅವಿಭಾಜ್ಯ ಅಂಗವೆಂಬಂತೆ ತೋರಿದರು, ನನ್ನ ಭವಿಷ್ಯದ ಯೋಜನೆಗಳಿಗೆಲ್ಲ ಅವರೂ ಪಾಲುದಾರರಾದರು. ಅವರ ಮುಂದೆ ನಾನು ಅನುಭವಿಸುತ್ತಿದ್ದ ಕೀಳರಿಮೆ ಈಗ ಪೂರ್ತಿ ಕಣ್ಮರೆಯಾಗಿತ್ತು; ಈಗ ಅವರಿಗೆ ಸಮನೆಂಬ ಭಾವನೆ ನನ್ನಲ್ಲಿ ಬೆಳೆದಿತ್ತು, ನಾನು ತಲುಪಿದ್ದ ನೈತಿಕ ಮಟ್ಟದಿಂದಾಗಿ ಅವರನ್ನು ಚೆನ್ನಾಗಿ ಅರ್ಥವಿಸಿಕೊಳ್ಳಬಲ್ಲವಳಾಗಿದ್ದೆ. ಅವರಲ್ಲಿ ವಿಚಿತ್ರವೆಂದು ಕಂಡುಬಂದಿದ್ದವೆಲ್ಲ ಈಗ ನನಗೆ ಸ್ಪಷ್ಟವಾದುವು. ನಿಜವಾದ ಸುಖವೆಂದರೆ ಬೇರೆಯವರಿಗಾಗಿ ಬದುಕುವುದು ಎಂಬ ಅವರ ಮಾತಿನ ಅರ್ಥ ನನಗೀಗ ಗೋಚರಿಸುತ್ತಿತ್ತು, ಅವರ ಅಭಿಪ್ರಾಯಕ್ಕೆ ನನ್ನ ಸಂಪೂರ್ಣ ಸಹಮತವಿತ್ತು. ನಮ್ಮ ಜೊತೆಗಿನ ಬಾಳು ಸಂತಸದಾಯಕವಾಗಿಯೂ ತೊಂದರೆಯಿಲ್ಲದೆಯೂ ಇರುವುದೆಂಬ ಭರವಸೆ ನನಗಿತ್ತು. ನಾನು ಎದುರು ನೋಡುತ್ತಿದ್ದುದು ವಿದೇಶಿ ಪ್ರವಾಸಕ್ಕಲ್ಲ, ಥಳುಕುಪಳಕಿನ ಸಮಾಜ ಜೀವನಕ್ಕಲ್ಲ, ಪ್ರದರ್ಶನಕ್ಕಲ್ಲ; ಅದು ಬೇರೊಂದು ಸನ್ನಿವೇಶಕ್ಕಾಗಿ - ಹಳ್ಳಿಯಲ್ಲಿನ ನಿರುಮ್ಮಳ ಸಾಂಸಾರಿಕ ಬದುಕಿಗಾಗಿ, ಅದರಲ್ಲಿನ ನಿರಂತರ ಆತ್ಮತ್ಯಾಗ, ನಿರಂತರವಾದ ಪರಸ್ಪರ ಪ್ರೀತಿ ಹಾಗೂ ನಿರಂತರವಾದ ಎಲ್ಲದರ ಹಿಂದೆಯೂ ಇರುವ ಕೃಪೆಯ ಕರುಣಾಹಸ್ತದ ಬಗೆಗಿನ ಕೃತಜ್ಞತೆಗಾಗಿ.

ನನ್ನ ಹುಟ್ಟುಹಬ್ಬದ ದಿನದಂದು ಪವಿತ್ರಭೋಜನ ಸ್ವೀಕಾರದ ನನ್ನ ಯೋಜನೆಯನ್ನು ಕಾರ್ಯಗತಗೊಳಿಸಿದೆ. ಅವತ್ತು ನಾನು ಚರ್ಚಿನಿಂದ ಮರಳಿದಾಗ, ನನ್ನ ಹೃದಯ ಸಂತಸದಿಂದ ಎಷ್ಟು ಹಗುರವಾಗಿತ್ತೆಂದರೆ, ಅದನ್ನು ನಾಶಮಾಡಿಬಿಡಬಲ್ಲ ಬದುಕು ಅಥವಾ ಯಾವುದೇ ಭಾವನೆ ನನ್ನಲ್ಲಿ ಭಯವನ್ನು ತರುತ್ತಿತ್ತು. ಮನೆಯ ಮುಂದಿನ ಮೆಟ್ಟಿಲುಗಳ ಬಳಿ ನಾವಿನ್ನೇನು ಗಾಡಿಯಿಂದ ಕೆಳಗಿಳಿಯಬೇಕು, ಆಗ ಸೇತುವೆಯ ಮೇಲೆ ಚಕ್ರಗಳ ಚೀತ್ಕಾರ ಕೇಳಿಸಿತು, ನೋಡಿದರೆ ಸರ್ಗೀ ಮಿಖೈಲಿಚ್ ನಮಗೆಲ್ಲ ಚಿರಪರಿಚಿತವಾಗಿದ್ದ ತಮ್ಮ ಗಾಡಿಯನ್ನು ತಾವೇ ಚಲಾಯಿಸಿಕೊಂಡು ಬರುತ್ತಿದ್ದರು. ನನ್ನನ್ನವರು ಅಭಿನಂದಿಸಿದರು, ಎಲ್ಲರೂ ನಾವು ನಡುಮನೆಗೆ ಹೋದೆವು. ನನಗವರ ಪರಿಚಯವಾದ ಕಾಲದಿಂದಲೂ ಇಲ್ಲದಿದ್ದ ಸಲಿಗೆ ಅವರ ಬಗ್ಗೆ ನನ್ನಲ್ಲುಂಟಾಗಿತ್ತು, ಅವತ್ತೆಲ್ಲ ನಾನು ನನ್ನ ಬಗ್ಗೆಯೇ ಆಲೋಚಿಸುತ್ತಿದ್ದೆ. ನನ್ನಲ್ಲಿ ಒಂದು ಹೊಸ ಬದುಕು ಹೊಕ್ಕಿತ್ತು, ಅವರಿಗೆ ತಿಳಿಯದಂತೆ, ಅವರಿಗೆ ಅರ್ಥವಾಗದಂತೆ. ಅವರೊಡನೆ ಮಾತನಾಡುವಾಗ ನನ್ನಲ್ಲಿ ಕಿಂಚಿತ್ತಾದರೂ ಮುಜುಗರವಾಗಲೀ ಆತಂಕವಾಗಲೀ

ಇರಲಿಲ್ಲ. ನನ್ನ ಈ ಭಾವನೆಗೆ ಕಾರಣವೇನೆಂಬುದು ಅವರಿಗೆ ತಿಳಿದಿರಬೇಕು, ಯಾಕಂದರೆ ಅವರು ನನ್ನ ಬಗ್ಗೆ ನುಡಿಗಳನ್ನು ಮೀರಿದ ವಾತ್ಸಲ್ಯ ಮತ್ತು ಮೃದುತೆಯನ್ನು ಹೊಂದಿದ್ದು ನನ್ನ ಬಗ್ಗೆ ಗೌರವಮಿಶ್ರಿತ ನಡವಳಿಕೆಯನ್ನು ತೋರಿದರು. ನಾನು ಪಿಯಾನೋ ಬಳಿ ಹೋದಾಗ, ಅವರು ಅದಕ್ಕೆ ಬೀಗಹಾಕಿ ಕೀಲಿಕೈಯನ್ನು ತಮ್ಮ ಕಿಸೆಯಲ್ಲಿರಿಸಿಕೊಂಡರು.

"ನಿನ್ನ ಈಗಿನ ಮನಃಸ್ಥಿತಿಯನ್ನು ಹಾಳುಮಾಡಿಕೊಳ್ಳಬೇಡ. ನಿನ್ನ ಹೃದಯದಲ್ಲಿಯೇ ಅತ್ಯಂತ ಮಧುರವಾದ ಸಂಗೀತ ತುಂಬಿಕೊಂಡಿದ್ದೀಯಲ್ಲ!" ಎಂದರು.

ಅವರ ಮಾತನ್ನು ಕೇಳಿ ನನ್ನಲ್ಲಿ ಕೃತಜ್ಞತೆ ತುಂಬಿ ಬಂತು, ಆದರೂ ನನ್ನೆದೆಯಲ್ಲಿ ಅಡಗಿರಬೇಕಾದ ಗುಟ್ಟು ಅವರಿಗೆ ಸುಲಭವಾಗಿ ಅರ್ಥವಾಗಿಬಿಟ್ಟದ್ದು ನನಗೆ ಅಷ್ಟೇನೂ ಸಂತಸ ತರಲಿಲ್ಲ. ಊಟ ಮಾಡುವಾಗ, ನನ್ನನ್ನು ಅಭಿನಂದಿಸಲು ಹಾಗೂ ಗುಡ್ ಬೈ ಹೇಳಲು ತಾವಿಲ್ಲಿಗೆ ಬಂದುದಾಗಿ ಹೇಳಿದರು; ತಾವು ಮಾರನೇ ದಿನ ಮಾಸ್ಕೋಗೆ ಹೋಗಬೇಕಾಗಿತ್ತಂತೆ. ಮಾತನಾಡುವಾಗ ಅವರು ಕಾತ್ಯಾಳ ಮುಖ ನೋಡುತ್ತಿದ್ದರು; ಆದರೆ ಒಮ್ಮೆ ನನ್ನ ಕಡೆ ಕಳ್ಳ ನೋಟ ಬೀರಿದಾಗ ಅದರಲ್ಲಿ ನನ್ನ ಮುಖದಲ್ಲಿ ನೋವಿನ ನೆರಳು ಕಾಣಿಸಬಹುದೇ ಎಂಬ ಭಯವನ್ನು ಹೊಂದಿರುವಂತೆ ತೋರಿತು. ಆದರೆ ನನಗೆ ಆಶ್ಚರ್ಯವೂ ಆಗಲಿಲ್ಲ, ತಳ್ಳಂಕವೂ ಉಂಟಾಗಲಿಲ್ಲ; ವಾಪಸ್ಸು ಬರುವುದು ತಡವಾಗುತ್ತದೆಯೇ ಎಂದೂ ನಾನು ಕೇಳಲಿಲ್ಲ. ಇದನ್ನವರು ಹೇಳುತ್ತಾರೆ, ಅವರು ಹೋಗುವುದೇ ಇಲ್ಲ ಎಂಬುದು ನನಗನ್ನಿಸಿತ್ತು. ನನಗಿದು ಗೊತ್ತಾದುದು ಹೇಗೆ? ಈಗಲೂ ನನಗೇ ಅದು ಅರ್ಥವಾಗುತ್ತಿಲ್ಲ; ಆದರೆ ಅವರು ಮುಂದೆ ಏನಾಗುತ್ತಾರೆ ಎಂಬುದೆಲ್ಲ ನನಗೆ ಆ ಮಹತ್ತರವಾದ ದಿನ ಗೊತ್ತಾಯಿತು. ಅದೊಂದು ಆನಂದ ತುಂಬಿದ ಕನಸು, ಮುಂದೆ ನಡೆಯುವುದೆಲ್ಲ ಈಗಾಗಲೇ ನಡೆದುಹೋಗಿ ಪರಿಚಿತವಾದುದು, ಅಷ್ಟೇ ಅಲ್ಲ ಅದೆಲ್ಲ ಮುಂದೆಯೂ ನಡೆಯಲಿವೆ, ಅದು ನನಗೆ ತಿಳಿದಿದೆ ಎಂದು ಅನ್ನಿಸಿತು.

ಊಟವಾದ ಬಳಿಕ ಅವರು ಹೊರಟು ಹೋಗುವ ಆತುರ ಹೊಂದಿದ್ದರು, ಆದರೆ ಚರ್ಚ್‌ಗೆ ಹೋಗಿ ಬಂದು ಕಾತ್ಯಾ ದಣಿದಿದ್ದುದರಿಂದ ಸ್ವಲ್ಪಹೊತ್ತು ಅಡ್ಡಾಗಲು ಹೋದದ್ದರಿಂದ, ಬೈ ಹೇಳಲು ಅವರು ಅವಳು ಏಳುವವರೆಗೂ ಕಾಯಬೇಕಾಯಿತು. ಪಡಸಾಲೆಯಲ್ಲಿ ಬಿಸಿಲು ಬಿದ್ದು ಹೊಳೆಯುತ್ತಿತ್ತು, ಹೀಗಾಗಿ ನಾವು ವರಾಂಡಕ್ಕೆ ಹೋದೆವು. ಕುಳಿತಾದ ಮೇಲೆ ತಕ್ಷಣವೇ, ನನ್ನ ಹೃದಯದಾಳದ ಬಯಕೆಯ ಗತಿ ಏನೆಂಬುದನ್ನು ನಿರ್ಧರಿಸಲು ನಾನು ಪ್ರಶಾಂತವಾಗಿ ಹೇಳಲುತೊಡಗಿದೆ. ನಾನು ಮಾತಾಡತೊಡಗಿದ್ದು ಬೇಗಲೂ ಅಲ್ಲ, ತಡವೂ ಅಲ್ಲ, ನಾವು ಕೂತಾದ ಮಾರನೆಯ ಕ್ಷಣವೇ. ನಾನು ಹೇಳಬೇಕಾದುದನ್ನು ಹೇಳಲು ಯಾವುದೇ ಅಡ್ಡಿ ಉಂಟಾಗುವ ಮುನ್ನ. ನನ್ನ ಮಾತು, ಪ್ರಶಾಂತತೆ, ಮಾತಿನ ನಿರ್ಧಾರ-ಖಚಿತತೆಗಳು ಎಲ್ಲಿಂದ ಬಂತೋ ನಾನರಿಯೆ. ನನ್ನ ಸಂಕಲ್ಪದ ಹೊರತಾದ ಯಾವುದೋ ಸ್ವತಂತ್ರ ಸತ್ವವು ನನ್ನ ತುಟಿಗಳ

ಮೂಲಕ ಹೊಮ್ಮುತ್ತಿದೆಯೇನೋ ಅನ್ನುವ ಹಾಗೆ. ಅವರು ನನ್ನೆದುರಿಗೆ ವರಾಂಡದ ಕಟಕಟೆಗೆ ತಮ್ಮ ಮೊಳಕೈಗಳನ್ನೂರಿ ಕೂತಿದ್ದರು; ತಮ್ಮೆಡೆಗೆ ಲೈಲಕ್ ರೆಂಬೆಯೊಂದನ್ನು ಎಳೆದುಕೊಂಡು ತಮ್ಮ ಕೈಗಳ ಮೇಲೆ ತಲೆಯಾನಿಸಿಕೊಂಡಿದ್ದರು. ಅವರನ್ನು ನೋಡಿದರೆ ಅವರಲ್ಲಿ ಪ್ರಕಾಂಡ ನಿರಾಳತೆ ಅಥವಾ ದೃಢ ಭಾವನೆ ತುಂಬಿಕೊಂಡಿದ್ದಂತೆ ತೋರುತ್ತಿತ್ತು.

"ನೀವು ಯಾಕೆ ಹೋಗುತ್ತಿದ್ದೀರಿ?" ಎಂದೆ ನಾನು ಅರ್ಥವತ್ತಾಗಿ, ಉದ್ದೇಶ ಪೂರ್ವಕವಾಗಿ, ಅವರ ಮುಖವನ್ನೇ ನೇರವಾಗಿ ದಿಟ್ಟಿಸುತ್ತ.

ತಕ್ಷಣವೇ ಅವರು ಉತ್ತರಿಸಲಿಲ್ಲ.

"ಏನೋ ವ್ಯವಹಾರ!" ಎಂದವರು ಮಿದುವಾಗಿ ಹೇಳಿಕೊಂಡು ಕಣ್ಣು ಕೆಳಗೆ ಹಾಕಿದರು.

ಅಂಥ ನೇರವಾದ ಪ್ರಶ್ನೆಗೆ ಉತ್ತರವಾಗಿ ನನಗೆ ಸುಳ್ಳು ಹೇಳುವುದು ಅವರಿಗೆ ಎಷ್ಟು ಕಷ್ಟವಾಗುತ್ತಿದೆಯೆಂಬುದು ನನಗೆ ಅರ್ಥವಾಯಿತು.

"ಇಲ್ಲಿ ಕೇಳಿ, ಇವತ್ತು ನನಗೆ ಎಂಥ ದಿನ ಎಂಬುದು ನಿಮಗೆ ಗೊತ್ತಿದೆ, ಯಾವ ಯಾವ ಕಾರಣಗಳಿಂದಾಗಿ ಮುಖ್ಯ ಅನ್ನೋದು. ನಾನು ನಿಮ್ಮನ್ನು ಕೇಳ್ತಿರೋದು ನಿಮ್ಮ ವ್ಯವಹಾರಗಳಲ್ಲಿ ನನಗೆ ಆಸಕ್ತಿ ಇದೆ ಅನ್ನೋ ಕಾರಣಕ್ಕಲ್ಲ (ನಾನು ನಿಮಗೆ ಆತ್ಮೀಯಳಾಗಿದ್ದೇನೆ, ನಿಮಗೆ ನನ್ನ ಕಂಡರೆ ಪ್ರೀತಿ ಅನ್ನುವುದು ಗೊತ್ತಿದೆ), ನಾನು ಕೇಳ್ತಿರೋದು ನನಗೆ ಉತ್ತರ ತಿಳೀಬೇಕು ಅನ್ನೋ ಕಾರಣದಿಂದ. ಈಗ ಹೇಳಿ, ಯಾಕೆ ಹೋಗ್ತಿದ್ದೀರಿ?"

"ನಿನಗೆ ನಿಜವಾದ ಕಾರಣ ಹೇಳೋದಕ್ಕೆ ನಂಗೆ ತುಂಬ ಕಷ್ಟವಾಗತ್ತೆ. ಈ ವಾರವೆಲ್ಲ ನನಗೆ ನಿನ್ನ ಬಗ್ಗೆ ಮತ್ತು ನನ್ನ ಬಗ್ಗೆಯೇ ಧ್ಯಾನ. ಅದಕ್ಕೇ ಹೋಗೋದಕ್ಕೆ ನಿರ್ಧಾರ ಮಾಡಿದ್ದೀನಿ. ಕಾರಣ ನಿನಗೇ ಗೊತ್ತಿದೆ. ನಿನಗೆ ನನ್ನ ಬಗ್ಗೆ ಕಾಳಜಿ ಇದ್ದರೆ ನೀನು ಪ್ರಶ್ನೆಗಳನ್ನು ಕೇಳ್ಬಾರದು" ಎಂದು ತಮ್ಮ ಹಣೆಯುಜ್ಜಿಕೊಳ್ಳುತ್ತ ಕೈ ಮೇಲೆತ್ತಿದರು. "ನಂಗೆ ಹೇಳೋಕೆ ಕಷ್ಟ, ಆದ್ರೆ ನಿಂಗೆ ಅರ್ಥವಾಗತ್ತೆ."

ನನ್ನ ಹೃದಯ ಮಿಡಿತ ಜೋರಾಯಿತು.

"ನನಗೆ ಅರ್ಥವಾಗ್ತಿಲ್ಲ. ಅರ್ಥಮಾಡಿಕೊಳ್ಳಲಾರೆ! ನೀವು ಹೇಳಲೇಬೇಕು. ದೇವರ ಮೇಲಾಣೆ, ಇವತ್ತು ನಿಮಗೆ ಅನ್ನಿಸಿದ್ದನ್ನ ಹೇಳಲೇಬೇಕು, ನಾನು ನಿಧಾನವಾಗಿ ಕೇಳ್ತೀನಿ" ಎಂದೆ ನಾನು.

ಅವರು ತಮ್ಮ ಭಂಗಿಯನ್ನು ಬದಲಾಯಿಸಿದರು, ನನ್ನ ಕಣ್ಣು ಹಾಯಿಸಿ ಮತ್ತೆ ಲೈಲಕ್ ರೆಂಬೆಯನ್ನೆಳೆದುಕೊಂಡರು. ಕೊಂಚ ಹೊತ್ತು ಮೌನವಾಗಿದ್ದ ಬಳಿಕ, ಸ್ಥಿರವಾಗಿರಲು ಹೆಣಗುತ್ತಿದ್ದ ದನಿಯಿಂದ ಅವರೆಂದರು:

"ಹೂ, ಅದೊಂದು ಕೆಲಸಕ್ಕೆ ಬಾರದ ವ್ಯವಹಾರ, ಅದನ್ನು ಹೇಗೆ ಹೇಳೋದೋ ಗೊತ್ತಾಗ್ತಿಲ್ಲ. ಆದರೂ ಹೇಳಕ್ಕೆ ಪ್ರಯತ್ನಪಡ್ತೀನಿ", ಮೈನೋವೇನೋ ಎಂಬಂತೆ ಮುಖ ಕಿವಿಚಿಕೊಳ್ಳುತ್ತ.

"ಹ್ಞೂಂ?" ಎಂದೆ ನಾನು.

"ಒಬ್ಬ ವ್ಯಕ್ತಿ ಇದಾನೆ ಅಂತ ಅಂದ್ಕೋ - ಅವನನ್ನ ಎ ಅಂತ ಕರೆಯೋಣ - ಅವನಿಗೆ ಆಗಲೇ ಸಾಕಷ್ಟು ವಯಸ್ಸಾಗಿದೆ; ಇನ್ನೊಬ್ಬ ವ್ಯಕ್ತಿ ಹೆಂಗಸು, ಅವಳನ್ನ ಬಿ ಅನ್ನೋಣ, ಅವಳಿನ್ನೂ ಚಿಕ್ಕೋಳು, ಜೀವನ ಅಂದ್ರೆ ಏನು, ಪ್ರಪಂಚ ಅಂದ್ರೆ ಏನೂಂತ ಇನ್ನೂ ತಿಳೀದೇ ಇರೋ, ಸುಖವಾಗಿ ಬೆಳೆದ ಮುಗ್ಧೆ. ಕುಟುಂಬದಲ್ಲಿನ ನಾನಾ ಪರಿಸ್ಥಿತಿಗಳ ಕಾರಣದಿಂದ ಅವರಿಬ್ಬರೂ ಒಟ್ಟಿಗೇ ಬರ್ತಾರೆ, ಅವನೋ ಅವಳನ್ನ ಮಗಳ ಹಾಗೆ ಪ್ರೀತಿಸೋನು, ತನ್ನ ಪ್ರೀತಿಯ ಸ್ವರೂಪ ಬದಲಾಗತ್ತೆ ಅನ್ನೋ ಭಯ ಅವನಿಗಿಲ್ಲ."

ಅವರು ನಿಲ್ಲಿಸಿದರು, ನಾನು ಮಾತಲ್ಲಿ ಮಧ್ಯೆ ತಲೆ ಹಾಕಲಿಲ್ಲ.

"ಆದರೆ ಬಿ ತೀರ ಚಿಕ್ಕೋಳು, ಬದುಕು ಅಂದ್ರೆ ಅವಳಿಗಿನ್ನೂ ಮಕ್ಕಳಾಟ" ಎಂದು ಮತ್ತೆ ಆರಂಭಿಸಿ ಒಂದೇ ಸಮನೆ ಯಾವುದೋ ನಿರ್ಧಾರದಿಂದ ನನ್ನ ಕಡೆ ನೋಡದೆಯೇ ಹೇಳುತ್ತ ಹೋದರು: "ಅವಳನ್ನ ಬೇರೆ ರೀತಿ ಪ್ರೀತಿಸೋದು ಸಾಧ್ಯ ಅನ್ನೋದು, ಇದು ಅವಳಿಗೆ ಖುಷಿ ತರತ್ತೆ ಅನ್ನೋದು ಅವನಿಗೆ ಮರ್ತೇ ಹೋಯ್ತು. ಅವನೊಂದು ತಪ್ಪು ಮಾಡ್ದ, ತನ್ನಲ್ಲಿ ಅವಳ ಬಗ್ಗೆ ಮತ್ತೊಂದು ಬಗೆಯ ಭಾವನೆ ಬರ್ತಾ ಇದೆ ಅನ್ನೋದು ಅವನಿಗೆ ಇದ್ದಕ್ಕಿದ್ದ ಹಾಗೆಯೇ ಅರಿವಿಗೆ ಬಂದು ಒಂದು ರೀತಿ ಅಪರಾಧಪ್ರಜ್ಞೆ ಕಾಡಕ್ಕೆ ಶುರುವಾಗಿ ಅವನಿಗೆ ಭಯವಾಯ್ತು. ತಮ್ಮ ಸ್ನೇಹಪೂರ್ಣ ಸಂಬಂಧ ಹಾಳಾಗಬಹುದು ಅನ್ನೋ ಭಯ; ಹಾಗಾಗೋದಕ್ಕೆ ಮುಂಚೆಯೇ ದೂರ ಹೊರಟುಹೋಗಕ್ಕೆ ಅವನು ನಿರ್ಧಾರ ಮಾಡ್ದ." ಅವರು ಇದನ್ನು ಹೇಳುತ್ತಿರುವಾಗ, ಮತ್ತೆ ಅವರು ತಮ್ಮ ಕಣ್ಣುಗಳನ್ನುಜ್ಜಿಕೊಳ್ಳತೊಡಗಿದರು, ಏನೋ ಒಂದು ನೆವದಿಂದ ಕಣ್ಣುಗಳನ್ನು ಮುಚ್ಚಿಕೊಳ್ಳಲು.

"ಬೇರೆ ಥರ ಪ್ರೀತಿಸೋಕೆ ಅವರಿಗೆ ಯಾಕೆ ಭಯವಾಯ್ತು?" ಎಂದು ಕೇಳಿದೆ ನಾನು ಮಿದುವಾಗಿ; ನನ್ನ ಭಾವನೆಗಳನ್ನು ಅದುಮಿಕೊಂಡು ಸಮಧ್ವನಿಯಿಂದ ಮಾತನಾಡಿದೆ. ನಾನು ಗಂಭೀರವಾಗಿಲ್ಲವೆಂದು ಅವರಿಗನ್ನಿಸಿದಂತೆ ಕಾಣಿಸಿತು; ತಮಗೆ ಅದರಿಂದ ನೋವಾಗಿದೆ ಎಂಬಂತೆ ಅದಕ್ಕೆ ಉತ್ತರ ಕೊಟ್ಟರು.

"ನೀನು ಚಿಕ್ಕೋಳು, ನಾನು ಚಿಕ್ಕೋನಲ್ಲ. ನಿನಗೆ ಬೇಕಾದದ್ದು ತಮಾಷೆ, ನನಗೆ ಬೇಕಾದದ್ದು ಮತ್ತೇನೋ. ನೀನು ತಮಾಷೆ ಮಾಡಿಕೋ, ಆದರೆ ನನ್ನ ಬಗ್ಗೆ ಅಲ್ಲ. ಹಾಗೇನಾದ್ರೂ ಮಾಡಿದ್ರೆ, ನೀನು ಪಶ್ಚಾತ್ತಾಪಪಡಬೇಕಾಗತ್ತೆ - ಎ ಹೀಗಂತ ಹೇಳ್ದ. ಆದರೆ ಇದೆಲ್ಲ ಅರ್ಥವಿಲ್ಲದ್ದು, ನಾನು ಯಾಕೆ ಹೋಗ್ತಾ ಇದ್ದೀನಿ ಅನ್ನೋದು ನಿನಗೇ

ಗೊತ್ತಿದೆ. ಇನ್ನು ಈ ಮಾತು ಮುಂದುವರೆಸೋದು ಬೇಡ, ದಯವಿಟ್ಟು" ಎಂದರು.

"ಇಲ್ಲ! ಇಲ್ಲ! ಮುಂದೆ ಮಾತಾಡ್ಲೇಬೇಕು. ಅವರಿಗೆ ಅವಳ ಮೇಲೆ ಪ್ರೀತಿ ಇತ್ತೋ ಇಲ್ವೋ?" ನನ್ನ ಧ್ವನಿಯಲ್ಲಿ ಅಳು ಇಣುಕುತ್ತಿತ್ತು.

ಅವರು ಉತ್ತರಿಸಲಿಲ್ಲ.

"ಅವರಿಗೆ ಅವಳ ಮೇಲೆ ಪ್ರೀತಿ ಇಲ್ದೇ ಇದ್ರೆ, ಅವಳನ್ನು ಮಗು ಥರ ಕಂಡು ಯಾಕೆ ನಟನೆ ಮಾಡ್ಬೇಕಾಗಿತ್ತು?" ಎಂದು ಪ್ರಶ್ನಿಸಿದೆ ನಾನು.

"ನಿಜ, ಎ ತಪ್ಪಾಗಿ ನಡಕೊಂಡ; ಆದರೆ ಇದೆಲ್ಲ ಕೊನೆಗೊಂಡು ಅವರಿಬ್ಬರೂ ಸ್ನೇಹಿತರಾಗಿಯೇ ಬೇರೆ ಬೇರೆಯಾದ್ರು" ಎಂದರು ನನ್ನ ಮಾತುಗಳನ್ನು ತಡೆದು.

"ಇದಂತೂ ಭಯಂಕರವಾದ್ದು! ಈ ಕತೆಗೆ ಬೇರೆ ಕೊನೆ ಇಲ್ಲವಾ?" ಎಂದೆ ನಾನು ತುಂಬ ಪ್ರಯಾಸದಿಂದ, ಆಮೇಲೆ ನಾನು ಹೇಳಿದ್ದರ ಬಗ್ಗೆ ನನಗೇ ಭಯ ಅನ್ನಿಸಿತು.

"ಇದೆ" ಎಂದರು, ಅವರ ಮುಖದಲ್ಲಿ ಭಾವನೆಯ ಪೂರವೇ ಹರಿಯಿತು, ನನ್ನ ಕಡೆ ನೇರವಾಗಿ ನೋಡುತ್ತ ಹೇಳಿದರು: "ಇದಕ್ಕೆ ಎರಡು ರೀತೀಲಿ ಮುಕ್ತಾಯ ಇರ್ಬಹುದು. ಆದರೆ, ದಯವಿಟ್ಟು ನಾನು ಹೇಳೋದನ್ನು ನಿಧಾನವಾಗಿ ಕೇಳು, ಮಧ್ಯೆ ಬಾಯಿ ಹಾಕಬೇಡ" ಎಂದವರು ಎದ್ದು ನಿಂತರು, ಅವರ ಮುಖದಲ್ಲಿ ಮುಗುಳ್ನಗು ಇತ್ತು, ಆದರದು ದುಃಖದಿಂದ ಭಾರವಾಗಿತ್ತು. "ಕೆಲವರ ಪ್ರಕಾರ, ಎ ಹುಚ್ಚಾಗಿ ಆ ಹುಡುಗಿಯನ್ನ ಪ್ರೀತಿಸಿ ಹಾಗಂತ ಅವಳಿಗೆ ಹೇಳ್ದ. ಅದನ್ನ ಕೇಳಿ ಅವಳು ನಕ್ಕುಬಿಟ್ಟಳು. ಅವಳಿಗೆ ಅದೆಲ್ಲ ತಮಾಷೆಯಾಗಿ ಕಂಡ್ತು; ಆದರೆ ಅವನಿಗೋ ಬದುಕು ಸಾವಿನ ಪ್ರಶ್ನೆ."

ನಾನು ಭಯದಿಂದ ನಡುಗಿ ಅವರ ಮಾತನ್ನು ತಡೆಯಬೇಕೆಂದುಕೊಂಡೆ, ಹಾಗೆಲ್ಲ ನನ್ನ ಮುಂದೆ ಮಾತಾಡಬೇಡಿ ಅಂತ ಹೇಳಬೇಕು ಅಂತ ಅಂದುಕೊಂಡೆ. ಆದರೆ ಅವರದನ್ನು ತಡೆದು ತಮ್ಮ ಕೈಯನ್ನು ನನ್ನದರ ಮೇಲಿಟ್ಟರು.

"ಸ್ವಲ್ಪ ತಾಳು" ಎಂದರವರು, ಅವರ ಧ್ವನಿ ನಡುಗುತ್ತಿತ್ತು. "ಮತ್ತೊಂದು ಮುಕ್ತಾಯ ಅಂದ್ರೆ, ಅವಳಿಗೆ ಅವನ ಬಗ್ಗೆ ಕನಿಕರ ಉಂಟಾಯ್ತು, ಆ ಪುಟ್ಟ ಹುಡುಗಿ, ಪ್ರಾಪಂಚಿಕ ಅನುಭವ ಇಲ್ಲದ್ದರಿಂದ, ತಾನೂ ಅವರನ್ನು ಪ್ರೀತಿಸಬಹುದು ಅಂತ ಅನ್ನಿಸ್ತು, ಅವನನ್ನು ಮದುವೆಯಾಗಕ್ಕೆ ಒಪ್ಪಿಕೊಂಡಳು. ಅವನು ತನ್ನ ಹುಚ್ಚಿನಲ್ಲಿ ಅದನ್ನ ನಂಬಿಬಿಟ್ಟ, ತನ್ನ ಬದುಕು ಮತ್ತೆ ಹೊಸದಾಗಿ ಆರಂಭವಾಗಬಹುದೂಂತ ಅಂದುಕೊಂಡ. ಆದರೆ ತಾನು ಅವನನ್ನ ಮತ್ತು ಅವಳು ತನ್ನನ್ನ ಮೋಸಗೊಳಿಸಿದಂತೆ ಅವಳಿಗೆ ಅನ್ನಿಸ್ತು. ... ಈಗ ಆ ವಿಷಯಾನ ಇಲ್ಲಿಗೇ ಪೂರ್ತಿ ನಿಲ್ಲಿಸಿಬಿಡೋಣ" ಎಂದು ತಮ್ಮ ಮಾತನ್ನು ಮುಗಿಸಿದರು. ಮುಂದೆ ಮಾತನಾಡಲು ಅವರಿಗೆ ಸಾಧ್ಯವಾಗಲಿಲ್ಲ: ಆಮೇಲೆ ಎದ್ದು ನಿಂತು ನನ್ನ ನೋಡತೊಡಗಿದರು.

ಮಾತನ್ನ ಅಲ್ಲಿಗೇ ನಿಲ್ಲಿಸಿಬಿಡೋಣ ಅಂತ ಅವರು ಹೇಳಿದ್ದರೂ, ಅವರ

ಅಸ್ತಿತ್ವವೆಲ್ಲ ನನ್ನ ಉತ್ತರಕ್ಕಾಗಿ ಕಾಯುತ್ತಿದೆ ಅಂತ ಅನ್ನಿಸಿತು. ನಾನು ಮಾತನಾಡಲು ಪ್ರಯತ್ನಿಸಿದೆ, ಆದರೆ ನನ್ನ ಹೃದಯದಲ್ಲಿನ ನೋವು ನನ್ನನ್ನು ಮೂಕಳನ್ನಾಗಿಸಿತ್ತು. ಅವರತ್ತ ದೃಷ್ಟಿ ಹಾಯಿಸಿದೆ; ಅವರ ಮುಖ ಬಣ್ಣಗೆಟ್ಟಿತ್ತು, ಕೆಳದುಟಿ ಕಂಪಿಸುತ್ತಿತ್ತು. ಅವರನ್ನು ಕಂಡು ನನಗೆ ಅಯ್ಯೋ ಅನ್ನಿಸಿತು. ನನ್ನನ್ನು ಹಿಡಿದಿಟ್ಟಿದ್ದ ಮೌನದ ಕಟ್ಟನ್ನು ಬಹು ಪ್ರಯಾಸದಿಂದ ಹರಿದು ನಾನು ತೀರ ಕೆಳ ದನಿಯಲ್ಲಿ ಮಾತನಾಡತೊಡಗಿದೆ, ಎಲ್ಲಿ ಮುಂದುವರೆಸಲಾಗುವುದಿಲ್ಲವೋ ಎನ್ನುವ ಭಯ ನನ್ನನ್ನು ಕಾಡಿತು..

"ಈ ಕತೆಗೆ ಮೂರನೇ ಮುಕ್ತಾಯವೂ ಇದೆ" ಎಂದೆ ನಾನು. ಆಮೇಲೆ ಸ್ವಲ್ಪ ತಡೆದೆ, ಆದರೆ ಅವರೇನೂ ಹೇಳಲಿಲ್ಲ. "ಮೂರನೇ ಮುಕ್ತಾಯ ಅಂದ್ರೆ, ಅವನು ಅವಳನ್ನು ಪ್ರೀತಿಸಿರಲೇ ಇಲ್ಲ, ಅವಳನ್ನು ನೋಯಿಸಿದ್ದ, ಅಷ್ಟೆ, ನೋಯಿಸಿದ್ದ, ತಾನು ಮಾಡ್ತಾ ಇರೋದು ಸರಿ ಅಂತ ಅಂದ್ಕೊಂಡಿದ್ದ. ಹಾಗಾಗಿ ಅವಳನ್ನ ತೊರೆದ, ವಾಸ್ತವವಾಗಿ ಅವನಿಗೆ ತನ್ನ ಬಗೆ ಹೆಮ್ಮೆ. ನಟನೆ ಮಾಡ್ತಾ ಇರೋದು ನೀವು, ನಾನಲ್ಲ; ನಾವು ಮೊದಲ ದಿನ ಕಂಡಾಗ್ಲೇ ನನಗೆ ನಿಮ್ಮ ಮೇಲೆ ಪ್ರೀತಿ ಉಂಟಾಯ್ತು" ಎಂದೆ, ಪ್ರೀತಿ ಎಂಬ ಪದವನ್ನು ಪುನರುಚ್ಚರಿಸಿದಾಗ ನನ್ನ ಮೆಲುವಾದ ಒಳದನಿ ನನಗೆ ಅರಿವಿಲ್ಲದೆಯೇ ಬದಲಾಗಿ ಜೋರಾಗಿ ಕೂಗಿದೆ, ಅದರಿಂದ ನನಗೇ ಭಯವಾಯಿತು.

ನನ್ನ ಮುಂದವರು ನಿರ್ವಿಣ್ಣರಾಗಿ ನಿಂತಿದ್ದರು, ಅವರ ತುಟಿಗಳು ಕಂಪಿಸುವುದು ತೀವ್ರವಾಯಿತು, ಅವರ ಕೆನ್ನೆಯ ಮೇಲೆ ಎರಡು ಹನಿ ಕಣ್ಣೀರು ಇಳಿದುಬಂತು.

"ಅದು ಸರಿಯಲ್ಲ!" ಎಂದು ಚೀರುವಂತೆ ಹೇಳಿದೆ, ನನ್ನ ಗಂಟಲು ಕೋಪದ ಕಣ್ಣೀರಿನಿಂದ ಗದ್ಗದಗೊಂಡಿತು. "ಹೀಗ್ಯಾಕೆ ಮಾಡ್ತೀರಿ?" ಎಂದು ಕೂಗಿದೆ, ಅವರಿಂದ ದೂರ ಹೋಗಲು ಮೇಲೆದ್ದೆ.

ಆದರೆ ಅವರು ನನ್ನನ್ನು ದೂರ ಹೋಗಲು ಬಿಡಲಿಲ್ಲ. ಅವರ ತಲೆ ನನ್ನ ಮೊಣಕಾಲುಗಳ ಮೇಲೆ ಊರಿತ್ತು, ಇನ್ನೂ ನಡುಗುತ್ತಿದ್ದ ನನ್ನ ಕೈಗಳ ಮೇಲೆ ಅವರ ತುಟಿಗಳು ಮುತ್ತಿಕ್ಕುತ್ತಿದ್ದವು, ಆ ಕೈಗಳು ಅವರ ಕಣ್ಣೀರಿನಿಂದ ತೋಯುತ್ತಿತ್ತು. "ಅಯ್ಯೋ ದೇವರೆ, ಈ ವಿಷಯ ಮೊದಲೇ ಗೊತ್ತಿದ್ದಿದ್ದರೆ" ಎಂದು ಪಿಸುಗುಟ್ಟಿದರು.

"ಯಾಕೆ? ಯಾಕೇಂತ?" ಎಂದು ಪ್ರಶ್ನಿಸಿದೆ. ನನ್ನ ಹೃದಯದಲ್ಲೀಗ ಸಂತಸ ಮಡುಗಟ್ಟಿತ್ತು, ಇನ್ನೇನು ಪೂರ್ತಿ ಕಣ್ಮರೆಯಾಯಿತು ಎಂದು ಅಂದುಕೊಂಡಿದ್ದ ಸಂತಸ ಮತ್ತೆ ಮರಳಿತ್ತು.

ಐದು ನಿಮಿಷಗಳ ತರುವಾಯ ಸೋನ್ಯಾ ಕಾತ್ಯಾಳಿದ್ದ ಕೋಣೆಗೆ ಕಡೆಗೆ ಜೋರಾಗಿ ಮೆಟ್ಟಿಲು ಹತ್ತಿ ಹೋದಳು, ಸರ್ಗೀ ಮಿಖೈಲಿಚ್ ಅವರನ್ನು ಮದುವೆಯಾಗಕ್ಕೆ ಮಾಷಾ ಒಪ್ಪಿದಾಳೆ ಎಂಬ ಘೋಷಣೆ ಮಾಡುತ್ತ.

## 5

ನಮ್ಮ ಮದುವೆಯನ್ನು ಮುಂದೂಡಲು ಯಾವುದೇ ಕಾರಣಗಳಿರಲಿಲ್ಲ, ಜೊತೆಗೆ ಅದು ತಡವಾಗುವುದು ನನಗಾಗಲೀ ಅವರಿಗಾಗಲೀ ಇಷ್ಟವಿರಲಿಲ್ಲ. ಮದುವೆ ಜವಳಿಯನ್ನು ಖರೀದಿಸಲು ನಾವು ಮಾಸ್ಕೋಗೆ ಹೋಗಬೇಕೆಂದು ಕಾತ್ಯಾ ಯೋಚಿಸಿದ್ದು ನಿಜ, ಅವರ ತಾಯಿಯೂ ಮದುವೆಗೆ ಮುಂಚೆ ಹೊಸ ಗಾಡಿಯನ್ನು ಮಾಡಿಸಲು, ಪೀಠೋಪಕರಣಗಳನ್ನು ಸಿದ್ಧಪಡಿಸಿಕೊಳ್ಳಲು ಹಾಗೂ ಮನೆಯ ಗೋಡೆಗಳಿಗೆಲ್ಲ ಹೊಸ ಪೇಪರ್ ಅಂಟಿಸಲು ಒತ್ತಾಯಿಸಿದ್ದರು. ಆದರೆ ನಾವಿಬ್ಬರೂ ಈ ವಿಷಯದಲ್ಲಿ ಒಮ್ಮತದಿಂದಿದ್ದೆವು: ಇವೆಲ್ಲ ಅನಿವಾರ್ಯವೇ ಆದರೆ ಮದುವೆ ನಂತರ ಮಾಡಬೇಕು, ನನ್ನ ಹುಟ್ಟುಹಬ್ಬವಾದ ಹದಿನೈದು ದಿನಗಳೊಳಗೆ - ಸರಳವಾಗಿ, ಹೊಸಬಟ್ಟೆಗಳಿಲ್ಲದೆ, ಔತಣಕೂಟವಿಲ್ಲದೆ, ಗಣ್ಯರನ್ನ ಆಹ್ವಾನಿಸದೆ, ಊಟ ಶಾಂಪೇನ್‌ಗಳಿಲ್ಲದೆ, ಮದುವೆಯ ಇತರ ಸಾಂಪ್ರದಾಯಿಕ ಲಕ್ಷಣಗಳಾವುವೂ ಇಲ್ಲದೆ - ಮದುವೆ ನಡೆಯಬೇಕೆಂಬುದು ನಮ್ಮ ಅನಿಸಿಕೆ. ಸುಮಾರು ಮೂವತ್ತು ಸಾವಿರ ರೂಬಲ್‌ಗಳ ವೆಚ್ಚದಲ್ಲಿ ತಮ್ಮ ಮದುವೆ ನಡೆಯುವಂತೆ. ಈ ಮದುವೆಯಲ್ಲಿ ಮಂಗಳವಾದ್ಯಗಳಿರುವುದಿಲ್ಲ, ಸಾಮಾನುಗಳ ಬೆಟ್ಟಗಳಿರುವುದಿಲ್ಲ, ಮನೆಯನ್ನೆಲ್ಲ ದುರಸ್ತಿ ಮಾಡಿಸುವುದಿಲ್ಲ ಎಂಬುದರಿಂದ ತಮ್ಮ ತಾಯಿಗೆ ತುಂಬ ಅಸಮಾಧಾನವಾಗಿದೆ ಎಂಬುದನ್ನವರು ಹೇಳಿದರು. ಮರ್ಯುಷ್ಕಾ ಜೊತೆ ಅವರು ಉಗ್ರಾಣದ ಬೀರುಗಳಲ್ಲಿ ಏನನ್ನೋ ಹುಡುಕಾಡುತ್ತ, ಕಾರ್ಪೆಟ್‌ಗಳು, ಪರದೆಗಳು ಹಾಗೂ ಪಾತ್ರೆಗಳು ಇವೆಲ್ಲ ನಮ್ಮ ಸುಖಸಂಸಾರಕ್ಕೆ ಅತ್ಯವಶ್ಯಕ ಎಂಬಂತೆ ನಡೆಸಿದ ಗಂಭೀರ ಮಾತುಕತೆಯನ್ನೆಲ್ಲ ನನ್ನ ಮುಂದೆ ವಿವರಿಸಿದರು. ಇನ್ನು ನಮ್ಮ ಮನೆಯಲ್ಲಾದರೋ, ನಮ್ಮ ಹಳೆಯ ದಾದಿ ಕುಜ್ಮಿನಿಚ್ನ ಜೊತೆಯಲ್ಲಿ ಕಾತ್ಯಾ ಕೂಡ ಇದನ್ನೇ ಮಾಡಿದ್ದಳು. ಈ ವಿಷಯದಲ್ಲಿ ಕಾತ್ಯಾಳ ಜೊತೆ ಹಗುರವಾಗಿ ವರ್ತಿಸುವುದು ಸಾಧ್ಯವೇ ಇರಲಿಲ್ಲ. ನಮ್ಮ ಸ್ಥಿತಿಯಲ್ಲಿರುವವರು ಮಾಡುವಂತೆಯೇ ನಾವೂ ಬರೀ ಭಾವನಾತ್ಮಕ ಗಾಳಿಗೋಪುರದಲ್ಲಿ ಕೂತು ನಮ್ಮ ಭವಿಷ್ಯದ ಬಗ್ಗೆ ಮಾತಾಡುತ್ತಿದ್ದೇವೆ, ಆದರೆ ನಮ್ಮ ನಿಜವಾದ ಸುಖವು ಆಧರಿಸಿರುವುದು ಟೇಬಲ್ ಕ್ಲಾತ್‌ಗಳ ಹಾಗೂ ಕರವಸ್ತ್ರಗಳ ಅಂಚನ್ನು ಹೊಲಿಯುವುದರಲ್ಲಿಯೂ ನಮ್ಮ ಒಳ ಉಡುಪುಗಳ ನಿಖರವಾದ ಅಳತೆಯಲ್ಲಿಯೂ ಅಲ್ಲ ಎಂಬುದು ಅವಳ ನಿಶ್ಚಿತ ಅಭಿಪ್ರಾಯ. ಪ್ರತಿನಿತ್ಯ ಹಲವಾರು ಸಲ ಅಲ್ಲಿ ಇಲ್ಲಿ ಏನೇನು ನಡೆಯುತ್ತಿದೆ ಎಂಬುದರ ಬಗ್ಗೆ ಎರಡೂ ಮನೆಗಳ ನಡುವೆ ರಹಸ್ಯ ವರದಿಗಳು ಹೋಗುತ್ತಿದ್ದವು. ಹೊರನೋಟಕ್ಕೆ ಕಾತ್ಯಾ ಮತ್ತು ಅವರ ತಾಯಿಯ ನಡುವಣ ಬಾಂಧವ್ಯ ಮಧುರವಾಗಿದ್ದರೂ, ಅವರ ನಡುವಣ ವ್ಯವಹಾರಗಳಲ್ಲಿ ಸೂಕ್ಷ್ಮವಾದ ವಿಷಮತೆಯಿರುವುದು ಈಗಾಗಲೇ ಕಾಣಬರುತ್ತಿತ್ತು. ಇಷ್ಟು ಹೊತ್ತಿಗೆ ನಾನು ಸರ್ಗೀ ಮಿಖೈಲಿಚ್ ಅವರ ತಾಯಿ ತತ್ಯಾನಾ ಸೆಮೆನೋವ್ನಾ ಅವರಿಗೆ ಹೆಚ್ಚು ಹತ್ತಿರದವಳಾಗಿದ್ದೆ. ಅವರು ಹಳೆಯ ಕಾಲದವರು, ಮನೆಯ ವ್ಯವಹಾರದ ವಿಷಯಗಳಲ್ಲಿ ಸಂಪ್ರದಾಯವಾದಿ, ನಿಷ್ಠುರಿ. ಅವರ ಮಗ

ಅವರನ್ನು ತಾಯಿಯೆಂಬ ಕಾರಣಕ್ಕೆ ಮಾತ್ರ ಪ್ರೀತಿಸುತ್ತಿರಲಿಲ್ಲ, ಆಕೆ ಇಡೀ ಜಗತ್ತಿನಲ್ಲಿಯೇ ಅತ್ಯಂತ ಕರುಣಾಮಯಿ, ವಾತ್ಸಲ್ಯಪೂರಿತೆಯಾದ ಹೆಂಗಸೆಂದು ಭಾವಿಸಿದ್ದರು, ಅದಕ್ಕೆ. ಆಕೆಯೂ ಕೂಡ ನಮ್ಮ ಬಗ್ಗೆ, ಅದರಲ್ಲೂ ನನ್ನ ಬಗ್ಗೆ, ತುಂಬ ವಿಶ್ವಾಸವಿರಿಸಿ ಕೊಂಡಿದ್ದರು, ತಮ್ಮ ಮಗ ನನ್ನನ್ನು ಮದುವೆಯಾಗುತ್ತಿರುವುದು ಆಕೆಗೆ ಸಂತಸ ತಂದಿತ್ತು. ಆದರೆ ನಮ್ಮ ನಿಶ್ಚಿತಾರ್ಥ ಮುಗಿದ ಮೇಲೆ, ತಮ್ಮ ಮಗ ನನಗೆ ಮೇಲುಸ್ತರದವರಾಗಿ ಕಾಣಿಸಿರಬಹುದು, ಅದನ್ನು ಸದಾ ನೆನಪಿನಲ್ಲಿಟ್ಟುಕೊಂಡು ನಡೆದುಕೊಳ್ಳಬೇಕೆಂದು ನಿರೀಕ್ಷಿಸುವಂತೆ ತೋರಿತು. ಅವರ ಮನಸ್ಸನ್ನು ನಾನು ಚೆನ್ನಾಗಿ ಅರ್ಥಮಾಡಿಕೊಂಡಿದ್ದೆ, ಅವರ ಭಾವನೆ ಸತ್ಯವೆಂದೂ ಭಾವಿಸಿದ್ದೆ.

ಆ ಎರಡು ವಾರಗಳಲ್ಲಿ ನಾನೂ ಅವರೂ ಪ್ರತಿನಿತ್ಯ ಭೇಟಿಯಾಗುತ್ತಿದ್ದೆವು. ರಾತ್ರಿ ಊಟಕ್ಕೆ ಅವರು ದಿನವೂ ಬರುತ್ತಿದ್ದರು, ಮಧ್ಯರಾತ್ರಿಯವರೆಗೂ ನಮ್ಮ ಮನೆಯಲ್ಲೇ ಇರುತ್ತಿದ್ದರು. ನನ್ನ ಬಿಟ್ಟು ತಮಗೆ ಬೇರೆ ಬದುಕೇ ಇಲ್ಲವೆಂದು ಅವರು ಹೇಳುತ್ತಿದ್ದುದನ್ನು ನಾನು ನಿಜವೆಂದು ಭಾವಿಸಿದ್ದರೂ, ಅವರೆಂದೂ ಇಡೀ ದಿನ ನನ್ನ ಜೊತೆ ಕಳೆಯಲಿಲ್ಲ, ತಮ್ಮ ಕೆಲಸಕಾರ್ಯಗಳಲ್ಲಿ ಎಂದಿನಂತೆ ಮಗ್ನರಾಗಿರುತ್ತಿದ್ದರು. ನಮ್ಮ ಮದುವೆಯ ದಿನದವರೆಗೂ ನಮ್ಮ ನಡುವಿನ ಸಂಬಂಧದ ಸ್ವರೂಪ ಬಾಹ್ಯದಲ್ಲಿ ಬದಲಾಗಲಿಲ್ಲ, ಪರಸ್ಪರ ಏಕವಚನದ ಬದಲು ಬಹುವಚನವನ್ನೇ ಬಳಸುತ್ತಿದ್ದೆವು, ನನ್ನ ಕೈಯನ್ನು ಕೂಡ ಅವರು ಮುತ್ತಿಕ್ಕಲಿಲ್ಲ, ನನ್ನ ಜೊತೆ ಏಕಾಂತದಲ್ಲಿರಲು ಬಯಸಲಿಲ್ಲ; ಮಾತ್ರವಲ್ಲ, ಅದು ಆಗದ ಹಾಗೆ ನೋಡಿಕೊಳ್ಳುತ್ತಿದ್ದರು. ತಮ್ಮ ಮನಸ್ಸಿನಲ್ಲಿದ್ದ ಅತೀವ ಕೋಮಲತೆಗೆ ಒಳಗಾಗುವುದು ಸಮಂಜಸವಲ್ಲವೆಂದು ಅವರು ಭಾವಿಸಿದ್ದಿರಬೇಕು. ನಮ್ಮಿಬ್ಬರಲ್ಲಿ ಯಾರು ಬದಲಾಗಿದ್ದೆವು ಎಂಬುದನ್ನು ಹೇಳುವುದು ಕಷ್ಟ, ಆದರೆ ನಾನೀಗ ಅವರಿಗೆ ಪೂರ್ತಿ ಸರಿಸಮಾನ ಎಂಬ ಭಾವನೆಯನ್ನು ಹೊಂದಿದ್ದೆ. ಹಿಂದೆಲ್ಲ ನನ್ನ ಅಸಮಾಧಾನಕ್ಕೆ ಕಾರಣವಾಗಿದ್ದ, ತೋರಿಕೆಯಂತೆ ಕಂಡಿದ್ದ ಅವರ ಸರಳತೆ ನನಗೀಗ ಬೇಸರ ತರಿಸುತ್ತಿರಲಿಲ್ಲ; ಅವರಲ್ಲಿನ ಗಂಭೀರವಾದ ಪ್ರಬುದ್ಧ ವ್ಯಕ್ತಿತ್ವದ ಬದಲಾಗಿ ಮುದ್ದಾದ ಮಗುವಿನ ಮುಗ್ಧತೆಯನ್ನು ಕಾಣುವುದೇ ಸಂತಸಕರವೆನಿಸುತ್ತಿತ್ತು. 'ಅವರ ಬಗ್ಗೆ ನಾನೆಂಥ ತಪ್ಪು ಅಭಿಪ್ರಾಯ ತಾಳಿದ್ದೆ!' ಎಂದು ಎಷ್ಟೋ ವೇಳೆ ಅಂದುಕೊಂಡೆ; 'ಅವರೂ ನನ್ನಂತೆಯೇ ಒಂದು ಮನುಷ್ಯ ಜೀವಿ' ಎನಿಸಿತ್ತು. ಅವರ ಇಡೀ ವ್ಯಕ್ತಿತ್ವವೇ ನನ್ನ ಕಣ್ಣ ಮುಂದಿದ್ದು, ಅದನ್ನು ನಾನು ಸಂಪೂರ್ಣವಾಗಿ ಅರ್ಥಮಾಡಿಕೊಂಡಿದ್ದೇನೆಂದು ಭಾವಿಸಿದ್ದೆ. ಅವರ ನಡವಳಿಕೆಯ ಪ್ರತಿ ಹೆಜ್ಜೆಯೂ ಸರಳ, ನನಗೆ ಅದೆಷ್ಟು ಹೊಂದುತ್ತದೆ ಎಂದು ತಿಳಿದೆ. ನಮ್ಮ ಮುಂದಿನ ಬದುಕಿನ ಬಗೆಗಿನ ಅವರ ಯೋಜನೆಗಳೂ ನನ್ನವೇ, ಅವರ ಮಾತುಗಳಲ್ಲಿ ಮತ್ತಷ್ಟು ಸ್ಪಷ್ಟವಾಗಿ ನಿಖರವಾಗಿ ಹೊಮ್ಮುತ್ತವೆ ಎಂಬ ಭಾವನೆಯುಂಟಾಯಿತು.

ಆ ಕ್ಷಣದಲ್ಲಿ ಹವಾಗುಣ ಕೆಟ್ಟದಾಗಿತ್ತು, ಹೀಗಾಗಿ ಬಹುತೇಕ ವೇಳೆಯನ್ನು ಮನೆಯೊಳಗೇ ಕಳೆಯಬೇಕಾಯಿತು. ಪಿಯಾನೋ ಮತ್ತು ಕಿಟಕಿಗಳ ನಡುವಣ

ಮೂಲೆಯಲ್ಲಿ ನಮ್ಮ ಅತ್ಯಂತ ಬೆಚ್ಚಗಿನ ಮಾತುಕತೆಗಳು ನಡೆದವು. ಮೋಂಬತ್ತಿಯ ಬೆಳಕು ಬಳಿಯಿದ್ದ ಕಿಟಕಿಯ ಕಪ್‌ನಲ್ಲಿ ಪ್ರತಿಫಲಿಸಿತ್ತು; ಆಗಾಗ ಹನಿಗಳು ಕಿಟಕಿಯ ಕದಗಳ ಮೇಲೆ ಬಿದ್ದು ಕೆಳಗಿಳಿಯುತ್ತಿದ್ದವು. ಚಾವಣಿಯ ಮೇಲೆ ಮಳೆಯ ಹನಿಗಳು ಅಪ್ಪಳಿಸುತ್ತಿದ್ದವು; ಚಾವಣಿಯ ದೋಣಿಯ ಹತ್ತಿರವಿದ್ದ ಕುಳಿಯಲ್ಲಿ ನೀರು ಸುರಿಯುತ್ತಿತ್ತು; ಹೀಗಾಗಿ ಕಿಟಕಿಯ ಬಳಿ ತೇವವಿತ್ತು; ಆದರೆ ನಮ್ಮ ಮೂಲೆ ಮಾತ್ರ ಹೆಚ್ಚು ಹೊಳಪಿನಿಂದ ಕೂಡಿ ಹೆಚ್ಚು ಬೆಚ್ಚಗೆ ಹಾಯಾಗಿತ್ತು.

"ನಿನಗೆ ನಾನು ಹೇಳಬೇಕೂಂತಿದ್ದ ವಿಷಯ ನನ್ನ ಮನಸ್ಸಲ್ಲಿ ಕೂತಿದೆ, ನೀನು ಆಟ ಆಡ್ತಾ ಇದ್ದಾಗ ನಾನು ಆ ಬಗ್ಗೇನೇ ಯೋಚನೆ ಮಾಡ್ತಿದ್ದೆ" ಎಂದು ಒಂದು ರಾತ್ರಿ ಆ ಮೂಲೆಯಲ್ಲಿ ನಾವು ಕೂತಿದ್ದಾಗ ಅವರು ಮಾತನ್ನು ಆರಂಭಿಸಿದ್ದರು.

"ನೀವೇನೂ ಹೇಳ್ಬೇಡಿ, ನಂಗೆಲ್ಲ ಗೊತ್ತು" ಎಂದೆ ನಾನು.

"ಆಗಬಹುದು, ಮೌನವೇ ಮಾತು!"

"ಬೇಡ. ಈಗ ಹೇಳಿ"

"ಅದೂಂದ್ರೆ ಇದು. ನಾನು ಎ ಮತ್ತು ಬಿ ಬಗೆಗೆ ನಿಂಗೆ ಹೇಳಿದ ಕತೆ ಜ್ಞಾಪ್ಕಾ ಇದ್ಯಾ?"

"ಹ್ಞೂ, ಇದೆ, ಎಂಥ ಮೂರ್ಖ ಕತೆ! ಸದ್ಯ ಕತೆ ಅಷ್ಟಕ್ಕೇ ಮುಗೀತಲ್ಲ!"

"ನಿಜ, ಆ ಒಂದು ಕೆಲಸದಿಂದ ನಾನು ನನ್ನ ಸಂತೋಷಾನೆಲ್ಲ ಹಾಳು ಮಾಡ್ಕೋತಿದ್ದೆ. ನೀನೇ ನನ್ನನ್ನ ಪಾರುಮಾಡಿದೆ. ಆದ್ರೆ ಮುಖ್ಯ ವಿಷ್ಯ ಅಂದರೆ, ನಾನು ಆಗ ಹೇಳ್ತಾ ಇದ್ದದ್ದು ಬರೀ ಸುಳ್ಳು. ಈಗ ನಂಗೆ ನಾಚಿಕೆ ಅನ್ನಿಸ್ತಿದೆ, ನಾನು ಹೇಳ್ಬೇಕೂಂತಿರೋದನ್ನ ಈಗ ಹೇಳ್ತೀನಿ."

"ದಯವಿಟ್ಟು ಏನೂ ಹೇಳಬೇಡಿ! ಹೇಳಕೂಡದು!"

"ಹೆದರ್ಕೋಬೇಡ" ಎಂದರು ಮುಗುಳ್ನಗುತ್ತ. "ನಾನು ನನ್ನನ್ನ ಸಮರ್ಥನೆ ಮಾಡ್ಕೋಬೇಕೂಂತಿದ್ದೆ, ಅಷ್ಟೆ. ಆಗ ಶುರುಮಾಡ್ದಾಗ ನಾನು ವಾದಕ್ಕೆ ಸಿದ್ಧವಾಗಿದ್ದೆ."

"ವಾದ ಮಾಡೋದು ಯಾವಾಗಲೂ ತಪ್ಪೇ!" ಎಂದೆ ನಾನು.

"ಹೌದು, ನಾನು ತಪ್ಪಾಗಿ ವಾದ ಮಾಡಿದೆ. ಜೀವನದಲ್ಲಿ ನಾನು ಅನುಭವಿಸಿದ ನಿರಾಶೆಗಳು ಹಾಗೂ ಮಾಡಿದ್ದ ತಪ್ಪುಗಳ ನಂತರ, ಈ ಸಲ ನಾನು ಹಳ್ಳಿಗೆ ಬಂದಾಗ ನನಗೆ ಹೇಳ್ಕೊಂಡಿದ್ದೆ, ನನಗೆ ಪ್ರೇಮ ಅನ್ನೋದು ಇಲ್ಲ, ಹಾಗಾಗಿ ನಾನು ಗೌರವಯುತವಾಗಿ ಮುದುಕನಾಗಬೇಕು ಅಂತ. ದೀರ್ಘ ಕಾಲ, ನಿನ್ನ ಬಗ್ಗೆ ನಂಗಿದ್ದ ಭಾವನೆಗಳನ್ನ ಹೋಗಲಾಡಿಸಿಕೊಳ್ಳೋಕೆ ನಂಗೆ ಸಾಧ್ಯವಾಗ್ಲಿಲ್ಲ, ಅದರಿಂದ ಏನೇನು ಆಗಿಬಿಡಬಹುದು ಅನ್ನೋದು ಕೂಡ ಗೊತ್ತಿರ್ಲಿಲ್ಲ. ಆಸೆ ಇಟ್ಕೊಂಡಿದ್ದೆ, ಆದರೆ ನಿರಾಸೆ ಆವರಿಸಿತ್ತು: ಒಂದು ಕ್ಷಣ ನೀನು ನನ್ನ ಜತೆ ಹುಡುಗಾಟ ಆಡ್ತಿದ್ದೀಯಾ ಅನ್ನಿಸ್ತಿತ್ತು;

ಮರುಕ್ಷಣ ನಿನ್ನ ಬಗ್ಗೆ ನಂಬಿಕೆ ಬರ್ತಿತ್ತು, ಆದರೆ ನೀನೇನು ನಿರ್ಧಾರ ಮಾಡ್ತೀ ಅನ್ನೋದರ ಬಗ್ಗೆ ಅನುಮಾನ ಇತ್ತು. ನಿಂಗೆ ಜ್ಞಾಪಕ ಇದ್ಯಾ, ಆವತ್ತು ಸಾಯಂಕಾಲ, ರಾತ್ರಿ ನಾವು ತೋಟದಲ್ಲಿ ಅಡ್ಡಾಡಿಕೊಂಡು ಬಂದೆವಲ್ಲ, ಆಗ ನಂಗೆ ಗಾಬರಿಯಾಗಿತ್ತು; ಈಗಿನ ಸಂತೋಷ ನಿಜವಾಗದಷ್ಟು ದೊಡ್ಡು ಅನ್ನಿಸಿತ್ತು. ತುಂಬ ಭರವಸೆ ಇಟ್ಕೊಂಡು ತೊಸ್ ಅಂದ್ರೆ ಗತಿ ಏನೂಂತ ಭಯವಾಗಿತ್ತು. ನಾನು ನನ್ನ ಬಗ್ಗೆ ಮಾತ್ರ ಯೋಚ್ನೆ ಮಾಡ್ತಾ ಇದ್ದೆ ಅನ್ನೋದು ನಿಜವೇ, ಯಾಕೇಂದ್ರೆ ನಾನು ತುಂಬ ತುಂಬ ಸ್ವಾರ್ಥಿಯಾಗಿದ್ದೆ." ಮಾತು ನಿಲ್ಲಿಸಿದ ಅವರು ನನ್ನ ಕಡೆ ನೋಡಿದರು.

"ಆದ್ರೆ ಆಗ ನಾನು ಹೇಳಿದ್ದೆಲ್ಲ ಅವಿವೇಕದ್ದೇನಲ್ಲ. ನಂಗೆ ಭಯಪಡೋದಕ್ಕೆ ಕಾರಣವಿತ್ತು ಹಾಗಾಗಿ ನನ್ನ ಭಾವನೆ ಸರಿಯಾಗಿತ್ತು. ನಿನ್ನಿಂದ ನಾನು ಪಡೆಯೋದು ಅಪಾರ, ಆದ್ರೆ ನಿಂಗೆ ನಾನು ಕೊಡಬಹುದಾದ್ದು ಇಷ್ಟೇ ಇಷ್ಟು. ನೀನಿನ್ನೂ ಹುಡುಗಿ, ಇನ್ನೂ ಅರಳಬೇಕಾದ ಮೊಗ್ಗು. ಈ ಹಿಂದೆ ನೀನೆಂದೂ ಪ್ರೇಮದಲ್ಲಿ ಸಿಲುಕಿ ಕೊಂಡಿರ್ಲಿಲ್ಲ, ಆದ್ರೆ ನಾನು .. .."

"ಹ್ಞೂ, ನಿಜಾನೇ ಹೇಳಿ..." ಎಂದೇನೋ ಹೇಳಿದೆ, ಆದರೆ ಅಲ್ಲಿಗೆ ನಿಲ್ಲಿಸಿದೆ, ಅವರು ಏನು ಹೇಳುತ್ತಾರೋಂತ ಭಯವಾಗಿತ್ತು. ಆದರೆ ಕೊನೆಗೆ "ಪರವಾಗಿಲ್ಲ, ಹೇಳಿ" ಎಂದೆ.

"ನಾನು ಹಿಂದೆ ಯಾರನ್ನಾದ್ರೂ ಪ್ರೀತಿಸಿದ್ದೆನಾ ಅನ್ನೋದು ತಾನೇ?" ಅಂದರು ನನ್ನ ಯೋಚನೆಯನ್ನು ಸರಿಯಾಗಿಯೇ ಊಹಿಸಿ. "ಅದನ್ನ ಹೇಳಬಹುದು. ಇಲ್ಲ, ಹಿಂದೆಂದೂ ಹಾಗೆ ಮಾಡಿರ್ಲಿಲ್ಲ, ಈಗ ನನಗೆ ಅನ್ನಿಸ್ತಿರೋ ಅಂಥದ್ದೇನೂ ಆಗಿರ್ಲಿಲ್ಲ." ಹೀಗಂದಾಗ ಅವರ ಮನಸ್ಸಲ್ಲಿ ಯಾವುದೋ ಅತೀವ ನೋವಿನ ನೆನಪು ಬಂದ ಹಾಗೆ ಮುಖದಲ್ಲಿ ತೋರಿತು. ದುಃಖದಿಂದ ಕೂಡಿ, "ಉಹ್ಞೂ, ನಿನ್ನನ್ನ ನಾನು ಸರಿಯಾದ ರೀತಿಯಲ್ಲಿ ಪ್ರೀತಿಸೋದಕ್ಕೆ ಈ ವಿಷಯದಲ್ಲಿ ಕೂಡ ನಂಗೆ ನಿನ್ನ ಸಹಾನುಭೂತಿ ಬೇಕು. ಹ್ಞೂ, ನಿನ್ನ ಪ್ರೀತಿಸ್ತೀನಿ ಅಂತ ಹೇಳಕ್ಕೆ ಮುಂಚೆ ನಾನು ಚೆನ್ನಾಗಿ ಯೋಚಿಸಬೇಕಾಗಿತ್ತು, ಅಲ್ವಾ? ನಾನು ನಿಂಗೆ ಕೊಡಬಹುದಾದ್ದು ಏನು, ಪ್ರೀತಿ ತಾನೇ?"

"ಅದೇನು ಕಡಿಮೇನಾ?" ಎಂದು ಕೇಳಿದೆ ಅವರ ಮುಖದಲ್ಲಿಯೇ ದೃಷ್ಟಿ ನೆಟ್ಟು.

"ಹೌದು, ಮುದ್ದು, ನಿಂಗೆ ಕೊಡೋದಕ್ಕೆ ಅದು ಕಡಿಮೇದೇ. ನಿಂಗೆ ಚೆಲುವಿದೆ, ಇನ್ನೂ ಯೌವನವಿದೆ, ನಾವಿಬ್ಬರೂ ಮುಂದೆ ಒಟ್ಟಿಗೆ ಬಾಳೋದರ ಬಗ್ಗೆ ಯೋಚನೆ ಮಾಡೋ ಸಂತೋಷದಲ್ಲಿ ನಾನೆಷ್ಟೋ ಸಲ ರಾತ್ರಿ ಪೂರ್ತಿ ಎಚ್ಚರವಾಗೇ ಇರ್ತೀನಿ. ನಾನಾಗಲೇ ಸಾಕಷ್ಟು ಕಾಲ ಬದುಕಿದ್ದೋನು, ಸಂತೋಷಕ್ಕೆ ಏನು ಬೇಕು ಅನ್ನೋದು ಈಗ ನಂಗೆ ಸಿಕ್ಕಿದೆ. ಹಳ್ಳೀಲಿ ಪ್ರಶಾಂತವಾದ ಜೀವನ, ಸಾಧ್ಯವಾದರೆ ನನ್ನಿಂದ ಒಳ್ಳೆದಾಗೋದನ್ನ ಸ್ವೀಕರಿಸೋ ಜನಕ್ಕೋಸ್ಕರ ಏನಾದ್ರೂ ಉಪಯುಕ್ತವಾದ್ದನ್ನ ಮಾಡೋದು; ಹಾಗೇನೇ ಪ್ರಯೋಜನವಾಗೋ ಅಂಥ ಕೆಲಸ ಮಾಡೋದು, ಒಂದಷ್ಟು

ವಿಶ್ರಾಂತಿ, ಪುಸ್ತಕದ ಓದು, ಪ್ರಕೃತಿಯ ಒಡನಾಟ, ಸಂಗೀತ, ನೆರೆಹೊರೆಯವರಲ್ಲಿ ಪ್ರೀತಿ, ನನ್ನ ಸಂತೋಷದ ಕಲ್ಪನೆ ಅಂದ್ರೆ ಇಷ್ಟೇ. ಆಮೇಲೆ, ಎಲ್ಲಕ್ಕಿಂತ ಮಿಗಿಲಾಗಿ ನಿನ್ನ ಜೊತೆ ಸೇರೋದು, ಮಕ್ಕಳನ್ನು ಪಡೆಯೋದು. ಇಷ್ಟಕ್ಕಿಂತ ಮನುಷ್ಯನ ಮನಸ್ಸಲ್ಲಿ ಬೇರೆ ಏನು ಆಸೆ ಇರತ್ತೆ?"

"ಅಷ್ಟು ಸಾಕು" ಎಂದೆ ನಾನು.

"ಯೌವನ ಮುಗಿದು ಹೋಗಿರೋ ನಂಗೆ ಇಷ್ಟು ಸಾಕು, ಆದ್ರೆ ನಿಂಗಲ್ಲ. ಬದುಕು ಪೂರ್ತಿ ನಿನ್ನ ಮುಂದಿದೆ. ನೀನೂ ಸುಖಕ್ಕಾಗಿ ಹಂಬಲಿಸ್ತೀ, ಅದು ನಿಂಗೆ ಸಿಕ್ಕತ್ತೆ, ಆದ್ರೆ ಬೇರೆ ರೀತೀದು. ನಿಂಗೆ ಇಷ್ಟು ಸಾಕು ಅಂತ ಈಗ ಅನ್ನಿಸ್ತಿದೆ, ಯಾಕೇಂದ್ರೆ ನಿಂಗೆ ನನ್ನ ಕಂಡ್ರೆ ಪ್ರೀತಿ ಅದಕ್ಕೆ."

"ನೀವು ಹೇಳ್ತಿರೋದು ಸರಿಯಲ್ಲ. ನನ್ನ ಮನಸ್ಸಲ್ಲಿ ಯಾವ ಕಾಲದಲ್ಲೂ ಇದ್ದದ್ದು ಸಂಸಾರ ಸುಖವೇ, ಅದೇ ನಂಗೆ ಮುಖ್ಯ. ನನ್ನ ಮನಸ್ಸಲ್ಲಿ ಏನಿತ್ತೋ ಅದನ್ನೇ ಹೇಳಿದ್ರಿ." ಎಂದೆ ನಾನು.

ಅವರ ಮುಖದಲ್ಲಿ ಮಂದಹಾಸ ಅರಳಿತು.

"ನಿನ್ನ ಆಸೆ ಇಷ್ಟೇನಾ, ಆದ್ರೆ ನಿಂಗೆ ಅಷ್ಟೇ ಸಾಲದು. ನಿನಗೆ ಚೆಲುವಿದೆ, ಇನ್ನೂ ಯೌವನ ಇದೆ" ಎಂದು ಮತ್ತೆ ಅದನ್ನೇ ಹೇಳಿದರು.

ನಾನು ಹೇಳುವುದನ್ನ ನಂಬುತ್ತಿಲ್ಲವಲ್ಲ, ನನ್ನ ಚೆಲುವು ಯೌವನಗಳ ಮೇಲೆ ಒತ್ತು ಕೊಡುತ್ತಾರಲ್ಲ ಎಂದು ಅವರ ಮೇಲೆ ನನಗೆ ಕೋಪ ಬಂತು.

"ಹಾಗಾದ್ರೆ ನೀವ್ಯಾಕೆ ನನ್ನ ಪ್ರೀತಿಸ್ತೀರಿ. ನನ್ನ ಯೌವನವನ್ನೋ ನನ್ನನ್ನೋ" ಎಂದು ಕೇಳಿದೆ ನಾನು ಕೋಪದಿಂದ ಸಿಡುಕುತ್ತ.

"ನಂಗೊತ್ತಿಲ್ಲ, ಆದ್ರೆ ನಿನ್ನ ಮೇಲೆ ಪ್ರೀತಿ ಅನ್ನೋದು ಮಾತ್ರ ನಿಜ" ಎಂದರವರು ನನ್ನ ಕಡೆ ತದೇಕವಾಗಿ ಆಕರ್ಷಕವಾದ ನೋಟ ಬೀರಿ.

ನಾನು ಉತ್ತರ ಕೊಡದೆ ಅರಿವಿಲ್ಲದೆಯೇ ಅವರ ಕಣ್ಣಲ್ಲಿ ನನ್ನ ಕಣ್ಣುಗಳನ್ನು ನೆಟ್ಟೆ. ಇದ್ದಕ್ಕಿದ್ದಂತೆ ಒಂದು ವಿಚಿತ್ರ ನನ್ನಲ್ಲಿ ಸಂಭವಿಸಿತು: ಮೊದಲನೆಯದಾಗಿ, ನನಗೆ ಸುತ್ತಮುತ್ತಲಿನ ಏನೊಂದು ಕಾಣದಾಯಿತು; ಆನಂತರ ನನ್ನೆದುರು ಹೊಳೆಯುವ ಕಣ್ಣುಗಳ ಹೊರತಾಗಿ ಅವರ ಮುಖವೂ ಕಣ್ಮರೆಯಾಯಿತು; ಆಮೇಲೆ ಅವರ ಕಣ್ಣುಗಳು ನನ್ನ ತಲೆಯಲ್ಲೇ ಇರುವಂತೆನ್ನಿಸಿತು, ಆಮೇಲೆ ಎಲ್ಲವೂ ಗೊಂದಲಮಯವಾಗಿಬಿಟ್ಟಿತು - ನನಗೇನೂ ಕಾಣಿಸುತ್ತಿರಲಿಲ್ಲ, ಅವರ ನೋಟವು ನನ್ನಲ್ಲುಂಟುಮಾಡುತ್ತಿದ್ದ ಆನಂದದ ಭಾವನೆಯು ಸಡಿಲಗೊಳ್ಳಬಹುದೆಂಬ ಭಯದಿಂದ ನಾನು ಕಣ್ಣುಗಳನ್ನು ಮುಚ್ಚಿಕೊಳ್ಳುವಂತಾಯಿತು.

ನಮ್ಮ ಮದುವೆಯ ಹಿಂದಿನ ದಿನ, ಸಂಜೆಯ ಹೊತ್ತಿಗೆ ವಾತಾವರಣ

ತಿಳಿಯಾಯಿತು. ಬೇಸಿಗೆಯಲ್ಲಿ ಆರಂಭಗೊಂಡಿದ್ದ ಮಳೆಯು ನಿಂತು ಹವಾಗುಣ ಶುಭ್ರವಾಗಿದ್ದು, ಗ್ರೀಷ್ಮದ ಆ ಮೊದಲ ಸಂಜೆ ಕಾಂತಿಮಯವಾಗಿತ್ತು, ತಂಪಾಗಿತ್ತು. ಭೂಮಿಯೆಲ್ಲ ಒದ್ದೆಯಾಗಿದ್ದು, ತಂಪಾಗಿ ಹೊಳಪಿನಿಂದ ಕೂಡಿತ್ತು; ಮೊದಲನೆಯ ಬಾರಿಗೆ ತೋಟವು ಗ್ರೀಷ್ಮದ ಸ್ಪಷ್ಟತೆ ಹಾಗೂ ಬಣ್ಣಗಳಿಂದ ಕೂಡಿ ಕಂಗೊಳಿಸುತ್ತಿತ್ತು. ಆಗಸ ನಿರಭ್ರವಾಗಿ, ತಣ್ಣಗೆ ಪೇಲವವಾಗಿತ್ತು, ನಮ್ಮ ಮದುವೆಯ ದಿನವಾದ ನಾಳೆ ಚೆನ್ನಾಗಿರುತ್ತದೆಂಬ ಭರವಸೆಯಿಂದ ಸಂತಸವನ್ನು ಮನಸ್ಸಿನಲ್ಲಿ ತುಂಬಿಕೊಂಡು ಮಲಗಿಕೊಂಡೆ. ಸೂರ್ಯನ ಜೊತೆಗೇ ಎದ್ದೆ, ಇವತ್ತು... ಏನೋ ಗಾಬರಿಗೊಳಿಸುವಂತೆ ವಿಚಿತ್ರವಾಗಿ ಕಾಣಿಸಿತು. ನಾನು ತೋಟದೊಳಕ್ಕೆ ಕಾಲಿರಿಸಿದೆ. ಸೂರ್ಯ ಆಗ ತಾನೇ ಉದಯಿಸಿದ್ದು ನಿಂಬೆ ಸಾಲಿನ ಅಲ್ಲೊಂದಿಲ್ಲೊಂದಿದ್ದ ಹಳದಿ ಎಲೆಗಳ ನಡುವೆ ಬಿಸಿಲು ಬಿದ್ದಿತ್ತು. ದಾರಿಯುದ್ದಕ್ಕೂ ಕೆಳಗುದುರಿದ್ದ ಒಣ ಎಲೆಗಳು ಸರಪರ ಸದ್ದು ಮಾಡುತ್ತಿದ್ದವು, ಕಾಡು ನೇರಿಳೆ ಗೊಂಚಲುಗಳು ಇಬ್ಬನಿ ಬಿದ್ದಿದ್ದ ಪೊದರುಗಳ ಮೇಲೆ ಜೋತುಬಿದ್ದಿದ್ದವು, ಡೇಲಿಯಗಳು ಕಪ್ಪಗೆ ಮುರುಟಿಕೊಂಡಿದ್ದವು. ಹೊಸತಾಗಿ ಆರಂಭಗೊಂಡಿದ್ದ ಗಾಢ ಮಂಜು ಮನೆಯ ಸುತ್ತಲಿನ ಹಸಿರು ಹುಲ್ಲು ದಳಗಳು ಹಾಗೂ ಮುರಿದ ಬರ್ಡಕ್ ಗಿಡಗಳ ಮೇಲೆ ಬಿದ್ದು ಬೆಳ್ಳಿಯಂತೆ ಮಿನುಗುತ್ತಿತ್ತು. ತಂಪಾದ ಆಗಸದಲ್ಲಿ ಒಂದು ತುಣುಕು ಮೋಡವೂ ಇರಲಿಲ್ಲ, ಇರಲು ಸಾಧ್ಯವೂ ಇರಲಿಲ್ಲ.

"ಇವತ್ತೇ ತಾನೇ ಅದು?" ನನಗೆ ನಾನೇ ಕೇಳಿಕೊಂಡೆ, ನನ್ನ ಸಂತಸವನ್ನು ನಂಬಲಾರದೆ. "ನಾಳೆ ನಾನು ಇಲ್ಲಿ ಏಳದೆ ಕಂಬಗಳಿರುವ ಆ ಮನೆಯಲ್ಲಿ ಏಳುವುದು ಶಕ್ಯವೇ? ಕಾತ್ಯಾಳೊಂದಿಗೆ ಕೂತು ಅವರ ಬಗ್ಗೆ ಮಾತನಾಡುತ್ತ ಅವರನ್ನು ಕಾಣಲು ಇನ್ನೆಂದೂ ಅವರ ಬರುವಿಕೆಗಾಗಿ ಕಾಯುತ್ತ ಕುಳಿತುಕೊಳ್ಳಬೇಕಾಗದಿರುವ ಸ್ಥಿತಿ ಬರುವುದು ಸಾಧ್ಯವೇ? ನಮ್ಮ ಮನೆಯ ಪಡಸಾಲೆಯಲ್ಲಿರುವ ಪಿಯಾನೋ ಬಳಿ ಅವರೊಡನೆ ಇನ್ನೆಂದೂ ಕುಳಿತುಕೊಳ್ಳಬೇಕಾದ ಪರಿಸ್ಥಿತಿ ಬರುವುದಿಲ್ಲವೇ? ಅವರನ್ನು ಬೀಳ್ಕೊಡಲು ಭಾರವಾದ ಮನಸ್ಸಿನಿಂದ ಕತ್ತಲ ರಾತ್ರಿಗಳಂದು ಹೊರಗೆ ಬರುವ ಸನ್ನಿವೇಶ ಇನ್ನೆಂದೂ ಬಾರದೇ? ಆದರೆ ನಿನ್ನೆ ಕೊನೆಯ ಬಾರಿಗೆ ನಮ್ಮ ಮನೆಗೆ ಬರುವುದಾಗಿ ಅವರು ಮಾತುಕೊಟ್ಟಿದ್ದರು, ನನ್ನ ಮದುವೆ ಉಡುಪನ್ನು ಹಾಕಿಕೊಂಡು ನೋಡಲು ಕಾತ್ಯಾ ಒತ್ತಾಯಿಸಿ 'ನಾಳೆಗೆ' ಎಂದಿದ್ದಳು. ಇವೆಲ್ಲ ನಿಜವೆಂದು ನಾನು ನಂಬಿದೆ, ಆದರೆ ಮತ್ತೆ ಅನುಮಾನ ಬಂತು. ನಾಳೆಯಿಂದ ನಾನು ಆ ಮನೆಯಲ್ಲಿ ಅತ್ತೆಯ ಜೊತೆ, ನಡೇಷ ಅಥವಾ ಮುದುಕ ಗ್ರಿಗರಿ ಅಥವಾ ಕಾತ್ಯಾ ಇಲ್ಲದೆ ಬಾಳಬೇಕಾದುದು ಸತ್ಯವೇ? ನನ್ನ ಹಳೆಯ ದಾದಿಗೆ ಗುಡ್ ನೈಟ್ ಹೇಳಿ ಮುತ್ತಿಕ್ಕಿದಾಗ ಅವಳು 'ಗುಡ್ ನೈಟ್, ಮಿಸ್' ಎಂದು ನನ್ನ ಮೇಲೆ ಶಿಲುಬೆ ಮಾಡಿಕೊಂಡ ಬಳಿಕ ಹೋಗಿ ಮಲಗಲಾಗದೇ? ಇನ್ನೆಂದೂ ಸೋನ್ಯಾಳಿಗೆ ಪಾಠ ಹೇಳಬೇಕಾಗಿಲ್ಲವೇ ಅಥವಾ ಅವಳೊಡನೆ ಆಡಲು ಅಥವಾ ಬೆಳಿಗ್ಗೆ ಅವಳ ರೂಮಿಗೆ ಹೋಗಿ ಅವಳು ಮನಃಪೂರ್ತಿ ನಗುವುದನ್ನು ಕೇಳಲು ಸಾಧ್ಯವಿಲ್ಲವೇ? ಇಂದಿನಿಂದ ನಾನು ನನಗೇ ತಿಳಿಯದ

ಬೇರಾವಳೋ ಆಗಿಬಿಡಬೇಕೇ? ನನ್ನ ನಿರೀಕ್ಷೆಗಳು ಹಾಗೂ ಆಕಾಂಕ್ಷೆಗಳನ್ನು ನನಸಾಗಿಸುವ ಹೊಸ ಜಗತ್ತು ನನ್ನ ಮುಂದೆ ತೆರೆದು ಕೊಳ್ಳಲಿದೆಯೇ? ಆ ಹೊಸ ಜಗತ್ತು ಮುಂದೆ ಎಂದೆಂದಿಗೂ ಇರುವುದೇ?" ಈ ಆಲೋಚನೆಗಳಿಂದಾಗಿ ಖಿನ್ನಳಾಗಿ ಅವರ ಬರುವಿಕೆಗಾಗಿ ಒಬ್ಬಳೇ ಹಪಹಪಿಸುತ್ತ ಕಾಯುತ್ತಿದ್ದೆ. ಅವರು ಬೇಗನೇ ಬಂದರು, ಅವತ್ತೇ ನಾನು ಅವರ ಹೆಂಡತಿಯಾಗುತ್ತೇನೆ ಎಂಬ ಭರವಸೆ ಬಂದು ನನ್ನ ಮುಂದಿನ ಭಯಗಳೆಲ್ಲ ಮಾಯವಾದವು.

ನಮ್ಮ ತಂದೆಯವರ ಜ್ಞಾಪಕಾರ್ಥ ಪೂಜೆಗೆ ಊಟಕ್ಕೆ ಮೊದಲೇ ನಾವು ಚರ್ಚ್‌ಗೆ ಹೋದೆವು.

"ಅವರೀಗ ಬದುಕಿದ್ದಿದ್ದರೆ!" ಎಂಬ ಆಲೋಚನೆ ನನ್ನ ಮನಸ್ಸಿನಲ್ಲಿ ಸುಳಿಯಿತು, ನನ್ನ ಆಲೋಚನೆಗಳ ಅತ್ಯಂತ ಆಪ್ತ ಗೆಳೆಯರಾಗಿದ್ದ ಅವರ ತೋಳುಗಳಿಗೆ ಮೌನವಾಗಿ ಒರಗಿಕೊಂಡೆ. ಪೂಜೆಯ ವೇಳೆ ಚಾಪೆಲ್ ತಣ್ಣನೆಯ ನೆಲಕ್ಕೆ ನನ್ನ ಹಣೆಯನ್ನು ಒತ್ತಿದಾಗ, ನನಗೆ ಅಪ್ಪನ ಚಿತ್ರ ಬಗೆಗಣ್ಣೆದುರು ಸ್ಪಷ್ಟವಾಗಿ ಕಾಣಿಸಿಕೊಂಡಿತು: ನನ್ನನ್ನವರು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ ಎಂಬ ನಂಬಿಕೆಯುಂಟಾಯಿತು, ಅವರ ಆತ್ಮವು ಇಲ್ಲೇ ಸುಳಿದಾಡುತ್ತ ನನ್ನ ಮೇಲೆ ಆಶೀರ್ವಾದಗಳನ್ನು ಸುರಿಸುತ್ತಿದೆ ಎನಿಸಿತು. ನನ್ನ ನೆನಪುಗಳು ಹಾಗೂ ನಿರೀಕ್ಷೆಗಳೆಲ್ಲ, ನನ್ನ ಸಂತಸ ದುಮ್ಮಾನಗಳೆಲ್ಲ ಸೇರಿ ನನ್ನಲ್ಲಿ ಯಾವುದೋ ಗಂಭೀರ ತೃಪ್ತಿಯ ಭಾವನೆಯನ್ನುಂಟುಮಾಡಿ ಸುತ್ತಲಿನ ಅಚ್ಚ ಗಾಳಿ, ಮೌನ, ವಿಶಾಲ ಹೊಲಗಳು ಹಾಗೂ ನಿರಭ್ರ ಆಕಾಶದಿಂದ ಹೊರಸೂಸುತ್ತಿದ್ದ, ಮಿರುಗುತ್ತಿದ್ದರೂ ಸುಡದೆ ನನ್ನ ಕದಪುಗಳಿಗೆ ತಾಕಿ ಸುತ್ತಲೂ ಹರಡಿಕೊಂಡಿದ್ದ ಸೂರ್ಯನ ಬಿಸಿಲು-ಇವೆಲ್ಲದಕ್ಕೆ ಅನುಗುಣವಾಗಿತ್ತು. ನನ್ನ ಸಂಗಾತಿಯು ನನ್ನ ಭಾವನೆಗಳನ್ನು ಅರ್ಥಮಾಡಿಕೊಳ್ಳುವುದಷ್ಟೇ ಅಲ್ಲದೆ ತಾನೂ ಅದರಲ್ಲಿ ಭಾಗಿಯಾಗುತ್ತಿದ್ದರು. ಅವರು ನಿಧಾನವಾಗಿ ಸದ್ದಿಲ್ಲದೆ ನಡೆದುಬರುತ್ತಿದ್ದರು; ಅವರ ಮುಖವು, ನಾನು ಆಗಾಗ್ಗೆ ಓರೆನೋಟದಿಂದ ನೋಡಿದಾಗ, ನಾನು ಪ್ರಕೃತಿಯೊಡನೆ ಅನುಭವಿಸುತ್ತಿದ್ದ ಸಂತಸ-ದುಃಖಗಳ ಸಮ್ಮಿಶ್ರ ಭಾವನೆಯ ಗಂಭೀರ ಮನೋಭಾವವನ್ನೇ ಅವರೂ ವ್ಯಕ್ತಪಡಿಸುವಂತಿತ್ತು.

ಇದ್ದಕ್ಕಿದ್ದ ಹಾಗೆ ಅವರು ನನ್ನ ಕಡೆ ನೋಡಿದರು, ನನ್ನೊಂದಿಗೆ ಮಾತನಾಡುವ ಆಸೆ ಇದ್ದಂತಿತ್ತು. "ನನ್ನ ಮಸ್ಸಿನಲ್ಲಿರೋದಕ್ಕಿಂತ ಬೇರೆಯಾದ ವಿಷಯದ ಬಗ್ಗೆ ಮಾತಾಡಬೇಕೂಂತ ಅವರಿದ್ದರೆ" ಅಂದುಕೊಂಡೆ. ಆದರೆ ಅವರು ನಮ್ಮ ತಂದೆಯ ಜತೆ ಮಾತಾಡತೊಡಗಿದರು, ಆದರೆ ಅವರ ಹೆಸರನ್ನು ಮಾತ್ರ ಹೇಳಲಿಲ್ಲ.

"ಅವರೊಂದು ಸಲ ನಂಗೆ ಹೇಳಿದ್ರು ತಮಾಷೆಯಿಂದ, 'ನೀನು ನಮ್ಮ ಮಾಷಾಳನ್ನು ಮದುವೆ ಆಗ್ಬೇಕು' ಅಂತ" ಎಂದು ಮಾತಿಗೆ ತೊಡಗಿದರು.

"ಅವರೀಗ ಇದ್ದಿದ್ರೆ ತುಂಬ ಸಂತೋಷಪಡ್ತಿದ್ರು" ಎಂದೆ ನಾನು, ನನ್ನನ್ನು ಹಿಡಿದಿದ್ದ

ಅವರ ತೋಳಿಗೆ ಹತ್ತಿರವಾಗುತ್ತ.

"ಆಗ ನೀವಿನ್ನೂ ಮಗು" ಎಂದರವರು ನನ್ನ ಕಣ್ಣುಗಳಲ್ಲೆ ದೃಷ್ಟಿ ನೆಟ್ಟು. "ನಾನಾಗ ಆ ಕಣ್ಣುಗಳನ್ನು ಇಷ್ಟಪಡ್ತಿದ್ದೆ, ಅವುಗಳಿಗೆ ನಾನು ಮುತ್ತು ಕೊಡ್ತಾ ಇದ್ದದ್ದು ಅವು ಅವರವದರ ಹಾಗಿದೆ ಅಂತ, ಮುಂದೆ ನನಗೆ ಅವುಗಳೇ ತುಂಬ ಇಷ್ಟದ ವಸ್ತುವಾಗತ್ತೆ ಅಂತ ಆಗ ಅಂದ್ಕೊಂಡಿರ್ಲಿಲ್ಲ. ನಿಮ್ಮನ್ನಾಗ ನಾನು ಮಾಷಾ ಅಂತಲೇ ಕರೀತಿದ್ದೆ."

"ನನ್ನನ್ನ ನೀವು ಏಕವಚನದಲ್ಲೇ ಕರೀಬೇಕು ಅಂತ ನನ್ನಾಸೆ" ಎಂದೆ ನಾನು.

"ಹಾಗೆ ಕರೀಯೋದಕ್ಕೇ ಹೊರಟಿದ್ದೆ; ನೀನು ಪೂರ್ತಿ ನನ್ನವಳೆ ಅಂತ ಮೊದಲ ಸಲ ನನಗೆ ಅನ್ನಿಸ್ತಿದೆ" ಎಂದು ಹೇಳಿದರು. ಅವರ ಪ್ರಶಾಂತ ಸಂತಸದ ನೋಟ ನನ್ನ ಮೇಲೆ ನೆಲೆ ನಿಂತಿತು.

ತುಳಿದೂ ತುಳಿದೂ ಜಾಡುಬಿದ್ದ ಕೂಳೆಗಳ ಹಾದಿಯಲ್ಲಿ ನಾವು ಮುಂದೆ ಹೋದೆವು; ನಮ್ಮ ಧ್ವನಿಗಳು ಹಾಗೂ ಹೆಜ್ಜೆಯ ಸದ್ದು ಮಾತ್ರ ಕೇಳಿಸುತ್ತಿದ್ದ ಶಬ್ದಗಳು. ಕಂದು ಬಣ್ಣದ ಕೂಳೆಗಳು ಒಂದು ಕಡೆಗೆ ದೂರದ ಎಲೆಗಳಿಲ್ಲದ ಮರಗಳವರೆಗಿನ ಹೊಲದಲ್ಲಿ ಹರಡಿಕೊಂಡಿದ್ದವು; ಅದರಲ್ಲಿ ಬರಬರುತ್ತ ವಿಶಾಲವಾಗಿದ್ದ ಎರೆಮಣ್ಣಿದ್ದ ಭಾಗದಲ್ಲಿ ಒಬ್ಬ ರೈತ ಸದ್ದಿಲ್ಲದೆ ಉಳುಮೆ ಮಾಡುತ್ತಿದ್ದ. ಬೆಟ್ಟದ ಬುಡದಲ್ಲಿ ಚೆದುರಿದಂತೆ ಮೇಯುತ್ತಿದ್ದ ಕುದುರೆಗಳ ದಂಡು ಹತ್ತಿರವಿದ್ದ ಹಾಗೆ ಕಾಣುತ್ತಿದ್ದವು. ಮತ್ತೊಂದು ಭಾಗದಲ್ಲಿ, ತೋಟದಲ್ಲಿನ ಮರಗಳ ನಡುವೆ ಇಣುಕಿ ನೋಡುತ್ತಿದ್ದ ನಮ್ಮ ಮನೆ ಇದ್ದ ಜಾಗದವರೆಗೂ, ಬಿಸಿಲಿನಲ್ಲಿ ಬೆಂದಿದ್ದ ಮಾಗಿ ಬೆಳೆಯ ಹೊಲವು ಕಪ್ಪಗೆ ಕಾಣುತ್ತಿತ್ತು; ನಡುನಡುವೆ ಹಸಿರು ತೇಪೆಗಳು. ಮಾಗಿಯ ಬಿಸಿಲು ಎಲ್ಲದರ ಮೇಲೇ ರಾರಾಜಿಸುತ್ತಿತ್ತು, ಎಲ್ಲವನ್ನೂ ದೊಡ್ಡ ದೊಡ್ಡ ಜೇಡರಬಲೆಗಳು ಆವರಿಸಿದ್ದುವು, ಅವೋ ನಮ್ಮ ಸುತ್ತಲೂ ಗಾಳಿಯಲ್ಲಿ ತೂಗಾಡುತ್ತಿದ್ದವು, ಮಂಜು ಬಿದ್ದು ಒಣಗಿದ್ದ ಕೂಳೆಗಳ ಮೇಲೆ ಬಿದ್ದಿದ್ದವು, ನಮ್ಮ ಕೂದಲು ಕಣ್ಣುಗಳು ಹಾಗೂ ಬಟ್ಟೆಗಳ ಮೇಲೆಲ್ಲ ಹರಡಿಕೊಂಡಿದ್ದವು. ನಾವು ಮಾತಾಡುವಾಗ, ನಮ್ಮ ಧ್ವನಿಗಳು ನಮ್ಮ ಮೇಲಿನ ನಿಶ್ಚಲ ಗಾಳಿಯಲ್ಲಿ ತೇಲಾಡುತ್ತಿದ್ದವು; ಇದರಿಂದಾಗಿ ಇಡೀ ಜಗತ್ತಿನಲ್ಲಿದ್ದವರು ನಾವಿಬ್ಬರೇ ಅನ್ನಿಸುವಂತಿತ್ತು ಆಗಸದ ನೀಲಿ ಸೂರಿನಡಿ, ಚುರುಗುಟ್ಟದೆ ಮೇಲೆ ಬಿದ್ದ ಮಾಗಿ ಬಿಸಿಲಿನ ಕಿರಣಗಳಲ್ಲಿ ತೊಯ್ದು.

ನಾನೂ ಅವರನ್ನು ಏಕವಚನದಲ್ಲೇ ಕರೆಯಬೇಕು ಅಂದುಕೊಂಡೆ, ಆದರೆ ನಾಚಿಕೆಯಾಯಿತು.

"ನೀನ್ಯಾಕೆ ಅಷ್ಟೊಂದು ಜೋರಾಗಿ ನಡೀತಿದ್ದೀ?" ಎಂದೆ ನಾನು ತಕ್ಷಣ ಪಿಸುಗುಡುತ್ತ, ಜೊತೆಗೆ ನಾಚಿಕೆ ನನ್ನನ್ನಾವರಿಸಿತು.

ಅವರು ತಮ್ಮ ನಡಿಗೆಯನ್ನು ನಿಧಾನಗೊಳಿಸಿದರು, ಅವರು ನನ್ನ ಕಡೆ ಮತ್ತೆ ಮುಖ ತಿರುಗಿಸಿ ನೋಡಿದಾಗ ಆ ನೋಟದಲ್ಲಿ ಮತ್ತಷ್ಟು ಆಪ್ತತೆ, ಸಂತಸ ಹಾಗೂ

ಉಲ್ಲಾಸಗಳು ಕಾಣಿಸಿದವು.

ಮನೆಗೆ ವಾಪಸಾದಾಗ ಅಲ್ಲಿ ಅವರ ತಾಯಿ ಹಾಗೂ ಮಿಕ್ಕೆಲ್ಲ ಅನಿವಾರ್ಯ ಅತಿಥಿಗಳು ಬಂದಿದ್ದರು, ಮತ್ತೆ ಚರ್ಚಿನಿಂದ ಹೊರಟು ನಿಕೋಲ್ಸ್ಕೊಯಿಗೆ ಗಾಡಿಯಲ್ಲಿ ಕೂತು ಬಂದು ತಲುಪುವವರೆಗೂ ನಾವಿಬ್ಬರೂ ಜೊತೆಯಾಗಿಯೇ ಇದ್ದೆವು.

ಚರ್ಚ್ ಹೆಚ್ಚು ಕಡಿಮೆ ಖಾಲಿಯಾಗಿತ್ತು: ಬಲಿಪೀಠದ ಬಳಿ ಅವರ ತಾಯಿ ಚಾಪೆಯೊಂದರ ಮೇಲೆ ನಿಂತಿದ್ದುದು ಗೋಚರಿಸಿತು, ಜೊತೆಯಲ್ಲಿ ಗುಲಾಬಿ ಬಣ್ಣದ ರಿಬ್ಬನ್ ಇದ್ದ ಟೋಪಿ ಧರಿಸಿ, ಕೆನ್ನೆಯ ಮೇಲೆ ಒಂದೆರಡು ಹನಿ ಕಣ್ಣೀರು ಕೂತಿದ್ದ ಕಾತ್ಯಾ ಹಾಗೂ ನನ್ನ ಕಡೆಗೇ ಕುತೂಹಲದಿಂದ ನೋಡುತ್ತಿದ್ದ ನಮ್ಮ ಮನೆಯ ಇಬ್ಬರು ಮೂವರು ಆಳುಗಳೂ ಇದ್ದರು. ನಾನು ಅವರ ಕಡೆ ನೋಡಲಿಲ್ಲ, ಆದರೆ ನನ್ನ ಪಕ್ಕದಲ್ಲಿ ಅವರಿದ್ದ ಅನುಭವ ಮಾತ್ರ ಇತ್ತು. ನಾನು ಪ್ರಾರ್ಥನಾನುಡಿಗಳಿಗೆ ಜೊತೆಯಾದೆ, ಆ ನುಡಿಗಳನ್ನು ಪುನರುಚ್ಚರಿಸಿದೆ, ಆದರೆ ಅವು ನನ್ನ ಹೃದಯದಲ್ಲಿ ಮಾರ್ದನಿಗೊಳ್ಳಲಿಲ್ಲ. ಪ್ರಾರ್ಥಿಸಲಾಗದೆ ನಾನು ವಿಗ್ರಹಗಳು, ಮೇಣದ ಬತ್ತಿಗಳು, ಪಾದ್ರಿಗಳ ಕಸೂತಿ ಮಾಡಿದ್ದ ನಿಲುವಂಗಿ, ಪರದೆ ಹಾಗೂ ಕಿಟಕಿಯ ಕಡೆ ತಳಮಳದಿಂದ ಕಣ್ಣಾಡಿಸಿದೆ, ಆದರೆ ಯಾವುದನ್ನೂ ಮನಸ್ಸಿಗೆ ತಂದುಕೊಳ್ಳಲಿಲ್ಲ. ನನಗೆ ಏನೋ ವಿಚಿತ್ರವಾದುದನ್ನು ಮಾಡುತ್ತಿರುವ ಅನುಭವವಾಯಿತು. ಕೊನೆಗೆ ತಮ್ಮ ಕೈಯಲ್ಲಿ ಶಿಲುಬೆ ಹಿಡಿದು ಪಾದ್ರಿಗಳು ನಮ್ಮ ಕಡೆ ತಿರುಗಿ ನಮಗೆ ಅಭಿನಂದನೆ ಸಲ್ಲಿಸಿ ಹೀಗೆಂದರು: "ನಾನು ನಿನ್ನ ನಾಮಕರಣದಲ್ಲಿದ್ದೆ, ಈಗ ನಿನ್ನ ಮದುವೆಯ ಸಮಯಕ್ಕೂ ಇರುವುದು ದೇವರ ಕೃಪೆಯಿಂದ." ಕಾತ್ಯಾ ಮತ್ತು ಅವರ ತಾಯಿ ನಮ್ಮನ್ನು ಮುತ್ತಿಕ್ಕಿದರು, ಗಾಡಿಯನ್ನು ಕರೆಯುತ್ತಿದ್ದ ಗ್ರಿಗರಿಯ ಧ್ವನಿ ಕೇಳಿಸಿತು. ಆದರೆ ನನಗಂತೂ ಭಯವಾಗಿತ್ತು, ನಿರಾಶೆಯೂ ಆಗಿತ್ತು: ಎಲ್ಲ ಮುಗಿದ ಮೇಲೂ ಅಂಥ ಅಸಾಧಾರಣವಾದುದು, ನನಗೀಗ ತಾನೆ ಮಾಡಿದ್ದ ಧರ್ಮವಿಧಿಗೆ ತಕ್ಕುದಾದುದು ಏನೂ ನನ್ನೊಳಗೆ ಸಂಭವಿಸಿರಲಿಲ್ಲ. ಅವರೂ ನಾನೂ ಪರಸ್ಪರ ಮುತ್ತಿಕ್ಕಿದೆವು, ಆದರೆ ಆ ಮುತ್ತು ವಿಚಿತ್ರವಾಗಿತ್ತು, ನಮ್ಮ ಭಾವನೆಗಳನ್ನು ಸೂಚಿಸುವಂಥದಾಗಿರಲಿಲ್ಲ. 'ಇಷ್ಟೇನಾ!' ಅನ್ನಿಸಿತು ನನಗೆ. ನಾವು ಚರ್ಚಿನಿಂದ ಹೊರಬಂದೆವು, ಚಕ್ರಗಳ ಧ್ವನಿ ಕಮಾನು ಸೂರಿನಡಿ ಅನುರಣಿಸಿತು, ನನ್ನ ಮುಖದ ಮೇಲೆ ತಂಗಾಳಿ ಬೀಸಿತು, ತಮ್ಮ ಹ್ಯಾಟ್ ತಲೆಗೆ ಹಾಕಿಕೊಂಡ ಅವರು ನನ್ನನ್ನು ಗಾಡಿಗೆ ಹತ್ತಿಸಿದರು. ಕಾವಳ ಮುಸುಕಿದ ಚಂದ್ರ ಕಿಟಕಿಯ ಮೂಲಕ ಕಾಣಿಸಿತು, ಅದರ ಸುತ್ತ ಪ್ರಭಾವಳಿಯಿತ್ತು. ನನ್ನ ಪಕ್ಕದಲ್ಲಿ ಕುಳಿತ ಅವರು ಗಾಡಿಯ ಬಾಗಿಲು ಮುಚ್ಚಿದರು. ನನ್ನಲ್ಲಿ ಇದ್ದಕ್ಕಿದ್ದಂತೆ ಸಂಕಟ ಆರಂಭವಾಯಿತು. ಅವರ ಸಮಾಧಾನದ ಮಾತುಗಳು ಚುಚ್ಚಿದವು. ತಲೆಯ ಮೇಲೆ ಹೊದ್ದುಕೊಳ್ಳುವಂತೆ ಕಾತ್ಯಾ ಕೂಗಿ ಹೇಳಿದಳು. ಗಾಡಿಯ ಚಕ್ರಗಳು ಕಲ್ಲುಗಳ ಮೇಲೆ ಗಡಗಡ ಉರುಳುತ್ತ ನೇರ ರಸ್ತೆಗೆ ಬಂತು, ಹೀಗೆ ನಾವು ಹೊರಟೆವು. ಒಂದು ಮೂಲೆಯಲ್ಲಿ ಮುದುರಿ ಕುಳಿತ ನಾನು ವಿಶಾಲವಾದ ಹೊಲ ಹಾಗೂ ಬೆಳದಿಂಗಳಲ್ಲಿ ಹೊಳೆಯುತ್ತಿದ್ದ ರಸ್ತೆಗಳ ಕಡೆಗೆ

ನೋಡುತ್ತಿದ್ದೆ. ಅವರ ಕಡೆ ನೋಡದಿದ್ದರೂ, ಪಕ್ಕದಲ್ಲಿ ಅವರಿದ್ದ ಅನುಭವವಾಗುತ್ತಿತ್ತು. 'ಏನೇನೋ ನಿರೀಕ್ಷಿಸಿದ್ದ ಕ್ಷಣದಿಂದ ನಾನು ಪಡೆದದ್ದು ಇಷ್ಟೇನೇ' ಅನ್ನಿಸಿತು. ಅವರ ಪಕ್ಕದಲ್ಲಿ, ಅದೂ ಅಷ್ಟು ಸನಿಹ, ಒಬ್ಬಳೇ ಕುಳಿತಿರುವುದು ಅವಮಾನಕರ, ಸಂಕಟಕರ ಅನ್ನಿಸಿತು. ಮಾತನಾಡಲೆಂದು ನಾನವರ ಕಡೆಗೆ ತಿರುಗಿದೆ, ಆದರೆ ಬಾಯಿಂದ ಮಾತುಗಳೇ ಹೊರಡಲಿಲ್ಲ, ನನ್ನ ಪ್ರೇಮವೆಲ್ಲ ಕರಗಿ ಹೋಗಿ ಸಂಕಟ, ಗಾಬರಿಗಳ ಅನುಭವ ವುಂಟಾಯಿತು.

"ಇದೆಲ್ಲ ಸಾಧ್ಯವಾಗಬಹುದೆಂಬ ನಂಬಿಕೆ ನನಗೆ ಈ ಕ್ಷಣದವರೆಗೂ ಉಂಟಾಗಿರಲಿಲ್ಲ" ಎಂದರು, ನಾನು ನೋಡಿದ್ದಕ್ಕೆ ಉತ್ತರವೆಂಬಂತೆ ಪಿಸುಮಾತಲ್ಲಿ.

"ಆದರೆ ನನಗ್ಯಾಕೋ ಭಯವಾಗ್ತಿದೆ" ಎಂದೆ ನಾನು.

"ನನ್ನ ಕಂಡರೆ ಭಯವೇ, ಮರಿ" ಎಂದರು ನನ್ನ ಕೈಯನ್ನು ತಮ್ಮದರಲ್ಲಿ ಹಿಡಿದು ಮುಂದೆ ಬಾಗಿ.

ಅವರ ಕೈಯಲ್ಲಿ ನನ್ನ ಕೈ ನಿರ್ಜೀವವಾಗಿ ಬಿದ್ದಿತ್ತು, ನನ್ನ ಎದೆಯಾಳದ ಕುಳಿರು ಭಾರರಹಿತವಾಗಿತ್ತು.

"ಹ್ಞೂಂ" ಎಂದೆ.

ಆದರೆ ಆ ಕ್ಷಣ ನನ್ನ ಹೃದಯದ ಬಡಿತ ತೀವ್ರವಾಯಿತು, ನನ್ನ ಕೈ ನಡುಗಿ ಅವರ ಕೈಯನ್ನು ಅದುಮಿತು, ಮೈಯೆಲ್ಲ ಬಿಸಿಯಾಯಿತು, ಆ ಅರೆಗತ್ತಲಲ್ಲಿ ನನ್ನ ಕಣ್ಣುಗಳು ಅವರದನ್ನು ಅರಸಿದವು, ಆದರೆ ಇದ್ದಕ್ಕಿದ್ದಂತೆ ನಾನು ಅವರ ಬಗ್ಗೆ ಭಯಪಡುತ್ತಿಲ್ಲ, ಈ ಭಯವೇ ಪ್ರೀತಿ ಅನ್ನಿಸಿತು, ಈ ಹೊಸ ಪ್ರೀತಿ ಹಳೆಯದಕ್ಕಿಂತ ಮತ್ತಷ್ಟು ಮಿದುವಾದುದು, ದೃಢವಾದುದು ಅನ್ನಿಸಿತು. ನಾನು ಸಂಪೂರ್ಣವಾಗಿ ಅವರಿಗೆ ಸೇರಿದವಳು ಎಂಬ ಭಾವನೆ ಬಂತು, ನನ್ನ ಮೇಲೆ ಅವರಿಗೆ ಸಂಪೂರ್ಣ ಅಧಿಕಾರ ಎಂಬ ಕಾರಣದಿಂದ ನನಗೆ ಆನಂದವಾಯಿತು.

# ಭಾಗ 2

## 1

ಹಳ್ಳಿಯಲ್ಲಿನ ಏಕಾಂತದ ದಿನಗಳು, ವಾರಗಳು - ಹೀಗೆ ಎರಡು ತಿಂಗಳುಗಳೇ ಗೊತ್ತಾಗದ ಹಾಗೆ ಮುಗಿದುಹೋದುವು ಎಂದುಕೊಂಡೆವು; ಆದರೆ ಆ ಎರಡು ತಿಂಗಳುಗಳಲ್ಲಿನ ಭಾವನೆಗಳು, ಅನಿಸಿಕೆಗಳು ಮತ್ತು ಸುಖ ಒಂದು ಬದುಕಿಗೇ ಸಾಕಾಗುವಷ್ಟಿತ್ತು. ನಮ್ಮ ಹಳ್ಳಿಯ ಬದುಕನ್ನು ಪುನಾರೂಪಿಸಿಕೊಳ್ಳುವ ನಮ್ಮ ಯೋಜನೆ ಮಾತ್ರ ನಿರೀಕ್ಷಿಸಿದಂತೆ ಕಾರ್ಯಗತಗೊಳ್ಳಲಿಲ್ಲ; ಆದರೆ ವಾಸ್ತವಸ್ಥಿತಿಯು ನಮ್ಮ ಆದರ್ಶಕ್ಕಿಂತ ಕಡಿಮೆಮಟ್ಟದ್ದಾಗಿರಲಿಲ್ಲ. ನಮ್ಮ ಮದುವೆಗೆ ಮುಂಚೆ ನಾನು

ಕಲ್ಪಿಸಿಕೊಂಡಿದ್ದ ಕಷ್ಟದ ದುಡಿಮೆಯಾಗಲೀ, ಕರ್ತವ್ಯ ನಿರ್ವಹಣೆಯಾಗಲೀ, ಆತ್ಮತ್ಯಾಗ ವಾಗಲೀ, ಇತರರಿಗಾಗಿ ಬದುಕುವುದಾಗಲೀ ಇರಲಿಲ್ಲ; ಅದಕ್ಕೆ ವ್ಯತಿರಿಕ್ತವಾಗಿ ಒಬ್ಬರೊಬ್ಬರಿಗಾಗಿ ಅನುಭವಿಸುತ್ತಿದ್ದ ಪ್ರೀತಿಯೆಂಬ ಸ್ವಾರ್ಥ, ನನ್ನನ್ನು ಪ್ರೀತಿಸಲೆಂಬ ಬಯಕೆ, ನಿರಂತರ ಅಕಾರಣ ಹುಮ್ಮಸ್ಸು ಹಾಗೂ ಜಗತ್ತಿನ ಬಗ್ಗೆ ಅರಿವೇ ಇಲ್ಲದ ಮನಃಸ್ಥಿತಿ ಇವು ತುಂಬಿಕೊಂಡಿದ್ದವು. ನಮ್ಮ ಯಜಮಾನರು ಕೆಲವೊಮ್ಮೆ ಕೆಲಸ ಮಾಡಲೆಂದು ತಮ್ಮ ಓದುಕೋಣೆಯಲ್ಲಿರುತ್ತಿದ್ದರು ಅಥವಾ ವ್ಯವಹಾರದ ಮೇಲೆ ಬೇರೆ ಊರುಗಳಿಗೆ ಹೋಗುತ್ತಿದ್ದರು ಅಥವಾ ಜಮೀನಿನ ಉಸ್ತುವಾರಿ ನೋಡಿ ಕೊಳ್ಳುವುದರಲ್ಲಿ ನಿರತರಾಗಿರುತ್ತಿದ್ದರು ಎಂಬುದು ನಿಜ. ಆದರೆ ನನ್ನಿಂದ ದೂರ ವಾಗಿರುವುದು ಅವರಿಗೆಷ್ಟು ಕಷ್ಟ ಎಂಬ ಅರಿವು ನನಗಿತ್ತು. ನಾನಿಲ್ಲದಾಗ ಮಾಡುವ ಪ್ರತಿಯೊಂದು ಕೆಲಸವೂ ಅವರಿಗೆ ಕೆಲಸಕ್ಕೆ ಬಾರದ್ದಾಗಿ ಅನ್ನಿಸುತ್ತಿತ್ತೆಂಬುದನ್ನು, ಅದರಲ್ಲಿ ಆಸಕ್ತಿಯೇ ಹುಟ್ಟದಿರುತ್ತಿದ್ದುದನ್ನು ಅವರು ಆಮೇಲೆ ಒಪ್ಪಿಕೊಳ್ಳುತ್ತಿದ್ದರು. ನನ್ನ ಸ್ಥಿತಿಯಾದರೂ ಅಂತಹುದೇ. ಓದಿನಲ್ಲಿಯೋ, ಪಿಯಾನೋ ನುಡಿಸುವುದರಲ್ಲಿಯೋ ಅಥವಾ ಅವರ ತಾಯಿಯ ಜೊತೆ ಮಾತನಾಡುವುದೋ ಅಥವಾ ಶಾಲೆಯಲ್ಲಿ ಪಾಠ ಹೇಳಿಕೊಡುವುದೋ-ಯಾವುದರಲ್ಲಾದರೂ-ನಾನು ತೊಡಗಿಕೊಳ್ಳುತ್ತಿದ್ದುದು ಇವೆಲ್ಲ ಅವರಿಗೆ ಸಂಬಂಧಿಸಿದವೂ ಅವರಿಗೆ ಒಪ್ಪಿತವಾಗಿದ್ದವು ಎಂಬ ಕಾರಣದಿಂದ ಮಾತ್ರ. ಆದರೆ ಯಾವುದೇ ಕೆಲಸದಲ್ಲಿ ಅವರ ನೆನಪು ಬಾರದಿದ್ದರೆ ನನ್ನ ಕೈ ಹಿಂಜರಿಯುತ್ತಿತ್ತು, ಅವರಿಲ್ಲದೆ ಬೇರಾವುದೂ ಇರುವುದು ಅಶಕ್ಯ ಎಂಬ ಭಾವನೆಯುಂಟಾಗುತ್ತಿತ್ತು. ಇದು ತಪ್ಪು ಭಾವನೆಯಾಗಿರಬಹುದು ಅಥವಾ ಸ್ವಾರ್ಥವಿರಬಹುದು, ಆದರೆ ಇದರಿಂದ ನನಗೆ ಸಂತಸವುಂಟಾಗುತ್ತಿತ್ತು, ನೆಲದಿಂದ ನಾನು 'ಅತ್ಯತಿಷ್ಠದ್ದಶಾಂಗುಲ' ಎನಿಸುತ್ತಿತ್ತು. ಈ ನೆಲದ ಮೇಲೆ ನನ್ನ ಮಟ್ಟಿಗೆ ಇರುವುದು ಅವರೊಬ್ಬರು ಮಾತ್ರವೇ, ಇಡೀ ಜಗತ್ತಿನಲ್ಲಿಯೇ ಅತ್ಯಂತ ಶ್ರೇಷ್ಠ ವ್ಯಕ್ತಿ, ದೋಷಾತೀತರು ಎನ್ನಿಸುತ್ತಿತ್ತು. ಹೀಗಾಗಿ ಅವರನ್ನು ಹೊರತುಪಡಿಸಿ ಬೇರಾವುದಕ್ಕಾಗಿಯೂ ನಾನು ಬದುಕಬೇಕಾಗಿರಲಿಲ್ಲ, ನನ್ನ ಏಕೈಕ ಉದ್ದೇಶವೆಂದರೆ ಅವರು ನನ್ನ ಬಗ್ಗೆ ಎಂಥ ಕಲ್ಪನೆಯನ್ನು ಹೊಂದಿದ್ದಾರೆಂದು ಕಂಡುಕೊಳ್ಳುವುದು. ಅವರ ದೃಷ್ಟಿಯಲ್ಲಿ ನಾನು ಮೊದಲಿಗಳು ಹಾಗೂ ಜಗತ್ತಿನಲ್ಲಿ ಅತ್ಯುತ್ಕೃಷ್ಟ ಹೆಂಗಸು, ಎಲ್ಲ ಸದ್ಗುಣಗಳ ಸಾಕಾರ. ಜಗತ್ತಿನ ಮೊದಲ ಹಾಗೂ ಶ್ರೇಷ್ಠ ಗಂಡಸಿನ ದೃಷ್ಟಿಯಲ್ಲಿ ನಾನು ಅಂತಹ ಹೆಂಗಸಾಗಬೇಕೆಂದು ಹಂಬಲಿಸಿದೆ.

ಒಂದು ದಿನ ನಾನು ಪ್ರಾರ್ಥನೆ ಮಾಡುತ್ತಿರುವಾಗ ಅವರು ನನ್ನ ಕೋಣೆಗೆ ಬಂದರು. ಅವರನ್ನು ಗಮನಿಸಿಯೂ ನಾನು ನನ್ನ ಪ್ರಾರ್ಥನೆಯಲ್ಲಿ ಮಗ್ನಳಾಗಿದ್ದೆ. ನನಗೆ ತೊಂದರೆ ಕೊಡಲಿಚ್ಛಿಸದೆ ಅವರು ಮೇಜಿನ ಬಳಿ ಕೂತು ಪುಸ್ತಕವೊಂದನ್ನು ತಿರುವಿಹಾಕತೊಡಗಿದರು. ಆದರೆ ಅವರು ನನ್ನನ್ನು ನೋಡುತ್ತಿರಬೇಕೆನ್ನಿಸಿ ನಾನೂ ಹಿಂದಿರುಗಿದೆ. ಅವರು ಮುಗುಳ್ನಕ್ಕರು, ನಾನೂ ನಕ್ಕೆ, ನನ್ನ ಪ್ರಾರ್ಥನೆಯನ್ನಾಗ ನಿಲ್ಲಿಸಬೇಕಾಯಿತು.

“ನೀವು ಆಗಲೇ ಪ್ರಾರ್ಥನೆ ಮಾಡಿ ಮುಗಿಸಿಬಿಟ್ಟಿರಾ?” ಎಂದೆ.

“ಹ್ಞೂ, ನೀನೀಗ ಮುಂದುವರಿಸು, ನಾನು ಹೋಗ್ತೀನಿ.”

“ನೀವು ದಿನಾ ಪ್ರಾರ್ಥನೆ ಮಾಡ್ತೀರಿ ತಾನೇ?”

ಅವರೇನೂ ಹೇಳದೆ ಕೋಣೆಯಿಂದ ಹೊರಹೋಗಲನುವಾದರು, ಆದರೆ ನಾನು ತಡೆದು ನಿಲ್ಲಿಸಿದೆ.

“ಮುದ್ದು ಮರಿ, ನನ್ನ ಜೊತೆ ಮತ್ತೆ ಪ್ರಾರ್ಥನೆ ಮಾಡು!” ಎಂದು ನನ್ನ ಪಕ್ಕದಲ್ಲಿ ನಿಂತರು, ತಮ್ಮ ಕೈಯನ್ನು ಇಳಿಬಿಟ್ಟು ಆರಂಭಿಸಿದರು, ಅವರ ಮುಖ ಗಂಭೀರ ವಾಗಿತ್ತಾದರೂ ಒಂದಷ್ಟು ಅನುಮಾನವಿದ್ದಂತಿತ್ತು. ಒಪ್ಪಿಗೆ ಹಾಗೂ ಸಹಾಯಕ್ಕಾಗಿ ಅವರು ಆಗಾಗ ನನ್ನ ಕಡೆ ತಿರುಗಿ ನೋಡುತ್ತಿದ್ದರು.

ಕೊನೆಯಾದಾಗ ನಾನು ನಕ್ಕು ಅವರನ್ನಪ್ಪಿಕೊಂಡೆ.

“ನಾನು ಹತ್ತರಷ್ಟಾದೆ ಅನ್ನೋ ಭಾವನೆ ಬಂತು ನಂಗೆ! ನೀನೇ ಅದನ್ನೆಲ್ಲ ಮಾಡು!” ಎಂದರವರು, ನನ್ನ ಕೈಗೆ ಮುತ್ತಿಡುತ್ತ, ಅವರ ಮುಖದಲ್ಲಿ ನಸು ನಾಚಿಕೆಯಿತ್ತು.

ನಮ್ಮದು ಹಳೆಯ ಕಾಲದ ಹಳ್ಳಿಯ ಮನೆ, ಅದರ ಸೂರಡಿಯಲ್ಲಿ ವಂಶದ ಅನೇಕ ಪೀಳಿಗೆಗಳವರು ವಾಸಿಸಿದ್ದರು, ಪರಸ್ಪರರನ್ನು ಪ್ರೀತಿ ಗೌರವಗಳಿಂದ ನಡೆಸಿಕೊಂಡಿದ್ದರು. ಅದರಲ್ಲಿ ಸದ್ವಂಶದ ಸತ್ಸಂಪ್ರದಾಯ ತುಂಬಿತ್ತು, ನಾನು ಆ ಮನೆಗೆ ಬಂದ ಕ್ಷಣವೇ ಅದು ನನ್ನದೂ ಆಗಿಬಿಟ್ಟಿತೆಂಬ ಭಾವನೆ ಬಂದಿತು. ಮನೆಯ ಆಗುಹೋಗುಗಳ ನಿರ್ವಹಣೆಯ ಜವಾಬ್ದಾರಿಯೆಲ್ಲ ನಮ್ಮತ್ತೆ ತಾತ್ಯಾನಾ ಸೆಮೆನೋವ್ನಾ ಅವರದ್ದೇ, ಅದು ಹಿಂದಿನಂತೆಯೇ ನಡೆಯುತ್ತಿತ್ತು. ಅದರಲ್ಲಿ ಗತ್ತು ಚೆಲುವುಗಳು ಕಡಿಮೆಯೇ: ಆದರೆ ಆಳುಕಾಳುಗಳಿಂದ ಹಿಡಿದು ಸಾಮಾನು ಸರಂಜಾಮುಗಳು ಹಾಗೂ ತಿಂಡಿತೀರ್ಥಗಳವರೆಗೂ ಎಲ್ಲದಕ್ಕೂ ಸಮೃದ್ಧಿಯಿತ್ತು, ಎಲ್ಲದರಲ್ಲೂ ಅಚ್ಚುಕಟ್ಟು, ನಿಷ್ಕೃಷ್ಟತೆ ಹಾಗೂ ವ್ಯವಸ್ಥೆಯಿದ್ದು ನೋಡಿದವರಲ್ಲಿ ಗೌರವ ಮೂಡಿಸುತ್ತಿತ್ತು. ನಡುಮನೆಯಲ್ಲಿದ್ದ ಪೀಠೋಪಕರಣಗಳನ್ನೆಲ್ಲ ಪ್ರಮಾಣಬದ್ಧವಾಗಿ ಜೋಡಿಸಲಾಗಿತ್ತು; ಗೋಡೆಗಳ ಮೇಲೆ ಹಿರಿಯರ ವರ್ಣಚಿತ್ರಗಳು, ನೆಲದ ಮೇಲೆಲ್ಲ ಮನೆಯಲ್ಲಿ ಮಾಡಿದ ಜಮಖಾನೆ ಅಥವಾ ಚಾಪೆಗಳು. ಬೆಳಗಿನ ಕೊಠಡಿಯಲ್ಲಿ ಒಂದು ಹಳೆಯ ಪಿಯಾನೋ, ಎರಡು ಬಗೆಯ ಕಪಾಟುಗಳು, ಸೋಫಾಗಳು ಹಾಗೂ ಕಂಚಿನ ಅಲಂಕರಣ ವಸ್ತುಗಳನ್ನಿಟ್ಟಿದ್ದ ಕೆತ್ತನೆಯ ಕೆಲಸದ ಮೇಜುಗಳಿದ್ದವು. ನನ್ನ ಕೋಣೆಯನ್ನು ತಾತ್ಯಾನಾ ಸೆಮೆನೋವ್ನಾ ಅವರೇ ಖುದ್ದಾಗಿ ಅಲಂಕರಿಸಿದ್ದರು, ಅದರಲ್ಲಿದ್ದುದು ಮನೆಯಲ್ಲಿ ಅನೇಕ ಕಾಲದ ನಾನಾ ನಮೂನೆಗಳ ಅತ್ಯುತ್ಕೃಷ್ಟ ಮರದ ಪೀಠೋಕಪರಣಗಳು; ಅಲ್ಲಿ ಒಂದು ದೊಡ್ಡ ನಿಲುವುಗನ್ನಡಿ ಕೂಡ ಇತ್ತು. ಮೊದಮೊದಲು ಅದರಲ್ಲಿ ನೋಡಿಕೊಳ್ಳುವುದೆಂದರೆ ನನಗೆ ಹೆದರಿಕೆಯಾಗುತ್ತಿತ್ತು, ಆದರೆ ಬರಬರುತ್ತ ಅದು ನನ್ನ ಗೆಳತಿಯಂತಾಯಿತು. ಸಾಮಾನ್ಯವಾಗಿ ಮನೆಯಲ್ಲಿ

ತಾತ್ಯಾನಾ ಸೆಮೆನೋವ್ನಾ ಅವರ ಧ್ವನಿ ಕೇಳಿಸುವುದೇ ಇಲ್ಲ, ಆದರೂ ಮನೆಯ ಕೆಲಸಕಾರ್ಯಗಳೆಲ್ಲ ಗಡಿಯಾರದಂತೆ ಕರಾರುವಾಕ್ಕಾಗಿ ಸಾಗುತ್ತಿತ್ತು. ಮನೆಯಲ್ಲಿದ್ದ ಆಳುಗಳು ಬಹಳ (ಅವರೆಲ್ಲ ಹಿಮ್ಮಡಿಯಿಲ್ಲದ ಮಿದು ಬೂಟುಗಳನ್ನು ಧರಿಸಿರುತ್ತಿದ್ದರು, ಏಕೆಂದರೆ ತಾತ್ಯಾನಾ ಸೆಮೆನೋವ್ನಾ ಅವರಿಗೆ ಬೂಟುಹಿಮ್ಮಡಿಗಳ ಕಿರುಗುಟ್ಟುವ ಅಥವಾ ಕೀಚು ದನಿಯೆಂದರೆ ಆಗುತ್ತಿರಲಿಲ್ಲ); ಅವರೆಲ್ಲರಿಗೂ ತಮ್ಮ ಕೆಲಸವೆಂದರೆ ಹೆಮ್ಮೆ, ಹಿರಿಯ ಯಜಮಾನಿತಿಯೆಂದರೆ ಅವರೆಲ್ಲ ನಡುಗುತ್ತಿದ್ದರು, ನನ್ನನ್ನು ಹಾಗೂ ನಮ್ಮೆಜಮಾನರನ್ನು ಪ್ರೀತಿವಿಶ್ವಾಸಗಳಿಂದ ರಕ್ಷಕರಂತೆ ಕಾಣುತ್ತಿದ್ದರು, ತಮ್ಮ ಕರ್ತವ್ಯಗಳನ್ನೆಲ್ಲ ಅವರು ತೃಪ್ತಿಕರವಾಗಿ ನಿರ್ವಹಿಸುತ್ತಿದ್ದರು. ಪ್ರತಿ ಶನಿವಾರದಂದು ತಪ್ಪದೆ ನೆಲವನ್ನೆಲ್ಲ ಉಜ್ಜಿ ತೊಳೆಯುತ್ತಿದ್ದರು, ಜಮಖಾನೆಗಳ ಧೂಳನ್ನು ಜಾಡಿಸಿ ತೆಗೆಯುತ್ತಿದ್ದರು. ತಿಂಗಳ ಮೊದಲ ದಿನದಂದು ಮನೆಯಲ್ಲಿ ಧಾರ್ಮಿಕಾಚರಣೆ ನಡೆದು ಎಲ್ಲೆಡೆ ತೀರ್ಥಪ್ರೋಕ್ಷಣೆ ಮಾಡುತ್ತಿದ್ದರು. ತಾತ್ಯಾನಾ ಸೆಮೆನೋವ್ನಾ ಹಾಗೂ ಅವರ ಮಗನ (ಹಾಗೂ ಆ ಮಾಗಿಯಿಂದ ಮೊದಲುಗೊಂಡು ನನ್ನ) ಹೆಸರಿನ ಸಂತದಿನದಂದು ಒಂದು ಮನರಂಜನೆಯ ಕಾರ್ಯಕ್ರಮ ಕಡ್ಡಾಯ, ನೆರೆಹೊರೆಯವರಿಗೆಲ್ಲ ಅದಕ್ಕೆ ಆಹ್ವಾನ. ಇದೆಲ್ಲವೂ ತಾತ್ಯಾನಾ ಸೆಮೆನೋವ್ನಾ ಅವರ ಬದುಕಿನ ಮೊದಲಿನಿಂದ ತಪ್ಪದೆ ನಡೆಯುತ್ತಿದ್ದವು.

ಮನೆಯ ವ್ಯವಹಾರಗಳಲ್ಲಿ ನಮ್ಮ ಯಜಮಾನರು ಯಾವ ಪಾತ್ರವನ್ನೂ ವಹಿಸುತ್ತಿರಲಿಲ್ಲ, ಅವರು ಒಟ್ಟಾರೆ ಮನೆಯ ವ್ಯವಸ್ಥೆಯ ಕಡೆ ಗಮನಹರಿಸುತ್ತಿದ್ದುದಲ್ಲದೆ, ಆಳುಕಾಳುಗಳನ್ನು ವಿಚಾರಿಸಿಕೊಳ್ಳುತ್ತಿದ್ದರು, ಇದಕ್ಕೆ ಅವರ ಹೆಚ್ಚಿನ ಗಮನ. ಚಳಿಗಾಲದಲ್ಲಿ ಕೂಡ ಅವರು ಬಹು ಬೇಗ ಏಳುತ್ತಿದ್ದರು, ಎಷ್ಟೋ ವೇಳೆ ನಾನೆದ್ದು ನೋಡಿದಾಗ ಅವರಾಗಲೇ ಹೊರಟು ಹೋಗಿರುತ್ತಿದ್ದರು. ಅವರು ಸಾಮಾನ್ಯವಾಗಿ ಚಹಾಕ್ಕೆ ಬರುತ್ತಿದ್ದರು, ನಾವಿಬ್ಬರೇ ಅದರಲ್ಲಿ ಭಾಗಿಗಳು; ಅಲ್ಲದೆ, ಆಗ ಜಮೀನಿನ ಕೋಟಲೆ ತಾಪತ್ರಯಗಳೆಲ್ಲ ಮುಗಿದಿರುತ್ತಿದ್ದುದರಿಂದ ಅವರು ಸಾಮಾನ್ಯವಾಗಿ ಉಲ್ಲಸಿತ ರಾಗಿರುತ್ತಿದ್ದರು, ಅದನ್ನು ನಾವು ಮಹಾನಂದ ಎಂದು ಕರೆಯುತ್ತಿದ್ದೆವು. 'ಬೆಳಿಗ್ಗೆಯೆಲ್ಲ ಏನು ಮಾಡುತ್ತಿದ್ರಿ?' ಎಂದು ನಾನು ಆಗಾಗ ವಿಚಾರಿಸುತ್ತಿದ್ದೆ, ಆಗ ಅವರು ಎಂತಹ ಅಸಂಬದ್ಧ ಉತ್ತರಗಳನ್ನು ಕೊಡುತ್ತಿದ್ದರೆಂದರೆ ನಾವಿಬ್ಬರೂ ಹೊಟ್ಟೆ ಹುಣ್ಣಾಗುವಂತೆ ನಗುತ್ತಿದ್ದೆವು. ಕೆಲವೇಳೆ ನಿಜವಾಗಿ ನಡೆದುದನ್ನು ಹೇಳಲು ಒತ್ತಾಯಿಸುತ್ತಿದ್ದೆ, ಆಗ ಅವರು ತಮ್ಮ ನಗುವನ್ನು ತಡೆದುಕೊಂಡು ಹಾಗೇ ಮಾಡುತ್ತಿದ್ದರು. ನಾನು ಅವರ ಕಣ್ಣುಗಳನ್ನೂ ಉಲಿವ ತುಟಿಗಳನ್ನೂ ನೋಡುತ್ತಿದ್ದೆ, ಅವರ ಧ್ವನಿ ಕೇಳುವುದೆಂದರೆ ಅದೆಂಥ ಸಂತೋಷ!

"ಹ್ಲೂ, ನಾನೇನು ಹೇಳ್ತಾ ಇದ್ದೆ, ಹೇಳು" ಎಂದು ಕೆಲವೇಳೆ ಕೇಳುತ್ತಿದ್ದರು. ಆದರೆ ನನಗೆ ಏನು ಹೇಳಲೂ ತೋಚುತ್ತಿರಲಿಲ್ಲ, ಅವರು ನಮ್ಮ ಬಗ್ಗೆ ಹೊರತು ಮಿಕ್ಕಾವುದರ ಬಗ್ಗೆ ಮಾತನಾಡುವುದೂ ಅಸಂಗತವೆನಿಸುತ್ತಿತ್ತು. ಹೊರಗಿನ ಜಗತ್ತಿನಲ್ಲಿ ಏನು

ನಡೆಯುತ್ತದೆಯೋ ಅದೆಲ್ಲ ನಮಗೆ ಸಂಬಂಧಿಸಿರದ ವಿಷಯ ಎಂಬ ಭಾವನೆ! ಅವರ ಕೆಲಸ ಕಾರ್ಯಗಳು ನನಗೆ ಅರ್ಥವಾಗತೊಡಗಿ ಅದರಲ್ಲಿ ಒಂದಷ್ಟು ಆಸಕ್ತಿ ವಹಿಸಲು ಆರಂಭಿಸಿದ್ದು ಎಷ್ಟೋ ಕಾಲದ ನಂತರ. ರಾತ್ರಿ ಊಟದವರೆಗೂ ತಾತ್ಯಾನಾ ಸೆಮೆನೋವ್ನಾ ನಮ್ಮ ಮುಂದೆ ಸುಳಿಯುತ್ತಿರಲಿಲ್ಲ; ಅವರು ಬೆಳಗ್ಗೆ ಒಬ್ಬರೇ ತಿಂಡಿ ತಿನ್ನುತ್ತಿದ್ದರು, ಯಾರದಾದರೂ ಮೂಲಕ ನಮಗೆ ಗುಡ್ ಮಾರ್ನಿಂಗ್ ಹೇಳುತ್ತಿದ್ದರು. ನಮ್ಮದೇ ಆದ ಪುಟ್ಟ ಪ್ರಪಂಚದಲ್ಲಿ ಸಂತೋಷ ಹುಚ್ಚು ಹೊಳೆಯಾಗಿತ್ತು, ಅದರಲ್ಲಿ ಅವರ ಗಂಭೀರವಲಯದ ಧ್ವನಿ ನಮಗೆ ಗಾಬರಿ ತರಿಸುತ್ತಿತ್ತು. ಎಷ್ಟೋ ವೇಳೆ ನಾನು ತಡೆದುಕೊಳ್ಳಲಾಗದೆ ನಗುತ್ತಿದ್ದೆ, ಮಾತೇ ಬರುತ್ತಿರಲಿಲ್ಲ; ಆಗೆಲ್ಲ ಆಳೊಬ್ಬಳು ಬಂದು ಕೈಮುಗಿದುಕೊಂಡು ತನ್ನ ವರದಿ ಒಪ್ಪಿಸುತ್ತಿದ್ದಳು: ನಿನ್ನೆ ಸಂಜೆ ಓಡಾಡಿ ಬಂದ ನಂತರ ಹೇಗೆ ನಿದ್ದೆ ಮಾಡಿದೆ ಎಂದು ಯಜಮಾನಿತಿ ವಿಚಾರಿಸುತ್ತಿದ್ದರು, ರಾತ್ರಿಯೆಲ್ಲ ತಮಗೆ ಪಕ್ಕೆ ನೋವಿತ್ತೆಂದೂ ಯಾವುದೋ ಒಂದು ನಾಯಿ ಬೊಗಳುತ್ತಿದ್ದುದರಿಂದ ನಿದ್ದೆಯೇ ಬರಲಿಲ್ಲವೆಂದೂ ಹೇಳಿಕಳಿಸುತ್ತಿದ್ದರು. ಜೊತೆಗೆ ಬೆಳಿಗ್ಗೆ ಮಾಡಿದ್ದ ಬ್ರೆಡ್ ಹೇಗಿತ್ತು, ಅದನ್ನು ಮಾಡಿದ್ದವಳು ತರಾಸ್ ಅಲ್ಲ ಮೊದಲ ಬಾರಿಗೆ ಅದನ್ನು ಮಾಡಿದ್ದವನು ನಿಕೊಲಾಷ್ಕ ಎಂದು ಹೇಳುತ್ತಿದ್ದಳು. ಅವನ ತಯಾರಿಕೆ ಕೆಟ್ಟದ್ದಾಗೇನಿರಲಿಲ್ಲ, ಅದರಲ್ಲೂ ಗರಿಗರಿ ಬಿಸ್ಕತ್ತು, ಆದರೆ ರಸ್ಕ್ ಮಾತ್ರ ಸ್ವಲ್ಪ ಸೀಕಲಾಗಿತ್ತು ಎಂದು ಹೇಳಿಕಳಿಸುತ್ತಿದ್ದರು. ರಾತ್ರಿ ಊಟಕ್ಕೆ ಮುಂಚೆ ನಾವು ಒಬ್ಬರನ್ನೊಬ್ಬರು ನೋಡುತ್ತಿದ್ದುದು ಅಪರೂಪ; ಅವರು ಬರೆಯುತ್ತಿದ್ದರು ಇಲ್ಲ ಹೊರಗೆ ಹೋಗುತ್ತಿದ್ದರು, ನಾನು ಪಿಯಾನೋ ಮೇಲೆ ಕೈಯಾಡಿಸುತ್ತಿದ್ದೆ: ಆದರೆ ಊಟಕ್ಕೆ ಮೊದಲು ನಾವೆಲ್ಲ ಪಡಸಾಲೆಯಲ್ಲಿ ನಾಲ್ಕು ಗಂಟೆಯ ಹೊತ್ತಿಗೆ ಸೇರುತ್ತಿದ್ದೆವು. ತಾತ್ಯಾನಾ ಸೆಮೆನೋವ್ನಾ ತಮ್ಮ ಕೋಣೆಯಿಂದ ಹೊರ ಬರುತ್ತಿದ್ದರು, ಅದೇ ಹೊತ್ತಿಗೆ ಮನೆಯಲ್ಲೇ ಇರುತ್ತಿದ್ದ ಮೂವರೋ ನಾಲ್ವರೋ ಮಿದುಭಾಷಿಣಿಯರಾದ ಆಳುಗಳೂ ಕಾಣಿಸಿಕೊಳ್ಳುತ್ತಿದ್ದರು. ನಮ್ಮ ಯಜಮಾನರು ತಮ್ಮ ಹಳೆಯ ಅಭ್ಯಾಸದಂತೆ ತಮ್ಮ ತಾಯಿಗೆ ತಪ್ಪದೆ ತೋಳು ನೀಡಿ ಊಟದ ಮೇಜಿಗೆ ಕರೆತರುತ್ತಿದ್ದರು: ನಾನು ಇನ್ನೊಂದು ತೋಳು ಹಿಡಿದುಕೊಳ್ಳಬೇಕೆಂದು ಅತ್ತೆ ಹೇಳುತ್ತಿದ್ದರು, ಹೀಗಾಗಿ ಪ್ರತಿನಿತ್ಯ ನಾವು ಬಾಗಿಲ ಬಳಿ ಸಿಕ್ಕಿಹಾಕಿಕೊಳ್ಳುವಂತಾಗುತ್ತಿತ್ತು. ಊಟದಲ್ಲಿ ಅವರದೇ ಪ್ರಮುಖ ಪಾತ್ರ; ನಡೆಯುತ್ತಿದ್ದ ಮಾತುಕತೆಗಳೆಲ್ಲ ಗಂಭೀರವಾಗಿ, ಮಿದುಮಾತಿನಿಂದ ಕೂಡಿ ಸೌಜನ್ಯಯುತವಾಗಿರುತ್ತಿತ್ತು. ಆ ಔಪಚಾರಿಕ ಆಗುಹೋಗುಗಳ ನಡುವೆ ನನ್ನ ಮತ್ತು ನಮ್ಮೆ ಜಮಾನರ ಮಧ್ಯದ ಮಾತುಕತೆ ಅದಕ್ಕೆ ಒಗ್ಗರಣೆ ಹಾಕಿದಂತೆ. ಕೆಲವು ವೇಳೆ ಅಮ್ಮ ಮಗನ ನಡುವೆ ಯಾವುದೋ ವಿಷಯಕ್ಕೆ ಬಿರುಸಾದ ವಾಗ್ವಾದ ನಡೆಯುತ್ತಿತ್ತು, ಒಬ್ಬರನ್ನೊಬ್ಬರು ಕಿಚಾಯಿಸುತ್ತಿದ್ದರು; ಆ ಸನ್ನಿವೇಶಗಳು ನನಗೆ ಖುಷಿ ಕೊಡುತ್ತಿದ್ದವು, ಯಾಕಂದರೆ ಅವೆಲ್ಲ ಅವರಿಬ್ಬರನ್ನು ಬಂಧಿಸಿದ್ದ ಕೋಮಲವೂ ಸದೃಢವೂ ಆದ ಪ್ರೀತಿಯ ದ್ಯೋತಕವಾದವು. ಊಟವಾದ ನಂತರ, ತಾತ್ಯಾನಾ ಸೆಮೆನೋವ್ನಾ ಪಡಸಾಲೆಗೆ ಹೋಗುತ್ತಿದ್ದರು; ಅಲ್ಲಿ ತಮ್ಮ ಆರಾಮ ಕುರ್ಚಿಯಲ್ಲಿ

ಅವರು ನಶ್ಯವನ್ನು ಹೊಸೆಯುತ್ತಲೋ, ಹೊಸ ಪುಸ್ತಕಗಳ ಹಾಳೆಗಳನ್ನು ಬಿಡಿಸಿಡುತ್ತಲೋ ಕೂತುಕೊಳ್ಳುತ್ತಿದ್ದರು. ಆಗ ನಾವು ಬೆಳಗುಕೋಣೆಗೆ ಹೋಗಿ ಜೋರಾಗಿ ಓದುತ್ತಲೋ ಪಿಯಾನೋ ನುಡಿಸುತ್ತಲೋ ಕುಳಿತುಕೊಳ್ಳುತ್ತಿದ್ದೆವು. ಈ ಹೊತ್ತಿನಲ್ಲಿ ನಾವು ಕೂಡಿಯೇ ಓದಿನಲ್ಲಿ ಮಗ್ನರಾಗುತ್ತಿದ್ದುದು ಹೆಚ್ಚು, ಆದರೆ ಸಂಗೀತ ನಮಗೆ ಪರಮಪ್ರಿಯವಾದುದು, ಅತ್ಯುತ್ತಮ ಮನರಂಜನೆ ನೀಡುವಂಥದು, ಅದರಿಂದ ನಮ್ಮ ಹೃದಯಗಳಲ್ಲಿ ಹೊಸ ರಾಗಗಳು ಹುಟ್ಟಿಕೊಳ್ಳುತ್ತಿದ್ದವು, ಇದರಿಂದ ಒಬ್ಬರಿಗೊಬ್ಬರು ಹೊಸತನದಿಂದ ಕಾಣುತ್ತಿದ್ದೆವು. ಅವರಿಗೆ ಇಷ್ಟವಾದ ಕೃತಿಗಳನ್ನು ನಾನು ನುಡಿಸುವಾಗ, ಅವರು ದೂರದ ಸೋಫಾವೊಂದರಲ್ಲಿ ಕೂತಿರುತ್ತಿದ್ದರು, ಅಷ್ಟು ದೂರದಿಂದ ಅವರನ್ನು ಸರಿಯಾಗಿ ನೋಡಲಾಗುತ್ತಿರಲಿಲ್ಲ. ನನ್ನ ನುಡಿಸುವಿಕೆ ತಮ್ಮ ಮೇಲೆ ಮಾಡುವ ಪರಿಣಾಮವನ್ನು ಮುಖದಲ್ಲಿ ತೋರಿಸಿಕೊಳ್ಳಲು ಅವರಿಗೆ ಮುಜುಗರ; ಆದರೆ ಕೆಲವೊಮ್ಮೆ ಅವರು ನಿರೀಕ್ಷಿಸದಿದ್ದಾಗ, ನಾನು ಪಿಯಾನೋದಿಂದ ಮೇಲೆದ್ದು ಅವರ ಬಳಿ ಹೋಗಿ ಅವರ ಮುಖದ ಮೇಲೆ ಯಾವ ಭಾವನೆ ಮೂಡಿದೆ, ಎಂದಿನದಲ್ಲದ ಹೊಳಪು ಮತ್ತು ತೇವ ಕಣ್ಣಲ್ಲಿ ಕಾಣಿಸುವುದೇ ಎಂಬುದನ್ನು ನೋಡಲು ಯತ್ನಿಸುತ್ತಿದ್ದೆ. ಆದರೆ ಅವರು ಮಾತ್ರ ಮರೆಮಾಚುತ್ತಿದ್ದರು, ಆದರೆ ವಿಫಲವಾಗಿ. ನಾವು ಅಲ್ಲಿರುವಾಗ ನೋಡಲು ಇಷ್ಟವಾದರೂ ತಾತ್ಯಾನ ಸೆಮೆನೋವ್ನಾ ನಮ್ಮ ಮೇಲೆ ಯಾವ ನಿರ್ಬಂಧ ಹೇರಲೂ ಇಷ್ಟಪಡುತ್ತಿರಲಿಲ್ಲ. ಹೀಗಾಗಿ ಅವರು ಯಾವಾಗಲಾದರೊಮ್ಮೆ ಏನೋ ತುರ್ತು ಕೆಲಸವಿರುವವರಂತೆ, ಆಸಕ್ತಿಯಿಲ್ಲದವರಂತೆ ಆ ಮೂಲಕ ಹಾದುಹೋಗುತ್ತಿದ್ದರು: ಆದರೆ ತಮ್ಮ ಕೋಣೆಗೆ ಹೋಗಿ ಅಷ್ಟು ಬೇಗ ವಾಪಸಾಗಲು ಅವರಿಗೆ ಯಾವ ಕಾರಣವೂ ಇರುತ್ತಿರಲಿಲ್ಲವೆಂಬುದು ನನಗೆ ತಿಳಿಯುತ್ತಿತ್ತು. ಸಂಜೆಯ ಹೊತ್ತು ವಿಶಾಲವಾದ ನಡುಮನೆಯಲ್ಲಿ ಕಪ್‌ಗೆ ಚಹಾ ಸುರುವಿ ಕೊಡುತ್ತಿದ್ದೆ; ಆಗ ಮತ್ತೆ ಮನೆಯವರೆಲ್ಲ ಸೇರುತ್ತಿದ್ದೆವು. ಹೊಳೆಯುವ ಟೀ ಹೂಜಿಯಿಂದ ಚಹಾ ಸುರಿದು ಕಪ್ಪುಗಳನ್ನೂ ಲೋಟಗಳನ್ನೂ ಅವರವರ ಮುಂದಿಡುವುದೇ ಒಂದು ಮಹಾವಿಧಿ, ಇದರಿಂದ ನಾನು ಸ್ವಲ್ಪ ಕಾಲ ಅಧೀರಳಾಗುತ್ತಿದ್ದೆ. ಅಂಥ ಕಾರ್ಯಕ್ಕೆ ನಾನಿನ್ನೂ ಅರ್ಹಳಾಗಿಲ್ಲ, ಆ ದೊಡ್ಡ ಹೂಜಿಯ ನಲ್ಲಿಯನ್ನು ತಿರುಗಿಸಲು, ನಿಕಿಟಾಳ ಟ್ರೇಯಲ್ಲಿಟ್ಟು, 'ಇದು ಪೀಟರ್ ಇವಾನೊವಿಚ್ಗೆ', 'ಇದು ಮರ್ಯಾ ಮಿನಿಚ್ನಾಗೆ' ಎಂದು ಹೇಳಿಕೊಡಲು, ಹಾಗೆಯೇ "ಸಕ್ಕರೆ ಸರಿಯಾಗಿದೆಯಾ?" ಎಂದು ವಿಚಾರಿಸಲು ಹಾಗೂ ಬೇಕಾದವರಿಗೆ ಸಕ್ಕರೆಯನ್ನು ನೀಡಲು ನಾನಿನ್ನೂ ಚಿಕ್ಕವಳು, ಎಳಸು ಎಂದೇ ನನಗನ್ನಿಸುತ್ತಿತ್ತು. "ಭಲಾ, ಭಲಾ, ಒಳ್ಳೇ ಅನುಭವಸ್ಥರ ಥರ!" ಎಂದು ನಮ್ಮೆಜಮಾನರು ಹೇಳಿದಾಗ ನನಗೆ ಮತ್ತಷ್ಟು ಗೊಂದಲವುಂಟಾಗುತ್ತಿತ್ತು.

ಚಹಾದ ನಂತರ ತಾತ್ಯಾನಾ ಸೆಮೆನೋವ್ನಾ ಪೇಷನ್ಸ್ ಆಡುತ್ತಿದ್ದರು ಅಥವಾ ಕಾರ್ಡುಗಳಿಂದ ಮಾರ್ಯಾ ಮಿನಿಚ್ನಾ ಭವಿಷ್ಯ ಹೇಳುವುದನ್ನು ಕೇಳಿಸಿಕೊಳ್ಳುತ್ತಿದ್ದರು. ಆನಂತರ ನಮ್ಮಿಬ್ಬರಿಗೂ ಮುತ್ತಿಕ್ಕಿ ನಮ್ಮ ಮೇಲೆ ಶಿಲುಬೆಯಾಕಾರ ರಚಿಸುತ್ತಿದ್ದರು,

ಆಮೇಲೆ ನಾವು ನಮ್ಮ ಕೋಣೆಗಳಿಗೆ ಹೋಗುತ್ತಿದ್ದೆವು. ಆದರೆ ಸಾಮಾನ್ಯವಾಗಿ ನಾವು ಮಧ್ಯರಾತ್ರಿಯವರೆಗೂ ಒಟ್ಟಿಗೇ ಇರುತ್ತಿದ್ದೆವು, ಅದು ನಮ್ಮ ದಿನದ ಅತ್ಯುತ್ತಮವೂ ಉತ್ಕೃಷ್ಟವೂ ಆದ ಸಮಯ. ಅವರು ತಮ್ಮ ಹಿಂದಿನ ಬದುಕಿನ ಘಟನೆಗಳನ್ನು ಹೇಳುತ್ತಿದ್ದರು; ನಾವಿಬ್ಬರೂ ಏನೇನೋ ಯೋಜನೆ ಹಾಕಿಕೊಳ್ಳುತ್ತಿದ್ದೆವು, ಕೆಲವು ಸಲ ತತ್ವವಿಚಾರಗಳನ್ನು ಚರ್ಚೆ ಮಾಡುತ್ತಿದ್ದೆವು; ಆದರೆ ನಾವು ಆದಷ್ಟೂ ಮೆಲುದನಿಯಲ್ಲಿ ಮಾತಾಡಿಕೊಳ್ಳಲು ಯತ್ನಿಸುತ್ತಿದ್ದೆವು, ನಮ್ಮ ಮಾತೆಲ್ಲಿ ಮಹಡಿಯ ಮೇಲಿದ್ದವರಿಗೆ ಕೇಳಿಸಿ ಅವರೆಲ್ಲಿ ತಾತ್ಯಾನಾ ಸೆಮೆನೋವ್ನಾ ಅವರಿಗೆ ಹೇಳಿಬಿಡುತ್ತಾರೋ ಎಂಬ ಆತಂಕ ನಮಗೆ, ಯಾಕಂದರೆ ಅವರು ನಮಗೆ ಬೇಗ ಮಲಗಲು ಹೇಳುತ್ತಿದ್ದರು. ಕೆಲವು ಸಲ ಹಸಿವೆಯಾಗಿಬಿಡುತ್ತಿತ್ತು; ಆಗ ಮೆಟ್ಟಂಗಾಲಿನಲ್ಲಿ ಅಡುಗೆ ಮನೆಗೆ ಹೋಗಿ ನಿಕಿಟಳ ಸಹಾಯದಿಂದ ಆರಿ ಅಕ್ಷತೆಯಾಗಿದ್ದ ಉಳಿದಿದ್ದ ಏನನ್ನಾದರೂ ತಂದು ಮೋಂಬತ್ತಿಯ ಬೆಳಕಲ್ಲಿ ನಮ್ಮ ರೂಮಲ್ಲಿ ತಿನ್ನುತ್ತಿದ್ದೆವು. ಆ ದೊಡ್ಡ ಹಳೆಯ ಮನೆಯಲ್ಲಿ ನಾವಿಬ್ಬರೂ ಅಪರಿಚಿತರೆಂಬಂತೆ ಇರುತ್ತಿದ್ದೆವು, ಅಲ್ಲಿ ಆಳುತ್ತಿದ್ದುದು ಹಳೆಯ ಕಾಲದ ಮೌಲ್ಯಗಳು ಹಾಗೂ ತಾತ್ಯಾನಾ ಸೆಮೆನೋವ್ನಾ ಅವರ ಭಾವನೆ. ಅವರೊಬ್ಬರೇ ಅಲ್ಲ, ಮನೆಯ ಆಳುಕಾಳುಗಳು, ಹಿರಿಯ ಹೆಂಗಸರು, ಪೀಠೋಪಕರಣಗಳು, ಚಿತ್ರಗಳು ಕೂಡ ನನ್ನಲ್ಲಿ ಗೌರವವನ್ನುಕ್ಕಿಸುತ್ತಿದ್ದವು, ಸ್ವಲ್ಪ ಗಲಿಬಿಲಿಯನ್ನು ಕೂಡ; ಜೊತೆಗೆ ಅವರೂ ನಾನೂ ಅಲ್ಲಿಗೆ ಹೊಂದುಕೊಳ್ಳುವುದಿಲ್ಲವೇನೋ ಎಂಬ ಭಾವನೆಯೂ ಉಂಟಾಗುತ್ತಿತ್ತು, ಹೀಗಾಗಿ ನಾವು ತುಂಬ ಜಾಗರೂಕತೆಯಿಂದಲೂ ಎಚ್ಚರಿಕೆಯಿಂದಲೂ ನಮ್ಮ ಕೆಲಸಗಳನ್ನು ಮಾಡಬೇಕಾಗಿತ್ತು. ಆ ಬಗ್ಗೆ ಈಗ ಯೋಚಿಸಿದರೆ - ಬದಲಾಗದ ಆ ದಿನಚರಿ, ಕುತೂಹಲಭರಿತ ಆಳುಗಳ ದಂಡು - ನನಗೆ ಕಿರಿಕಿರಿಯನ್ನುಂಟು ಮಾಡುವಂಥವು, ಬಂಧನದಲ್ಲಿಡುವಂಥವು: ಆದರೆ ಆ ನಿರ್ಬಂಧವೇ ನಮ್ಮಿಬ್ಬರ ನಡುವಣ ಪ್ರೇಮವನ್ನು ಮತ್ತಷ್ಟು ತೀವ್ರಗೊಳಿಸಿತೆನ್ನುವುದೂ ನಿಜ. ನಾನು ಮಾತ್ರವಲ್ಲದೆ ಅವರೂ ಕೂಡ ಯಾವುದರ ಬಗ್ಗೆಯೂ ಇತರರ ಮುಂದೆ ಗೊಣಗಿಕೊಳ್ಳುತ್ತಿರಲಿಲ್ಲ; ಅದಕ್ಕೆ ವ್ಯತಿರಿಕ್ತವಾಗಿ, ಸಿಕ್ಕದಿದ್ದುದರ ಬಗ್ಗೆ ಅವರು ಕುರುಡಾಗಿರುತ್ತಿದ್ದರು. ಡಿಮಿಟ್ರಿ ಸಿಡೊರೊವ್ ಎಂಬ ಒಬ್ಬ ಆಳು ಭಾರಿ ಧೂಮಪಾನವ್ಯಸನಿ; ಪ್ರತಿನಿತ್ಯ ಬಿಡದಂತೆ, ಊಟದ ನಂತರ ನಾವಿಬ್ಬರೂ ಕೋಣೆಯಲ್ಲಿರುತ್ತಿರುವಾಗ, ನಮ್ಮ ಯಜಮಾನರ ಓದುಕೋಣೆಗೆ ಹೋಗಿ ಅವನು ಡಬ್ಬಿಯಲ್ಲಿಟ್ಟಿರುತ್ತಿದ್ದ ಹೊಗೆಸೊಪ್ಪನ್ನು ತೆಗೆದುಕೊಳ್ಳುತ್ತಿದ್ದ. ಸರ್ಗೀ ಮಿಖೈಲಿಚ್ ಸಂತೋಷ ಭಯಗಳು ಕೂಡಿದ್ದ ಮುಖ ಭಾವದಲ್ಲಿ, ಕಣ್ಣು ಮಿಟುಕಿಸಿ ತೋರು ಬೆರಳಾಡಿಸುತ್ತ, ನನ್ನ ಬಳಿ ಸದ್ದಾಗದೆ ಬಂದು ಇದನ್ನೆಲ್ಲ ಗಮನಿಸದೆ ತನ್ನ ಕಾರ್ಯದಲ್ಲಿ ತೊಡಗಿರುತ್ತಿದ್ದ ಡಿಮಿಟ್ರಿ ಸಿಡೊರೊವ್ ಕಡೆ ತೋರಿಸುತ್ತಿದ್ದರು. ಆನಂತರ, ಡಿಮಿಟ್ರಿ ಸಿಡೊರೊವ್ ನಮ್ಮ ಕಡೆಗೆ ನೋಡದೆ, ತನ್ನ ಕಾರ್ಯ ಯಾರ ಕಣ್ಣಿಗೂ ಬೀಳದೆ ಸುಗಮವಾಗಿ ನಡೆದ ಖುಷಿಯಲ್ಲಿ ಹೊರಟು ಬರುತ್ತಿದ್ದ. ಅವರು ಪ್ರತಿಸಲ ಮಾಡಿದ ಹಾಗೆಯೇ ನನ್ನನ್ನು ಮುದ್ದುಮರಿ ಎಂದು ಕರೆದು

ಮುತ್ತಿಕ್ಕುತ್ತಿದ್ದರು. ಕೆಲವು ಸಲ ಅವನ ಈ ಸದ್ದಿಲ್ಲದ ಸಂಚು ಹಾಗೂ ಎಲ್ಲದರ ಬಗೆಗಿನ ಅವರ ನಿರ್ಲಕ್ಷ್ಯ ನನಗೆ ಕಿರಿಕಿರಿಯುಂಟುಮಾಡುತ್ತಿತ್ತು, ಅದು ಅವರ ದೌರ್ಬಲ್ಯ ಅನ್ನಿಸುತ್ತಿತ್ತು, ಆದರೆ ನಾನೂ ಹಾಗೆಯೇ ಇರುತ್ತಿದ್ದೆ ಎಂಬ ಅರಿವೇ ನನಗಿರುತ್ತಿರಲಿಲ್ಲ. 'ತನ್ನ ದೃಢತೆಯನ್ನು ತೋರಿಸಿಕೊಳ್ಳಲಾರದ ಮಗು'ವಿನಂತೆ ಅವರು ಎನ್ನಿಸುತ್ತಿತ್ತು.

ಅವರ ದೌರ್ಬಲ್ಯ ನನ್ನಲ್ಲಿ ಉಂಟುಮಾಡಿದ್ದ ಅಚ್ಚರಿಯ ಬಗ್ಗೆ ಹೇಳಿದಾಗ ಅವರೆಂದಿದ್ದರು: "ಓ ನನ್ನ ಮುದ್ದೇ! ನನ್ನಂಥ ಸುಖವಾಗಿರುವ ವ್ಯಕ್ತಿ ಯಾವುದರಲ್ಲಾದರೂ ಅತೃಪ್ತಿ ಹೊಂದುವುದು ಸಾಧ್ಯವೇ? ಬೇರೆಯವರಿಗೆ ನಿರ್ಬಂಧ ಹಾಕುವುದರ ಬದಲು ನಾನೇ ದಾರಿ ಬಿಟ್ಟುಕೊಡುವುದು ಮೇಲು; ಬಹುದಿನಗಳಿಂದ ಇದು ನನ್ನ ತೀರ್ಮಾನ. ವ್ಯಕ್ತಿಯೊಬ್ಬ ಸುಖವಾಗಿರಲು ಸಾಧ್ಯವಿಲ್ಲದ ಪರಿಸ್ಥಿತಿಯೇ ಇರಲು ಸಾಧ್ಯವಿಲ್ಲ; ಅದರಲ್ಲೂ ನಮ್ಮ ಬದುಕು ನಂದನ! ನನಗೆ ಕೋಪವೇ ಬಾರದು; ಯಾವುದೂ ನನಗೆ ಕೆಟ್ಟದ್ದಾಗಿ ಕಾಣಿಸದು, ಆದರೆ ಕರುಣಾಜನಕ ಅಥವಾ ತಮಾಷೆಯದು ಅನ್ನಿಸುತ್ತೆ, ಅಷ್ಟೆ. ಎಲ್ಲಕ್ಕಿಂತ ಮಿಗಿಲಾಗಿ 'ಒಂಟಿಯಾಗಿ ಸುಖದಿಂದ ತೆರಳು'. ಮನೆಯ ಮುಂದಿನ ಕಾಲಿಂಗ್ ಬೆಲ್ ಸದ್ದಾದಾಗ ಅಥವಾ ನನಗೊಂದು ಕಾಗದ ಬಂದಾಗ ಅಥವಾ ಬೆಳಿಗ್ಗೆ ಎದ್ದಾಗ ಕೂಡ ನನಗೆ ಭಯವಾಗತ್ತೆ ಅಂದ್ರೆ ನೀನು ನಂಬ್ತೀಯಾ? ಜೀವನ ಸಾಗಬೇಕು, ಯಾವುದೋ ಬದಲಾಗಬಹುದು, ಆದರೆ ಯಾವುದೂ ಈಗಿಗಿಂತ ಉತ್ತಮವಲ್ಲ."

ನನಗೆ ಅವರ ಬಗ್ಗೆ ನಂಬಿಕೆಯಿತ್ತು, ಆದರೆ ಅವರ ಮಾತಿನ ಅರ್ಥವಾಗಲಿಲ್ಲ. ನಾನು ಸಂತೋಷದಿಂದಿದ್ದೆ, ಆದರೆ ನನಗದು ಸಾಮಾನ್ಯ ಜೀವನ ರೀತಿ, ನಮ್ಮ ಪರಿಸ್ಥಿತಿಯಲ್ಲಿರುವ ಜನರ ಅನುಭವ ಅನ್ನಿಸಿತ್ತು, ಹಾಗೆಯೇ ಎಲ್ಲೋ ಒಂದೆಡೆ, ಎಲ್ಲಿ ಅಂತ ನನಗೆ ತಿಳಿಯದು, ಬೇರೆ ಬಗೆಯ ಸಂತೋಷ, ಹಿರಿದಾದ್ದಲ್ಲ ಆದರೆ ವಿಭಿನ್ನವಾದ ಸಂತೋಷ ಇರಬಹುದು ಅನ್ನಿಸಿತ್ತು.

ಹೀಗೆ ಇನ್ನೆರಡು ತಿಂಗಳುಗಳು ಉರುಳಿದವು, ಮತ್ತೆ ಮಾಗಿಕಾಲ ತನ್ನ ಚಳಿ ಮತ್ತು ಮಂಜುಗಳೊಡನೆ ಮರಳಿತು; ಅವರು ಜೊತೆಯಲ್ಲಿದ್ದರೂ ನನ್ನನ್ನು ಒಂಟಿತನ ಕಾಡಿತು, ಅಂದರೆ ಬದುಕು ಮರಳಿ ಮರಳಿ ಬರುತ್ತಿತ್ತು, ಅವರಲ್ಲಾಗಲೀ ನನ್ನಲ್ಲಾಗಲೀ ಹೊಸದೇನೂ ಇರಲಿಲ್ಲ, ಅಂದರೆ ಹಿಂದೆ ಇದ್ದುದರ ಕಡೆಗೇ ನಾವು ಮತ್ತೆ ಹೋಗುತ್ತಿದ್ದೆವು. ತಮ್ಮ ವ್ಯವಹಾರಗಳ ಕಡೆಗೆ ಅವರು ಹೆಚ್ಚು ಗಮನ ಕೊಡಲು ತೊಡಗಿದರು, ಅಂದರೆ ನನ್ನೊಂದಿಗಿರುವುದು ಕಡಮೆಯಾಯಿತು, ಹೀಗಾಗಿ ನನ್ನ ಹಳೆಯ ಭಾವನೆಗಳು ಮರುಕಳಿಸಿದವು, ನನ್ನನ್ನು ಒಳಗೆ ಬಿಟ್ಟುಕೊಳ್ಳಲಿಚ್ಛಿಸದ ಅವರ ಮನಸ್ಸಿನ ಭಾಗವೊಂದಿದೆ ಅನ್ನಿಸಿತು. ಅವರ ಏಕತಾನದ ನಿರುಮ್ಮಳತೆ ನನ್ನನ್ನು ಕೆರಳಿಸುತ್ತಿತ್ತು. ಅವರ ಬಗ್ಗೆ ನನ್ನ ಪ್ರೀತಿ ಎಂದಿನಂತೆಯೇ ಇತ್ತು, ಅವರ ಪ್ರೀತಿಯ ಬಿಸುಪಿನ ರಕ್ಷೆ ನನಗೆ ಎಂದಿನಂತೆಯೇ ಇತ್ತು; ಆದರೆ ನನ್ನ ಪ್ರೀತಿ ಹೆಚ್ಚುವುದರ ಬದಲು ಒಂದೇ ಸಮನಾಗಿ ಉಳಿಯಿತು; ಅಲ್ಲದೆ ಹೊಸದೊಂದು ತಹತಹದ ಅನುಭವ

ಮನಸ್ಸಿಗಿಳಿಯಿತು. ಅವರನ್ನು ಪ್ರೀತಿಸುವ ಅನುಭವದಲ್ಲಿ ಕಂಡುಕೊಂಡಿದ್ದ ಆನಂದದ ನಂತರ ಪ್ರೀತಿಸುವುದಷ್ಟೇ ನನಗೆ ಸಾಕಾಗಲಿಲ್ಲ. ನನಗೆ ಬೇಕಾಗಿದ್ದುದು ಬದುಕಿನ ನಿಶ್ಚಲತೆಯಲ್ಲ, ಅದರ ಚಲನೆ. ನನಗೆ ಬೇಕಾಗಿದ್ದುದು ಭಾವೋನ್ಮಾದ, ಪ್ರೀತಿಗಾಗಿ ಎದುರಿಸಬೇಕಾದ ಅಪಾಯ ಮತ್ತು ಆತ್ಮಬಲಿದಾನ. ನನ್ನೊಳಗೆ ತುಂಬಿದ್ದ ಅಪಾರ ಸಾಮರ್ಥ್ಯ ನಮ್ಮ ಪ್ರಶಾಂತ ಬದುಕಿನಲ್ಲಿ ತನ್ನ ದಾರಿಯನ್ನು ಕಂಡುಕೊಳ್ಳಬೇಕಾಗಿತ್ತು. ನನಗೆ ಆಗಾಗ ಖಿನ್ನತೆಯುಂಟಾಗುತಿತ್ತು, ಅದರಿಂದ ನನಗೇ ನಾಚಿಕೆಯಾಗಿ ಅದನ್ನು ಅವರಿಂದ ಮುಚ್ಚಿಡಲು ಪ್ರಯತ್ನಿಸುತ್ತಿದ್ದೆ, ಹೀಗಾಗಿ ನಾನು ತೋರಿಸುತ್ತಿದ್ದ ಅತೀವ ಕೋಮಲತೆ ಮತ್ತು ಅತ್ಯುತ್ಸಾಹಗಳು ಅವರಲ್ಲಿ ಗಾಬರಿಯುಂಟುಮಾಡಿದವು. ನನ್ನ ಮನಃಸ್ಥಿತಿಯು ನನಗಿಂತ ಮೊದಲು ಅವರಿಗೇ ಅರ್ಥವಾಗಿತ್ತು, ಪೀಟರ್ಸ್‌ಬರ್ಗ್‌ಗೆ ಹೋಗಿಬರುವಂತೆ ಹೇಳಿದರು. ಆದರೆ ನಾನೇ ಅದನ್ನು ಬೇಡವೆಂದೆ, ನಮ್ಮ ಎಂದಿನ ದಿನಚರಿಯನ್ನು ಬದಲಾಯಿಸುವುದಾಗಲೀ ನಮ್ಮ ಸಂತೋಷವನ್ನು ಹಾಳು ಮಾಡುವುದಾಗಲೀ ಬೇಡವೆಂದೆ. ನಾನು ಸಂತೋಷದಿಂದೇನೋ ಇದ್ದೆ: ಆದರೆ ಈ ನನ್ನ ಸಂತಸವು ಪುಕ್ಕಟೆಯಾದ್ದು, ಅದಕ್ಕೆ ನಾನಾವ ಬೆಲೆಯನ್ನೂ ತೆರುತ್ತಿಲ್ಲ ಅಥವಾ ತ್ಯಾಗವನ್ನಾಗಲೀ ಮಾಡುತ್ತಿಲ್ಲ ಎಂಬ ಕೊರಗು ನನ್ನದು, ಅವೆರಡನ್ನೂ ಎದುರಿಸುವ ಸಾಮರ್ಥ್ಯ ನನ್ನಲ್ಲಿದೆ ಎಂಬ ಅರಿವೇ ನನಗೆ ದುಃಖವುಂಟುಮಾಡುತ್ತಿತ್ತು. ನನಗವರ ಮೇಲೆ ಪ್ರೀತಿಯಿತ್ತು, ನಾನೇ ಅವರ ಸರ್ವಸ್ವ ಎಂಬುದೂ ತಿಳಿದಿತ್ತು; ಆದರೆ ನಮ್ಮ ಪ್ರೀತಿ ಎಲ್ಲರಿಗೂ ತಿಳಿಯಬೇಕೆಂಬ ಹಂಬಲ ನನ್ನದು, ಅಡ್ಡಿಗಳೆಲ್ಲದರ ನಡುವೆ ನಾನವರನ್ನು ಪ್ರೀತಿಸುತ್ತೇನೆ ಎಂಬುದು ಗೊತ್ತಾಗಬೇಕಿತ್ತು. ನನ್ನ ಮನಸ್ಸು, ಇಂದ್ರಿಯಗಳು ಕೂಡ ಕ್ರಿಯಾಶೀಲವಾಗಿದ್ದವು; ಆದರೆ ಚಲನೆಯ ತುಡಿತ ನನ್ನಲ್ಲಿ ತೀವ್ರವಾಗಿತ್ತು, ನಮ್ಮ ಪ್ರಶಾಂತ ಬದುಕಿನಲ್ಲಿ ಅದು ಹೊರಬರಲು ಅವಕಾಶವೇ ಇರಲಿಲ್ಲ. ಬೇಕಾದಾಗ ನಾನು ಪಟ್ಟಣಕ್ಕೆ ಹೋಗು ಎಂದು ಅವರು ಹೇಳುವಂತೆ ಮಾಡಿರುವುದಾದರೂ ಏನು? ಅದನ್ನವರು ಹೇಳದೆ ಹೋಗಿದ್ದರೆ, ಹಪಹಪಿಕೆಯ ಭಾವನೆಗಳು ನನ್ನದೇ ತಪ್ಪು, ಅಪಾಯಕಾರಿ ಅವಿವೇಕದಿಂದಾದುದು, ನಾನು ಮಾಡಬಹುದಾಗಿದ್ದ ತ್ಯಾಗ ಎಂದರೆ ಈ ಭಾವನೆಗಳನ್ನು ಹತ್ತಿಕ್ಕಿಕೊಳ್ಳುವುದೇ ಎಂದು ನಾನು ಅರಿತುಕೊಳ್ಳಬಹುದಾಗಿತ್ತೇನೋ. ಹಳ್ಳಿಯಿಂದ ದೂರ ಹೋಗಿಬಿಡುವುದು ಈ ಖಿನ್ನತೆಯಿಂದ ಪಾರಾಗುವ ಉಪಾಯ ಎಂಬ ಭಾವನೆ ನನ್ನನ್ನು ಕಾಡತೊಡಗಿತು; ಅಲ್ಲದೆ, ನನ್ನ ಸ್ವಾರ್ಥಕ್ಕಾಗಿ ನನ್ನ ಬಗ್ಗೆ ಅಷ್ಟೊಂದು ಕಾಳಜಿಯಿರುವ ಅವರಿಂದ ದೂರ ಹೋಗಲು ನನಗೆ ನಾಚಿಕೆಯೆನಿಸುತ್ತಿತ್ತು, ದುಃಖವೆನಿಸುತ್ತಿತ್ತು. ಹೀಗೇ ಕಾಲ ಸರಿಯಿತು, ಮಂಜು ಬೀಳುವುದು ಹೆಚ್ಚಾಯಿತು, ನಾವಿಬ್ಬರೂ ಕೂಡಿಯೇ ಇದ್ದೆವು, ಆದರೆ ಒಂಟೊಂಟಿಯಾಗಿ, ಹಿಂದಿನಂತೆಯೇ; ಹೊರಗೆ ಮಾತ್ರ, ನಮ್ಮ ಇರವಿನ ಅರಿವೇ ಇಲ್ಲದೆ ಇತರರ ಸಂತೋಷದ ಸದ್ದುಗದ್ದಲ, ಉತ್ಸಾಹ ಹೊಳಪು ಅಥವಾ ನರಳಿಕೆಯ ನೋವು ಎಲ್ಲ ಹಾಗೆಯೇ ಇದ್ದವು. ಸಂಪ್ರದಾಯ ಎಂಬುದು ನಮ್ಮ ಬದುಕನ್ನು ದಿನನಿತ್ಯವೂ ಕಲ್ಲಾಗಿಸುತ್ತಿದೆ,

ಏಕರೂಪವಾಗಿಸುತ್ತಿದೆ, ಇದರಿಂದಾಗಿ ನಮ್ಮ ಮನಸ್ಸುಗಳು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಿವೆಯಲ್ಲದೆ ನಾವೆಲ್ಲ ಕಾಲದ ನಿರ್ಭಾವುಕ ಹಾದಿಯಲ್ಲಿ ಸಾಗುವಂತಾಗುತ್ತಿದೆ ಎಂಬ ಭಾವನೆ ನನ್ನಲ್ಲುಂಟಾಯಿತು. ಬೆಳಿಗ್ಗೆಯೇನೋ ಉಲ್ಲಾಸದಾಯಕವಾಗಿ ಆರಂಭಗೊಳ್ಳುತ್ತಿತ್ತು; ಊಟದ ವೇಳೆ ಸೌಜನ್ಯದಿಂದ ಕೂಡಿರುತ್ತಿದ್ದೆವು, ರಾತ್ರಿ ಪರಸ್ಪರ ಕೋಮಲವಾಗುತ್ತಿದ್ದೆವು. 'ಅವರು ಹೇಳುವಂತೆ ಇತರರಿಗೆ ಒಳ್ಳೆಯದನ್ನು ಮಾಡುತ್ತ ನೇರ ಬಾಳು ನಡೆಸುವುದೇ ಸರಿ; ಆದರೆ ಮುಂದೆ ಅದಕ್ಕೆ ಸಮಯವಿದೆ, ಆದರೆ ಮಾಡಬೇಕಾದ ಬೇರೆಯವು ಈಗ ಅಥವಾ ಯಾವಾಗಲೂ ಇಲ್ಲ' ಎಂದುಕೊಳ್ಳುತ್ತಿದ್ದೆ. ನನಗೆ ಇರುವುದರಲ್ಲಿ ತೃಪ್ತಿಯಿರಲಿಲ್ಲ, ನನ್ನ ಮನಸ್ಸು ಇರದುದರೆಡೆಗೆ, ಹೋರಾಟದೆಡೆಗೆ ಸಾಗಲು ಬಯಸುತ್ತಿತ್ತು. ಬದುಕಿನ ದಾರಿದೀಪವಾಗಬಲ್ಲಂಥದು ನನಗೆ ಬೇಕಾಗಿತ್ತು, ಭಾವನೆಗಳ ದೊಂದಿಯ ಬೆಳಕಲ್ಲ. ಕಂದರವೊಂದರ ತುದಿಗೆ ಅವರೊಡನೆ ಹೋಗಿ, 'ಒಂದೇ ಹೆಜ್ಜೆ, ನಾನು ಬೀಳುತ್ತೇನೆ; ಒಂದೇ ನೆಗೆತ, ನಾನು ಇಲ್ಲವಾಗುತ್ತೇನೆ' ಎಂದು ಹೇಳಲು ನನ್ನ ಮನಸ್ಸು ತವಕಿಸುತ್ತಿತ್ತು. ಆನಂತರ ಭಯದಿಂದ ತತ್ತರಿಸುತ್ತ ಅವರು ಆ ಅಂಚಿನಲ್ಲಿ ತಮ್ಮ ಬಲಿಷ್ಠ ತೋಳುಗಳಲ್ಲಿ ನನ್ನನ್ನು ಪುಡಿಯಾಗುವಂತೆ ಬಿಗಿದಪ್ಪಿ ತಮಗೆ ಇಷ್ಟಬಂದ ಕಡೆಗೆ ನನ್ನನ್ನೆತ್ತಿಕೊಂಡು ಹೋಗುವುದು ನನ್ನ ಹಂಬಲವಾಗಿತ್ತು.

ಈ ಭಾವನೆಗಳು ನನ್ನ ಆರೋಗ್ಯದ ಮೇಲೂ ಪರಿಣಾಮ ಬೀರಿದುವು, ನಾನು ನರದೌರ್ಬಲ್ಯಕ್ಕೆ ಒಳಗಾದೆ. ಒಂದು ದಿನ ಬೆಳಿಗ್ಗೆ ನಾನು ಎಂದಿಗಿಂತ ಕುಗ್ಗಿದ್ದೆ. ಅವರು ಜಮೀನಿನ ಕಡೆಯಿಂದ ಅಪರೂಪವಾಗಿ ಅಕಸ್ಮಾತ್ ಬೇಗ ವಾಪಸು ಬಂದಿದ್ದರು. ನಾನು ಅದನ್ನು ಗಮನಿಸಿ ಸಮಾಚಾರವೇನೆಂದು ಕೇಳಿದೆ. ಅವರು ಹೇಳಲಿಲ್ಲ, ಅದೇನೂ ಮುಖ್ಯವಲ್ಲ ಎಂದು ಜಾರಿಕೊಂಡರು. ಆದರೆ ಆಮೇಲೆ ನನಗೆ ಗೊತ್ತಾಯಿತು: ನಮ್ಮ ಯಜಮಾನರ ಬಗೆಗಿನ ದ್ವೇಷದಿಂದ ಪೊಲೀಸ್ ಇನ್ಸ್‌ಪೆಕ್ಟರ್ ನಮ್ಮ ರೈತರನ್ನು ಕರೆಸಿಕೊಂಡು ಅವರನ್ನು ಬೆದರಿಸಿ ಇಲ್ಲಸಲ್ಲದ ಬೇಡಿಕೆಗಳನ್ನೊಡ್ಡುವಂತೆ ಮಾಡಿದ್ದ. ಇದನ್ನು ಅರಗಿಸಿಕೊಳ್ಳುವುದು ನಮ್ಮೆಜಮಾನರಿಗೆ ಒಮ್ಮೆಲೇ ಸಾಧ್ಯವಾಗಿರಲಿಲ್ಲ; ಅವರಿಗದು ಬರೀ 'ಕರುಣಾಜನಕ ಅಥವಾ ತಮಾಷೆಯದು' ಅನ್ನಿಸಲಿಲ್ಲ. ಅವರು ಉದ್ವೇಗಗೊಂಡಿದ್ದರು, ಹೀಗಾಗಿ ನನ್ನ ಜೊತೆ ಹೇಳಿಕೊಳ್ಳುವುದು ಅವರಿಗೆ ಇಷ್ಟವಿರಲಿಲ್ಲ. ಅವರು ಅದನ್ನು ನನ್ನ ಬಳಿ ಹೇಳಿಕೊಳ್ಳುವುದಕ್ಕೆ ಸಿದ್ಧವಿಲ್ಲದಿರಲು ಕಾರಣ ನಾನು ಇನ್ನೂ ಮಗು, ಅವರ ಕಷ್ಟಗಳನ್ನು ಅರ್ಥಮಾಡಿಕೊಳ್ಳಲಾರೆ ಎಂದವರು ಭಾವಿಸಿದ್ದುದು ಅನ್ನಿಸಿತು. ನಾನು ಏನೂ ಹೇಳದೆ ಅವರಿಂದ ದೂರ ಬಂದಿದ್ದೆ. ನಮ್ಮ ಮನೆಯಲ್ಲೇ ವಾಸಿಸುತ್ತಿದ್ದ ಮಾರ್ಯಾ ಮಿನಿಚ್ನಾಳನ್ನು ತಿಂಡಿಗೆ ಬರುವಂತೆ ಆಳೊಬ್ಬನ ಕೈಲಿ ಹೇಳಿಕಳಿಸಿದೆ. ಬೇಗ ಬೇಗ ತಿಂಡಿ ತಿಂದು ಅವಳನ್ನು ಬೆಳಗಿನ ಕೋಣೆಗೆ ಕರೆದೊಯ್ದೆ, ನನಗೆ ಕೊಂಚವೂ ಆಸಕ್ತಿ ತಾರದ ಯಾವುದೋ ಕೆಲಸಕ್ಕೆ ಬಾರದ ವಿಷಯದ ಬಗ್ಗೆ ಅವಳಿಗೆ ಜೋರಾಗಿ ಹೇಳತೊಡಗಿದೆ. ಅವರು ಕೋಣೆಯ ಬಳಿ ಸುಳಿದಾಡಿದರು, ಆಗಾಗ್ಗೆ ನಮ್ಮ ಕಡೆ ದೃಷ್ಟಿ ಬೀರಿದರು. ಇದರಿಂದ ನಾನು ಮತ್ತಷ್ಟು ಮಾತಾಡುವಂತೆ,

ನಗುವಂತೆ ಕೂಡ ಆಯಿತು; ಮಾರ್ಯಾ ಮಿನಿಚ್ನಾಳಿಗೆ ಹೇಳಿದ್ದೆಲ್ಲ ನಕ್ಕುಬಿಡ ಬಹುದಾದುದು ಅಂತ ನನಗೇ ಹೇಳಿಕೊಂಡೆ. ನನ್ನೊಡನೆ ಒಂದು ಮಾತೂ ಆಡದೆ ಅವರು ತಮ್ಮ ಓದುಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡರು. ಅವರ ಸದ್ದು ಕೇಳದಾದಾಗ, ನನ್ನ ಉತ್ಸಾಹವೆಲ್ಲ ಜರ್‍ರನೆ ಇಳಿದುಹೋಯಿತು. ಮಾರ್ಯಾ ಮಿನಿಚ್ನಾಳಿಗೆ ದಿಗ್ಭ್ರಮೆಯಾಗಿ ಏನು ಸಮಾಚಾರ ಎಂದು ಕೇಳಿದಳು. ಉತ್ತರಿಸದೆ ನಾನು ಸೋಫಾ ಮೇಲೆ ಕುಳಿತೆ, ಅಳಬೇಕೆನ್ನಿಸಿತು. 'ಅವರ ಮನಸ್ಸಿನಲ್ಲಿ ಏನಾಗುತ್ತಿದೆ' ಅನ್ನಿಸಿತು; 'ಅವರು ಮುಖ್ಯವೆಂದು ಭಾವಿಸಿದ್ದ ಯಾವುದೋ ಕ್ಷುಲ್ಲಕ ವಿಷಯ ಅನ್ನಿಸಿತು. ಅವರು ಅದನ್ನು ನನಗೆ ಹೇಳಿದ್ದರೆ, ಅದು ಕೆಲಸಕ್ಕೆ ಬಾರದ್ದು ಎಂದು ನಾನವರಿಗೆ ಮನವರಿಕೆ ಮಾಡಿಕೊಡಬಹುದಾಗಿತ್ತು. ಆದರೆ ನನಗವೆಲ್ಲ ಅರ್ಥವಾಗುವುದಿಲ್ಲ ಎಂದವರು ಭಾವಿಸಿ, ತಮ್ಮ ಶ್ರೀಮದ್ಗಾಂಭೀರ್ಯದಿಂದ ನನ್ನ ಮನಸ್ಸನ್ನು ಚುಚ್ಚುತ್ತಿದ್ದಾರೆ, ನನಗೆ ವ್ಯತಿರಿಕ್ತವಾಗಿ ನಡೆದುಕೊಳ್ಳುತ್ತಿದ್ದಾರೆ' ಅನ್ನಿಸಿತು. ವಿಷಯಗಳು ಸುಸ್ತುಮಾಡಿಸುವಂಥವು ಅಥವಾ ಕ್ಷುಲ್ಲಕ ಅನ್ನಿಸಿದಾಗ ನಾನೂ 'ಸರಿಯಲ್ಲವೇ?' ಎಂದು ಆಲೋಚಿಸಿದೆ. 'ನನ್ನ ಕಣ್ಣು ಮುಂದೆಯೇ ಕಾಲ ಸರಿದು ಹೋಗುವುದನ್ನು ನೋಡುತ್ತ ಕೂತು ತುಕ್ಕು ಹಿಡಿಯುವುದರ ಬದಲು ಬದುಕಿನಲ್ಲಿ ಚಟುವಟಿಕೆಯಿಂದ ಕೂಡಿರುವುದು ನನಗೆ ಬೇಕಾಗಿದೆ, ಪ್ರತಿದಿನ ಪ್ರತಿ ಗಂಟೆ ಏನಾದರೂ ಹೊಸ ಅನುಭವ ಪಡೆಯಬೇಕು. ಆದರೆ ಅವರು ಮಾತ್ರ ತಾವೂ ನಿಶ್ಚಲವಾಗಿ ನಿಂತು ನಾನೂ ಕೈಕಾಲಾಡಿಸದೆ ನಿಲ್ಲಬೇಕು ಎಂದು ಭಾವಿಸುತ್ತಾರೆ. ನನ್ನನ್ನು ತೃಪ್ತಿಪಡಿಸುವುದು ಅವರಿಗೆ ಅದೆಷ್ಟು ಸುಲಭ! ಅವರೇನೂ ಪಟ್ಟಣಕ್ಕೆ ಕರೆದೊಯ್ಯಬೇಕಾಗಿಲ್ಲ; ಅವರೂ ನನ್ನಂತೆಯೇ ಯಾಕಿರಬಾರದು? ಒತ್ತಡಗಳನ್ನು ಹೇರಿಕೊಳ್ಳದೆ ತಮ್ಮ ಭಾವನೆಗಳನ್ನು ನಿಯಂತ್ರಿಸಿಕೊಳ್ಳಬೇಕು, ಸರಳವಾಗಿ ಬದುಕಬೇಕು. ಇದು ಅವರು ನನಗೆ ಕೊಡುವ ಉಪದೇಶ. ಆದರೆ ಅವರದೇನೂ ನೇರ ನಡೆಯಲ್ಲ. ಇದು ವಾಸ್ತವ ಸ್ಥಿತಿ ಅಂದುಕೊಂಡೆ.

ಅಳು ಉಕ್ಕಿ ಬರುತ್ತಿತ್ತು, ಅವರ ನಡವಳಿಕೆಯಿಂದ ನನಗೆ ಕಿರಿಕಿರಿಯಾಗಿತ್ತು. ಆ ಕಿರಿಕಿರಿ ನನಗೆ ಭಯವನ್ನುಂಟುಮಾಡಿತು, ನಾನು ಅವರ ಓದುಕೋಣೆಗೆ ಹೋದೆ. ಅವರು ಮೇಜಿನ ಮುಂದೆ ಏನೋ ಬರೆಯುತ್ತ ಕುಳಿತಿದ್ದರು. ನನ್ನ ಹೆಜ್ಜೆಸಪ್ಪಳ ಕೇಳಿ ಅವರು ನನ್ನ ಕಡೆ ಕತ್ತೆತ್ತಿ ಒಂದು ಕ್ಷಣ ನೋಡಿ ಬರೆಯುವುದನ್ನು ಮುಂದುವರಿಸಿದರು. ಅವರು ಶಾಂತಚಿತ್ತರಾಗಿ ಏನೂ ಆಗಿಲ್ಲದವರಂತೆ ಕಂಡುಬಂದರು. ಅವರ ನೋಟ ನನ್ನಲ್ಲಿ ಖೇದವನ್ನುಂಟುಮಾಡಿತು. ಅವರ ಮೇಜಿನ ಬಳಿ ಹೋಗಿ ಪಕ್ಕದಲ್ಲಿ ನಿಂತೆ, ಒಂದು ಪುಸ್ತಕ ತೆರೆದು ಅದರಲ್ಲಿ ನೋಡತೊಡಗಿದೆ. ತಮ್ಮ ಬರವಣಿಗೆಯನ್ನು ಮತ್ತೆ ಮಧ್ಯದಲ್ಲೇ ನಿಲ್ಲಿಸಿ ನನ್ನ ಕಡೆ ನೋಡಿದರು.

"ಮಾಷಾ, ಏನಾಯ್ತು ನಿಂಗೆ?" ಎಂದರು.

ನಾನು ತಣ್ಣನೆ ನೋಟ ಹರಿಸಿ ಉತ್ತರಿಸಿದೆ, "ನೀವು ಸೌಜನ್ಯಮೂರ್ತಿಗಳು, ಆದರೆ ಹೇಳುವುದರಿಂದೇನು ಪ್ರಯೋಜನ?" ಎಂಬ ಭಾವ ಅದರಲ್ಲಿತ್ತು. ತಮ್ಮ ತಲೆಯಾಡಿಸಿದ

ಅವರು ಮಿದುತೆ ಹಿಂಜರಿಕೆಗಳಿಂದ ನಸುನಕ್ಕರು. ಆದರೆ ಮೊದಲನೆಯ ಬಾರಿಗೆ, ಅವರ ನಗುವಿಗೆ ನಾನು ನಗುವಿನ ಪ್ರತಿಕ್ರಿಯೆ ತೋರಿಸಲಿಲ್ಲ.

"ಇವತ್ತೇನಾಗಿದೆ ನಿಮಗೆ? ನನಗ್ಯಾಕೆ ಹೇಳಲಿಲ್ಲ?" ಎಂದು ಕೇಳಿದೆ.

"ಅಂಥದ್ದೇನೂ ಇಲ್ಲ, ಸಣ್ಣಪುಟ್ಟ ಕಿರಿಕಿರಿ, ಅಷ್ಟೆ. ನಿಂಗೆ ಆ ವಿಷ್ಯ ಹೇಳ್ಬಹುದಾಗಿತ್ತು. ನಮ್ಮ ಇಬ್ಬರು ಸೇವಕರು ಪಟ್ಟಣಕ್ಕೆ ಹೋಗಿ .. .."

ಅವರು ಮಾತನ್ನು ಮುಂದುವರೆಸಲು ನಾನು ಬಿಡಲಿಲ್ಲ.

"ಬೆಳಿಗ್ಗೆ ತಿಂಡಿ ತಿನ್ನೋವಾಗ ಇದನ್ನೆಲ್ಲ ನೀವ್ಯಾಕೆ ನಂಗೆ ಹೇಳ್ಲಿಲ್ಲ?"

"ನಂಗೆ ಅವಾಗ ಕೋಪ ಇತ್ತು, ಮಾತಾಡಿದ್ರೆ ಏನೇನೋ ಮಾತು ಬರ್ತಿತ್ತು."

"ಆಗ್ಲೇ ತಿಳಕೊಳ್ಳೋ ಆಸೆ ಇತ್ತು ನಂಗೆ."

"ಯಾಕೆ?"

"ಯಾವುದರಲ್ಲೂ ನಿಮಗೆ ನಾನು ಏನು ಸಹಾಯವೂ ಮಾಡಕ್ಕಾಗಲ್ಲ ಅಂತ ಯಾಕೆ ಅಂದ್ಕೋತೀರಾ ನೀವು?"

"ನಂಗೆ ಸಹಾಯ ಮಾಡೋದಾ?" ಎಂದರು ಪೆನ್ನನ್ನು ಕೆಳಗಿಡುತ್ತ. "ನೀನಿಲ್ಲದೆ ನಾನು ಬದುಕಲಾರೆ ಅಂತ ಅಂದ್ಕೊಂಡಿದ್ದೀನಿ. ನಾನು ಮಾಡೋದ್ರಲ್ಲೆಲ್ಲ ಸಹಾಯ ಮಾಡೋದು ಮಾತ್ರ ಅಲ್ಲ, ಅದನ್ನೆಲ್ಲ ನೀನೇ ಮಾಡ್ತೀ. ನೀನು ನಂಗೆ ತುಂಬ ಮುಖ್ಯ" ಎನ್ನುತ್ತ ಅವರು ನಕ್ಕರು. "ನನ್ನ ಬದುಕು ನಿನ್ನೇ ಅವಲಂಬಿಸಿದೆ. ನನಗೆ ಎಲ್ಲ ಇಷ್ಟವಾಗೋದಕ್ಕೆ ಕಾರಣ, ನೀನಿರೋದು, ನಂಗೆ ನೀನು ಆವಶ್ಯಕ ಅದರಿಂದ."

"ನಂಗೊತ್ತು. ನಾನೊಬ್ಬಳು ಪುಟ್ಟ ಮಗು, ಯಾವಾಗ್ಲೂ ಮುದ್ದಿಸ್ತಿರಬೇಕು, ಸುಮ್ಮನಿರಿಸ್ಬೇಕು, ಅಷ್ಟೇ ತಾನೇ!" ಎಂದೆ.

ನನ್ನ ಧ್ವನಿ ಅವರಲ್ಲಿ ಅಚ್ಚರಿ ತಂದಿತ್ತು, ಅವರಿಗಿದು ಹೊಸ ಅನುಭವ. "ಆದ್ರೆ ನಂಗೆ ಸುಮ್ನೆ ಮಾತಿಲ್ದೆ ಕೂತಿರೋಕೆ ಆಗದು; ಅದು ನಿಮಗೇ ಸರಿ, ನನಗಲ್ಲ" ಎಂದೂ ಸೇರಿಸಿದೆ.

ನಾನು ಮುಂದುವರಿಸೋದು ಕಂಡು ಅವರು ಹೆದರಿ, ಮಧ್ಯದಲ್ಲೇ ತಡೆದು ಹೇಳಿದರು: "ಸರಿ ಹಾಗಾದ್ರೆ, ನಾನು ನಿಂಗೆ ವಿಷ್ಯ ಎಲ್ಲ ಹೇಳಿದ ಮೇಲೆ ನಿನ್ನ ಅಭಿಪ್ರಾಯ ತಿಳಿಸ್ಬೇಕು."

"ಅದನ್ನ ಈಗ ಕೇಳೋದು ನಂಗೆ ಬೇಕಿಲ್ಲ" ಎಂದೆ. ನಾನು ಕತೆ ಕೇಳಕ್ಕೆ ಸಿದ್ಧಳಿರಲಿಲ್ಲ, ಆದರೆ ನನ್ನ ಮಾತು ಅವರಲ್ಲಿ ಗಲಿಬಿಲಿ ಉಂಟುಮಾಡಿದ್ದರಿಂದ ನನಗೆ ಸಂತೋಷವಾಗಿತ್ತು. "ನಾನು ಬದುಕಿನ ಜೊತೆ ಆಟ ಆಡಲಾರೆ, ನಿಮ್ಮ ಹಾಗೆ ನಾನೂ ಬದುಕ್ಬೇಕು."

ಒಳಗಿನ ಭಾವನೆಗಳನ್ನೆಲ್ಲ ಸ್ಫಟಿಕಸ್ಪಷ್ಟವಾಗಿ ಹೊಮ್ಮುತ್ತಿದ್ದ ಅವರ ಮುಖದಲ್ಲಿ

ಈಗ ನೋವು ಮತ್ತು ತೀವ್ರ ಗಮನ ಕಾಣಿಸಿದವು.

"ನಾನು ನಿಮ್ಮ ಬದುಕಿನ ಜೊತೆ ಭಾಗವಹಿಸ್ಬೇಕು .. .." ಎಂದೆ, ಆದರೆ ಮಾತು ಮುಂದುವರಿಸಲಾಗಲಿಲ್ಲ, ಅವರ ಮುಖದಲ್ಲಿ ಅಂಥ ಖಿನ್ನತೆ ಕಾಣಿಸಿಕೊಂಡಿತ್ತು. ಒಂದು ಕ್ಷಣ ಸುಮ್ಮನಿದ್ದರು.

"ನನ್ನ ಬದುಕಿನ ಯಾವ ಭಾಗದಲ್ಲಿ ನೀನು ಸೇರಿಲ್ಲ? ಆ ಇನ್ಸಪೆಕ್ಟರ್ ಹಾಗೂ ಕುಡುಕ ಕೂಲಿಗಳ ಜೊತೆ ಹೆಣಗಬೇಕಾದೋನು ನಾನು, ನೀನಲ್ಲ ಅಂತಲಾ?" ಎಂದು ಕೇಳಿದರು.

"ಅದೊಂದೇ ಅಲ್ಲ" ಅಂದೆ.

"ದಯವಿಟ್ಟು ನನ್ನನ್ನರ್ಥ ಮಾಡ್ಕೊಳ್ಳೋಕೆ ಪ್ರಯತ್ನಪಡು, ಮರಿ" ಎಂದು ಕಿರಿಚಿದರು. "ಉದ್ವೇಗಕ್ಕೊಳಗಾಗೋದು ಯಾವಾಗ್ಲೂ ನೋವು ತರೋ ವಿಷಯ, ಬದುಕು ನನಗೆ ಅದನ್ನ ಕಲಿಸಿದೆ. ನಿನ್ನ ನಾನು ಪ್ರೀತಿಸೋದ್ರಿಂದ ನೀನು ಉದ್ವೇಗಕ್ಕೊಳಗಾಗೋದು ನಂಗಿಷ್ಟ ಇಲ್ಲ. ನನ್ನ ಬದುಕಲ್ಲಿ ನಿನ್ನ ಬಗ್ಗೆ ಪ್ರೀತಿ ತುಂಬ್ಕೊಂಡಿದೆ; ದಯವಿಟ್ಟು ನನ್ನ ಬದುಕನ್ನು ನೀನು ದುರ್ಭರವಾಗಿ ಮಾಡಬಾರದು."

"ಯಾವಾಗ್ಲೂ ನೀವೇ ಸರಿ!" ಅಂದೆ ನಾನು ಅವರ ಕಡೆ ನೋಡದೆ.

ಅವರ ಪ್ರಶಾಂತತೆಯಿಂದ ನನಗೆ ಮತ್ತೆ ನೋವಾಯಿತು, ಇರಿಸುಮುರಿಸು ಹಾಗೂ ತಪ್ಪು ಮಾಡಿದ ಭಾವನೆ ನನ್ನಲ್ಲುಂಟಾಯಿತು.

"ಮಾಷಾ, ಏನಾಗಿದೆ? ನಮ್ಮಿಬ್ಬರಲ್ಲಿ ಯಾರು ಸರಿ ಅನ್ನೋದಲ್ಲ ವಿಷ್ಯ, ಅಲ್ಲವೇ ಅಲ್ಲ; ಅದರ ಬದಲು, ನನ್ನ ಬಗ್ಗೆ ಏನು ದೂರಿದೆ ನಿಂಗೆ? ಅನ್ನೋದು. ಯೋಚನೆ ಮಾಡಿ ಉತ್ತರ ಹೇಳು, ನಿನ್ನ ಮನಸ್ಸಲ್ಲಿ ಏನಿದ್ಯೋ ಹೇಳು. ನನ್ನಲ್ಲಿ ಏನೋ ಅತೃಪ್ತಿ ನಿಂಗೆ. ನೀನು ಸರಿ ಅನ್ನೋದರಲ್ಲಿ ಅನುಮಾನವೇ ಇಲ್ಲ; ಆದರೆ ನಾನು ಮಾಡಿರೋ ತಪ್ಪಾದ್ರೂ ಏನು ಅನ್ನೋದನ್ನ ಹೇಳು."

ನನ್ನ ಭಾವನೆಗಳನ್ನು ಮಾತಲ್ಲಿಡುವುದು ಹೇಗೆ ಎಂಬ ಪ್ರಶ್ನೆ ನನಗೆದುರಾಯಿತು. ಅವರು ನನ್ನನ್ನ ತಕ್ಷಣ ಅರ್ಥಮಾಡಿಕೊಂಡಿದ್ದು, ಮತ್ತೆ ಅವರ ಮುಂದೆ ನಾನು ಮಗುವಿನ ಹಾಗೆ ಆದದ್ದು, ಅವರಿಗೆ ತಿಳಿಯದೆ ಮುಂಚೆಯೇ ಊಹಿಸದ ರೀತಿ ನಾನೇನೂ ಮಾಡಲಾರೆ ಅನ್ನುವುದು - ಇವೆಲ್ಲ ನನ್ನ ತೊಳಲಾಟವನ್ನು ಹೆಚ್ಚಿಸಿದವು.

"ನಿಮ್ಮ ವಿರುದ್ಧ ನಂದು ಯಾವ ದೂರೂ ಇಲ್ಲ. ನನಗೆ ತುಂಬ ಬೇಜಾರಾಗಿದೆ, ಬೇಜಾರು ಆಗಬಾರದು, ಅಷ್ಟೆ. ಅದಕ್ಕೇನೂ ಮಾಡಕ್ಕಾಗಲ್ಲ ಅಂತ ನೀವು ಹೇಳ್ತೀರ, ಎಂದಿನ ಹಾಗೆ, ನೀವು ಹೇಳೋದು ಸರಿ."

ಮಾತಾಡುವಾಗ ಅವರ ಕಡೆ ನೋಡಿದೆ. ನಾನು ಗುರಿ ತಲುಪಿದ್ದೆ; ಅವರ ಪ್ರಶಾಂತತೆ ಮಾಯವಾಗಿತ್ತು, ಅವರ ಮುಖದಲ್ಲಿ ಹೆದರಿಕೆ ಮತ್ತು ನೋವುಗಳು ಎದ್ದು ಕಂಡವು.

"ಮಾಷಾ," ಎಂದು ಕಾತರತೆ ತುಂಬಿದ್ದ ಮೆಲುದನಿಯಲ್ಲಿ ಮಾತಾಡತೊಡಗಿದರು: "ಇದು ಬರೀ ಕ್ಷುಲ್ಲಕ ವಿಷಯವಲ್ಲ. ನಮ್ಮ ಬದುಕಿನ ಸುಖವೇ ಸಂಕಷ್ಟದಲ್ಲಿದೆ. ಮಾತಾಡದೆ ನಾನು ಹೇಳುವುದನ್ನು ಕೇಳು, ನನ್ನನ್ನೇಕೆ ಪೀಡಿಸ್ತಿದ್ದೀ?"

ನಾನು ಮಧ್ಯೆ ಬಾಯಿ ಹಾಕಿದೆ.

"ನೀವು ಹೇಳುವುದೆಲ್ಲ ಸರಿಯಾಗಿಯೇ ಇರುತ್ತೆ. ಪದಗಳಿಂದ ಪ್ರಯೋಜನವಿಲ್ಲ; ನೀವು ಹೇಳುವುದು ನಿಜ." ನಾನು ತಣ್ಣಗೆ ಮಾತಾಡಿದೆ, ನನ್ನ ಕಂಠದಿಂದ ಯಾವುದೋ ಪೀಡೆ ಮಾತಾಡುತ್ತಿದ್ದಂತಿತ್ತು.

"ನೀನೇನು ಮಾಡ್ತಿದ್ದೀ ಅನ್ನೋದು ನಿನಗೆ ಗೊತ್ತಾಗಿದ್ದಿದ್ರೆ ಚೆನ್ನಾಗಿತ್ತು!" ಎಂದಾಗ ಅವರ ದನಿ ನಡುಗುತ್ತಿತ್ತು.

ಜೋರಾಗಿ ಅಳಲು ಆರಂಭಿಸಿದೆ, ನನಗೆ ಹಾಯೆನಿಸಿತು. ನನ್ನ ಪಕ್ಕದಲ್ಲಿದ್ದ ಅವರು ಸುಮ್ಮನಿದ್ದರು. ಅವರನ್ನು ಕಂಡು ನನಗೆ ಅಯ್ಯೋ ಅನ್ನಿಸಿತು, ನನ್ನ ಬಗ್ಗೆಯೇ ನಾಚಿಕೆ ಎನಿಸಿತು, ನಾನು ಮಾಡಿದ್ದು ನನ್ನಲ್ಲಿ ಮುಜುಗರ ತಂದಿತ್ತು. ಅವರ ಮುಖವನ್ನು ನೋಡುವ ಧೈರ್ಯ ಬರಲಿಲ್ಲ. ಆ ಹೊತ್ತಲ್ಲಿ ಅವರ ನೋಟವು ಯಾತನೆ ಅಥವಾ ಗೊಂದಲದಿಂದ ಕೂಡಿರುತ್ತಿತ್ತು. ಕೊನೆಗೆ ನಾನವರ ಕಣ್ಣುಗಳತ್ತ ದೃಷ್ಟಿಹರಿಸಿದೆ; ಕೋಮಲತೆ-ಸೌಜನ್ಯಗಳನ್ನು ತುಂಬಿಕೊಂಡ ಅವು ಕ್ಷಮೆ ಯಾಚಿಸುವಂತ್ತಿತ್ತು. ನಾನವರ ಕೈಗಳನ್ನು ಹಿಡಿದು ಹೇಳಿದೆ:

"ದಯವಿಟ್ಟು ಕ್ಷಮಿಸಿ, ಏನು ಮಾಡ್ತಾ ಇದ್ದೀನಿ ಅನ್ನೋದರ ಪರಿವೆಯೇ ನಂಗಿರಲಿಲ್ಲ."

"ಆದ್ರೆ ನಂಗಿತ್ತು, ನೀನು ನಿಜಾನೇ ಹೇಳ್ತಿದ್ದೆ."

"ಅಂದ್ರೆ?"

"ಅಂದ್ರೆ ನಾವು ಪೀಟರ್ಸ್‌ಬರ್ಗ್‌ಗೆ ಹೋಗ್ಬೇಕು ಅಂತ. ಈಗ ನಮಗೆ ಮಾಡಕ್ಕೆ ಇಲ್ಲೇನೂ ಉಳಿದಿಲ್ಲ" ಎಂದರು.

"ನಿಮ್ಮಿಷ್ಟ" ಎಂದೆ.

ನನ್ನನ್ನಪ್ಪಿಕೊಂಡು ಅವರು ಚುಂಬಿಸಿದರು.

"ನನ್ನ ಕ್ಷಮಿಸು, ತಪ್ಪು ಮಾಡ್ದೆ" ಅಂದರು.

ಆವತ್ತು ಸಂಜೆ ಅವರಿಗಾಗಿ ತುಂಬ ಹೊತ್ತು ಪಿಯಾನೋ ನುಡಿಸಿದೆ, ಅವರು ಕೋಣೆಯಲ್ಲೇ ಶತಪಥ ತುಳಿಯುತ್ತಿದ್ದರು. ತಮ್ಮಲ್ಲೇ ಮಾತಾಡಿಕೊಳ್ಳುವ ಅಭ್ಯಾಸ ಅವರಿಗಿತ್ತು. ಏನು ಮಾತಾಡಿಕೊಳ್ಳುತ್ತಿದ್ದಿರಿ ಎಂದವರನ್ನು ಕೇಳಿದಾಗ, ಅದೇನು ಎನ್ನುವುದನ್ನು ಖಚಿತವಾಗಿ ಹೇಳಲು ಅವರು ಒಂದಷ್ಟು ಯೋಚಿಸುತ್ತಿದ್ದರು. ಅದು ಸಾಮಾನ್ಯವಾಗಿ ಯಾವುದೋ ಪದ್ಯವಾಗಿರುತ್ತಿತ್ತು, ಕೆಲವು ಸಲ ಅರ್ಥವಿಲ್ಲದ್ದೂ

ಆಗಿರಬಹುದು. ಅದರಿಂದ ನನಗೆ ಅವರ ಮನಃಸ್ಥಿತಿ ತಿಳಿಯುವುದು ಸಾಧ್ಯವಾಗುತ್ತಿತ್ತು. ಈಗ ಕೇಳಿದಾಗ ಅವರು ಓಡಾಟ ನಿಲ್ಲಿಸಿ ನಿಂತುಕೊಂಡರು, ಒಂದು ಕ್ಷಣ ಯೋಚಿಸಿ ಲರ್ಮೆಂಟೋವ್ನ ಎರಡು ಸಾಲುಗಳನ್ನು ಹೇಳಿದರು:

ಹುಚ್ಚಿನಲಿ ಬಿರುಗಾಳಿ ಬೀಸಲೆಂದು ಪ್ರಾರ್ಥಿಸುವ ವ್ಯಕ್ತಿ
ಅಂದುಕೊಳ್ಳುತ್ತಾನೆ ಬಿರುಗಾಳಿಯಿಂದಲೇ ತನಗೆ ಶಾಂತಿ.

ಅವರು ಸಾಮಾನ್ಯ ಮನುಷ್ಯರಲ್ಲ ಅನ್ನಿಸಿತು. ಅವರಿಗೆ ಎಲ್ಲ ಗೊತ್ತಿದೆ. ಅಂಥವರನ್ನು ಪ್ರೀತಿಸದೆ ಇರುವುದು ಸಾಧ್ಯವೇ?

ಮೇಲೆದ್ದು ಅವರ ತೋಳುಗಳನ್ನು ಹಿಡಿದುಕೊಂಡು ಅವರ ಜೊತೆಯಲ್ಲೇ ನಾನೂ ಓಡಾಡತೊಡಗಿದೆ, ಅವರ ಹೆಜ್ಜೆಗೆ ಹೆಜ್ಜೆ ಸೇರಿಸುತ್ತ.

"ಹ್ಞೂ!" ಎಂದರು ನನ್ನತ್ತ ಮುಗುಳ್ನಗು ಕೂಡಿದ ನೋಟ ಬೀರುತ್ತ.

"ಸರಿ" ಎಂದು ಪಿಸುಗುಟ್ಟಿದೆ. ಇಬ್ಬರಿಗೂ ಇದ್ದಕ್ಕಿದ್ದಂತೆ ಹುಕಿ ಬಂದಿತ್ತು; ನಮ್ಮ ಕಣ್ಣುಗಳಲ್ಲಿ ನಗುವಿತ್ತು, ದಾಪುಗಾಲು ಹಾಕಿದೆವು, ಹೆಬ್ಬೆರಳ ತುದಿಯ ಮೇಲೆ ಎತ್ತರೆತ್ತರ ನಿಂತೆವು. ಈ ರೀತಿಯ ನಮ್ಮ ದಾಪುಗಾಲು ಅಡುಗೆಯವನಲ್ಲಿ ಅತೃಪ್ತಿ ತಂದಿದ್ದರೆ, ಅತ್ತೆಯವರಲ್ಲಿ ಅಚ್ಚರಿಯುಂಟುಮಾಡಿತ್ತು. ಅವರು ಎಲ್ಲವನ್ನೂ ತಾಳ್ಮೆಯಿಂದ ನೋಡುತ್ತ ಪಡಸಾಲೆಯಲ್ಲಿದ್ದರು. ಮನೆಯಲ್ಲಿ ಸಾಗಿ ಊಟದ ಕೋಣೆಗೆ ಬಂದೆವು, ನಿಂತು ಒಬ್ಬರನ್ನೊಬ್ಬರು ನೋಡುತ್ತ ಜೋರಾಗಿ ನಕ್ಕೆವು.

ಹದಿನೈದು ದಿನಗಳ ಬಳಿಕ, ಕ್ರಿಸ್ಮಸ್‌ಗೂ ಮುಂಚೆ, ನಾವು ಪೀಟರ್ಸ್‌ಬರ್ಗ್ ಸೇರಿದೆವು.

## 2

ಪೀಟರ್ಸ್‌ಬರ್ಗ್‌ಗೆ ಪಯಣ ಬೆಳೆಸಿದ್ದು, ಮಾಸ್ಕೋದಲ್ಲಿ ಒಂದು ವಾರ ಉಳಿದುಕೊಂಡದ್ದು, ನನ್ನ ಮತ್ತು ಯಜಮಾನರ ನೆಂಟರುಗಳ ಮನೆಗಳಿಗೆ ಹೋದದ್ದು, ನಮ್ಮ ಹೊಸ ಬಿಡಾರದಲ್ಲಿ ಉಳಿದುಕೊಂಡದ್ದು, ಪಯಣ, ಹೊಸ ಊರುಗಳು, ಹೊಸ ಮುಖಗಳು - ಇವೆಲ್ಲ ಕನಸಿನ ಹಾಗೆ ನಡೆದುಹೋದವು. ಅವೆಲ್ಲ ಹೊಚ್ಚ ಹೊಸ ಅನುಭವಗಳು, ವೈವಿಧ್ಯಪೂರ್ಣವಾದವು, ಹಾಯೆನಿಸುತ್ತಿದ್ದಂಥವು. ಜೊತೆಗೆ ಅವರಿದ್ದುದರಿಂದ, ಎಲ್ಲದರಲ್ಲೂ ಅವರು ಭಾಗಿಯಾಗುತ್ತಿದ್ದುದರಿಂದ ಕಲಕಲ ಹೊಳೆಯುತ್ತಿದ್ದವು. ಹೀಗಾಗಿ ಹಳ್ಳಿಯ ನಮ್ಮ ಗಡಿಬಿಡಿಯಿಲ್ಲದ ಬದುಕು ಯಾವುದೋ ಕಾಲದ್ದು ಎನಿಸುವಂತಾಗಿ, ಅದರ ಪ್ರಾಮುಖ್ಯವೇ ಹೊರಟುಹೋಗಿತ್ತು. ಇಲ್ಲೆಲ್ಲ ಜಂಬಗಾರರೂ, ಬೇಕೂ ಬೇಡದಂತಿರುವವರೂ ಆದ ಜನಗಳನ್ನು ಕಾಣುತ್ತೇನೆಂದು ಕೊಂಡಿದ್ದೆ; ಆದರೆ ಎಲ್ಲೆಡೆಯೂ ಬಂಧುಗಳು ಮಾತ್ರವಲ್ಲದೆ ಇತರರೂ ವಾತ್ಸಲ್ಯದಿಂದ ಕಂಡದ್ದು, ನನ್ನನ್ನು ನೋಡಿ ಸಂತಸಗೊಂಡದ್ದು ನನಗೆ ಆಶ್ಚರ್ಯವನ್ನುಂಟುಮಾಡಿತ್ತು.

ಅವರೆಲ್ಲರ ನನ್ನ ಕುರಿತ ಆಲೋಚನೆ ಮಾತ್ರವೇ ಇದೆಯೇನೋ, ತಮ್ಮ ಸಂತಸಕ್ಕೆ ಹೊಸ ಹೊಳಪು ಬರಲು ಅವರೆಲ್ಲ ನಾನು ಬರುವುದನ್ನೇ ಕಾತರದಿಂದ ಕಾಯುತ್ತಿದ್ದರೇನೋ ಎನ್ನಿಸಿಬಿಟ್ಟಿತು ನನಗೆ. ಅಲ್ಲದೆ ಸಮಾಜದಲ್ಲಿ ನನ್ನ ಗಂಡನಿಗೆ ಎಷ್ಟೆಲ್ಲ ಉನ್ನತ ಜನರ ಪರಿಚಯವಿದೆ ಎಂಬುದನ್ನು ಕಂಡು ನನಗಂತೂ ಅತ್ಯಾಶ್ಚರ್ಯವಾಗಿತ್ತು; ಏಕೆಂದರೆ ಅವರೆಂದೂ ಆ ವಿಷಯದ ಬಗ್ಗೆ ನನಗೆ ಹೇಳಿರಲೇ ಇಲ್ಲ. ಆದರೆ ನನ್ನೊಡನೆ ತುಂಬ ಪ್ರೀತಿಯಿಂದ ನಡೆದುಕೊಂಡಿದ್ದರೂ ಅವರಲ್ಲಿ ಕೆಲವರ ಬಗ್ಗೆ ಅವರು ಉದಾಸೀನದಿಂದ ಮಾತನಾಡಿದ್ದು ಕಂಡು ಮುಜುಗರವಾಗುತ್ತಿತ್ತು, ಅವರ ಮಾತನ್ನು ಒಪ್ಪುವುದು ಕಷ್ಟವಾಗುತ್ತಿತ್ತು. ಅವರ ಬಗ್ಗೆ ಅದೇಕೆ ಉದಾಸೀನರಾಗಿದ್ದಾರೆಯೋ ಎಂಬುದಂತೂ ನನಗೆ ಅರ್ಥವಾಗುತ್ತಿರಲಿಲ್ಲ. ನನ್ನ ಬಗ್ಗೆ ಅಷ್ಟೆಲ್ಲ ಒಲವು ತೋರಿಸಿದವರ ಬಗ್ಗೆ ನನ್ನ ಗಂಡನೇಕೆ ಕೊಂಕು ಮಾತಾಡುತ್ತಾರೋ, ಅವರನ್ನು ಕಾಣುವುದನ್ನು ತಪ್ಪಿಸುತ್ತಾರೊ ಎನ್ನಿಸುತ್ತಿತ್ತು. ಒಳ್ಳೆಯ ಜನರನ್ನು ಕಂಡಷ್ಟೂ ಸಂತೋಷಕರವಲ್ಲವೇ; ಇಲ್ಲಂತೂ ಪ್ರತಿಯೊಬ್ಬರೂ ಸಜ್ಜನರಾಗಿದ್ದರು.

ಹಳ್ಳಿಯನ್ನು ಬಿಡುವ ಮುಂಚೆ "ನಾವು ಇದನ್ನು ಹೀಗೇ ನಿಭಾಯಿಸಬೇಕು. ಇಲ್ಲಾದರೆ ನಾವು ಪುಟ್ಟ ಕುಬೇರರು ಅನ್ನಿಸಿಕೊಂಡವರು, ಆದರೆ ನಗರದಲ್ಲಿ ನಾವು ಖಂಡಿತ ಶ್ರೀಮಂತರೆನಿಸಿಕೊಳ್ಳೋದಿಲ್ಲ. ಅದಕ್ಕೇ ಈಸ್ಟರ್ ನಂತರ ನಾವಲ್ಲಿ ಉಳಿದಿರಬಾರದು ಅಥವಾ ಜನಗಳ ಜೊತೆ ಸಂಪರ್ಕದಲ್ಲಿರಬಾರ್ದು, ಇಲ್ಲದಿದ್ರೆ ನಾವು ತೊಂದರೇಲಿ ಸಿಕ್ಕಿಹಾಕ್ಕೋಬೇಕಾಗತ್ತೆ. ನಿನಗೋಸ್ಕರವಾಗಿಯಾದ್ರೂ ನಾನದನ್ನು ಬಯಸಬಾರ್ದು" ಎಂದವರು ಹೇಳಿದ್ದರು.

"ಜನಗಳ ಜೊತೆ ಯಾಕೆ ಹೋಗ್ಬೇಕಾಗತ್ತೆ, ನಾವು ನಾಟಕ ಮಂದಿರಗಳಿಗೆ ಭೇಟಿ ಕೊಡೋಣ, ನಮ್ಮ ನೆಂಟರನ್ನ ಕಾಣೋಣ, ಆಪೆರಾ ನೋಡೋಣ, ಸ್ವಲ್ಪ ಒಳ್ಳೆ ಸಂಗೀತ ಕೇಳೋಣ, ಈಸ್ಟರ್ ಮುಂಚೇನೇ ಊರನ್ನ ಸೇರ್ಕೊಳ್ಳೋಕೆ ಸಿದ್ಧವಾಗಿರೋಣ" ಎಂದಿದ್ದೆ ನಾನು.

ಆದರೆ ಪೀಟರ್ಸ್‌ಬರ್ಗ್ ಸೇರಿದ ನಮ್ಮ ಈ ಯೋಜನೆಗಳೆಲ್ಲ ಮರೆತೇಹೋದವು. ಇದ್ದಕ್ಕಿದ್ದ ಹಾಗೇ ಹೊಚ್ಚ ಹೊಸತಾದ ಒಂದು ಸ್ವರ್ಗಸಮಾನ ಜಗತ್ತಿಗೆ ಬಂದುಬಿಟ್ಟ ಅನುಭವ ನನಗೆ, ಸುತ್ತಲೂ ನಾನಾ ಬಗೆಯ ಸಂತೋಷಗಳು, ಎದುರಾದ ಹೊಸ ಹೊಸ ಆಸಕ್ತಿಗಳು. ಆದ್ದರಿಂದ ತಕ್ಷಣವೇ, ಆದರೆ ನಂಗೇ ಗೊತ್ತಿಲ್ಲದ ಹಾಗೆ, ನನ್ನ ಹಿಂದಿನ ಬದುಕು ಮತ್ತದರ ಯೋಜನೆಗಳಿಂದ ವಿಮುಖಳಾಗಿಬಿಟ್ಟೆ. "ಹಿಂದಿನದೆಲ್ಲ ಬರೀ ಸಿದ್ಧತೆ, ಅಷ್ಟೆ; ಬದುಕಿನ ಜೊತೆ ಆಡಿದ ಆಟ; ಆದರೆ ನಿಜವಾದ ಜಗತ್ತು ಇರೋದು ಇಲ್ಲೆ! ಭವಿಷ್ಯ ಕೂಡ ಇರೋದು ಇಲ್ಲೇ" ಅನ್ನುವ ಆಲೋಚನೆ ನನ್ನನ್ನಾವರಿಸಿದ್ದುವು. ನನ್ನನ್ನ ಕಾಡಿಸುತ್ತ ಇದ್ದ ಏನೋ ಒಂಥರದ ತಹತಹ, ಖಿನ್ನತೆಯ ಲಕ್ಷಣಗಳೆಲ್ಲ ಇದ್ದಕ್ಕಿದ್ದ ಹಾಗೆ ಸಂಪೂರ್ಣವಾಗಿ ಮಾಯವಾಗಿಬಿಟ್ಟಿದ್ದವು. ಯಾವುದೋ ಮಾಯಾಲೋಕ ಸೃಷ್ಟಿಯಾದಂತ್ತಿತ್ತು. ಗಂಡನ ಬಗ್ಗೆ ಇದ್ದ ನನ್ನ ಪ್ರೀತಿ ಪ್ರಶಾಂತವಾಯಿತು, ನನ್ನನ್ನವರು

ಅಷ್ಟೊಂದು ಪ್ರೀತಿಸೋದಿಲ್ಲವೋ ಏನೋ ಅನ್ನುವ ಸಮಸ್ಯೆ ಇಲ್ಲವಾಯಿತು. ಅವರ ಪ್ರೀತಿಯ ಆಳವನ್ನು ನಾನು ಸಂದೇಹಿಸುವ ಹಾಗಿರಲೇ ಇಲ್ಲ; ನನ್ನ ಪ್ರತಿ ಆಲೋಚನೆಯನ್ನೂ ಅವರು ತಕ್ಷಣ ಅರ್ಥಮಾಡಿಕೊಳ್ಳುತ್ತಿದ್ದರು, ನನ್ನೆಲ್ಲ ಭಾವನೆಗಳನ್ನೂ ಹಂಚಿಕೊಳ್ಳುತ್ತಿದ್ದರು, ನನ್ನ ಪ್ರತಿಯೊಂದು ಆಸೆಯನ್ನೂ ಪೂರೈಸುತ್ತಿದ್ದರು. ಅವರ ತಣ್ಣನೆಯ ಪ್ರವೃತ್ತಿ, ಅದಿನ್ನೂ ಇರುವುದೇ ಆದರೆ, ನನ್ನನ್ನ ಕೆರಳಿಸುತ್ತ ಇರಲಿಲ್ಲ. ನನ್ನನ್ನವರು ಪ್ರೀತಿಸುವುದು ಮಾತ್ರವಲ್ಲ, ನನ್ನ ಬಗ್ಗೆ ಹೆಮ್ಮೆ ಕೂಡ ಹೊಂದಿದ್ದರು ಅನ್ನುವುದು ಕೂಡ ನನಗೆ ಅರ್ಥವಾಗ್ತಿತ್ತು. ಯಾರನ್ನಾದರೂ ಭೇಟಿಯಾದರೆ ಅಥವಾ ಹೊಸಬರು ಯಾರಾದರೂ ಪರಿಚಯ ಆದರೆ ಅಥವಾ ಸಂಜೆ ಕೂಟ ಏರ್ಪಡಿಸಿ ಅದರಲ್ಲಿ ಎಲ್ಲಿ ಎಲ್ಲವನ್ನೂ ಹಾಳುಮಾಡಿಬಿಡುತ್ತೇನೋ ಎಂದು ಒಳಗೊಳಗೇ ಅಳುಕಿನಿಂದ ಕೂಡಿ ಆತಿಥ್ಯ ನಡೆಸಿದಾಗ, ಅದೆಲ್ಲ ಆದ ಮೇಲೆ, "ಭೇಷ್, ಹುಡುಗಿ! ಮಜಬೂತಾಗಿತ್ತು! ನೀನೇನೂ ಹೆದರ್ಕೋಬೇಕಾಗಿಲ್ಲ, ನಿಜವಾಗ್ಲೂ ಸೊಗಸಾಗಿತ್ತು" ಎಂದು ಹೊಗಳುತ್ತಿದ್ದರು. ಅವರು ಹಾಗೆ ಹೊಗಳಿದಾಗ ನನ್ನ ಮನಸ್ಸು ಪರಿಮಳದಿಂದ ಕೂಡಿಯೇ ಅರಳುತ್ತಿತ್ತು. ನಾವು ಇಲ್ಲಿಗೆ ಬಂದು ಸೇರಿದ ತಕ್ಷಣ ಅವರು ತಮ್ಮ ತಾಯಿಗೆ ಕಾಗದ ಬರೆದರು, ಕೊನೆಗೆ ಒಂದೆರಡು ವಾಕ್ಯ ಬರೆಯೋದಕ್ಕೆ ನನಗೆ ಹೇಳಿದರು; ಆದರೆ ಅವರೇನು ಬರೆದಿದ್ದರು ಅನ್ನೋದನ್ನ ಮಾತ್ರ ನನಗೆ ತೋರಿಸಲಿಲ್ಲ. ನಾನೇನೋ ಅವರು ಬರೆದಿರುವುದನ್ನು ಓದಬೇಕು ಅಂತ ಹಟ ಮಾಡುತ್ತಿದ್ದೆ, ಆದರೆ ಅವರು, "ನೀನು ಮತ್ತೆ ಮಾಷಾಳನ್ನು ಕಾಣಬಾರದು, ನಾನೂ ಹಾಗೆ ಮಾಡಲ್ಲ. ಅವಳಿಗೆ ಇನ್ನೆಲ್ಲಿಂದ ತಾನೇ ಅಂಥ ಲಕಲಕಿಸೋ ಆತ್ಮವಿಶ್ವಾಸ ಮೂಡಬೇಕು? ಅಂಥ ಸರಳತೆ, ಸೌಜನ್ಯ, ಗಾಂಭೀರ್ಯಗಳು ಬರಬೇಕು? ಅವಳ ನಡವಳಿಕೆಯಿಂದ ಎಲ್ಲರಿಗೂ ಅತೀವ ಸಂತೋಷವಾಗಿದೆ. ಆದರೆ ನಾನೇ ಅವಳನ್ನು ಮೆಚ್ಚಬೇಕಾದಷ್ಟು ಮೆಚ್ಚಕಾಗಿಲ್ಲ, ಸಾಧ್ಯವಾಗೋದಾದರೆ, ನಾನವಳನ್ನ ಈಗಿಗಿಂತ ಹೆಚ್ಚು ಪ್ರೀತಿಸಬೇಕು" ಎಂದಿದ್ದರು.

"ನಾನು ಹೇಗಿದ್ದೀನಿ ಅನ್ನೋದು ನಂಗೆ ಈಗ ಗೊತ್ತಾಯ್ತು" ಅಂದ್ಕೊಂಡೆ. ನನ್ನ ಸಂತಸ ಹೆಮ್ಮೆಗಳಲ್ಲಿ ಅವರನ್ನು ನಾನು ಹಿಂದೆಂದಿಗಿಂತಲೂ ಈಗ ಹೆಚ್ಚು ಪ್ರೀತಿಸುತ್ತಿದ್ದೇನೆ ಅನ್ನಿಸಿತು. ಹೊಸ ಪರಿಚಯದ ಜನರೊಂದಿಗೆ ನಾನು ಹೊಂದಿಕೊಂಡ ರೀತಿ ನನಗೇ ಅಚ್ಚರಿ ಮೂಡಿಸಿತ್ತು. ಈ ಮಾವ ನನ್ನ ಬಗ್ಗೆ ಏನೆಲ್ಲ ಕಲ್ಪನೆಗಳನ್ನು ಹೊಂದಿದ್ದರೆಂಬ ವಿಚಾರ ನನಗೆ ಎಲ್ಲ ಕಡೆಯಿಂದಲೂ ಕಿವಿಗೆ ಬಿತ್ತು; ಹಾಗೆಯೇ ಅತ್ತೆ ನನ್ನ ಕಂಡರೆ ಎಂಥ ಅಕ್ಕರೆಯಿಟ್ಟುಕೊಂಡಿದ್ದಾರೆಂಬುದೂ. ಒಬ್ಬ ಅಭಿಮಾನಿಯಂತೂ ಇಡೀ ಪೀಟರ್ಸ್‌ಬರ್ಗ್‌ನಲ್ಲಿ ನನಗೆ ಸಾಟಿಯಾದ ಹೆಂಗಸರೇ ಇಲ್ಲವೆಂದೂ ಹೊಗಳಿದರು; ಹಾಗೆಯೇ ಇನ್ನೊಬ್ಬರು ನಾನು ಮನಸ್ಸು ಮಾಡಿದರೆ ಸಮಾಜದಲ್ಲಿ ಮಾದರಿಯಾಗಬಹುದೆಂದರು. ನನ್ನ ಯಜಮಾನರ ನಡುವಯಸ್ಸಿನ ಹಾಗೂ ಸಮಾಜದಲ್ಲಿ ಹಾಲಿನಲ್ಲಿ ಜೇನಿನಂತೆ ಬೆರೆತುಕೊಂಡಿದ್ದ ಸೋದರಸಂಬಂಧಿ ಮಹಿಳೆಯೊಬ್ಬರು ನನ್ನ ಕಂಡು ಮೊದಲ ನೋಟದ ಬೇಟಕ್ಕೊಳಗಾಗಿದ್ದರಂತೆ,

ಹೀಗೆಂದು ಅವರು ನನ್ನ ಕೊಂಡಾಡಿದಾಗಲಂತೂ ನನ್ನ ತಲೆ ತಿರುಗಿತು. ಅವರು ನನ್ನನ್ನು ಮೊದಲ ಬಾರಿಗೆ ಬಾಲ್‌ಗೆ ಆಹ್ವಾನಿಸಿ ನಮ್ಮೆಜಮಾನರೊಡನೆ ಆ ವಿಷಯ ಪ್ರಸ್ತಾಪಿಸಿದಾಗ, ಅವರು ನನ್ನ ಕಡೆ ತಿರುಗಿ ಹೋಗುವ ಆಸೆ ಇದೆಯಾ ಅಂತ ಕೇಳಿದರು. ಆಗ ಅವರ ತುಟಿಗಳಲ್ಲಿ ಚೇಷ್ಟೆಯ ಮುಗುಳ್ನಗುವೊಂದು ಇಣುಕಿದಂತೆ ತೋರಿತು. ನಾನು ಒಪ್ಪಿ ತಲೆಯಾಡಿಸಿದೆ, ಜೊತೆಗೆ ಲಜ್ಜಿತಳಾಗಿದ್ದೆ ಎಂದೂ ಅನ್ನಿಸಿತು.

"ತನ್ನ ಆಸೆಯನ್ನು ಹೇಳುವಾಗ ಆಯಮ್ಮ ಒಬ್ಬ ಪಾತಕಿಯಂತೆ ಕಾಣಿಸ್ತಾಳೆ" ಎಂದರು ನಿರುಮ್ಮಳವಾಗಿ ನಗುತ್ತ.

"ಆದರೆ ಅಂಥ ಕಡೆಗೆಲ್ಲ ಹೋಗಬಾರ್ದೂಂತ ನೀವೇ ಹೇಳಿದ್ರಲ್ಲ, ನಿಮಗೆ ಆ ವಿಷಯ ಆಸಕ್ತಿಯೇ ಇಲ್ಲ ಅಂದಿದ್ರಲ್ಲ" ಎಂದೆ ನಾನು ಅವರೆಡೆಗೆ ಬೇಡಿಕೆ ದೃಷ್ಟಿ ಬೀರುತ್ತ.

"ನಿನಗಿಷ್ಟ ಇರೋದಾದ್ರೆ ಹೋಗೋಣ" ಎಂದರವರು.

"ನಂಗೆ ನಿಜವಾಗ್ಲೂ ಅನ್ನಿಸೋದೂಂದ್ರೆ, ಹೋಗೋದು ಬೇಡಾಂತ."

"ಅಲ್ಲ, ಹೋಗಬೇಕೂಂತ ನಿನಗೆ ಬಲವಾಗಿ ಅನ್ನಿಸತ್ತಾ?" ಮತ್ತೆ ಕೇಳಿದರು.

ನಾನೀಗ ಏನೂ ಹೇಳಲಿಲ್ಲ.

"ಅಂಥ ಕಡೆಗಳೇ ಕೆಟ್ಟವು ಅಂತ ನಾನು ಹೇಳೋದಿಲ್ಲ. ಆದರೆ ತೃಪ್ತಿ ಕಾಣದ ಸಾಮಾಜಿಕ ಆಕಾಂಕ್ಷೆಗಳು ಮಾತ್ರ ಸರಿಯಲ್ಲ, ಅದರಲ್ಲಿ ತೊಡಗೋದು ಕ್ಷುಲ್ಲಕವಾದ್ದು. ಅದನ್ನ ನಾವು ಒಪ್ಕೋಬೇಕು. ಹಾಗೆ ಮಾಡೋಣ ಕೂಡ" ಎಂದವರು ವಿವರಿಸಿದರು.

"ನಿಜ ಹೇಳ್ಬೇಕೂಂದ್ರೆ, ಈ ಬಾಲ್‌ಗೆ ಹೋಗ್ಬೇಕೂಂತ ಅನ್ನಿಸಿದಷ್ಟು ಬೇರಾವುದರ ಬಗ್ಗೇನೂ ಆಸೆ ಆಗಿರ್ಲಿಲ್ಲ" ಎಂದೆ ನಾನು.

ಹೀಗಾಗಿ ನಾವಿಬ್ಬರೂ ಹೋದಿವಿ. ನನ್ನ ಆಸೆಯಂತೂ ಎಲ್ಲೆ ಮೀರಿತ್ತು. ಎಲ್ಲದಕ್ಕಿಂತ ಮಿಗಿಲಾಗಿ, ಎಲ್ಲದರ ಕೇಂದ್ರಬಿಂದು ನಾನೇ ಆಗಿಬಿಟ್ಟೆ ಅಂತ ಅನ್ನಿಸಿತು; ಇಡೀ ಹಾಲ್‌ನ ದೀಪಗಳೆಲ್ಲ ನನಗಾಗಿಯೇ ಹೊತ್ತಿಕೊಂಡಿವೆ, ಬ್ಯಾಂಡ್ ಬಜಾಯಿಸ ತೊಡಗಿದೆ, ನನ್ನನ್ನು ಸುಪ್ರೀತಗೊಳಿಸೋದಕ್ಕೋಸ್ಕರವೇ ಇಷ್ಟೊಂದು ಜನ ಸೇರಿದ್ದಾರೆ ಅನ್ನೋ ಭಾವನೆ ಉಂಟಾಯಿತು. ಕೇಶಶೃಂಗಾರಿ ಹಾಗೂ ಮನೆಯ ಸೇವಕಿಯಿಂದ ಹಿಡಿದು ನನ್ನ ಜೊತೆಗಾತಿ ಹಾಗೂ ಆ ಬಾಲ್ ರೂಮಿನಲ್ಲಿ ಜಮಾಯಿಸಿದ್ದ ಗಂಡಸರವರೆಗೆ ಎಲ್ಲರೂ ನನ್ನನ್ನು ಆರಾಧಿಸುವವರೇ ಅನ್ನೋ ಭಾವನೆ ಬಂದುಬಿಟ್ಟಿತು. ನನ್ನ ಬಗ್ಗೆ ಉಂಟಾಗಿದ್ದ ಸಾಮಾನ್ಯ ಭಾವನೆ ಅಂದರೆ, ಹಾಗಂತ ಆ ಸೋದರ ಸಂಬಂಧಿ ಹೇಳಿದ್ದು, ಇದು: ಬೇರೆ ಮಹಿಳೆಯರಿಗೆ ಇಲ್ಲದಿರೋ ಹಳ್ಳಿಗಾಡಿನ ಸೊಗಡು ಚೆಲುವು ನನ್ನಲ್ಲಿದೆ ಅಂತ. ಇದರಿಂದ ನನ್ನ ಎದೆ ಎಷ್ಟು ಉಬ್ಬಿಹೋಯಿತು ಅಂದರೆ ಈ ಸಮಯದಲ್ಲಿ ಇನ್ನೂ ಎರಡೋ ಮೂರೋ ಕೂಟಗಳಿಗೆ ಹೋಗೋಣ - ಕಟ್ಟರೆಯಾಗಿಬಿಡಲಿ - ಅಂತ ನಮ್ಮ ಯಜಮಾನರಿಗೆ ಹೇಳಿದೆ, ಆದರೆ ಹಾಗೆ

ಮಾಡಬೇಕು ಅನ್ನೋದು ನನ್ನ ಇರಾದೆಯಾಗಿರ್ಲಿಲ್ಲ.

ಅವರಂತೂ ತಕ್ಷಣವೇ ಒಪ್ಪಿಕೊಂಡರು. ಮೊದಲ ಬಾರಿಗೆ ನನ್ನ ಜೊತೆ ಬಂದಾಗ ಅವರ ಸಂತೋಷ ಎದ್ದು ಕಾಣಿಸ್ತಿತ್ತು. ನಾನು ಅಷ್ಟು ಹೊಂದಿಕೊಂಡದ್ದರಿಂದ ಅವರಿಗೆ ತೃಪ್ತಿಯಾಗಿತ್ತು, ಅವರೇನೋ ತಾವು ಹಿಂದೆ ಕೊಟ್ಟಿದ್ದ ಎಚ್ಚರಿಕೆಯನ್ನ ಮರೆತಿದ್ದರೇನೋ ಅನ್ನಿಸಿತು ಅಥವಾ ತಮ್ಮ ಅಭಿಪ್ರಾಯವನ್ನೇ ಬದಲಾಯಿಸಿದ್ದರೋ.

ಆದರೆ ಅವರಿಗೆ ತಲೆ ಚಿಟ್ಟುಹಿಡಿಸುವ ಕ್ಷಣ ಬಂದೇಬಿಟ್ಟಿತು, ನಾವು ಮಾಡ್ತಿರೋ ಜೀವನದ ಪರಿಯ ಬಗ್ಗೆ ಹೇವರಿಕೆ ಶುರುವಾಗಿತ್ತು. ಆದರೆ ನಾನು ಮಾತ್ರ ಆ ಬಗ್ಗೆ ಯೋಚಿಸೋದಕ್ಕೂ ಸಮಯ ಇಲ್ಲದಿರುವಷ್ಟು ತೊಡಗಿಕೊಂಡುಬಿಟ್ಟಿದ್ದೆ. ಅವರ ಕಣ್ಣು ನನ್ನ ಕಡೆ ಪ್ರಶ್ನಾರ್ಥಕವಾಗಿ ದಿಟ್ಟಿಸುವ ರೀತಿಯಲ್ಲಿ ನೆಟ್ಟಾಗಲೂ ಅದರರ್ಥ ನನಗೆ ಹೊಳೆಯಲೇ ಇಲ್ಲ. ನಮ್ಮ ಹೊಸ ಪರಿಚಯದವರೆಲ್ಲ ನನ್ನ ಬಗ್ಗೆ ತೋರಿಸ್ತಾ ಇರೋ ಅಕ್ಕರೆ ನನ್ನನ್ನು ಕುರುಡಾಗಿ ಮಾಡಿಬಿಟ್ಟಿತ್ತು, ಜೊತೆಗೆ ವೈಭವ, ನಯನಾಜೂಕು ಮತ್ತು ಹೊಸತನಗಳಿಂದ ಕೂಡಿದ ಅಪರಿಚಿತ ಪರಿಸರದಿಂದ ನನಗೆ ಸಂಭ್ರಮ ಕೂಡ ಉಂಟಾಗಿತ್ತು. ಇಂಥ ಆವರಣದಲ್ಲಿ ಇರುವುದು ನನಗೆ ಬಹು ಸಂತೋಷದ ವಿಷಯವಾಗಿತ್ತು, ಯಾಕಂದರೆ ಇಲ್ಲಿ ನಾನು ಅವರಿಗೆ ಸಮಾನಳು ಮಾತ್ರವಲ್ಲ, ಅವರಿಗಿಂತ ಮಿಗಿಲು ಅನ್ನಿಸಿತ್ತು; ಆದರೂ ಅವರ ಬಗ್ಗೆ ಒಲವು ಮತ್ತಷ್ಟು ಹೆಚ್ಚಿತು, ಅದು ಹಿಂದಿಗಿಂತ ಹೆಚ್ಚಿನ ಸ್ವತಂತ್ರ ಇರಾದೆಯಾಗಿತ್ತೇ ಹೊರತು ಬಲವಂತದ್ದಲ್ಲ. ಹೀಗಾಗಿ ಅವರು ಯಾವ ರೀತಿ ಇದಕ್ಕೆಲ್ಲ ಆಕ್ಷೇಪ ವ್ಯಕ್ತಪಡಿಸಬಹುದೆಂಬ ಕಲ್ಪನೆಯೇ ನನಗೆ ಬರಲಿಲ್ಲ. ನಾನು ಬಾಲ್‌ಗೆ ಹೋದಾಗ ಎಲ್ಲರ ಕಣ್ಣುಗಳು ನನ್ನತ್ತ ತಿರುಗಲು ನನ್ನಲ್ಲಿ ಹೆಮ್ಮೆ ಮತ್ತು ಆತ್ಮವಿಶ್ವಾಸಗಳು ಹೊಸದಾಗಿ ಬಂದು ನೆಲೆಸಿದುವು. ಆದರೆ ಅವರು ಮಾತ್ರ, ತಾವು ನನ್ನ ಒಡೆಯರೆಂಬುದನ್ನು ಎಲ್ಲರ ಮುಂದೆ ತೋರ್ಪಡಿಸಿ ಕೊಳ್ಳಲು ಮುಜುಗರವಾದಂತೆ ಆತುರಾತುರವಾಗಿ ನನ್ನ ಪಕ್ಕದಿಂದ ಸರಿದುಹೋಗಿ, ಕಪ್ಪು ಕೋಟುಗಳ ಸಂದಣಿಯಲ್ಲಿ ಕಾಣಿಸಿಕೊಳ್ಳಲು ಹೇಸಿದವರಂತೆ ಮರೆಯಾದರು. ಅವರ ಮಸುಕಾದ ಆಕೃತಿಯನ್ನು ಆ ಹಾಲ್‌ನ ಕೊನೆಯಲ್ಲಿ ನೋಡಿದಾಗ ಅಥವಾ ಅವರ ಮಂಕು ಕವಿದ ಮುಖ ಕಾಣಿಸಿದಾಗ "ಮನೆಗೆ ಹೋಗೋವರೆಗೂ ಸ್ವಲ್ಪ ತಾಳ್ಮೆ ತಂದುಕೊಳ್ಳಿ, ಆಮೇಲೆ ನಿಮಗೇ ತಿಳಿಯುತ್ತೆ ನಾನು ಯಾರಿಗೋಸ್ಕರ ಚೆಲುವಾಗಿ ಚಟುಲತೆಯಿಂದ ಇರೋರೀತಿ ಕಾಣಿಸಿಕೊಳ್ಳೋದಕ್ಕೆ ಹಾತೊರಿತೀನಿ, ಇದನ್ನೆಲ್ಲ ನಾನು ಯಾರ ಒಲವಿಗೋಸ್ಕರ ಮಾಡ್ತೀನಿ ಅನ್ನೋದು ನಿಮಗೇ ತಿಳಿಯುತ್ತೆ, ಸಂಜೆಯತನಕ ತಾಳ್ಮೆಯಿಂದಿರಿ!" ಅಂತ ನನಗೆ ನಾನೇ ಎಷ್ಟೋ ವೇಳೆ ಅಂದುಕೊಳ್ತಿದ್ದೆ. ನನ್ನ ನಿಜವಾದ ನಂಬಿಕೆ ಯಾವುದಾಗಿತ್ತು ಅಂದರೆ, ನನ್ನ ಈ ಯಶಸ್ಸು ನನಗೆ ಸಂತೋಷ ತಂದಿರೋದರ ಕಾರಣ ಇದನ್ನೆಲ್ಲ ಅವರಿಗೆ ಅರ್ಪಣೆ ಮಾಡೋದಕ್ಕೆ ಅನ್ನೋದು. ಆದರೆ ಒಂದು ಅಪಾಯದ ಸಾಧ್ಯತೆ ನನಗೆ ಗೋಚರಿಸಿತು: ಅದೊಂದ್ರೆ, ಹೊಸ ಪರಿಚಿತರಲ್ಲಿ ಯಾರಾದರೂ ನನ್ನ ಬಗ್ಗೆ ಒಲವು ಬೆಳೆಸಿಕೊಂಡುಬಿಡಬಹುದು, ಇದರಿಂದ ನಮ್ಮ

ಯಜಮಾನರಿಗೆ ಹೊಟ್ಟೆಕಿಚ್ಚು ಉಂಟಾಗಬಹುದು ಅನ್ನೋದು. ಆದರೆ ಅವರಿಗೆ ನನ್ನ ಬಗ್ಗೆ ಎಂಥ ಗಾಢವಾದ ನಂಬಿಕೆ ಅಂದರೆ, ಯಾವುದರಿಂದಲೂ ಅವರು ವಿಚಲಿತರಾಗಿಲ್ಲ, ಅಷ್ಟೇ ಅದೆಲ್ಲದರ ಬಗ್ಗೆ ಅವರು ಉಪೇಕ್ಷೆಯಿಂದಿದಾರೆ, ಸುತ್ತಲಿನ ಯುವಕರೆಲ್ಲ ತಮಗಿಂತ ತುಂಬ ಕೆಳಮಟ್ಟದವರು ಅನ್ನೋ ಭಾವನೇಲಿದಾರೆ, ಹೀಗಾಗಿ ಈ ಭಯಕ್ಕೆ ಕಾರಣವೇ ಇಲ್ಲ ಅಂತಲೇ ಅನ್ನಿಸ್ತಿತ್ತು. ಆದರೂ ಜನಗಳು ನನ್ನ ಬಗ್ಗೆ ಗಮನ ಹರಿಸೋದರಿಂದ ನನಗೆ ತೃಪ್ತಿ ಉಂಟಾಗಿತ್ತು, ನನ್ನ ಬಗ್ಗೆಯೇ ಒಣಜಂಭವೂ ಉಂಟಾಯಿತು, ನನ್ನ ಗಂಡನ ಬಗ್ಗೆ ನನಗಿದ್ದ ಪ್ರೀತಿ ಅಮೂಲ್ಯವಾದ್ದು ಅನ್ನೋ ಭಾವನೆ ಬಂತು. ಇದರಿಂದಾಗಿ ಅವರ ಜೊತೆ ನಡೆದುಕೊಳ್ಳೋವಾಗ ನಾನು ಹೆಚ್ಚು ಆತ್ಮವಿಶ್ವಾಸದಿಂದ ಕೂಡಿರೋ ಹಾಗಾಯ್ತು, ಸದರದಿಂದ ಇರೋ ಹಾಗಾಯ್ತು.

"ಇವತ್ತು ಸಾಯಂಕಾಲ ಆಯಮ್ಮನ ಜೊತೆ ಒಳ್ಳೆ ಹುರುಪಿನ ಸಂಭಾಷಣೆ ನಡೆಸ್ತಾ ಇದ್ರಲ್ಲ!" ಅಂತ ಒಂದು ರಾತ್ರಿ ಬಾಲ್‌ನಿಂದ ವಾಪಸು ಮನೆಗೆ ಬಂದ ಮೇಲೆ ನನ್ನ ಬೆರಳಾಡಿಸುತ್ತ ಕೇಳಿದೆ. ಅವರು ವಾಸ್ತವವಾಗಿ ಆ ಮಹಿಳೆಯ ಜೊತೆ ಮಾತಾಡ್ತಾ ಇರಲಿಲ್ಲ. ಆಕೆ ಇಡೀ ಪೀಟರ್ಸ್‌ಬರ್ಗ್‌ಗೆ ಗೊತ್ತಿರೋ ಹೆಂಗಸು. ಎಂದಿಗಿಂತ ಅವರು ಹೆಚ್ಚು ಖಿನ್ನರಾಗಿದ್ದರು, ಗಾಢ ಮೌನದಲ್ಲಿದ್ದರು. ನಾನು ಈ ಮಾತಾಡಿದ್ದು ಅವರನ್ನ ಕೆರಳಿಸಿತ್ತು. "ಮಾಷಾ, ಹೀಗೆಲ್ಲ ಮಾತಾಡೋದ್ರಿಂದ ಏನು ಪ್ರಯೋಜನಾಂತ?" ಅಂತ ತುಟಿ ಬಿಚ್ಚದೆ ನೋವಿನಿಂದ ಹಲ್ಲು ಕಚ್ಚಿಕೊಂಡಿದ್ದವರಂತೆ ಕೇಳಿದರು. "ಇಂಥದ್ದನ್ನೆಲ್ಲ ಬೇರೆಯೋರಿಗೆ ಬಿಟ್ಬಿಡು, ನನಗೂ ನಿಂಗೂ ಇವೆಲ್ಲ ಹೊಂದಾಣಿಕೆ ಆಗಲ್ಲ. ಈ ರೀತಿ ಲೇವಡಿ ಮಾಡೋದ್ರಿಂದ ನಮ್ಮಿಬ್ಬರ ನಡುವಣ ನಿಜವಾದ ಸಂಬಂಧ ಹಾಳಾಗ ಬಹುದು, ಅದು ಮರುಕಳಿಸಬಹುದೂಂತ ನನಗಿನ್ನೂ ಭರವಸೆ ಇದೆ."

ನನಗೆ ನಾಚಿಕೆಯಾಯ್ತು, ಏನೂ ಮಾತಾಡಲಿಲ್ಲ.

"ಆ ಸಂಬಂಧ ಮತ್ತೆ ಮರುಕಳಿಸಬಹುದಾ, ಮಾಷಾ?" ಎಂದು ಕೇಳಿದರವರು.

"ಅದೆಂದೂ ಹಾಳಾಗಿರಲೂ ಇಲ್ಲ, ಹಾಳಾಗೋದೂ ಇಲ್ಲ" ಎಂದೆ ನಾನು. ಇದು ಆಗ ಹೃದಯಾಂತರಾಳದ ಮಾತಾಗಿತ್ತು.

"ಅದು ನಿಜವಾಗೋ ಹಾಗೆ ದೇವರು ದಯಪಾಲಿಸಲಿ, ಇಲ್ದಿದ್ರೆ ನಾವು ಮನೆಗೆ ವಾಪಸ್ಸಾಗಬೇಕು."

ಆದರೆ ಈ ಮಾತನ್ನವರು ಒಮ್ಮೆ ಮಾತ್ರ ಆಡಿದ್ದರು, ಅದೂ ಮಾತಿಗೆ ಮಾತು ಬಂದು. ಆದರೆ ಅವರೂ ನನ್ನ ಹಾಗೆ ತೃಪ್ತರಾಗಿದ್ದಂತೆ ತೋರಿತು. ನನಗಂತೂ ಖುಷಿಯೋ ಖುಷಿ ಅನ್ನಿಸಿತ್ತು. "ಹಳ್ಳೀಲಿದ್ದಾಗ ಅವರಿಗೇನಾದ್ರೂ ಬೇಸರ ಆಗಿದ್ರೆ ಅವರಿಗೋಸ್ಕರ ನಾನದನ್ನ ಸಹಿಸಿಕೊಳ್ತಿದ್ದೆ. ನಮ್ಮ ನಡುವಣ ಸಂಬಂಧದ ಸ್ವರೂಪ ಈಗ ಸ್ವಲ್ಪ ಬದಲಾಗಿದ್ದರೂ, ಈ ಬೇಸಿಗೆಯಲ್ಲಿ ಮತ್ತದು ಯಥಾಪ್ರಕಾರವಾಗತ್ತೆ. ಆಗ ನಿಕೊಲೊಸ್ಕೋಯೆ ಮನೇ ಪೂರ್ತಿ ನಾವಿಬ್ಬರೇ ಇರ್ತೀವಿ, ಜೊತೆಗೆ ತಾತ್ಯಾನಾ

ಸೆಮೆನೋವ್ನಾ ಮಾತ್ರ" ಅಂದುಕೊಂಡೆ.

ಹೀಗೇ ಚಳಿಗಾಲ ಉರುಳಿಹೋಯ್ತು. ಆದರೂ ನಮ್ಮ ಪೂರ್ವಯೋಜನೆಗಳನ್ನ ಗಮನಿಸದೇ ನಾವು ಪೀಟರ್ಸ್‌ಬರ್ಗ್‌ನಲ್ಲೇ ಉಳಿದುಕೊಂಡಿದ್ದಿವಿ. ಒಂದು ವಾರದ ಬಳಿಕ ಹೊರಡುವುದಕ್ಕೆ ನಾವು ಸಿದ್ಧರಾಗ್ತಿದ್ದಿವಿ. ಗಂಟುಮೂಟೆ ಎಲ್ಲ ಸಿದ್ಧವಾಗಿತ್ತು. ನಮ್ಮನೆ ತೋಟಕ್ಕೆ ಅಂತ ಗಿಡಗಳು ಹಾಗೂ ನಿಕೊಲೊಸ್ಕೋಯೆನಲ್ಲಿರೋರಿಗೋಸ್ಕರ ಉಡುಗೊರೆಗಳು ಇವುಗಳನ್ನು ಕೊಂಡುಕೊಂಡಿದ್ದ ಯಜಮಾನರು ಆತ್ಮೀಯತೆಯಿಂದಿದ್ರು, ಸಂತಸದಲ್ಲಿದ್ದರು. ಅಷ್ಟು ಹೊತ್ತಿಗೆ ಸರಿಯಾಗಿ ರಾಜಕುಮಾರಿ ಡಿ ಬಂದು ಬರುವ ಶನಿವಾರದವರೆಗೆ ನಾವಲ್ಲೇ ಉಳಿದುಕೋಬೇಕೋಂತ ಒತ್ತಾಯಪೂರ್ವಕವಾಗಿ ಬೇಡಿಕೊಂಡರು; ಕೌಂಟೆಸ್ ಆರ್ ಅವರು ಏರ್ಪಾಟು ಮಾಡಿದ್ದ ಸತ್ಕಾರ ಕೂಟ ಅದಕ್ಕೆ ಕಾರಣ. ಆ ಕೌಂಟೆಸ್‌ಗೆ ನನ್ನನ್ನು ಉಳಿಸಿಕೊಳ್ಳೋಕೆ ತುಂಬ ಆಸಕ್ತಿಯಿತ್ತು. ಯಾಕಂದ್ರೆ ವಿದೇಶದ ರಾಜಕುಮಾರ ಒಬ್ಬ ನನ್ನನ್ನ ಬಾಲ್‌ನಲ್ಲಿ ನೋಡಿದ್ದರಂತೆ, ಅವರು ನನ್ನ ಪರಿಚಯ ಮಾಡಿಕೋಬೇಕು ಅಂತ ಬಯಸ್ತಿದ್ದರಂತೆ. ಅವರು ಈ ಸತ್ಕಾರ ಕೂಟಕ್ಕೆ ಬರೋಕೆ ಒಪ್ಪಿಕೊಂಡಿದ್ದೇ ಈ ಕಾರಣಕ್ಕಂತೆ. ನಾನು ಇಡೀ ರಷ್ಯದಲ್ಲೇ ಪರಮ ಸುಂದರಿ ಅಂತ ಹೇಳಿದರಂತೆ. ಜಗತ್ತಿನ ಕೆನೆಯೇ ಅಲ್ಲಿರ್ತಿತ್ತು, ನಾವು ಹೋಗದೇ ಇದ್ರೆ ಚೆನ್ನಾಗಿರೋಲ್ಲ.

ಆ ಹೊತ್ತಲ್ಲಿ ನಮ್ಮ ಯಜಮಾನರು ಬಾಲ್ ರೂಮಿನ ಇನ್ನೊಂದು ತುದಿಯಲ್ಲಿ ನಿಂತು ಯಾರ ಜೊತೆಗೋ ಮಾತಾಡ್ತಾ ಇದ್ದರು.

"ಬರ್ತೀರಾ ತಾನೇ, ಮೇರಿ?" ಎಂದರು ರಾಜಕುಮಾರಿ.

"ನಾಡಿದ್ದು ನಮ್ಮ ಹಳ್ಳಿಗೆ ಹೋಗಬೇಕೂಂತ ಅಂತ ಎಲ್ಲ ತಯಾರಿ ಮಾಡಿಕೊಂಡಿದ್ವಿ" ಎಂದೆ ನಾನು ಅನಿಶ್ಚಿತತೆಯಿಂದ, ಯಜಮಾನರ ಕಡೆ ನೋಡ್ತಾ. ನಮ್ಮ ಕಣ್ಣುಗಳು ಒಟ್ಟಾದವು, ಅವರು ತಕ್ಷಣವೇ ಮುಖ ತಿರುಗಿಸಿಕೊಂಡು ಹೊರಟು ಹೋದರು.

"ಅವರನ್ನೂ ನಾನು ಒಪ್ಪಿಸಬೇಕು ಅಲ್ಲವೇ; ಶನಿವಾರದವರೆಗೂ ಇದ್ದು ಆಮೇಲೆ ನಮ್ಮ ಪಾಡಿಗೆ ನಾವು ಹೋಗೋಣ, ಆಗದೇ?" ಎಂದರು.

"ಅದ್ರಿಂದ ನಮ್ಮ ಯೋಜನೆ ಎಲ್ಲ ಹಾಳಾಗತ್ತೆ, ನಾವಾಗಲೇ ಗಂಟು ಮೂಟೆ ಸಿದ್ಧಮಾಡ್ಕೊಂಡಿದ್ದೀವಿ" ಅಂದೆ ನಾನು ಬೇಡಿಕೊಳ್ಳುವ ದನಿಯಲ್ಲಿ.

"ಅವಳು ಇವತ್ತು ಸಂಜೆಯೇ ರಾಜಕುಮಾರರನ್ನ ಸೌಜನ್ಯಕ್ಕಾಗಿ ಹೋಗಿ ನೋಡಲಿ" ಎಂದು ನಮ್ಮ ಯಜಮಾನರು ಜೋರಾಗಿ ರೂಮಿನ ಮತ್ತೊಂದು ತುದಿಯಲ್ಲಿ ನಿಂತು ಹೇಳಿದರು. ಅವರ ಮಾತಲ್ಲಿ ಸಿಡುಕು ಅಡಗಿತ್ತು; ಅಂಥ ಧ್ವನಿಯನ್ನು ನಾನೆಂದೂ ಅವರ ಮಾತಲ್ಲಿ ಹಿಂದೆ ಕಂಡಿರಲಿಲ್ಲ.

"ನಿಮ್ಮೆ ಜಮಾನರಿಗೆ ಹೊಟ್ಟೆಕಿಚ್ಚು ಬಂದ್ಬಿಟ್ಟಿದೆ, ಅವರ ಜೀವನದಲ್ಲೇ ಮೊದಲನೇ

ಬಾರಿ" ಎಂದರು ಆ ಮಹಿಳೆ ನಗುತ್ತ.

"ಆ ರಾಜಕುಮಾರರಿಗೋಸ್ಕರ ನಾನು ಹೀಗೆ ಕೇಳಿಕೊಳ್ತಾ ಇಲ್ಲ, ಸರ್ಜೈ ಮಿಖೆಲ್ಯಿಚ್, ನಮ್ಮೆಲ್ಲರಿಗೋಸ್ಕರ. ಇವರಿರಬೇಕು ಅನ್ನೋದು ಕೌಂಟೆಸ್ ಅವರ ಆಳವಾದ ಆಸೆ."

"ಅದೆಲ್ಲ ಸಂಪೂರ್ಣವಾಗಿ ಅವಳ ತೀರ್ಮಾನಕ್ಕೆ ಬಿಟ್ಟ ವಿಚಾರ" ಅಂದರು ನಮ್ಮ ಯಜಮಾನರು ತಣ್ಣನೆಯ ದನಿಯಲ್ಲಿ. ಹೀಗಂದವರೇ ಅವರು ರೂಮಿಂದ ಹೊರಹೋದರು.

ಅವರು ತೀರ ಕಂಗೆಟ್ಟಿದ್ದರೆಂಬುದನ್ನು ನಾನು ಗುರುತಿಸಿದೆ, ಇದರಿಂದ ನನಗೆ ನೋವಾಯಿತು. ನಾನು ಖಚಿತವಾದ ಆಶ್ವಾಸನೆಯನ್ನೇನೂ ಕೊಡಲಿಲ್ಲ. ನಮ್ಮನ್ನು ಕಾಣಬಂದಿದ್ದವರು ಹೊರಟುಹೋದ ತಕ್ಷಣ ನಾನು ಯಜಮಾನರ ಬಳಿಗೆ ಹೋದೆ. ಅವರು ತಮ್ಮ ಕೋಣೆಯಲ್ಲಿಯೇ ಯೋಚಿಸುತ್ತ ಶತಪಥ ಹಾಕುತ್ತಿದ್ದರು, ಹೀಗಾಗಿ ನಾನು ಹೋದುದನ್ನು ಅವರು ಗಮನಿಸಲೂ ಇಲ್ಲ, ನಾನು ಬರುವಾಗಿನ ಸದ್ದನ್ನು ಕೂಡ ಕೇಳಿಸಿಕೊಂಡಿರಲಿಲ್ಲ.

ಅವರನ್ನೇ ನೋಡುತ್ತ, ನನಗೆ ನಾನೇ ಎಂಬಂತೆ ಹೇಳಿಕೊಂಡೆ: "ಅವರಿಗಾಗಲೇ ತಮ್ಮ ಪ್ರಿಯವಾದ ನಿಕೋಲೊಸ್ಕೋಯೆ, ಬೆಳಕಿನಿಂದ ಕೂಡಿದ ತಮ್ಮ ಕೋಣೆಯಲ್ಲಿನ ಬೆಳಗಿನ ಕಾಫಿ ಸವಿಯುವುದು, ಜಮೀನು ಮತ್ತಲ್ಲಿನ ಕೆಲಸಗಾರರು, ಸಂಗೀತ ಕೋಣೆಯಲ್ಲಿನ ನಮ್ಮ ಸಂಜೆಗಳು, ಮಧ್ಯರಾತ್ರಿ ನಮ್ಮ ರಹಸ್ಯ ಊಟ - ಇವೆಲ್ಲ ನೆನಪಿಗೆ ಬಂದುಬಿಟ್ಟ ಹಾಗಿದೆ!" ಆಮೇಲೆ ನಾನು ಮನಸ್ಸಿನಲ್ಲಿಯೇ, "ಯಾವುದೇ ಬಾಲ್‌ಗಳಿಗಾಗಲೀ ರಾಜಕುಮಾರರ ಕಾರಣಕ್ಕಾಗಲೀ ಯಜಮಾನರ ಸಂತಸ ಸಂಭ್ರಮಗಳು ಮತ್ತು ಕಕ್ಕುಲತೆಯನ್ನು ನಾನು ಬಲಿಗೊಡಲಾರೆ" ಎಂದು ನಿರ್ಧರಿಸಿದೆ. ನಾನು ಬಾಲ್‌ಗೆ ಹೋಗುವುದಿಲ್ಲವೆಂದು ಇನ್ನೇನು ಹೇಳುವುದರಲ್ಲಿದ್ದೆ, ಆಗವರು ತಿರುಗಿ ನನ್ನ ಕಡೆ ನೋಡಿ ಹುಬ್ಬು ಗಂಟಿಕ್ಕಿಕೊಂಡರು. ಮೃದುವೂ ಯೋಚನೆಯಲ್ಲಿ ಸಿಲುಕಿ ದಂತಿದ್ದುದೂ ಆದ ಅವರ ಮುಖಭಾವ ತಕ್ಷಣ ಬದಲಾಗಿ ತನ್ನ ಎಂದಿನ ಸೂಕ್ಷ್ಮತೆ, ಹರಿತತೆ ಮತ್ತು ಕರುಣೆಯ ಭಾವವನ್ನು ತಾಳಿತು. ನನಗವರು ಕೇವಲ ಮನುಷ್ಯರಾಗಿ ಕಾಣಲಿಲ್ಲ, ಪೀಠದ ಮೇಲೆ ಮಂಡಿಸಿದ ದೇವತೆಯಂತೆ ಕಂಡರು.

"ಏನು ಸಮಾಚಾರ, ಮರಿ?" ಎನ್ನುತ್ತ ನನ್ನ ಕಡೆಗೆ ಸಮಾಧಾನದ ನೋಟ ಬೀರಿದರು.

ನಾನೇನೂ ಹೇಳಲಿಲ್ಲ, ನನಗೆ ಒಂದು ರೀತಿ ಕೋಪ ಬಂತು, ಅವರು ತಮ್ಮ ಆಗಿನ ನಿಜಸ್ವರೂಪವನ್ನು ಮರೆಮಾಚಿಕೊಂಡಿದ್ದರು, ಹೀಗಾಗಿ ಅವರು ನನ್ನ ಪ್ರೀತಿಯ ಹೃದಯಾಣ್ಮನಾಗಿ ಕಾಣಲಿಲ್ಲ.

"ಶನಿವಾರ ಈ ಸತ್ಕಾರಕೂಟಕ್ಕೆ ಹೋಗಬೇಕೂಂತ ನಿಂಗೆ ಆಸೇನಾ?" ಎಂದರು.

"ನನಗೆ ಆಸೆಯೇನೋ ಇತ್ತು, ಆದರೆ ನೀವು ಬೇಡ ಅಂದಿರಿ. ಜೊತೆಗೆ ಸಾಮಾನನ್ನೆಲ್ಲ ಗಂಟುಕಟ್ಟಿಯಾಗಿದೆ ಬೇರೆ."

ಮುಂದೆ ಅವರು ಆಡಿದಂಥ ತಣ್ಣನೆಯ ಮಾತುಗಳನ್ನು ನಾನು ಹಿಂದೆಂದೂ ಕೇಳಿರಲಿಲ್ಲ, ಅವರ ಕಣ್ಣುಗಳ ನಿರ್ಭಾವುಕತೆಯನ್ನೂ ಕಂಡಿರಲಿಲ್ಲ. "ಸಾಮಾನನ್ನೆಲ್ಲ ಬಿಚ್ಚಿಬಿಡೋ ಹಾಗೆ ಹೇಳ್ತೀನಿ. ನಾನು ಮಂಗಳವಾರದವರೆಗೂ ಉಳಿಕೋತೀನಿ. ಇಷ್ಟ ಇದ್ದರೆ ನೀನು ಪಾರ್ಟಿಗೆ ಹೋಗಬಹುದು. ಹೋಗ್ತೀಯ ಅಂತ ಅಂದ್ಕೊಂಡಿದ್ದೀನಿ, ಆದರೆ ನಾನಂತೂ ಬರೋದಿಲ್ಲ."

ನನ್ನ ಕಡೆ ನೋಡದೆಯೇ, ಕೋಣೆಯಿಂದ ಸರ್ರನೆ ತಿರುಗಿ ಹೊರನಡೆಯಲು ನೋಡಿದರು. ಸಾಮಾನ್ಯವಾಗಿ ಮನಸ್ಸು ಕೆಟ್ಟಾಗ ಅವರು ಮಾಡ್ತಾ ಇದ್ದದ್ದು ಹಾಗೇನೇ.

"ನನಗೆ ನೀವು ಅರ್ಥವೇ ಆಗೋದಿಲ್ಲವಲ್ಲ. ಎಂದಿಗೂ ಮನಸ್ಸಿನ ಹತೋಟಿ ಕಳಕೊಳ್ಳೋದಿಲ್ಲ ಅಂತಾನೂ ಅಂತೀರಿ, ಹಾಗಾದ್ರೆ ನೀವ್ಯಾಕೆ ಈ ರೀತಿ ವಿಚಿತ್ರವಾಗಿ ಮಾತಾಡ್ತೀರೀಂತ! ನಿಮಗಾಗಿ ನಾನು ಸಂತೋಷವನ್ನು ಬಿಟ್ಟುಕೊಡಕ್ಕೆ ಸಿದ್ಧವಾಗಿದ್ದೀನಿ. ಆದರೆ ನೀವು ಮಾತ್ರ 'ನೀನು ಹೋಗು' ಅಂತ ಕೊಂಕು ಮಾತಾಡ್ತೀರಿ" ಎಂದೆ ನಿಂತೆಡೆಯಿಂದಲೇ ಅವರ ಕಡೆ ನೋಟ ಹಾಯಿಸಿ.

"ಅಂದ್ರೆ ನೀನು ತ್ಯಾಗ ಮಾಡ್ತೀಯ ಅಂದ ಹಾಗಾಯ್ತು" ಅಂದರು, 'ತ್ಯಾಗ' ಎಂಬ ಪದದ ಮೇಲೆ ಹೆಚ್ಚು ಒತ್ತುಕೊಟ್ಟು.

"ನಾನೂ ಹಾಗೇನೇ. ಇದಕ್ಕಿಂತ ಉತ್ತಮವಾದ್ದು ಬೇರೆ ಏನಿದೆಂತ? ಇಬ್ಬರೂ ಔದಾರ್ಯದಲ್ಲಿ ಒಬ್ಬರನ್ನೊಬ್ಬರು ಮೀರಿಸೋರೇ - ಸಂಸಾರ ಸುಖ ಅಂದ್ರೆ ಇದೇ ಅಲ್ಲವೇ!"

ಅವರ ಬಾಯಿಂದ ಇಂಥ ಕಟುವೂ ತಿರಸ್ಕಾರಪೂರ್ವಕವೂ ಆದ ಮಾತನ್ನು ನಾನು ಹಿಂದೆಂದೂ ಕೇಳಿರ್ಲಿಲ್ಲ. ಅವರ ತಿರಸ್ಕಾರದಿಂದ ನನಗೆ ನಾಚಿಕೆಯಷ್ಟೇ ಆಗಲಿಲ್ಲ, ಮುಖಭಂಗವೇ ಆಯ್ತು. ಅವರ ಕಟುಮಾತಿನಿಂದ ನನಗೆ ಭಯವಾಗಲಿಲ್ಲ, ನಾನೂ ಕಟುವಾಗೋ ಹಾಗೆ ಆಯ್ತು. ಇಂಥ ಮಾತಾಡಬಹುದೇ ಅವರು; ನಮ್ಮ ನಡುವಣ ಮಾತುಕತೆಯಲ್ಲಿ ಅವರು ಯಾವತ್ತೂ ನೇರವಾಗಿದ್ದೋರು, ಅನ್ನಿಸಿದ್ದನ್ನ ಆಡೋ ಅಂಥವರು, ಅಪ್ರಾಮಾಣಿಕತೆಯನ್ನು ಸಹಿಸದಿದ್ದಂಥವರು! ಈ ರೀತಿ ಮಾತಾಡೋ ಅಂಥ ತಪ್ಪನ್ನ ನಾನೇನು ಮಾಡಿದ್ದೆ? ಅವರ ಸಂತೋಷಕ್ಕಾಗಿ ನಾನು ನಿಜವಾಲೂ ತ್ಯಾಗ ಮಾಡಕ್ಕೆ ಸಿದ್ಧವಾಗಿದ್ದೆ, ಅದರಲ್ಲೇನೂ ತಪ್ಪು ಕಾಣಿಸಿರಲಿಲ್ಲ ನಂಗೆ. ಎಂದಿನ ಹಾಗೆಯೇ ಒಂದು ಕ್ಷಣದ ಹಿಂದೆಯೂ ಅವರನ್ನ ಹೃದಯದಲ್ಲಿರಿಸಿಕೊಂಡು ಪ್ರೀತಿಸ್ತಿದ್ದೆ, ಅವರ ಭಾವನೆಗಳನ್ನ ಅರ್ಥಮಾಡಿಕೋತ ಇದ್ದೆ. ಆದರೆ ನಾವಿಬ್ಬರೂ ಬದಲಾಗಿದ್ದಿವಿ: ಅವರು ನೇರ ಹಾಗೂ ಸರಳ ಮಾತುಗಳನ್ನು ಬಿಟ್ಟಿದ್ದರು, ನಾನು ಅವುಗಳನ್ನೇ ಬಯಸ್ತಿದ್ದೆ.

"ತುಂಬ ಬದಲಾಗಿದ್ದೀರಿ ನೀವು" ಅಂದೆ ನಾನು ನಿಟ್ಟುಸಿರುಬಿಡುತ್ತ. "ನಾನು

ನಿಮ್ಮ ದೃಷ್ಟೀಲಿ ಹೇಗೆ ಅಪರಾಧಿಯಾಗಿಬಿಟ್ಟೆ? ಈ ಪಾರ್ಟಿ ಅಂದರೆ ನಿಮಗೆ ಬೇರೇನೋ ಅರ್ಥ ಕಾಣತ್ತೆ - ನನಗೆ ಎದುರಾಗಿ ಯಾವುದೋ ಮುದಿ ಕೌಂಟ್, ಅಲ್ಲವಾ. ಈ ಅಪ್ರಾಮಾಣಿಕತೆ ಯಾಕೆ? ನಿಮಗೆ ನಿಮ್ಮ ಬಗ್ಗೇನೇ ಭಯ ಬಂದ ಹಾಗಿತ್ತು. ನಿಮ್ಮ ಆಕ್ಷೇಪಣೆ ಯಾಕೆ ಅನ್ನೋದನ್ನ ನೇರವಾಗಿ ಹೇಳಿಬಿಡಿ." ಅವರೇನು ಉತ್ತರ ಕೊಡ್ತಾರೋ ಅಂದುಕೊಂಡೆ, ಅವರು ತಪ್ಪು ಕಂಡುಹಿಡಿಯೋ ಅಂಥ ಯಾವ ಕೆಲಸಾನೂ ಮಾಡಿರಲಿಲ್ಲವಲ್ಲ ಅಂತ ಯೋಚಿಸ್ತಿದ್ದೆ.

ಕೋಣೆಯ ಮಧ್ಯಭಾಗಕ್ಕೆ ಹೋದೆ, ಅವರು ಹೋಗೋದಿದ್ದರೆ ನನ್ನನ್ನ ಹಾದೇ ಹೋಗಬೇಕಾಗಿತ್ತು. ಅವರ ಕಡೆ ನೋಡಿದೆ; 'ಬಂದು ನನ್ನ ತೋಳುಗಳನ್ನ ಹಿಡಕೋತಾರೆ. ಎಲ್ಲ ಕೊನೆಯಾಗತ್ತೆ' ಅಂತ ಅಂದುಕೊಂಡೆ. ನನಗೆ ದುಃಖವಾಗಿತ್ತು; ಅವರ ತಪ್ಪನ್ನ ಸಾಧಿಸಿ ತೋರಿಸೋದಕ್ಕೆ ನಂಗೆ ಸಾಧ್ಯವಾಗದೇ ಇರಲಿ ಹಾರೈಸಿದೆ. ಆದರೆ ಅವರು ಕೋಣೆಯ ಇನ್ನೊಂದು ತುದಿಯಲ್ಲಿ ನಿಂತುಕೊಂಡು ನನ್ನ ಕಡೆ ನೋಡಿದರು.

"ನಿಂಗಿನ್ನೂ ಅರ್ಥ ಆಗ್ಲಿಲ್ಲವಾ?" ಅಂದರು.

"ಉಹ್ಞೂ."

"ಹಾಗಾದ್ರೆ, ನಾನು ವಿವರಿಸಿಯೇ ಹೇಳ್ಬೇಕು. ನನಗೇನನ್ನಿಸತ್ತೆ ಅಂದ್ರೆ, ಹಾಗೆ ಅನ್ನಿಸದೆ ಇರಕ್ಕೇ ಸಾಧ್ಯವೇ ಇಲ್ಲ, ನನಗೆ ನನ್ನ ಜೀವಮಾನದಲ್ಲೇ ಮೊದಲನೇ ಬಾರಿಗೆ ಹೇಸಿಕೆ ಅನ್ನಿಸ್ತಿದೆ" ಅಂದರು. ತಮ್ಮ ಮಾತಿನ ಕಟುತನವನ್ನು ತಾವೇ ಗಮನಿಸಿ ಮಾತನ್ನ ತಡೆದುಕೊಂಡರು.

"ಏನು ಹಾಗಂದ್ರೆ?" ಎಂದು ನಾನು ಕೇಳಿದೆ, ಕೋಪದಿಂದಾಗಿ ನನ್ನ ಕಣ್ಣುಗಳಲ್ಲಿ ನೀರು ತುಂಬಿತು.

"ಆ ರಾಜಕುಮಾರ ನಿನ್ನ ಮೆಚ್ಚಿಕೊಂಡ ಅನ್ನೋದಕ್ಕೋಸ್ಕರ ನೀನು ಅವನನ್ನ ಕಾಣಕ್ಕೆ ಓಡಿ ಹೋಗೋದು ಅನ್ನೋದು ನನಗೆ ಹೇವರಿಕೆ ಹುಟ್ಟಿಸ್ತು. ನಿನಗೆ ಗಂಡನ ನೆನಪಾಗಲಿ, ನಿನ್ನತನವಾಗಲೀ, ಹೆಣ್ಣಿನ ಮರ್ಯಾದೆಯಾಗಲೀ ನೆನಪಿಗೆ ಬರ್ಲೇ ಇಲ್ಲ. ನೀನು ಆತ್ಮಗೌರವ ಕಳಕೊಂಡೆಯಲ್ಲ ಅಂತ ಅಂದುಕೊಂಡ ನಿನ್ನ ಗಂಡನನ್ನು ಬೇಕೂಂತಲೇ ನೀನು ತಪ್ಪು ತಿಳಿದೆ. ಅಲ್ಲದೆ, ಗಂಡನ ಹತ್ತಿರ ಬಂದು 'ತ್ಯಾಗ'ದ ಮಾತು ಬೇರೆ ಆಡ್ತಾ ಇದ್ದೀಯ! ಅಂದರೆ, ನನ್ನನ್ನ ಮಹಾ ಪ್ರಭುಗಳ ಮುಂದೆ ಪ್ರದರ್ಶನ ಮಾಡೋದು ನನಗೆ ಇಷ್ಟ, ಆದ್ರೆ ಗಂಡನಿಗಾಗಿ ನಾನದನ್ನ ತ್ಯಾಗ ಮಾಡ್ತಿದ್ದೀನಿ ಅಂತ ತಾನೇ ನಿನ್ನ ಅರ್ಥ?"

ಮಾತಾಡಿದಷ್ಟೂ ಅವರು ಗಡಸು ಒರಟುತನ ಕ್ರೌರ್ಯಗಳಿಂದ ಕೂಡಿದ ತಮ್ಮ ಧ್ವನಿಯನ್ನು ಕೇಳಿಯೇ ಹೆಚ್ಚು ಉದ್ರೇಕಗೊಳ್ಳುತ್ತಿದ್ದರು. ಅಂಥ ರೂಪದಲ್ಲಿ ನಾನೆಂದೂ ಅವರನ್ನ ಹಿಂದೆ ಕಂಡಿರ್ಲಿಲ್ಲ, ಕಾಣಕ್ಕೆ ಎಂದೂ ಇಷ್ಟಾನೂಪಡ್ತಿರಲಿಲ್ಲ. ರಕ್ತ ನನ್ನೆದೆಗೆ ನುಗ್ಗಿ ಬಂತು, ನನಗೆ ಭಯವಾಯಿತು. ಆದರೆ ನಾಚಿಕೆಪಡೋ ಅಂಥ ಏನನ್ನೂ ನಾನು

ಮಾಡಿಲ್ಲ ಅನ್ನೋ ಭಾವನೆ ಇತ್ತು, ಅವರ ಒಣಜಂಭದಿಂದಾದ ಉದ್ರೇಕ ಕಂಡು ಅವರಿಗೆ ತಕ್ಕ ಶಾಸ್ತಿ ಮಾಡಲು ನಾನು ತವಕಗೊಂಡಿದ್ದೆ.

"ಇದನ್ನ ನಾನು ಯಾವತ್ತೋ ನಿರೀಕ್ಷಿಸಿದ್ದೆ, ಆಯ್ತು, ಮುಂದುವರಿಸಿ."

"ಏನು ನಿರೀಕ್ಷಿಸ್ತಾ ಇದ್ದೆ ನೀನು, ಗೊತ್ತಾಗಲಿಲ್ಲ. ಈ ಮೂರ್ಖ ಜನಗಳ ಕೊಳಕು, ಸೋಮಾರಿತನ ಮತ್ತು ವೈಭವಗಳಲ್ಲಿ ನೀನು ದಿನೇ ದಿನೇ ಪಾಲ್ಗೊಳ್ತಾ ಇದ್ದದ್ದನ್ನ ನೋಡಿ ನಾನಂತೂ ಇನ್ನೂ ಘೋರವಾದ್ದನ್ನ ನಿರೀಕ್ಷಿಸಿದ್ದೆ, ಅದು ಈಗ ನಿಜವಾಗಿದೆ. ಈಗಾಗ್ತಿರೋ ಅಂಥ ಅವಮಾನ ಸೋವುಗಳನ್ನ ಹಿಂದೆಂದೂ ಅನುಭವಿಸಿರಲಿಲ್ಲ ನಾನು. ನೋವು ನನಗೆ, ನಿನ್ನ ಗೆಳೆತಿ ತನ್ನ ಕೊಳಕು ಬೆರಳುಗಳಿಂದ ನನ್ನ ಎದೆಯಲ್ಲಿ ಮೀಟಿ ನನ್ನ ಹೊಟ್ಟೆಕಿಚ್ಚಿನ ಮಾತಾಡಿದ್ದರಿಂದ. ನಿನಗಾಗಲೀ ನನಗಾಗಲೀ ಗೊತ್ತಿಲ್ಲದೇ ಇರೋನ ಬಗ್ಗೆ ಹೊಟ್ಟೆಕಿಚ್ಚು! ನನ್ನ ಅರ್ಥಮಾಡಿಕೊಳ್ಳೋಕೆ ನೀನು ನಿರಾಕರಿಸ್ತಿದ್ದೀ, ನನಗಾಗಿ ತ್ಯಾಗ ಮಾಡಕ್ಕೆ ಹೊರಟಿದ್ದೀ, ಅದೂ ಎಂಥ ತ್ಯಾಗ? ನಿನಗಾಗಿ, ನಿನ್ನ ಪತನವನ್ನ ಕಂಡು ನಾಚಿಕೆಯಾಗ್ತಿದೆ ನಂಗೆ! ತ್ಯಾಗವಂತೆ ತ್ಯಾಗ!" ಎಂದು ಮಾತು ಮುಗಿಸಿದರು.

"ಹ್ಞೂ, ಗಂಡನ ಅಧಿಕಾರ ಅಂದ್ರೆ ಇದೇ ಅಲ್ಲವಾ, ಪೂರಾ ಮುಗ್ಧಳಾದ ಹೆಣ್ಣೊಬ್ಬಳನ್ನ ಕೆಣಕಿ ಹೀಯಾಳಿಸೋದು. ಅದು ಗಂಡನ ಅಧಿಕಾರವಿರಬಹುದು, ಆದರೆ ಇದಕ್ಕೆಲ್ಲ ನಾನು ಮಣಿಯೋದಿಲ್ಲ" ಅಂತ ಅಂದುಕೊಂಡೆ ನಾನು. ನನ್ನ ಮೂಗಿನ ಹೊಳ್ಳೆಗಳು ವಿಚಿತ್ರವಾಗಿ ಊದಿಕೊಂಡು ಮುಖದಿಂದ ರಕ್ತ ಚಿಮ್ಮಿದ ಹಾಗಾಯ್ತು, ಆಗ ನಾನೆಂದೆ: "ಉಹ್ಞೂ, ನಿಮಗಾಗಿ ನಾನು ಯಾವ ತ್ಯಾಗಾನೂ ಮಾಡಲ್ಲ. ಶನಿವಾರ ತಪ್ಪದೆ ಕೂಟಕ್ಕೆ ಹೋಗ್ತೀನಿ ನಾನು."

"ನಿಂಗೆ ಅದರಿಂದ ಬಹಳ ಖುಷಿಯಾಗತ್ತೆ ಅಂತ ನನಗೆ ಗೊತ್ತು. ಆದರೆ ನಮ್ಮಿಬ್ಬರ ಮಧ್ಯೆ ಇದ್ದ ಎಲ್ಲವೂ ಇನ್ನು ಮುಗಿದುಹೋದ ಹಾಗೇನೇ" ಎಂದು ತಡೆಯಲು ಪ್ರಯತ್ನಿಸದ ಕೋಪದಿಂದ ಕಿರುಚಿದರು. "ಆದರೆ ಇನ್ನು ಮುಂದೆ ನೀನು ನಂಗೆ ಚಿತ್ರಹಿಂಸೆ ಕೊಡಲಾರೆ! ಇದುವರತನಕ ನಾನೊಬ್ಬ ಅವಿವೇಕಿಯಾಗಿದ್ದೆ, ಆದರೆ ಯಾವಾಗ .. .." ಅನ್ನುವಾಗ ಅವರ ತುಟಿಗಳು ಕಂಪಿಸಿದುವು, ತುಂಬ ಪ್ರಯತ್ನಪಟ್ಟು ತಡೆದುಕೊಂಡು ವಾಕ್ಯವನ್ನು ಅಲ್ಲಿಗೇ ನಿಲ್ಲಿಸಿದರು.

ಆ ಕ್ಷಣಕ್ಕೆ ಭಯ ದ್ವೇಷಗಳೆರಡೂ ನನ್ನನ್ನಾವರಿಸಿದುವು. ಏನೇನೋ ಹೇಳಬೇಕೂಂತ ಅನ್ನಿಸ್ತಿತ್ತು; ನನ್ನನ್ನು ಅವಮಾನಮಾಡಿದಕ್ಕೆ ಅವರಿಗೆ ತಕ್ಕ ಶಾಸ್ತಿ ಮಾಡಬೇಕೂಂತ ತವಕಿಸ್ತಾ ಇದ್ದೆ. ನಾನೇನಾದರೂ ತುಟಿ ಬಿಚ್ಚಿದ್ದರೆ, ಅಳು ಒತ್ತರಿಸಿಕೊಂಡು ಬಂದು ನನ್ನ ಗತ್ತು ಹೊರಟುಹೋಗ್ತಿತ್ತು. ಏನೂ ಮಾತಾಡದೇ ರೂಮಿಂದ ಹೊರಬಂದೆ. ಅವರ ಶತಪಥದ ಸದ್ದು ಕೇಳಿಸದಾದಾಗ, ನಾವಿಬ್ಬರೂ ಏನು ಮಾಡಿಕೊಂಡುಬಿಟ್ಟೆವು ಅಂತ ಗಾಬರಿಯಾಯಿತು. ನನ್ನ ಸಂತೋಷಕ್ಕೆ ಕಾರಣವಾದ ಎಲ್ಲದರ ಜೊತೆಗೂ ಶಾಶ್ವತವಾಗಿ ನನ್ನ ಸಂಬಂಧ ಕಡಿದುಹೋಗಬಹುದೂಂತ ಭಯವಾಯ್ತು. ಹಿಂದಿರುಗೋಣ ಅನ್ನಿಸಿತು.

ಆದರೆ ನನಗೆ ಅಳುಕಾಯಿತು: ಇಷ್ಟು ಹೊತ್ತಿಗೆ ಅವರು ನನ್ನ ಅರ್ಥಮಾಡಿಕೊಳ್ಳೋ ಮಟ್ಟಿಗೆ ತಹಬಂದಿಗೆ ಬಂದಿದಾರಾ ಅಂತ. ಏನೂ ಮಾತಾಡದೆ ನನ್ನ ಕೈನ ಅವರ ಕಡೆ ಚಾಚಿದರೆ? ನನ್ನ ಧಾರಾಳತನವನ್ನವರು ಕಂಡುಕೊಳ್ತಾರಾ? ನನ್ನ ದುಃಖವನ್ನವರು ಬರೀ ಬೂಟಾಟಿಕೆ ಅಂತ ಕರೆದರೆ? ಅಥವಾ ತಾವು ಹೇಳಿದ್ದು ಸರಿ ಅಂದುಕೊಂಡು ನನ್ನ ಪಶ್ಚಾತ್ತಾಪವನ್ನು ಮನ್ನಿಸಿ ತಮ್ಮ ಮುಕ್ಕಾಗದ ಗತ್ತಿನಿಂದ ನನ್ನನ್ನ ಕ್ಷಮಿಸಬಹುದಾ? ಆದರೆ ನಾನು ಆಳವಾಗಿ ಪ್ರೀತಿಸಿದ್ದ ಅವರು ಎಷ್ಟು ಹರಿತವಾಗಿ ನನಗೆ ಘಾಸಿ ಉಂಟುಮಾಡಿದ್ರು!

ಉಹ್ಞೂ, ಅವರ ಹತ್ತಿರ ಹೋಗಲಿಲ್ಲ, ಬದಲಾಗಿ ನನ್ನ ಕೋಣೆಗೆ ಹೋಗಿ ಕೂತು ಮನಃಪೂರ್ತಿ ಅತ್ತೆ. ನಮ್ಮ ಮಾತುಕತೆಯ ಪ್ರತಿಯೊಂದು ಪದವನ್ನೂ ನೆನಪಿಸಿಕೊಂಡೆ, ಗಾಬರಿ ಹೆಚ್ಚಿತು. ಅವುಗಳ ಬದಲು ಪ್ರೀತಿ ಕರುಣೆ ತುಂಬಿದ ಮಾತುಗಳನ್ನು ಹಾಕಿದೆ, ಕೆಲವು ಹೆಚ್ಚಿನ ಮಾತನ್ನೂ ಸೇರಿಸಿಕೊಂಡೆ. ಆದರೆ ಮರುಕ್ಷಣವೇ ನಡೆದಿದ್ದ ಘೋರವೆಲ್ಲ ನೆನಪಾಗಿ ಮನಸ್ಸಿನ ಘಾಸಿ ಆಳವಾಯ್ತು. ಸಂಜೆ ಟೀಗೆಂದು ಕೆಳಕ್ಕೆ ಹೋಗಿ ಕೂತೆ; ನಮ್ಮ ಜೊತೆ ಉಳಿದುಕೊಂಡಿದ್ದ ಅವರ ಗೆಳೆಯರೊಬ್ಬರೂ ಅವರ ಪಕ್ಕದಲ್ಲಿದ್ದರು. ಅವತ್ತಿನಿಂದ ನಮ್ಮಿಬ್ಬರ ನಡುವೆ ಆ ಅಂಥ ಕಂದರ ಒಂದು ಬಾಯ್ದೆರೆದುಕೊಂಡು ಬಿದ್ದ ಹಾಗೆ ಕಾಣಿಸ್ತು. ನಾವು ಊರಿಗೆ ಯಾವತ್ತು ಹೊರಡೋದು ಅಂತ ಆ ಸ್ನೇಹಿತರು ಕೇಳಿದರು. ನಾನು ಉತ್ತರ ಕೊಡುವುದಕ್ಕೆ ಮುಂಚೆ ನಮ್ಮ ಯಜಮಾನರು ಹೇಳಿದರು:

"ಮಂಗಳವಾರ. ಕೌಂಟೆಸ್ ಆರ್ ಅವರ ಔತಣಕೂಟಕ್ಕೆ ನಾವು ಉಳಿದುಕೊಳ್ಳಬೇಕಾಗಿದೆ" ಎಂದು ಉತ್ತರಿಸಿ, ನನ್ನ ಕಡೆ ತಿರುಗಿ, "ಅಲ್ಲಿಗೆ ಹೋಗೋದಕ್ಕೆ ನಿಂಗಿಷ್ಟ ಅಂದ್ಕೊಂಡಿದ್ದೀನಿ" ಎಂತ ನನ್ನೆಡೆ ತಿರುಗಿ ಹೇಳಿದರು.

ಅವರ ನಿರ್ಭಾವುಕ ಧ್ವನಿಯನ್ನ ಕೇಳಿ ನನಗೆ ಭಯವಾಯಿತು; ಅವರ ಕಡೆ ಅಳುಕಿನಿಂದ ನೋಡಿದೆ. ಅವರ ನೋಟ ನನ್ನ ಮೇಲೆ ನೇರವಾಗಿ ನೆಟ್ಟಿತ್ತು, ಅದರಲ್ಲಿ ತಿರಸ್ಕಾರ ಕ್ರೌರ್ಯ ತುಂಬಿಕೊಂಡಿತ್ತು.

"ಹ್ಞೂ" ಅಂದೆ ನಾನು.

ಆ ಸಾಯಂಕಾಲ ನಾವಿಬ್ಬರೇ ಇದ್ದಾಗ ನನ್ನ ಬಳಿ ಬಂದ ಅವರು ತಮ್ಮ ಕೈಯನ್ನ ಚಾಚಿ, "ಇವತ್ತು ಆಡಿದ ಮಾತುಗಳನ್ನೆಲ್ಲ ದಯವಿಟ್ಟು ಮರೆತುಬಿಡು" ಎಂದರು.

ಅವರ ಕೈಯನ್ನು ನಾನು ಹಿಡಿದಾಗ, ನನ್ನ ತುಟಿಗಳಲ್ಲೊಂದು ಕಿರುನಗೆ ಇಣುಕಿಹಾಕಿತು, ಕಣ್ಣುಗಳಲ್ಲಿ ನೀರು ಮಡುಗಟ್ಟಿತು. ಆದರವರು ತಮ್ಮ ಕೈಯನ್ನು ಹಿಂದಕ್ಕೆಳೆದುಕೊಂಡು ದೂರದಲ್ಲಿದ್ದ ಒಂದು ಆರಾಮಕುರ್ಚಿಯಲ್ಲಿ ಕೂತರು; ಅವರಿಗೆ ಭಾವುಕ ಸನ್ನಿವೇಶವೊಂದನ್ನು ಎದುರಿಸಬೇಕಾದ ಭಯವುಂಟಾಯಿತೇನೋ. 'ತಮ್ಮ ನಿಲವೇ ಸರಿ ಎಂದು ಅವರಿನ್ನೂ ಅಂದುಕೊಂಡಿದ್ದಾರೋ ಏನೋ' ಎಂದು ಆಲೋಚಿಸಿದೆ; ಜೊತೆಗೆ ಎಲ್ಲವನ್ನೂ ವಿವರಿಸಿ ನಾವೇನೂ ಕೂಟಕ್ಕೆ ಹೋಗುವುದು

ಬೇಡ ಎಂದು ಹೇಳಬೇಕೆಂದುಕೊಂಡೆ, ಆದರೆ ಮಾತುಗಳು ತುಟಿಯಲ್ಲಿಯೇ ನಿಂತವು.

"ನಮ್ಮ ಪ್ರಯಾಣವನ್ನ ಮುಂದೆಹಾಕಿದ್ದೇವೆ ಅಂತ ಅಮ್ಮನಿಗೆ ಕಾಗದ ಬರೀಬೇಕು, ಇಲ್ಲದಿದ್ರೆ ಅವಳು ಆತಂಕಪಡ್ತಾಳೆ" ಅಂದರು.

"ಹೋಗೋದು ಯಾವಾಗ ಅಂತ ನಿಮ್ಮ ಯೋಚನೆ?"

"ಅದೇ ಕೂಟ ಆದಮೇಲೆ, ಮಂಗಳವಾರ" ಅಂದರು.

"ಅದು ನಂಗೋಸ್ಕರ ಆಗಿರದೇ ಇರ್ಲಿ ಅಂತ ನನ್ನಾಸೆ" ಎಂದೆ ಅವರ ಕಣ್ಣುಗಳನ್ನೇ ನೋಡುತ್ತ. ಆದರೆ ಅವರ ಕಣ್ಣುಗಳು ಬರೀ ನೋಡಿದವು, ಯಾವುದೇ ಭಾವನೆ ಅಲ್ಲಿರಲಿಲ್ಲ. ಅವರ ಮುಖ ನೋಡಿದರೆ ಇದ್ದಕ್ಕಿದ್ದಂತೆ ತುಂಬ ವಯಸ್ಸಾದ ಹಾಗೆ ಅನಾಕರ್ಷಕವಾಯಿತೇನೋ ಅನ್ನಿಸಿತು.

ನಾವು ಔತಣಕೂಟಕ್ಕೇನೋ ಹೋದೆವು; ನಮ್ಮ ನಡುವಣ ಆತ್ಮೀಯತೆ ಹಿಂದಿನ ನೆಲೆಗೆ ಬಂದ ಹಾಗೆ ಕಾಣಿಸಿತು. ಆದರೆ ನಮ್ಮ ಸಂಬಂಧ ಹಿಂದಿನದಕ್ಕಿಂತ ಭಿನ್ನವೇನೋ ಅನ್ನಿಸಿತು.

ಕೂಟದಲ್ಲಿ ನಾನು ಇತರ ಮಹಿಳೆಯರ ಜೊತೆ ಕೂತಿದ್ದೆ, ಆಗ ರಾಜಕುಮಾರ ನನ್ನ ಬಳಿ ಬಂದರು, ಹೀಗಾಗಿ ಅವರೊಡನೆ ಮಾತಾಡಕ್ಕೆಂದು ನಾನು ಎದ್ದು ನಿಲ್ಲಬೇಕಾಯಿತು. ಏಳುತ್ತಿರುವಾಗ ಅರಿವಿಲ್ಲದೇ ನನ್ನ ಕಣ್ಣುಗಳು ಯಜಮಾನರನ್ನು ಹುಡುಕಿದವು. ಕೋಣೆಯ ಮತ್ತೊಂದು ತುದಿಯಿಂದ ಅವರು ನನ್ನೆಡೆಗೆ ದೃಷ್ಟಿಹರಿಸಿದ್ದವರು ತಕ್ಷಣ ಮುಖ ತಿರುಗಿಸಿಕೊಂಡರು. ತಕ್ಷಣ ಅವಮಾನ ನೋವುಗಳು ನನ್ನನ್ನಾವರಿಸಿದವು; ಆ ಗೊಂದಲದಲ್ಲಿ ನನ್ನ ಮುಖ ಕೆಂಪೇರಿತು, ಅದನ್ನು ರಾಜಕುಮಾರ ಗಮನಿಸಿದರು. ಆದರೆ ನಾನು ನಿಲ್ಲಲೇಬೇಕಾಗಿತ್ತು, ಅವರ ಮಾತುಗಳನ್ನು ಕೇಳಲೇಬೇಕಾಗಿತ್ತು. ಅವರು ತಮ್ಮ ಕೃಪಾದೃಷ್ಟಿಯನ್ನು ನನ್ನ ಕಡೆ ಬೀರಿದರು. ಬಹು ಬೇಗ ನಮ್ಮ ಮಾತು ಮುಗಿಯಿತು; ನನ್ನ ಪಕ್ಕದಲ್ಲಿ ಎಡೆಯಿರಲಿಲ್ಲ, ನನಗಾಗುತ್ತಿದ್ದ ಮುಜುಗರ ಅವರ ಅರಿವಿಗೆ ಬಂದಿತ್ತು. ನಮ್ಮ ಸಂಭಾಷಣೆ ಕಳೆದ ಬಾಲ್ ಬಗ್ಗೆ, ಬೇಸಿಗೆಯನ್ನ ನಾನೆಲ್ಲಿ ಕಳೆಯಬೇಕೆಂಬುದರ ಬಗ್ಗೆ ಸಾಗಿತ್ತು. ಹೊರಡುವಾಗ ನಮ್ಮ ಯಜಮಾನರ ಪರಿಚಯ ಮಾಡಿಕೊಳ್ಳಲು ಅವರು ಆಶಿಸಿದರು. ರೂಮಿನ ಕೊನೆಯಲ್ಲಿ ಅವರಿಬ್ಬರೂ ಮಾತಲ್ಲಿ ತೊಡಗಿದ್ದುದನ್ನು ನಾನು ನೋಡಿದೆ. ರಾಜಕುಮಾರ ನನ್ನ ಬಗ್ಗೆ ಏನೋ ಹೇಳಿದುದು ಸ್ಪಷ್ಟವಾಗಿತ್ತು; ಯಾಕಂದರೆ ತಮ್ಮ ಮಾತಿನ ನಡುವೆ ಅವರು ನಾನಿದ್ದ ಕಡೆ ನೋಡುತ್ತ ಮುಗುಳ್ನಕ್ಕಿದ್ದರು.

ನಮ್ಮ ಯಜಮಾನರ ಮುಖ ತಕ್ಷಣ ರಂಗೇರಿತ್ತು. ನಸುಬಾಗಿ ಬೀಳ್ಕೊಡದಿದ್ದರೂ ಸರ್‍ರನೆ ತಿರುಗಿ ಬಂದಿದ್ದರು. ಇದರಿಂದ ನನಗೂ ನಾಚಿಕೆಯಾಯಿತು. ರಾಜಕುಮಾರರ ಮೇಲೆ ನಾನು, ಅದಕ್ಕಿಂತ ಹೆಚ್ಚಾಗಿ ನಮ್ಮ ಯಜಮಾನರು, ಮೂಡಿಸಿದ್ದಿರಬಹುದಾದ ಭಾವನೆಯಿಂದ ನನಗೆ ಇರಿಸುಮುರಿಸುಂಟಾಗಿತ್ತು. ನನ್ನನ್ನು ಪರಿಚಯ ಮಾಡಿಕೊಡುವಾಗ ನಾನು ಹಾಗೂ ಯಜಮಾನರ ವಿಲಕ್ಷಣ ನಡವಳಿಕೆಯನ್ನು ಎಲ್ಲರೂ ಗಮನಿಸಿದ್ದಿರಬೇಕು.

"ಎಲ್ಲರೂ ಇದಕ್ಕೇನರ್ಥ ಹುಡುಕ್ತಾರೋ. ನಾನು ಯಜಮಾನರ ಜೊತೆ ಜಗಳ ಕಾದದ್ದನ್ನು ಜನ ನೋಡಿಬಿಟ್ಟಿದ್ದಾರೇನೋ" ಅನ್ನಿಸಿತು.

ರಾಜಕುಮಾರಿ ಡಿ ಅವರೇ ನನ್ನನ್ನ ಮನೆಗೆ ಕರೆದೊಯ್ದರು; ದಾರಿಯಲ್ಲಿ ನಮ್ಮ ಯಜಮಾನರ ವಿಷಯ ಅವರಿಗೆ ಹೇಳಿದೆ. ನನ್ನ ಸಹನೆಯ ಕಟ್ಟೆ ಒಡೆದಿತ್ತು; ಈ ಔತಣಕೂಟದಿಂದಾಗಿ ನಮ್ಮಿಬ್ಬರ ನಡುವೆ ಆದ ಪ್ರಮಾದವನ್ನೆಲ್ಲ ವಿಶದವಾಗಿ ವಿವರಿಸಿದೆ. 'ಅಂಥ ಭಿನ್ನಾಭಿಪ್ರಾಯಗಳು ಸಹಜ, ಅವುಗಳನ್ನ ಗಣನೆಗೆ ತಗೊಳ್ಳಲೇಬಾರದು, ಇಂಥ ಜಗಳದ ಪರಿಣಾಮವೇನೂ ಉಳಿದಿರೋದಿಲ್ಲ' ಅಂತೆಲ್ಲ ಹೇಳಿ ಅವರು ನನ್ನನ್ನ ಸಮಾಧಾನ ಮಾಡಿದರು. ನಮ್ಮ ಯಜಮಾನರ ನಡವಳಿಕೆಯ ಸ್ವರೂಪವನ್ನವರು ವಿವರಿಸಿದರು; ತುಂಬ ಗಡುಸಾಗಿ ಮನುಷ್ಯರು ಮುಟ್ಟದ ಗುಬ್ಬಿ ಥರ ಆಗಿದಾರೆಂತ ಹೇಳಿದರು. ಅದು ನನಗೂ ನಿಜ ಅನ್ನಿಸಿತು; ಅವರ ಬಗ್ಗೆ ಸಮಾಧಾನಚಿತ್ತದಿಂದ ಸಮರ್ಪಕವಾಗಿ ತೀರ್ಮಾನಿಸೋದು ನನಗೀಗ ಸಾಧ್ಯವಾಗಿದೆ ಅಂದುಕೊಂಡೆ.

ಆದರೆ ಆಮೇಲೆ ಅವರ ಜೊತೆ ಒಬ್ಬಳೇ ಇದ್ದಾಗ, ಹಿಂದೆ ಅವರ ಬಗ್ಗೆ ನಾನು ಮಾಡಿದ್ದ ತೀರ್ಮಾನ ಮಹಾಪರಾಧದಂತೆ ಕಾಣಿಸಿತು. ನಮ್ಮಿಬ್ಬರ ನಡುವಣ ಕಂದಕ ಮತ್ತಷ್ಟು ಅಗಲವಾದಂತೆ ತೋರಿತು.

## 3

ಅಂದಿನಿಂದ ನಮ್ಮ ಬದುಕಿನ ರೀತಿಯಲ್ಲಿ ಸಂಪೂರ್ಣ ಬದಲಾವಣೆಗಳಾದವು, ನಮ್ಮ ಸಂಬಂಧಗಳ ಸ್ವರೂಪವೂ ಮಾರ್ಪಟ್ಟಿತು. ನಾವಿಬ್ಬರೇ ಇದ್ದಾಗ ಹಿಂದೆ ಎಂಥ ಸಂತಸವನ್ನು ಅನುಭವಿಸುತ್ತಿದ್ದೆವೋ ಅದೀಗ ಕಣ್ಮರೆಯಾಗಿತ್ತು. ಕೆಲವು ವಿಷಯಗಳು ನಮ್ಮಿಂದ ದೂರ ಇದ್ದುವು; ನಮ್ಮ ನಡುವಿನ ಮಾತುಕತೆಗಳು ಮೂರನೆ ಯವರೊಬ್ಬರಿದ್ದಾಗ ಹೆಚ್ಚು ಸಲೀಸಾಗಿ ಸಾಗುತ್ತಿದ್ದುವು. ಮಾತೇನಾದರೂ ಹಳ್ಳಿಯ ಬದುಕಿನ ಕಡೆಗೆ ಹರಿಯಿತೆಂದರೆ ಅಥವಾ ಬಾಲ್ ವಿಷಯಕ್ಕೆ ತಿರುಗಿದರೆ, ನಮಗೆ ಕಸಿವಿಸಿಯಾಗುತ್ತಿತ್ತು, ಒಬ್ಬರನ್ನೊಬ್ಬರು ನೋಡುವುದು ಮುಜುಗರವೆನಿಸುತ್ತಿತ್ತು. ನಮ್ಮಿಬ್ಬರ ನಡುವಿನ ಕಂದಕದ ಸ್ವರೂಪದ ಬಗ್ಗೆ ಇಬ್ಬರಿಗೂ ಅರಿವಿತ್ತು, ಅದರ ಹತ್ತಿರ ಹೋಗಲು ಅಂಜಿಕೆಯಾಗುತ್ತಿತ್ತು. ಅವರಿಗೆ ಹೆಮ್ಮೆ ಕಾಡುತ್ತಿತ್ತು, ಜೊತೆಗೆ ಮುಂಗೋಪ ಬೇರೆ - ಇದು ನನಗೆ ಚೆನ್ನಾಗಿ ತಿಳಿದಿತ್ತು; ತಮ್ಮ ದುರ್ಬಲ ಸ್ಥಳವನ್ನು ನಾನು ಕೆದಕಬಾರದೆಂದು ಅವರು ನಿರೀಕ್ಷಿಸುತ್ತಿದ್ದುದೂ ನನಗೆ ಗೊತ್ತಿತ್ತು. ನನಗೆ ಈಗ ಹಳ್ಳಿಯೆಂದರೆ ಆಗುತ್ತಿರಲಿಲ್ಲ, ಬದಲಾಗಿ ಉನ್ನತ ಸಾಮಾಜಿಕ ಅಂತಸ್ತಿನ ಹಂಬಲದಲ್ಲಿದ್ದೆನೆಂಬುದೂ, ಅನಿವಾರ್ಯವಾಗಿ ತಾವು ನನ್ನ ಈ ದುರದೃಷ್ಟಕರ ಅಭಿರುಚಿಯನ್ನು ಸಹಿಸಿಕೊಳ್ಳಬೇಕೆಂಬ ಅರಿವು ಅವರಿಗೂ ಇತ್ತು. ಇಬ್ಬರಲ್ಲಿ ವಿಷಯಗಳ ಬಗ್ಗೆ ಮನಬಿಚ್ಚಿ ಮಾತಾಡುವುದನ್ನು ಇಷ್ಟಪಡುತ್ತಿರಲಿಲ್ಲ; ಒಬ್ಬರನ್ನೊಬ್ಬರು ಅಪಾರ್ಥ

ಮಾಡಿಕೊಳ್ಳುತ್ತಿದ್ದೆವು. ಹಿಂದಿನಂತೆ ಪರಸ್ಪರರನ್ನು ಜಗತ್ತಿನಲ್ಲಿಯೇ ಅತ್ಯಂತ ಪರಿಪೂರ್ಣ ವ್ಯಕ್ತಿಗಳೆಂಬಂತೆ ಕಾಣುವ ಪರಿಪಾಟವಂತೂ ಬಹುಹಿಂದೆಯೇ ನಿಂತುಹೋಗಿತ್ತು. ಈಗ ಒಬ್ಬರನ್ನೊಬ್ಬರು ಮನಸ್ಸಿನಲ್ಲಿಯೇ ಅಳೆಯುತ್ತಿದ್ದೆವು, ಸಾಧಾರಣ ಮನುಷ್ಯರ ಲೆಕ್ಕದಲ್ಲಿ ಪರಸ್ಪರರ ಬಗ್ಗೆ ಲೆಕ್ಕಾಚಾರ ಹಾಕುತ್ತಿದ್ದೆವು. ಪೀಟರ್ಸ್‌ಬರ್ಗ್ ಬಿಡುವ ಮುಂಚೆ ನಾನು ಕಾಯಿಲೆ ಬಿದ್ದೆ, ಆಗ ಅಲ್ಲಿಗೆ ಹತ್ತಿರವಿದ್ದ ಸಣ್ಣ ಪಟ್ಟಣವೊಂದರಲ್ಲಿನ ಮನೆಗೆ ನಮ್ಮ ನೆಲೆಯನ್ನು ಬದಲಾಯಿಸಿದೆವು. ಅವರು ತಮ್ಮ ತಾಯಿಯ ಜೊತೆಗಿರಲು ಒಬ್ಬರೇ ನಿಕೋಲ್ಸ್ಕೊಯೆಗೆ ಹೋದರು. ಅವರೊಡನೆ ಹೋಗುವಷ್ಟರಮಟ್ಟಿಗೆ ವಾಸಿಯಾದಾಗಲೂ ಕಾಯಿಲೆಯ ನೆವ ಹೇಳಿ ನನ್ನನ್ನು ಅಲ್ಲೇ ಉಳಿದುಕೊಳ್ಳಲು ಒತ್ತಾಯಿಸಿದರು. ಹಳ್ಳಿಗೆ ಹೋಗಿ ಒಟ್ಟಿಗೆ ಇದ್ದರೆ ಇಬ್ಬರಿಗೂ ಮುಜುಗರವಾಗುತ್ತದೆಂದು ಅವರು ಹೆದರಿದ್ದರು, ಇದು ನನಗೂ ತಿಳಿದಿತ್ತು; ಹೀಗಾಗಿ ನಾನೇನೂ ಜೊತೆಗೆ ಹೋಗಬೇಕೆಂದು ಹಟ ಮಾಡಲಿಲ್ಲ. ಒಬ್ಬರೇ ಊರಿಗೆ ಹೋದರು. ಅವರಿಲ್ಲದಾಗ ನನಗೆ ಒಂಟಿತನ ಕಾಡಿಸಿತು, ದಿನಗಳು ಮಂಕಾದವು. ಆದರೆ ಅವರು ವಾಪಸು ಬಂದಾಗಲೂ ಹಿಂದಿನಂತೆ ಅವರು ನನ್ನ ಬದುಕಿಗೆ ಲವಲವಿಕೆಯನ್ನು ತರಲಿಲ್ಲ. ಹಿಂದಾದರೆ ನನ್ನ ಮನಸ್ಸಿನಲ್ಲಿ ಮೂಡುತ್ತಿದ್ದ ಪ್ರತಿಯೊಂದು ಆಲೋಚನೆ, ಅನುಭವವನ್ನು ಅವರೊಡನೆ ಹೇಳಿಕೊಳ್ಳುವವರೆಗೂ ಮನಸ್ಸಿನ ಮೇಲೆ ಹೊರೆಯಾಗಿ ಕಾಡುತ್ತಿತ್ತು; ಅವರು ಆಡುತ್ತಿದ್ದ ಒಂದೊಂದು ಮಾತು, ಮಾಡುತ್ತಿದ್ದ ಒಂದೊಂದು ಕ್ರಿಯೆಯೂ ನನಗೆ ಪೂರ್ಣತೆಯ ಮಾದರಿಯಾಗಿ ತೋರುತ್ತಿತ್ತು; ಎಷ್ಟೋ ವೇಳೆ ಒಬ್ಬರನ್ನೊಬ್ಬರು ನೋಡುತ್ತಿರುವುದೇ ಪರಮಾನಂದಕರ ಎಂಬ ರೀತಿಯಲ್ಲಿ ನಗುತ್ತ ಕೂತುಕೊಳ್ಳುತ್ತಿದ್ದೆವು. ಆದರೆ ಈ ಸಮೀಕರಣಗಳೆಲ್ಲ ಬದಲಾಗಿದ್ದವು, ಅವು ನಮ್ಮ ಗೊತ್ತೇ ಆಗದಂತೆ ನವುರಾಗಿ ಕಣ್ಮರೆಯಾಗಿಬಿಟ್ಟಿದ್ದವು. ನಮಗೇ ವಿಶಿಷ್ಟವೆನಿಸಿದ ಆಸಕ್ತಿಗಳು ಮತ್ತು ಕೆಲಸಗಳನ್ನು ನಾವೀಗ ಒಬ್ಬರೊಬ್ಬರಲ್ಲಿ ಹಂಚಿಕೊಳ್ಳುತ್ತಿರಲಿಲ್ಲ. ಹೀಗಾಗಿ ಇವು ಮೇಲೆದ್ದು ಕಾಣುತ್ತಿದ್ದವು; ನಮ್ಮ ನಡುವಣ ದೂರವೂ ನಮ್ಮನ್ನು ಕಾಡಿಸುವಂತೆ ಕಾಣುತ್ತಿರಲಿಲ್ಲ. ಇದೆಲ್ಲ ಮಾಮೂಲಿಯಾಯಿತು, ಒಂದು ವರ್ಷ ಕಳೆಯು ವುದರೊಳಗಾಗಿ ಒಬ್ಬರನ್ನೊಬ್ಬರು ಯಾವ ಗೊಂದಲವೂ ಇಲ್ಲದೆ ನೋಡುವುದು ಅಭ್ಯಾಸವಾಗಿಬಿಟ್ಟಿತು. ನನ್ನೊಡನೆ ಅವರು ಕಳೆಯುತ್ತಿದ್ದ ಹುಡುಗುತನದ ಕ್ಷಣಗಳು ಅಡಗಿಹೋಗಿದ್ದವು; ನನ್ನನ್ನು ಕೆರಳಿಸುತ್ತಿದ್ದ ಅವರ ಕೆಲಸದ ತನ್ಮಯತೆ ಈಗ ಎಲ್ಲೋ ಸರಿದುಹೋಗಿತ್ತು. ನನ್ನಲ್ಲಿ ಗೊಂದಲವುಂಟುಮಾಡಿದರೂ ಸಂತಸ ನೀಡುತ್ತಿದ್ದ ನೆಟ್ಟ ನೋಟಗಳು ಈಗ ಗತಿಸಿಹೋಗಿದ್ದವು; ಹಿಂದೆಲ್ಲ ನಾವಿಬ್ಬರೂ ಒಟ್ಟಿಗೇ ಅನುಭವಿಸುತ್ತಿದ್ದ ಆನಂದಗಳೂ ಮಾಡುತ್ತಿದ್ದ ಪ್ರಾರ್ಥನೆಗಳು ಅಡಗಿಹೋಗಿದ್ದವು. ನಾನೀಗ ಸದಾ ಕಾಲವೂ ಮೇಲಂತಸ್ತಿನ ಜನರ ಜೊತೆಯಲ್ಲಿರುತ್ತಿದ್ದೆ, ಅಲ್ಲಿ ನನಗೆ ಅವರ ಅವಶ್ಯಕತೆ ಕಾಣಿಸಲಿಲ್ಲ.

ನಮ್ಮಿಬ್ಬರ ನಡುವೆ ಈಗ ಯಾವುದೇ ಜಗಳವಾಗಲೀ ಸಂಘರ್ಷವಾಗಲೀ

ಇರಲಿಲ್ಲ. ಅವರನ್ನು ತೃಪ್ತಿಯಿಂದಿರಿಸಲು ನಾನು ಪ್ರಯತ್ನಿಸುತ್ತಿದ್ದೆ, ಅವರೂ ನನ್ನೆಲ್ಲ ಆಸೆಗಳನ್ನು ಪೂರೈಸುತ್ತಿದ್ದರು; ಇಬ್ಬರೂ ಪರಸ್ಪರ ಪ್ರೀತಿಸುತ್ತಿದ್ದ ಹಾಗೆಯೇ ಇತ್ತು. ನಾವಿಬ್ಬರೇ ಇದ್ದಾಗ, ಹಾಗಿರುತ್ತಿದ್ದದ್ದೇ ಅಪರೂಪ, ನನಗಂತೂ ಜೊತೆ ಯಲ್ಲಿರೋದರಿಂದ ಸಂತೋಷವೂ ಆಗ್ತಿರ್ಲಿಲ್ಲ, ಮುಜುಗರವೂ ಆಗ್ತಿರಲಿಲ್ಲ; ಒಬ್ಬಳೇ ಇದ್ದಂತಹ ರೀತಿಯ ಅನುಭವ. ಅವರು ಅಪರಿಚಿತರೇನಲ್ಲ, ನನ್ನ ಗಂಡ ಅನ್ನೋ ಅರಿವು ಇತ್ತು, ಒಳ್ಳೆಯ ಮನುಷ್ಯ, ನನ್ನ ಹಾಗೆಯೇ, ನನಗೆ ಪರಿಚಿತರಾದವರು ಅನ್ನಿಸ್ತಿತ್ತು. ಅವರು ಏನು ಮಾತಾಡ್ತಾರೆ, ಮಾಡ್ತಾರೆ, ಹೇಗೆ ಕಾಣಿಸ್ತಾರೆ ಅನ್ನೋದೆಲ್ಲ ನನಗೆ ಚೆನ್ನಾಗಿ ಗೊತ್ತಿತ್ತು; ಅದಕ್ಕೆ ಹೊರತಾಗಿ ಅವರೇನಾದರೂ ನಡೆದುಕೊಂಡರೆ ನನಗೆ ಆಶ್ಚರ್ಯ ವಾಗ್ತಿತ್ತು, ಎಲ್ಲೋ ಏನೋ ತಪ್ಪಾಗಿದೆ ಅನ್ನಿಸ್ತಿತ್ತು. ಅವರಿಂದ ನಾನೇನನ್ನೂ ನಿರೀಕ್ಷಿಸ್ತಿರಲಿಲ್ಲ. ಒಂದೇ ಮಾತಲ್ಲಿ ಹೇಳಬೇಕೂಂದರೆ, ಅವರು ನನ್ನ ಗಂಡ, ಅಷ್ಟೆ. ಹೀಗೇ ಇರಬೇಕೂಂತ ಕಾಣತ್ತೆ ಅನ್ನಿಸುತ್ತಿತ್ತು, ಇದೆಲ್ಲ ಮಾಮೂಲಿ, ನಮ್ಮಿಬ್ಬರ ನಡುವೆ ವಿಭಿನ್ನವಾದ ಸಂಬಂಧ ಇತ್ತು ಅನ್ನೋದೇ ಮರೆತುಹೋಗಿತ್ತು. ಅವರು ಮನೆ ಬಿಟ್ಟು ಹೊರಗೆ ಹೋದಾಗ, ಅದೂ ಮೊಟ್ಟ ಮೊದಲ ಬಾರಿ, ನಾನು ಒಂಟಿ ಅನ್ನಿಸಿತ್ತು, ಭಯವಾಗಿತ್ತು, ಅವರ ಸಹವಾಸ ಬೆಂಬಲ ಬೇಕೂಂತ ಅನ್ನಿಸ್ತಿತ್ತು; ಅವರು ವಾಪಸು ಬಂದಾಗ ಸಂತೋಷದಿಂದ ಅವರ ಹತ್ತಿರ ಓಡಿಹೋಗಿ ತಬ್ಬಿಕೋತಿದ್ದೆ, ಆದರೆ ಎರಡು ಗಂಟೆಯ ಹೊತ್ತಲ್ಲಿ ಅವೆಲ್ಲ ಮರೆತುಹೋಗ್ತಿತ್ತು, ಅವರ ಹತ್ತಿರ ಏನು ಮಾತಾಡಬೇಕು ಅನ್ನೋದು ತೋಚುತ್ತಿರಲಿಲ್ಲ. ಒಮ್ಮೊಮ್ಮೆ ಮಾತ್ರ ನಮ್ಮಿಬ್ಬರ ನಡುವೆ ಅಕಾರಣ ಆತ್ಮೀಯತೆ ಮೂಡುತ್ತಿತ್ತು, ಆಗೆಲ್ಲ ಏನೋ ಎಡವಟ್ಟಾಗಿದೆ ಅನ್ನಿಸಿ ಮನಸ್ಸಿಗೆ ನೋವಾಗ್ತಿತ್ತು, ಅವರಿಗೂ ಅದೇ ಆಗ್ತಾ ಇದೆಯ ಅನ್ನೋ ನಿರೀಕ್ಷೆಯಲ್ಲಿ ಅವರ ಮುಖ ನೋಡ್ತಿದ್ದೆ. ಮಿದುತನಕ್ಕೆ ಒಂದು ಮಿತಿಯಿದೆ ಅನ್ನೋ ಪ್ರಜ್ಞೆ ನನಗಿತ್ತು, ಅದು ಅವರಿಗೆ ಕಾಣಿಸ್ತಿರಲಿಲ್ಲವೇನೋ, ನಾನಂತೂ ಅದನ್ನ ಮೀರಕ್ಕಾಗ್ತಿರಲಿಲ್ಲ. ಇದರಿಂದ ಅನೇಕ ಸಲ ನನಗೆ ದುಃಖವಾಗ್ತಿತ್ತು; ಆದರೆ ಯಾವುದರ ಬಗ್ಗೆಯೂ ಆಳವಾಗಿ ಯೋಚಿಸೋದಕ್ಕೆ ನನಗೆ ವ್ಯವಧಾನ ಇರ್ತಿರ್ಲಿಲ್ಲ. ನನಗೆ ಕೈಯಳತೆಯಲ್ಲೇ ಇದ್ದ ಬೇರೆ ವಿಷಯಗಳ ಗಮನ ಹರಿಸೋದರ ಮೂಲಕ ನನ್ನ ನೋವು ಮರೆಯೋ ಪ್ರಯತ್ನ ಮಾಡ್ತಿದ್ದೆ ಅನ್ನೋ ಸೂಕ್ಷ್ಮ ಅರಿವು ನನಗುಂಟಾಗ್ತಿತ್ತು. ತನ್ನ ಪ್ರಖರತೆ ಹಾಗೂ ಸ್ವರತಿಸಂಪ್ರಿತಿಗಳಿಂದ ಮೊದಲು ನನ್ನನ್ನ ಆಕರ್ಷಿಸಿದ್ದ ಡೌಲಿನ ಜೀವನ ಈಗ ನನ್ನ ಸ್ವಭಾವವನ್ನೆಲ್ಲ ಆವರಿಸಿಬಿಟ್ಟಿತ್ತು, ಅದೀಗ ನನ್ನ ಅಭ್ಯಾಸವೇ ಆಗಿತ್ತು, ನನ್ನನ್ನ ತನ್ನ ಬಿಗಿಮುಷ್ಟಿಯಿಂದ ಹಿಡಿದಿಟ್ಟಿತ್ತು, ನನ್ನ ಭಾವನೆಗಳ ಸ್ವರೂಪವನ್ನು ನಿಯಂತ್ರಿಸಿತ್ತು. ನನಗೀಗ ಒಂಟಿತನ ಅಸಹನೀಯವಾಗಿತ್ತು, ನನ್ನ ಪರಿಸ್ಥಿತಿಯ ಬಗ್ಗೆ ಯೋಚಿಸೋದಕ್ಕೆ ಹೆದರಿಕೆಯಾಗ್ತಿತ್ತು. ದಿನ ಪೂರ್ತಿ, ಬೆಳಗಿನಿಂದ ನಡುರಾತ್ರಿಯವರೆಗೂ, ಮೇಲಂತಸ್ತಿನ ಪರಿಸರಕ್ಕೆ ಮೀಸಲಾಗಿತ್ತು; ಮನೆಯಲ್ಲಿದ್ದರೂ, ಸಮಯ ನನ್ನ ಕೈಯಲ್ಲಿರಲಿಲ್ಲ. ಇದರಿಂದ ನನಗೆ ಬದುಕು ಆನಂದಮಯವಾಗಿಯೂ ಕಾಣ್ತಿರಲಿಲ್ಲ, ಮಂಕಾಗಿಯೂ ಕಾಣ್ತಿರಲಿಲ್ಲ, ಅದರ ಬದಲು, ಇದು ಇರೋದೇ ಹೀಗೆ

ಅಥವಾ ಇರಬೇಕಾದ್ದೇ ಹೀಗೆ ಅನ್ನೋ ಭಾವನೆಯಿತ್ತು.

ಹೀಗೇ ಮೂರು ವರ್ಷಗಳು ಕಳೆದುಹೋಯಿತು. ಈ ಕಾಲದಲ್ಲಿನ ನಮ್ಮ ಸಂಬಂಧಗಳು ಎಂದಿನಂತೆಯೇ ಮುಂದುವರಿದುವು ಬದಲಾವಣೆಯಿಲ್ಲದೆ; ಅವಕ್ಕೆ ಒಂದು ನಿರ್ದಿಷ್ಟ ರೂಪ ಪ್ರಾಪ್ತವಾಗಿ ಉತ್ತಮವಾಗಲೂ ಕೆಡಲೂ ಸಾಧ್ಯವಾಗದ ಹಾಗೆ ಸ್ಥಿರತೆಯನ್ನು ಗಳಿಸಿತ್ತು. ಈ ಅವಧಿಯಲ್ಲಿ ಎರಡು ಮುಖ್ಯ ಸಂಗತಿಗಳು ನಮ್ಮ ಕುಟುಂಬ ವಲಯದಲ್ಲಿ ನಡೆದವು; ಆದರೆ ಅವೆರಡೂ ನನ್ನ ಬದುಕನ್ನು ಬದಲಾಯಿಸಲಿಲ್ಲ. ಅವುಗಳೆಂದರೆ ನನ್ನ ಚೊಚ್ಚಿಲ ಮಗುವಿನ ಹುಟ್ಟು ಮತ್ತು ತಾತ್ಯಾನಾ ಸೆಮ್ಯೊನೋವಾರ ಸಾವು. ಮೊದಮೊದಲು ತಾಯ್ತನವು ನನ್ನನ್ನು ಎಷ್ಟರಮಟ್ಟಿಗೆ ಆವರಿಸಿ ನನ್ನಲ್ಲಿ ಅನಿರೀಕ್ಷಿತ ಸಂತಸವನ್ನುಂಟುಮಾಡಿಬಿಟ್ಟಿತೆಂದರೆ ನನ್ನ ಬದುಕು ಇನ್ನು ಮುಂದೆ ಹಿಂದಿನಂತಿರುವುದಿಲ್ಲ ಎನ್ನಿಸಿತ್ತು. ಆದರೆ ಎರಡೇ ತಿಂಗಳಲ್ಲಿ, ಮತ್ತೆ ನಾನು ಹೊರಗೆ ತಿರುಗಾಡಲು ಆರಂಭಿಸಿದ ಬಳಿಕ, ಈ ನನ್ನ ಭಾವನೆ ಕ್ರಮೇಣ ದುರ್ಬಲವಾಗುತ್ತ ಸಾಗಿತು. ತಾಯ್ತನದ ಕೆಲಸ ಈಗ ಕೇವಲ ಅಭ್ಯಾಸ ಮತ್ತು ಜೀವಂತಿಕೆಯಿಲ್ಲದ ಕರ್ತವ್ಯ ನಿರ್ವಹಣೆ ಅನ್ನಿಸಿತು. ಇದಕ್ಕೆ ವ್ಯತಿರಿಕ್ತವಾಗಿ ನನ್ನ ಗಂಡನಾದರೋ ನಮ್ಮ ಮೊದಲ ಮಗು ಹುಟ್ಟಿದ ಕ್ಷಣದಿಂದ ಮೊದಲಿನಂತೆಯೇ ಆಗಿಬಿಟ್ಟರು; ಅದೇ ಮೃದುಲತೆ, ಪ್ರಸನ್ನವದನ, ಮನೆಯ ಪ್ರೀತಿ; ತಮ್ಮ ಹಿಂದಿನ ಕೋಮಲಭಾವನೆ ಹಾಗೂ ಲವಲವಿಕೆಗಳನ್ನು ಮಗುವಿನ ಮೇಲೆ ಸುರಿಸಲಾರಂಭಿಸಿದರು. ಬಾಲ್‌ಗೆಂದು ತಕ್ಕ ಉಡುಪು ಧರಿಸಿ ಎಷ್ಟೋ ರಾತ್ರಿಗಳು ಮಗು ಮಲಗುವಲ್ಲಿಗೆ ಹೋಗಿ ಅದು ಮಲಗುವ ಮುನ್ನ ಶಿಲುಬೆಯಾಕಾರ ಮಾಡಿ ಹೊರಡುತ್ತಿದ್ದೆ. ಆಗೆಲ್ಲ ಅಲ್ಲಿದ್ದ ನಮ್ಮ ಯಜಮಾನರ ನೋಟ ನನ್ನಲ್ಲಿ ನೆಟ್ಟದ್ದನ್ನು ಅನುಭವಿಸುತ್ತಿದ್ದೆ, ಆ ಗಡಸು ನೋಟದಲ್ಲಿ ಒಂದು ಬಗೆಯ ಛೇಡಿಕೆ ತುಂಬಿರುತ್ತಿತ್ತು. ಆಗೆಲ್ಲ ನಾಚಿಕೆಯಾಗುತ್ತಿತ್ತು, ನನ್ನ ಬೇಜಬ್ದಾರಿತನವನ್ನು ನೆನಪಿಸಿಕೊಂಡು ಆಘಾತವಾಗುತ್ತಿತ್ತು, ನಾನು ಇತರ ಹೆಂಗಸರಿಗಿಂತ ಕೀಳಾಗಲಿಲ್ಲವೇ ಅನ್ನಿಸುತ್ತಿತ್ತು. ಆದರೆ ಏನೂ ಮಾಡುವಂತಿರಲಿಲ್ಲ. 'ನನಗೆ ನನ್ನ ಮಗುವಿನ ಬಗ್ಗೆ ಪ್ರೀತಿ ಇದೆ, ಆದರೆ ಅದರ ಪಕ್ಕದಲ್ಲೇ ದಿನಪೂರ್ತಿ ಕೂತಿರೋದು ಅಂದ್ರೆ ಬೇಸರವೋ ಬೇಸರ, ನನಗೆ ನಿಜವಾಗಿ ಏನನ್ನಿಸತ್ತೆ ಅನ್ನೋದನ್ನ ಯಾವ ಕಾರಣದಿಂದಲೂ ಮುಚ್ಚಿಡಲಾರೆ' ಅಂದುಕೊಳ್ತಿದ್ದೆ.

ತಮ್ಮ ತಾಯಿಯ ಸಾವು ನನ್ನ ಗಂಡನಲ್ಲಿ ತೀವ್ರ ದುಃಖವನ್ನುಂಟುಮಾಡಿತ್ತು; ಅದರಿಂದಾಗಿ ನಿಕೋಲ್ಸ್ಕೊಯೆನಲ್ಲಿ ಇರುವುದೇ ನೋವು ತರುತ್ತದೆ ಅಂತ ಅವರೆನ್ನುತ್ತಿದ್ದರು. ನನ್ನ ಮಟ್ಟಿಗೆ, ಅವರ ಸಾವಿನಿಂದ ನನಗೂ ದುಃಖವಾಗಿದ್ದರೂ, ನನ್ನ ಗಂಡನ ಬಗ್ಗೆ ಸಹಾನುಭೂತಿಯಿದ್ದರೂ, ಅವರ ಸಾವಿನ ನಂತರ ಆ ಮನೆಯಲ್ಲಿನ ಜೀವನ ಹೆಚ್ಚು ಸುಲಭವೂ ಸಂತೋಷಕರವೂ ಆಗಿತ್ತು. ಕಳೆದ ಮೂರು ವರ್ಷಗಳನ್ನು ಹೆಚ್ಚು ಕಡಿಮೆ ನಗರದಲ್ಲಿ ಕಳೆದಿದ್ದೆವು. ಎರಡು ತಿಂಗಳಿಗೊಮ್ಮೆ ಮಾತ್ರ ನಾನು ನಿಕೋಲ್ಸ್ಕೊಯೆಗೆ ಹೋಗ್ತಿದ್ದೆ; ಮೂರನೆಯ ವರ್ಷವಂತೂ ನಾವಿಬ್ಬರೂ ಬೇಡನ್‌ಗೆ

ಹೋಗಿ ಆ ಬೇಸಿಗೆಯನ್ನು ಅಲ್ಲೇ ಕಳೆದಿದ್ದೆವು.

ಆಗ ನನಗೆ ಇಪ್ಪತ್ತೊಂದು ವರ್ಷ. ನನಗೆ ತಿಳಿದಂತೆ ನಮ್ಮ ಹಣಕಾಸಿನ ಪರಿಸ್ಥಿತಿ ತೃಪ್ತಿಕರವಾಗಿತ್ತು; ನನ್ನ ಮನೆಯ ಜೀವನದಲ್ಲಿ ನಾನು ಬಯಸಿದ್ದೆಲ್ಲ ಸಿಕ್ತಿತ್ತು; ನನಗೆ ತಿಳಿದಿರೋರೆಲ್ಲ ನನ್ನನ್ನ ಇಷ್ಟಪಡ್ತಿದ್ದರು; ನನ್ನ ಆರೋಗ್ಯ ಸೊಗಸಾಗಿತ್ತು; ಬೇಡನ್ನಲ್ಲೇ ನಾನು ಸುಂದರ ಉಡುಪಿನ ಸೊಗಸುಗಾತಿ; ನಾನು ಚೆಲುವೆ ಅನ್ನೋದೂ ನನಗೆ ಗೊತ್ತಿತ್ತು; ಹವಾಮಾನವಂತೂ ಆಹ್ಲಾದಕರವಾಗಿತ್ತು; ನನಗೆ ಸಂತೋಷ ನಾಗರಿಕತೆಗಳ ಬದುಕು ಇಷ್ಟವಾಗಿತ್ತು; ಒಟ್ಟಲ್ಲಿ, ನಾನು ತುಂಬ ಉಲ್ಲಸಿತಳಾಗಿದ್ದೆ. ಹಿಂದೊಮ್ಮೆ, ನನ್ನ ಸಂತೋಷ ನನ್ನಲ್ಲೇ ಸೀಮಿತಗೊಂಡಿದ್ದಾಗ, ನಾನು ಆನಂದದ ಬದುಕಿಗೆ ಅರ್ಹಳು ಅನ್ನಿಸಿದ್ದಾಗ, ಮುಂದೆ ಇನ್ನೂ ಹೆಚ್ಚಿನ ಆನಂದವಿದೆ ಅನ್ನೋ ನಿರೀಕ್ಷಣೆಯಲ್ಲಿದ್ದಾಗ, ನಿಕೋಲ್ಸ್ಕೊಯೆನಲ್ಲಿ ಬದುಕು ಅದಕ್ಕಿಂತ ಉತ್ತಮವಾಗಿತ್ತು. ಅದು ಬೇರೆಯದೇ ಆದ ಪರಿಸ್ಥಿತಿ; ಆದರೂ ಈ ಬೇಸಿಗೆಯಲ್ಲಿ ಕೂಡ ನಾನು ಸಂತೋಷವಾಗೇ ಇದ್ದೆ. ನನಗೆ ವಿಶೇಷ ಆಸೆಗಳಾಗಲೀ ನಿರೀಕ್ಷೆಗಳಾಗಲೀ ಭಯಗಳಾಗಲೀ ಇರಲಿಲ್ಲ; ನನ್ನ ಬದುಕು ತುಂಬಿಕೊಂಡಿದ್ದಂತೆ ಕಾಣಿಸುತ್ತಿತ್ತು, ನನ್ನ ಮನಸ್ಸು ಹಗುರಾಗಿತ್ತು. ಆ ಸಮಯದಲ್ಲಿ ಬೇಡನ್ನ ನಮ್ಮ ಮನೆಗೆ ಬಂದವರಲ್ಲಿ ನಾನು ಅತ್ಯಂತ ಇಷ್ಟಪಟ್ಟವರೆಂದರೆ ಬೇರಾರೂ ಅಲ್ಲ, ನಮ್ಮ ಹಳೆಯ ರಾಯಭಾರಿ ಕೂಡ ಅಲ್ಲ, ಅವರು ರಾಜಕುಮಾರ ಕೆ., ನನ್ನ ಬಗ್ಗೆ ಆಪ್ತವೆನಿಸುವಂಥ ಗಮನ ಕೊಟ್ಟವರು. ಒಬ್ಬರು ಯುವಕರಾದರೆ, ಮತ್ತೊಬ್ಬರು ವಯಸ್ಸಾದವರು; ಒಬ್ಬರು ಸುಂದರವಾದ ಇಂಗ್ಲಿಷ್ ವ್ಯಕ್ತಿಯಾದರೆ, ಮತ್ತೊಬ್ಬರು ಫ್ರೆಂಚ್ ಹಾಗೂ ಗಡ್ಡಧಾರಿ. ಅವರಿಬ್ಬರೂ ನನಗೆ ಒಂದೇ ಆಗಿದ್ದರು, ಯಾರೂ ಅನಿವಾರ್ಯವಾಗಿರಲಿಲ್ಲ. ಇಬ್ಬರಲ್ಲಿ ವ್ಯತ್ಯಾಸವಿಲ್ಲದ್ದರಿಂದ, ಇಬ್ಬರೂ ನನಗೆ ವಾತಾವರಣ ಆಹ್ಲಾದಕರವಾಗಿರೋ ಹಾಗೆ ಮಾಡಿದರು. ಆದರೆ ಇನ್ನೊಬ್ಬರಿದ್ದರು, ಒಬ್ಬ ಯುವ ಇಟಾಲಿಯನ್ ಮಾರ್ಕ್ವಿಸ್; ತಮ್ಮ ಮೆಚ್ಚಿಕೆಯನ್ನು ಯಾವ ಭಿಡೆ ಇಲ್ಲದೆ ನೇರವಾಗಿ ವ್ಯಕ್ತಪಡಿಸೋ ಧೈರ್ಯ ತೋರಿಸುತ್ತಿದ್ದವರು, ಅವರು ಮಿಕ್ಕೆಲ್ಲರಿಗಿಂತ ಭಿನ್ನರಾದವರು. ನನ್ನ ಜೊತೆಗಿರುವ ಯಾವ ಅವಕಾಶವನ್ನೂ ಅವರು ತಪ್ಪಿಸಿ ಕೊಂಡವರಲ್ಲ; ನನ್ನ ಜೊತೆ ನರ್ತಿಸುತ್ತಿದ್ದರು, ನನ್ನೊಡನೆ ಕುದುರೆ ಸವಾರಿ ಮಾಡುತ್ತಿದ್ದರು, ಕ್ಯಾಸಿನೋದಲ್ಲಿ ನನ್ನ ಭೇಟಿಯಾಗುತ್ತಿದ್ದರು. ಹೋದೆಡೆಯಲ್ಲೆಲ್ಲ ನನ್ನ ಆಕರ್ಷಕತೆಯ ಬಗ್ಗೆ ಮಾತಾಡುತ್ತಿದ್ದರು. ನಮ್ಮ ಹೋಟಲಿನ ಸುತ್ತ ಅವರು ತಿರುಗುತ್ತಿದ್ದುದನ್ನು ನಾನು ಕಿಟಕಿಯ ಮೂಲಕ ಹಲವು ಬಾರಿ ಗಮನಿಸಿದ್ದೆ; ಅವರ ಹೊಳಪುಗಣ್ಣಿನ ಗಾಢ ನೋಟ ನನ್ನನ್ನು ಕಾಡುತ್ತಿತ್ತು, ಇದರಿಂದಾಗಿ ನಾಚಿ ಮುಖ ಬೇರೊಂದೆಡೆಗೆ ತಿರುಗಿಸುತ್ತಿದ್ದೆ. ಅವರಿನ್ನೂ ಕಿರುವಯಸ್ಸಿನವರು, ಸ್ಫುರದ್ರೂಪಿ, ಬಹು ನಾಜೂಕಿನ ನಡತೆಯವರು; ಎಲ್ಲಕ್ಕಿಂತ ಮಿಗಿಲಾಗಿ, ತಮ್ಮ ಮುಗುಳ್ನಗು ಹಾಗೂ ಹುಬ್ಬಿನ ಹಾವಭಾವದಿಂದ ಅವರು ಥೇಟ್ ನನ್ನ ಗಂಡನಂತೆಯೇ ಇದ್ದರು, ಆದರೆ ಅವರಿಗಿಂತ ತುಂಬ ತುಂಬ ಚೆಲುವ; ತುಟಿಗಳು, ಕಣ್ಣುಗಳು ಮತ್ತು ನೀಳವಾದ ಗದ್ದ

ಇವುಗಳಿಂದ ಒಟ್ಟಾರೆ ಹೋಲಿಕೆಯಿಂದ ಅವರು ನನ್ನಲ್ಲಿ ಗಾಢ ಪರಿಣಾಮವುಂಟು ಮಾಡಿದರೂ, ನಮ್ಮ ಯಜಮಾನರ ಆತ್ಮೀಯ ಮುಖಭಾವ ಮತ್ತು ಪ್ರಸನ್ನತೆಗಳಿಂದ ಭಿನ್ನವಾದ ಒರಟುತನ ಹಾಗೂ ಮೃಗೀಯತೆ ಅವರಲ್ಲಿತ್ತು. ಅವರು ನನ್ನಲ್ಲಿ ಆಳವಾಗಿ ವ್ಯಾಮೋಹಗೊಂಡಿದ್ದರೆಂಬ ಭಾವನೆ ನನ್ನಲ್ಲುಂಟಾಯಿತು. ಅವರ ಬಗ್ಗೆ ನನಗೆ ಕೆಲವೊಮ್ಮೆ ಕಾರುಣ್ಯಪೂರ್ಣ ಮರುಕವುಂಟಾಗುತ್ತಿತ್ತು. ಸ್ನೇಹಪೂರಿತ ಆತ್ಮವಿಶ್ವಾಸದಿಂದ ಅವರನ್ನು ಸಮಾಧಾನಪಡಿಸಿ ಅವರ ಧಾಟಿ ಮಿದುವಾಗುವಂತೆ ಮಾಡಲು ನಾನು ಯತ್ನಿಸಿದಾಗ ಆ ಸಲಹೆಯನ್ನವರು ತೀವ್ರವಾಗಿ ಪ್ರತಿಭಟಿಸಿದರು, ಯಾವಾಗ ಬೇಕಾದರೂ ಸಿಡಿಯಬಹುದೆಂಬ ರೀತಿಯಲ್ಲಿ ಹುದುಗಿಸಿಕೊಂಡಿದ್ದ ಮೋಹವಶತೆಯಿಂದಲೇ ನನ್ನ ಪ್ರಯತ್ನವನ್ನವರು ಸುಮ್ಮನಾಗಿಸಿದರು. ನನ್ನಲ್ಲಿ ಆ ಭಾವನೆಯಿದೆಯೆಂದು ಅನ್ನಿಸದಿದ್ದರೂ, ಅವರನ್ನು ಕಂಡರೆ ಹೆದರಿಕೆಯಿತ್ತು, ಕಿಟಕಿಯಂಚಲ್ಲಿ ಕೂತು ಅವರ ಬಗ್ಗೆ ಯೋಚಿಸುವಂತಾಯಿತು. ನಮ್ಮ ಯಜಮಾನರಿಗೂ ಅವರ ಪರಿಚಯವಿತ್ತು, ಕೇವಲ ನನ್ನ ಗಂಡನೆಂದು ಮಾತ್ರ ಪರಿಗಣಿಸಿದ್ದ ನಮ್ಮ ಇತರ ಪರಿಚಿತರ ಬಗ್ಗೆ ನಿರ್ಭಾವುಕತೆ ಹಾಗೂ ತಿರಸ್ಕಾರ ಭಾವನೆಯಿಂದ ಬರಮಾಡಿಕೊಳ್ಳುತ್ತಿದ್ದರು.

ಆ ಅವಧಿಯ ಕೊನೆಯಲ್ಲಿ ನಾನು ಕಾಯಿಲೆ ಮಲಗಿದೆ, ಹೀಗಾಗಿ ಹದಿನೈದಿಪ್ಪತ್ತು ದಿನಗಳ ಕಾಲ ಮನೆ ಬಿಟ್ಟು ಹೊರಗೆಲ್ಲೂ ಹೋಗಲಾಗಲಿಲ್ಲ. ಒಂದು ಸಂಜೆ ಮತ್ತೆ ನಾನು ಬ್ಯಾಂಡ್ ಅನ್ನು ಕೇಳಿಸಿಕೊಳ್ಳಲು ಹೊರಹೊರಟಾಗ, ತುಂಬ ದಿನಗಳಿಂದ ಜನ ಎದುರು ನೋಡುತ್ತಿದ್ದು ತನ್ನ ಚೆಲುವಿನಿಂದ ಚಿರಪರಿಚಿತವಾಗಿದ್ದ ಇಂಗ್ಲಿಷ್ ಮಹಿಳೆ ಎಸ್ ನಾನಿಲ್ಲದಾಗ ಬಂದಿದ್ದರೆಂಬುದು ತಿಳಿಯಿತು. ನಾನು ವಾಪಸ್ಸಾದುದನ್ನು ಎಲ್ಲರೂ ಸ್ವಾಗತಿಸಿದರು, ನನ್ನ ಸುತ್ತ ಒಂದು ಗುಂಪು ಸೇರಿತು; ಆದರೆ ಹೆಚ್ಚು ಅಂತಸ್ತಿನ ಮಂದಿಯ ಗುಂಪು ಆ ಅಪರಿಚಿತ ಮಹಿಳೆಯ ಸುತ್ತ ಸೇರಿತು. ನಾನವರನ್ನು ಮೊದಲ ಬಾರಿಗೆ ಕಂಡಾಗ ಆಕೆ ಅಪ್ರತಿಮ ಸುಂದರಿ ಎಂಬುದು ಗೊತ್ತಾಯಿತು, ಆದರೆ ಆಕೆಯ ಸ್ವತೃಪ್ತಿಯ ನೋಟ ನನಗೆ ಸರಿ ಕಾಣಲಿಲ್ಲ. ಹಾಗೆ ಹೇಳಿಯೂ ಹೇಳಿದೆ. ಹಿಂದೆ ತಮಾಷೆಯಾಗಿ ಕಂಡದ್ದೆಲ್ಲ ಆ ದಿನ ಮಂಕಾಗಿ ಗೋಚರಿಸಿತು. ಮಾರನೆಯ ದಿನ ಹಳೆಯ ಪಾಳುಬಿದ್ದ ಕೋಟೆಯೊಂದಕ್ಕೆ ಹೋಗುವ ಕಾರ್ಯಕ್ರಮವನ್ನು ಎಸ್ ನಿಯೋಜಿಸಿದರು, ಆದರೆ ಅವರೊಂದಿಗೆ ಸೇರಲು ನಾನು ಇಷ್ಟಪಡಲಿಲ್ಲ. ಬಹುತೇಕ ಮಿಕ್ಕವರೆಲ್ಲ ಹೋದರು. ಬೇಡನ್ ಬಗ್ಗೆ ನನ್ನಲ್ಲಿ ಮೂಡಿದ್ದ ಭಾವನೆ ಸಂಪೂರ್ಣ ಬದಲಾಯಿತು. ಎಲ್ಲವೂ, ಎಲ್ಲರೂ ಮೂರ್ಖತನದಿಂದ ತಲೆ ಚಿಟ್ಟುಹಿಡಿಸುವಂತೆ ಕಂಡರು. ನನಗೆ ಅತ್ತುಬಿಡಬೇಕೂಂತ ಅನ್ನಿಸಿತು, ನನಗೆ ವಾಸಿಯಾಗಿದ್ದದ್ದಕ್ಕೆ, ರಷ್ಯಕ್ಕೆ ವಾಪಸು ಹೋಗೋದಕ್ಕೆ. ನನ್ನ ಮನಸ್ಸಿನಲ್ಲಿ ಯಾವುದೋ ಕೆಡುಕು ಭಾವನೆ ತುಂಬಿಕೊಂಡಿತ್ತು, ಆದರೆ ಅದರ ಇರುವಿಕೆಯನ್ನು ನಾನೇ ಇನ್ನೂ ಪೂರ್ತಿ ಒಪ್ಪಿಕೊಂಡಿರಲಿಲ್ಲ. ನನಗಿನ್ನೂ ಸಾಕಷ್ಟು ಶಕ್ತಿ ಬಂದಿಲ್ಲ ಎಂಬ ನೆಪ ಒಡ್ಡಿ ನಾನು ಜನಗಳ ಗುಂಪಿರೋ ಪಾರ್ಟಿಗಳಲ್ಲಿ ಕಾಣಿಸಿಕೊಳ್ಳೋದನ್ನ ತಪ್ಪಿಸಿದೆ. ನಾನೇನಾದರೂ ಹೊರಗೆ ಹೋಗಿದ್ದಿದ್ದರೆ ಅದು ಬೆಳಿಗ್ಗೆ

ಹೊತ್ತು, ಅದೂ ಒಬ್ಬಳೇ. ಖನಿಜ ಜಲವನ್ನು ಕುಡಿಯೋದಕ್ಕೆ; ನನ್ನ ಒಬ್ಬಳೇ ಸಂಗಾತಿ ಅಂದರೆ ಮೇಡಂ ಎಂ. ಆಕೆಯೊಬ್ಬ ರಷ್ಯನ್ ಮಹಿಳೆ, ಅವರೊಂದಿಗೆ ನಾನು ಸುತ್ತಮುತ್ತಲ ಹಳ್ಳಿಗಾಡಿನ ಪ್ರದೇಶದಲ್ಲಿ ಸುತ್ತಾಡುತ್ತಿದ್ದೆ. ನಮ್ಮ ಯಜಮಾನರು ಇರಲಿಲ್ಲ, ಕೆಲದಿನಗಳ ಮಟ್ಟಿಗೆ ಹೈಡಲ್‌ಬರ್ಗ್‌ಗೆ ಹೋಗಿದ್ದರು, ನಾನು ಪೂರ್ತಿ ಹುಷಾರಾದ ಮೇಲೆ ರಷ್ಯಕ್ಕೆ ವಾಪಸಾಗುವ ಉದ್ದೇಶ ಅವರದು, ಬೇಡನ್ನಲ್ಲಿ ಅವರು ಆಗೊಮ್ಮೆ ಈಗೊಮ್ಮೆ ನನ್ನನ್ನು ಕಾಣುತ್ತಿದ್ದರು.

ಒಂದು ದಿನ, ಲೇಡಿ ಎಸ್ ತಮ್ಮ ಜೊತೆಗಾರರನ್ನೆಲ್ಲ ಬೇಟೆಯ ಮೋಜಿಗಾಗಿ ಕರೆದುಕೊಂಡು ಹೋಗಿರಬೇಕಾದರೆ, ಮೇಡಂ ಎಂ ಮತ್ತು ನಾನು ಮಧ್ಯಾಹ್ನ ಕೋಟೆಗೆ ಹೋದೆವು. ನಮ್ಮ ಕ್ಯಾರೇಜು ಅಕ್ಕಪಕ್ಕ ಹಳೆಯ ಚೆಸ್ಟ್‌ನಟ್ ಮರಗಳು ಬೆಳೆದು ಬೇಡನ್ನ ಸುತ್ತಮುತ್ತಲ ಪ್ರಕೃತಿ ರಮ್ಯವಾಗಿ ಕಾಣಿಸುತ್ತಿದ್ದ ಅಂಕುಡೊಂಕಾದ ರಸ್ತೆಯಲ್ಲಿ ನಿಧಾನವಾಗಿ ಹೋಗುತ್ತಿರಬೇಕಾದರೆ, ಪಶ್ಚಿಮದಲ್ಲಿಳಿಯುತ್ತಿದ್ದ ಸೂರ್ಯನ ರಂಗುರಂಗುಗಳು ಎಲ್ಲೆಡೆ ಹರಡುತ್ತಿರಬೇಕಾದರೆ, ನಮ್ಮ ಮಾತುಕತೆಗಳು ಹಿಂದೆಂದಿಗಿಂತಲೂ ಬಹು ಗಂಭೀರವಾದ ಚರ್ಚೆಯತ್ತ ತಿರುಗಿದವು. ನನ್ನ ಈ ಸಂಗಾತಿಯನ್ನು ನಾನು ಬಹು ಹಿಂದಿನಿಂದಲೂ ಬಲ್ಲೆ; ಆದರೆ ಆಕೆಯೀಗ ನನಗೆ ಹೊಸಬೆಳಕಿನಲ್ಲಿ ಕಾಣಿಸಿದರು, ಆಕೆ ಬುದ್ಧಿವಂತೆ ಹಾಗೂ ಶಿಸ್ತುಬದ್ಧ ಹೆಣ್ಣೆಂದು ಗೊತ್ತಾಯಿತು; ಹೀಗಾಗಿ ಆಕೆ ಯಾವ ಸಂಕೋಚವಿಲ್ಲದೆ ಮಾತಾಡಬಹುದಾಗಿತ್ತು, ಅವರ ಸ್ನೇಹ ನನಗೆ ತುಂಬ ಅಮೂಲ್ಯವಾದದ್ದಾಗಿ ಗೋಚರಿಸಿತು. ಆಪ್ಯಾಯಮಾನವಾದ ರಷ್ಯನ್ ಹಳ್ಳಿಯ ಪ್ರದೇಶ ಕಣ್ಣಿಗೆ ಬೀಳುವವರೆಗೂ ನಾವು ನಮ್ಮ ವೈಯಕ್ತಿಕ ಬೇಕುಬೇಡಗಳ ಬಗ್ಗೆ, ನಮ್ಮ ಮಕ್ಕಳ ಬಗ್ಗೆ, ಬೇಡನ್ನ ಬದುಕಿನ ಬರಡುತನದ ಬಗ್ಗೆ ಮಾತಾಡಿದೆವು, ಕೋಟೆಯನ್ನು ಪ್ರವೇಶಿಸಿದಾಗ, ನಮ್ಮ ಮನಸ್ಸಿನಲ್ಲಿನ್ನೂ ಈ ಗಂಭೀರ ವಿಷಯಗಳೇ ಗುಂಯ್ಗುಡುತ್ತಿದ್ದವು. ಗೋಡೆಗಳ ನಡುವೆ ನೆರಳಿನ ವಾತಾವರಣ ತಂಪಾಗಿತ್ತು; ಸೂರ್ಯ ಕಿರಣಗಳು ಅವಶೇಷಗಳ ಮೇಲುಗಡೆ ನಲಿದಾಡಿದುವು. ಮೆಟ್ಟಿಲು ಹತ್ತುವ ಹೆಜ್ಜೆಗಳ ಹಾಗೂ ಜನರ ಸಂಭಾಷಣೆಗಳ ಧ್ವನಿ ಕೇಳಿಸಿತು. ಎದುರಿಗಿನ ಬಾಗಿಲ ಚೌಕಟ್ಟಿನ ಮೂಲಕ ಕಾಣಿಸಿದ ಸುತ್ತಮುತ್ತಲ ಪ್ರಕೃತಿ ಕಣ್ಮನಗಳಿಗೆ ಸೊಂಪಾಗಿದ್ದರೂ ರಷ್ಯದ ಮೈಗೆ ಕೊಂಚ ಥಂಡಿಯೆನ್ನಿಸಿತು. ಸ್ವಲ್ಪ ದಣಿವಾರಿಸಿಕೊಳ್ಳಲೆಂದು ಅಲ್ಲೇ ಕುಳಿತುಕೊಂಡು ಸೂರ್ಯಾಸ್ತವನ್ನು ಮೌನವಾಗಿ ನೋಡುತ್ತಿದ್ದೆವು. ಧ್ವನಿಗಳೀಗ ಹೆಚ್ಚು ಜೋರಾಗಿ ಕೇಳಿಸತೊಡಗಿದವು, ಯಾರೋ ನನ್ನ ಹೆಸರು ಹೇಳುತ್ತಿದ್ದ ಹಾಗೆ ಕೇಳಿಸಿತು. ನಾನು ಆಲಿಸಿದೆ, ಮಾತನಾಡಿದ ಪ್ರತಿ ಶಬ್ದವನ್ನೂ ಕೇಳಿಸಿಕೊಳ್ಳತೊಡಗಿದೆ. ನನಗೀಗ ಆ ಧ್ವನಿಗಳು ಯಾರವೆಂಬುದು ಸ್ಪಷ್ಟವಾಯಿತು; ಅದು ಇಟ್ಯಾಲಿಯನ್ ಮಾರ್ಕ್ವಿಸ್ ಮತ್ತು ನನಗೂ ಗೊತ್ತಿದ್ದ ಅವರ ಫ್ರೆಂಚ್ ಸ್ನೇಹಿತರದು. ಅವರು ನನ್ನ ಹಾಗೂ ಲೇಡಿ ಎಸ್ರ ಬಗ್ಗೆ ಮಾತಾಡಿಕೊಳ್ಳುತ್ತಿದ್ದರು. ಆ ಫ್ರೆಂಚ್ಮನ್ ಅಂತೂ ನಮ್ಮಿಬ್ಬರನ್ನೂ ಪ್ರತಿಸ್ಪರ್ಧಿ ಚೆಲುವೆಯರೆಂದು ಕರೆಯುತ್ತಿದ್ದರು. ಅವರೇನೂ ಮನನೋಯುವಂಥ ಮಾತಾಡಿರಲಿಲ್ಲ,

ಆದರೆ ಅವರ ಮಾತು ನನ್ನ ಎದೆಬಡಿತವನ್ನು ತೀವ್ರಗೊಳಿಸಿತು. ನಮ್ಮಿಬ್ಬರಲ್ಲಿನ ಒಳ್ಳೆಯ ಅಂಶಗಳನ್ನೆಲ್ಲ ಆತ ಪಟ್ಟಿಮಾಡುತ್ತಿದ್ದರು. ನಾನಾಗಲೇ ಒಂದು ಮಗುವಿನ ತಾಯಿಯಾಗಿದ್ದೆ, ಆದರೆ ಲೇಡಿ ಎಸ್ ಅವರಿಗಿನ್ನೂ ಹತ್ತೊಂಬತ್ತರ ಹರೆಯ; ಕೂದಲ ವಿಷಯದಲ್ಲಿ ನಾನು ಉತ್ತಮವಾದರೂ ನನ್ನ ಪ್ರತಿಸ್ಪರ್ಧಿಯ ಆಕಾರ ಹೆಚ್ಚು ಚೆನ್ನಾದುದಂತೆ! "ಅಲ್ಲದೆ, ಲೇಡಿ ಎಸ್ ನಿಜವಾಗಿಯೂ ಭವ್ಯ ಕನ್ಯೆ, ಇನ್ನೊಬ್ಬಾಕೆ ಮಾತ್ರ ಅಂತ ಯಾವ ವಿಶಿಷ್ಟತೆಯನ್ನೂ ಪಡೆದಿಲ್ಲ, ಈಚೀಚೆಗೆ ಇಲ್ಲಿಗೆ ಬರುತ್ತಿರುವ ಹೆಚ್ಚು ಮಂದಿ ಮಹಿಳೆಯರಲ್ಲಿನ ಯಾವುದೋ ಕಾಲದ ರಷ್ಯನ್ ರಾಜಕುಮಾರಿಯ ಒಂದೆರಡು ಅಂಶಗಳನ್ನು ಬಿಟ್ಟು" ಅಂದರು. ಜೊತೆಗೆ, ಲೇಡಿ ಎಸ್ ಅವರ ಜೊತೆಯಲ್ಲಿ ಸ್ಪರ್ಧಿಸದೆ ನಾನು ಜಾಣತನವನ್ನು ತೋರಿಸಿದೆ ಅಂತ ತಮ್ಮ ಮಾತಿನ ಕೊನೆಯಲ್ಲಿ ಜೋಡಿಸಿದರು. ಹೀಗಾಗಿ ಬೇಡನ್‌ಗೆ ಸಂಬಂಧಿಸಿದಂತೆ ನಾನು ಸಂಪೂರ್ಣವಾಗಿ ಭೂಗತಗೊಂಡಿದ್ದೆ.

"ಆಕೆ ಬಗ್ಗೆ ಅಯ್ಯೋ ಪಾಪ ಅನ್ನಿಸತ್ತೆ; ನಿಮ್ಮ ಜೊತೆ ಸೇರಿ ಒಂದಷ್ಟು ಸಮಾಧಾನ ಪಡೀದೇ ಇದ್ರಂತೂ ಮುಗಿದುಹೋಯ್ತು" ಎಂದರು ಜೋರಾಗಿ ನಗುತ್ತ.

"ಅವರೇನಾದ್ರೂ ದೂರ ಹೋದರೆ ನಾನೂ ಹಿಂದೇನೇ ಹೋಗ್ತೀನಿ" ಎಂಬ ಮಾತುಗಳು ಇಟ್ಯಾಲಿಯನ್ ಉಚ್ಚಾರದೊಂದಿಗೆ ನನ್ನ ಕಿವಿಯನ್ನು ಚುಚ್ಚಿದವು.

"ಭಲೇ ಆಸಾಮಿ! ಅವರಲ್ಲಿ ಇನ್ನೂ ಒಂದಷ್ಟು ಮೋಹ ಉಳಿದುಕೊಂಡು ಬಂದಿದೆಯಲ್ಲ!" ಎಂದು ಫ್ರೆಂಚ್ಮನ್ ನಕ್ಕರು.

"ಮೋಹ!" ಎಂದಿತು ಇನ್ನೊಂದು ದನಿ, ಅಚ್ಚರಿಯಿಂದ. ಒಂದು ಕ್ಷಣ ಮೌನದ ನಂತರ "ಅದು ಅನಿವಾರ್ಯವೇ ಆಗಿದೆ ನಂಗೆ; ಅದಿಲ್ಲದೆ ನಾನು ಬದುಕಿರಲಾರೆ. ಬದುಕನ್ನು ಮೋಹಪರವಶವಾಗಿ ಮಾಡಿಕೊಳ್ಳೋದು ದೊಡ್ಡ ಸಾಧನೆಯೇ. ಈ ಮೋಹಪರವಶತೆ ಯಾವತ್ತೂ ಮಧ್ಯದಲ್ಲಿ ಮುಗಿಯೋದಲ್ಲವಾದ್ದರಿಂದ, ಈ ಸಂಬಂಧವನ್ನು ಮಾತ್ರ ನಾನು ಕೊನೇವರೆಗೂ ಮುಂದುವರೆಸಿಕೊಂಡು ಬರ್ತೀನಿ."

"ಒಳ್ಳೇ ಛಾನ್ಸ್, ಒಳ್ಳೆದಾಗಲಿ!" ಎಂದರು ಫ್ರೆಂಚ್ಮನ್.

ಅವರೀಗ ಒಂದು ಮೂಲೆಯಲ್ಲಿ ತಿರುಗಿಕೊಂಡರು ಅಂತ ಕಾಣತ್ತೆ, ಧ್ವನಿಗಳು ಉಡುಗಿದವು. ಆಮೇಲೆ ಅವರಿಬ್ಬರೂ ಮೆಟ್ಟಿಲುಗಳನ್ನಿಳಿದು ಬರುತ್ತಿರುವ ಸಪ್ಪಳ ಕೇಳಿಸಿತು. ಕೆಲವು ನಿಮಿಷಗಳ ತರುವಾಯ ಪಕ್ಕದ ಬಾಗಿಲೊಂದರ ಕಡೆಯಿಂದ ನಮ್ಮ ಹತ್ತಿರವೇ ಬಂದರು. ನಮ್ಮನ್ನಿಲ್ಲಿ ನೋಡಿದ್ದರಿಂದ ಇಬ್ಬರಿಗೂ ತುಂಬ ಆಶ್ಚರ್ಯವಾಗಿತ್ತು.

ಮಾರ್ಕ್ವಿಸ್ ನನ್ನ ಬಳಿ ಬಂದಾಗ ನಾನು ನಾಚಿದೆ, ಕೋಟೆಯನ್ನು ಬಿಟ್ಟು ಬಂದಮೇಲೆ ತಮ್ಮ ತೋಳನ್ನು ನನ್ನ ಕಡೆ ನೀಡಿದಾಗಂತೂ ನನಗೆ ಭಯವೇ ಆಯಿತು. ಆದರೆ ಅದನ್ನು ತಿರಸ್ಕರಿಸಲು ಸಾಧ್ಯವಾಗಲಿಲ್ಲ, ಇಬ್ಬರೂ ಕ್ಯಾರೇಜ್ ಕಡೆ ನಡೆದೆವು, ನಮ್ಮ ಹಿಂದೆ ಮೇಡಂ ಎಂ ಹಾಗೂ ಅವರ ಗೆಳೆಯ ಬರ್ತಿದ್ದರು. ನನ್ನ ಬಗ್ಗೆ ಫ್ರೆಂಚ್ಮನ್

ಹೇಳಿದ್ದನ್ನು ಕೇಳಿ ನನಗೆ ನಾಚಿಕೆಯಾಗಿತ್ತು. ಆದರೆ ಅವರು ಮಾತುಗಳಲ್ಲಿ ವ್ಯಕ್ತಪಡಿಸಿದ್ದ ಹಾಗೇ ನನ್ನ ಮನಸ್ಸಿನ ಭಾವನೆಯೂ ಒಳಗೊಳಗೇ ಇತ್ತು. ಆದರೆ ಇಟ್ಯಾಲಿಯನ್ರ ನೇರ ನುಡಿಗಳು ನನ್ನಲ್ಲಿ ಅಚ್ಚರಿ ಮೂಡಿಸಿತ್ತು, ತಮ್ಮ ಒರಟುತನದಿಂದಾಗಿ ಕಸಿವಿಸಿಯಾಗಿತ್ತು. ಅವರ ಮಾತನ್ನು ನಾನು ಅವರಿಗೆ ಗೊತ್ತಿಲ್ಲದಂತೆ ಕೇಳಿಸಿಕೊಂಡಿದ್ದರೂ ಆತನಿಗೆ ನನ್ನ ಬಗ್ಗೆ ಯಾವ ಭಯವೂ ಇಲ್ಲವಲ್ಲ ಅನ್ನೋ ಭಾವನೆಯಿಂದ ನನಗೆ ಘಾಸಿಯಾಯಿತು. ಆತ ನನಗೆ ಹತ್ತಿರ ಇರೋದೇ ನನಗೆ ಅಸಹನೀಯವಾಗಿತ್ತು; ನಾನು ಇನ್ನೊಂದು ಜೋಡಿಯನ್ನು ಮೀರಿ ಮುಂದೆ ಸಾಗಿದೆ. ಅವರ ಕಡೆ ನೋಡಲೂ ಇಲ್ಲ, ಅವರ ತೋಳನ್ನು ಹಿಡಿದುಕೊಳ್ಳೋ ಅವರ ಆಹ್ವಾನಕ್ಕೆ ಓಗೊಡಲೂ ಇಲ್ಲ. ಸುತ್ತಲ ಪ್ರಕೃತಿಯ ಚೆಲುವಿನ ಬಗ್ಗೆ ಮಾತಾಡಿದರು, ಅನಿರೀಕ್ಷಿತವಾಗಿ ನಮ್ಮನ್ನು ಭೇಟಿಯಾದದ್ದರ ಬಗ್ಗೆ ಸಂತೋಷ ವ್ಯಕ್ತಪಡಿಸಿದರು, ಹೀಗೇ ಮಾತು. ಆದರೆ ನಾನು ಅದಕ್ಕೆಲ್ಲ ಕಿವಿಗೊಡಲೇ ಇಲ್ಲ. ನನ್ನ ಆಲೋಚನೆಯನ್ನೆಲ್ಲ ನಮ್ಮ ಯಜಮಾನರು ಹಾಗೂ ನನ್ನ ಮಗು, ನನ್ನ ಹಳ್ಳಿಯೇ ಆಕ್ರಮಿಸಿದ್ದವು. ನನಗೆ ಅವಮಾನ ಅನ್ನಿಸಿತು, ಮನಸ್ಸು ನೊಂದಿತು, ಕಾತರಗೊಂಡಿತು. ಹೋಟಲಿನ ನನ್ನ ಕೋಣೆಯ ಏಕಾಂತಕ್ಕೆ ಮರಳಲು ನನ್ನ ಮನಸ್ಸು ತವಕಿಸಿತು; ಹೋಗಿ ನನ್ನ ಹೃದಯದಲ್ಲಿ ಏರುತ್ತಿರುವ ಭಾವನೆಗಳ ಬಿರುಗಾಳಿಯ ಬಗ್ಗೆ ಸಾವಧಾನವಾಗಿ ಯೋಚಿಸಲು ಆತುರಪಡ್ತಿತ್ತು. ಆದರೆ ಮೇಡಂ ಎಂ ಮಾತ್ರ ಆರಾಮವಾಗಿ ನಡೆಯುತ್ತ ಬಂದರು: ಕ್ಯಾರೇಜ್ ತಲುಪಲು ಇನ್ನೂ ದೂರ ನಡೆಯಬೇಕಾಗಿತ್ತು. ನನ್ನ ಜೊತೆಯಲ್ಲಿದ್ದ ವ್ಯಕ್ತಿ ಮಾತ್ರ ನನ್ನನ್ನ ಉಳಿಸಿಕೊಳ್ಳಬೇಕೋನ್ನ ತವಕದಲ್ಲಿರೋ ಹಾಗೆ ಬೇಕೂಂತ ನಿಧಾನಿಸಿದರು. “ಸಾಧ್ಯವೇ ಇಲ್ಲ!” ಎಂದು ನಿರ್ಧರಿಸಿದೆ, ಉದ್ದೇಶಪೂರ್ವಕವಾಗಿ ನನ್ನ ಹೆಜ್ಜೆಗಳನ್ನು ತ್ವರಿತಗೊಳಿಸಿದೆ. ಆದರೆ ಆತ ನನ್ನನ್ನ ಹಿಂದಕ್ಕೆ ಉಳಿಸಿಕೊಳ್ಳೋದು ನಿಶ್ಚಯವೇ ಆಯಿತು, ಯಾಕಂದರೆ ಆತ ನನ್ನ ತೋಳನ್ನು ಅದುಮುತ್ತಿದ್ದರು. ಮೇಡಂ ಮೂಲೆಯೊಂದರಲ್ಲಿ ತಿರುಗಿಕೊಂಡಾಗ ಮತ್ತೆ ನಾವಿಬ್ಬರೇ ಇರುವಂತಾಯಿತು. ನನಗೆ ಭಯವಾಯಿತು.

“ಕ್ಷಮಿಸಿ” ಎನ್ನುತ್ತ ನನ್ನ ತೋಳನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದೆ, ಆದರೆ ನನ್ನ ಸ್ಲೀವ್ನ ಗುಂಡಿಯೊಂದು ಅವರ ಕೋಟ್‌ನ ಗುಂಡಿಯೊಂದಕ್ಕೆ ಸಿಕ್ಕಿಕೊಂಡಿತ್ತು. ನನ್ನ ಕಡೆ ಬಾಗಿ ಅದನ್ನು ಬಿಡಿಸಲು ಅವರು ಯತ್ನಿಸಿದರು; ಆಗ ಗ್ಲವ್ ಇಲ್ಲದ ಅವರ ಬರಿಗೈ ನನ್ನ ತೋಳನ್ನು ಮುಟ್ಟಿತು. ಆಗ ನನ್ನಲ್ಲಿ ಉಂಟಾದ ಭಾವನೆಯೆಂದರೆ ಅರ್ಧ ಗಾಬರಿ ಮತ್ತರ್ಧ ಸಂತೋಷ, ಇದರಿಂದಾಗಿ ನನ್ನ ಬೆನ್ನುದ್ದಕ್ಕೂ ಒಂದು ತಣ್ಣನೆಯ ಚಳುಕು ಹರಿದಂತಾಯಿತು. ಅವರತ್ತ ತಿರುಗಿ ನೋಡಿದೆ, ಈ ತಣ್ಣನೆಯ ಪ್ರತಿಕ್ರಿಯೆ ಅವರಲ್ಲಿ ನನಗಿದ್ದ ತಿರಸ್ಕಾರವನ್ನೆಲ್ಲ ಸೂಚಿಸುವುದೆಂದು ಭಾವಿಸಿದೆ; ಆದರೆ ನನ್ನ ಕಣ್ಣಲ್ಲಿ ತುಂಬಿದ್ದುದು ಭಯ ಮತ್ತು ಉತ್ಕಂಠತೆಗಳು. ಅವರ ಆರ್ದ್ರವಾದ ಹೊಳಪು ಕಣ್ಣುಗಳು ನನ್ನ ಮುಖದ ಮೇಲೇ ನೇರವಾಗಿದ್ದು, ನನ್ನ ಕಡೆ, ನನ್ನ ಕೊರಳು ಹಾಗೂ ಎದೆಗಳ ಕಡೆ, ವಿಚಿತ್ರವಾದ ರೀತಿಯಲ್ಲಿ ನಾಟಿದ್ದವು. ಅವರೆರಡೂ ಕೈಗಳು ನನ್ನ ಮುಂಗೈಗಳನ್ನು

ನೇವರಿಸುತ್ತಿದ್ದುವು; ಬಿರಿದ ಅವರ ತುಟಿಗಳು ನನ್ನನ್ನು ಪ್ರೀತಿಸುವುದಾಗಿ ಹೇಳುವಂತಿದ್ದುವು, ನಾನೇ ಅವರ ಜೀವನ ಸರ್ವಸ್ವವೆಂದು ಸಾರುವಂತಿದ್ದುವು; ಅವರ ತುಟಿಗಳು ನನ್ನವುಗಳ ಹತ್ತಿರ ಬರುತ್ತಿದ್ದುವು, ಅವರ ಕೈಗಳು ನನ್ನ ಕೈಗಳನ್ನು ಹೆಚ್ಚೆಚ್ಚು ಬಲಿಷ್ಠವಾಗಿ ಹಿಡಿದು ನನ್ನಲ್ಲಿ ಬೆಂಕಿಯನ್ನುಂಟುಮಾಡಿದ್ದುವು. ನನ್ನ ನರನಾಡಿಗಳಲ್ಲಿ ಜ್ವರ ಹರಿದಾಡಿದಂತಾಯಿತು; ನನ್ನ ಕಣ್ಣುಗಳು ಮಂಜಾದುವು, ನನ್ನಲ್ಲಿ ನಡುಕ ಆರಂಭವಾಯಿತು, ಅವರನ್ನು ತಡೆಯಬೇಕೆಂದು ಕೂಗಬೇಕೆಂದಿದ್ದ ಮಾತುಗಳು ನನ್ನ ಕಂಠದಲ್ಲೇ ಸಿಕ್ಕಿಹಾಕಿಕೊಂಡುವು. ಇದ್ದಕ್ಕಿದ್ದಂತೆ ನನ್ನ ಕೆನ್ನೆಯ ಮೇಲೆ ಮುತ್ತೊಂದರ ಅನುಭವವಾಯಿತು. ಮೈಯೆಲ್ಲ ನಡುಗುತ್ತ ತಣ್ಣಗಾಗಿ ಅವರನ್ನೇ ನೋಡುತ್ತ ನಿಂತುಬಿಟ್ಟೆ. ಮಾತಾಡಲಾಗಲೀ, ಚಲಿಸಲಾಗಲೀ ಸಾಮರ್ಥ್ಯವಿಲ್ಲದೆ, ಭಯಗ್ರಸ್ತಳಾಗಿ, ಯಾವುದೋ ನಿರೀಕ್ಷೆಯಲ್ಲಿ - ಬಯಕೆ ಎನ್ನಬಹುದೇನೋ - ಅಂತಹುದೊಂದರಲ್ಲಿ ನಾನು ಸಿಲುಕಿದ್ದೆ. ಅವೆಲ್ಲ ಒಂದೇ ಕ್ಷಣದಲ್ಲಿ ಮುಗಿದುಹೋಯಿತು, ಆದರೆ ಆ ಕ್ಷಣ ಮೈಯನ್ನೆಲ್ಲ ಅಲುಗಾಡಿಸುವಂಥದು! ಕೊಂಚ ಹೊತ್ತಿನಲ್ಲೇ ಅವರು ಯಥಾಪ್ರಕಾರವಾದುದನ್ನು ಕಂಡೆ: ಸ್ಟ್ರಾ ಹ್ಯಾಟ್‌ನ ಕೆಳಗಿದ್ದ ಕಿರಿದಾದ ನೇರ ಕತ್ತು (ವಿಚಿತ್ರವೆಂದರೆ ಅದು ಥೇಟ್ ನಮ್ಮ ಯಜಮಾನರದಂತೆಯೇ ಇತ್ತು!); ಚೆಲುವಾದ ನೇರ ಮೂಗು ಮತ್ತು ಅಗಲವಾದ ಹೊಳ್ಳೆಗಳು; ಮಿರಮಿರ ಮಿಂಚುವ ನೀಳ ಮೀಸೆ ಮತ್ತು ಕಿರುಗಡ್ಡ; ನವಿರಾಗಿ ಷೇವ್ ಆಗಿದ್ದ ಕೆನ್ನೆಗಳು ಹಾಗೂ ಬಿಸಿಲಿಂದ ಕಪ್ಪಾದ ಕತ್ತು. ಅವರ ಬಗ್ಗೆ ದ್ವೇಷ ಉಕ್ಕಿತು, ಅವರ ಬಗ್ಗೆ ಭಯ ಹುಟ್ಟಿತು. ಅವರ ಬಗ್ಗೆ ಹೇವರಿಕೆಯುಂಟಾಯಿತು, ಯಾರೋ ಎನಿಸಿತು. ಆದರೆ ಈ ವಿದ್ವೇಷದ ವ್ಯಕ್ತಿಯ ಉತ್ಕಂಠತೆ ಮತ್ತು ಮೋಹಾವೇಶಗಳು ನನ್ನ ಹೃದಯದಲ್ಲಿಯೂ ತೀವ್ರವಾದ ಪ್ರತಿಧ್ವನಿಯನ್ನುಕ್ಕಿಸಿತು; ಆ ಒರಟಾದ ಸುಂದರವಾದ ತುಟಿಗಳಿಂದ ಸುರಿವ ಮುತ್ತುಗಳಿಗೆ ನನ್ನನ್ನು ಒಡ್ಡಿಕೊಳ್ಳಬೇಕೆಂಬ, ಕೋಮಲ ನರಗಳು ಮತ್ತು ಉಂಗುರಗಳಿಂದ ಭೂಷಿತವಾದ ಅವರ ಆ ಗೌರ ಕೈಗಳ ಬಲವಾದ ಹಿಡಿತದ ಒತ್ತಡಕ್ಕೆ ಮಣಿಯಬೇಕೆಂಬ ಪ್ರಬಲವಾದ ಆಕಾಂಕ್ಷೆ ನನ್ನಲ್ಲುಕ್ಕಿತು. ನನ್ನ ಮುಂದೆ ಇದ್ದಕ್ಕಿದ್ದಂತೆ ತೆರೆದುಕೊಂಡ ಅನೈತಿಕ ಸಂತೋಷಗಳ ಕಂದರದಲ್ಲಿ ನೇರವಾಗಿ ಧುಮುಕಬೇಕೆಂಬ ಆಮಿಷ ನನ್ನಲ್ಲುಂಟಾಯಿತು.

"ನಾನೀಗಾಗಲೇ ಅಸುಖದಲ್ಲಿದ್ದೇನೆ; ಮತ್ತಷ್ಟು ಅಸುಖಗಳ ಬಿರುಗಾಳಿ ನನ್ನ ತಲೆಯಲ್ಲಿ ಬೀಸಿಬಿಡಲಿ" ಅಂದುಕೊಂಡೆ. ಅವರು ತಮ್ಮೊಂದು ತೋಳಿನಿಂದ ನನ್ನನ್ನು ಬಳಸಿ ನನ್ನ ಮುಖದತ್ತ ಬಾಗಿದರು. "ಒಳ್ಳೆಯದೇ ಆಯಿತು! ಆಳ ಆಳವಾಗಿ ಪಾಪವು ನನ್ನನ್ನು ಸಂಪೂರ್ಣವಾಗಿ ಆವರಿಸಿಬಿಡಲಿ" ಎನ್ನಿಸಿತು.

"ನೀನು ನನ್ನವಳು" ಎಂದವರು ಪಿಸುಗುಟ್ಟಿದರು. ಅವರ ಧ್ವನಿ ನನ್ನ ಗಂಡನದಿದ್ದಂತೆಯೇ ಎನಿಸಿತು. ತಕ್ಷಣವೇ ನನಗೆ ನಮ್ಮ ಯಜಮಾನರು ಮತ್ತು ಮಗುವಿನ ನೆನಪಾಯಿತು, ಒಂದೊಮ್ಮೆ ಅಮೂಲ್ಯವೆನಿಸಿದ್ದ ಈ ಜೀವಗಳು ಈಗ ನನ್ನ ಬದುಕಿನಿಂದ ದೂರವಾಗಿಬಿಟ್ಟಿದ್ದುವು. ಆ ಹೊತ್ತಿನಲ್ಲಿ ನನಗೆ ಮೇಡಂ ಎಂ ರ ಧ್ವನಿ

ಕೇಳಿಸಿತು. ಮೂಲೆಯಾಚೆಯಿಂದ ಅವರು ನನ್ನನ್ನು ಕೂಗುತ್ತಿದ್ದರು. ಆಗ ನನಗೆ ಎಚ್ಚರವಾದಂತಾಯಿತು, ಅವರ ಕಡೆಗೆ ನೋಡದೆಯೇ ಅವರ ಕೈಗಳನ್ನು ನನ್ನಿಂದ ಕಿತ್ತೆಸೆದೆ, ಮೇಡಂ ಎಂ ಕಡೆಗೆ ಓಡುವಂತೆ ಹೊರಟೆ. ಕ್ಯಾರೇಜ್‌ನಲ್ಲಿ ನಾನವರ ಜೊತೆ ಕುಳಿತ ಮೇಲೆಯೇ ನಾನು ಈತನ ಕಡೆ ಮತ್ತೆ ನೋಡಿದ್ದು. ಆನಂತರ ಅವರು ತಮ್ಮ ಹ್ಯಾಟ್ ಮೇಲೆತ್ತಿ ಮುಗುಳ್ನಗೆಯೊಂದಿಗೆ ಉಪಚಾರದ ಮಾತುಗಳನ್ನಾಡಿದರು. ಆ ಕ್ಷಣ ನನ್ನಲ್ಲಿ ಅವರ ಬಗ್ಗೆ ಉದಿಸಿದ್ದ ಅವ್ಯಕ್ತ ಹೇಸಿಕೆಯ ಬಗ್ಗೆ ಅವರಿಗೆ ಅರಿವಿರಲಿಲ್ಲ.

ನನಗೆ ನನ್ನ ಬದುಕು ದಟ್ಟ ದರಿದ್ರವಾದುದೆನಿಸಿತು, ನನ್ನ ಭವಿಷ್ಯ ಮಂಕಾಯಿತು, ಗತವೂ ಕರಾಳವಾಯಿತು! ಮೇಡಂ ಎಂ ಮಾತಾಡಿದಾಗ, ಅವರ ಮಾತುಗಳು ನನಗೆ ಅರ್ಥವಿಹೀನವೆನಿಸಿದುವು. ಅವರು ನಮ್ಮ ಕರುಣೆಯ ಬಗ್ಗೆ ಮಾತ್ರ ಮಾತಾಡಿದರು, ನನ್ನ ಬಗ್ಗೆ ಅವರಲ್ಲುಂಟಾದ ತಿರಸ್ಕಾರಭಾವನೆಯನ್ನು ಮರೆಮಾಚಲಷ್ಟೇ ಆಡಿದುದೆಂಬ ಭಾವನೆ ಬಂತು. ಅವರ ಪ್ರತಿ ಮಾತು, ಪ್ರತಿ ನೋಟದಲ್ಲೂ ನನ್ನ ಬಗೆಗಿನ ತಿರಸ್ಕಾರ ಮತ್ತು ಮನನೋಯಿಸುವ ಕರುಣೆಯನ್ನು ಕಾಣುವಂತಾಯಿತು. ಆ ಮುತ್ತಿನ ಅವಮಾನ ನನ್ನ ಕೆನ್ನೆಗಳಲ್ಲಿ ಉರಿ ಹೊತ್ತಿಸಿತ್ತು, ನನ್ನಲ್ಲಿ ಮೂಡಿದ ನಮ್ಮ ಯಜಮಾನರ ಮತ್ತು ಮಗುವಿನ ನೆನಪನ್ನು ನಾನು ಸಹಿಸಿಕೊಳ್ಳಲಾರದೇ ಹೋದೆ. ಕೋಣೆಯಲ್ಲಿ ನಾನೊಬ್ಬಳೆ ಇದ್ದಾಗ, ನನ್ನ ಪರಿಸ್ಥಿತಿಯ ಬಗ್ಗೆ ಯೋಚಿಸಲು ಪ್ರಯತ್ನಿಸಿದೆ; ಆದರೆ ಒಂಟಿಯಾಗಿರಲು ನನಗೆ ಭಯವಾಗುತ್ತಿತ್ತು. ನನಗೆಂದು ತಂದಿದ್ದ ಟೀ ಕುಡಿಯದೆ, ಏನು ಮಾಡಬೇಕೆಂಬುದರ ಬಗ್ಗೆ ನಿಶ್ಚಿತತೆಯಿಲ್ಲದೆ, ಹೈಡಲ್ಬರ್ಗ್‌ನಲ್ಲಿದ್ದ ನಮ್ಮ ಯಜಮಾನರ ಬಳಿಗೆ ಹೋಗಲು ಸಂಜೆಯ ಟ್ರೈನ್ ಹಿಡಿಯಲು ದೆವ್ವ ಬಡಿದಂತೆ ತರಾತುರಿಯಿಂದ ಸಿದ್ಧಳಾದೆ.

ಒಂದು ಖಾಲಿ ಕ್ಯಾರೇಜ್‌ನಲ್ಲಿ ನನಗೂ ನನ್ನ ಸೇವಕಿಗೂ ಸೀಟುಗಳು ಸಿಕ್ಕವು. ಟ್ರೈನ್ ಹೊರಟಾಗ ಕಿಟಕಿಯಿಂದ ಬೀಸಿದ ತಂಪಾದ ತಾಜಾ ಗಾಳಿಯಿಂದ ನನ್ನ ಮನಸ್ಸು ಸ್ವಲ್ಪ ತಹಬಂದಿಗೆ ಬಂತು, ನನ್ನ ಗತಜೀವನ ಹಾಗೂ ಮುಂದಿನದನ್ನು ಕುರಿತು ಆಲೋಚಿಸತೊಡಗಿದೆ. ನಮ್ಮ ಮೊದಲ ಭೇಟಿಯಿಂದ ಹಿಡಿದು ಮದುವೆಯಾಗುವ ತನಕದ ನನ್ನ ಬದುಕು ಆನಂತರ ಪೀಟರ್ಸ್‌ಬರ್ಗ್‌ಗೆ ಬಂದದ್ದು ಈ ಎಲ್ಲ ಘಟನಾವಳಿಗಳು ನನಗೀಗ ಹೊಸ ಬೆಳಕಿನಲ್ಲಿ ಕಾಣಿಸತೊಡಗಿದವು, ನನ್ನ ಆತ್ಮಸಾಕ್ಷಿಯನ್ನು ಹೀಯಾಳಿಸುವಂತೆ ಕಂಡವು. ನಿಕೋಲ್ಸ್ಕೊಯೆಯಲ್ಲಿ ನಮ್ಮ ಬದುಕಿನ ಆರಂಭಮಾಡಿ ಮುಂದಿನದನ್ನು ಯೋಜಿಸಿದ ಬಗೆ ನನ್ನ ಮನಸ್ಸಲ್ಲಿ ಮೊತ್ತಮೊದಲ ಬಾರಿಗೆ ಸ್ಪಷ್ಟವಾಗಿ ಮರುಕಳಿಸಿತು; ಆಗಿನಿಂದ ನನ್ನ ಗಂಡ ಎಂತಹ ಸಂತಸವನ್ನು ಅನುಭವಿಸಿದ್ದರೆಂಬುದೂ ಮೊತ್ತ ಮೊದಲ ಬಾರಿಗೆ ನನಗೆ ನೆನಪಿಗೆ ಬಂತು. ನಾನು ಅವರ ಬಗ್ಗೆ ಕೆಟ್ಟುದಾಗಿ ನಡೆದುಕೊಂಡಿದ್ದಂತೆ ಅನ್ನಿಸಿತು. "ಆದರೆ ಅವರೇಕೆ ನನ್ನನ್ನು ತಡೆಯಲಿಲ್ಲ? ಅವರೇಕೆ ತೋರಿಕೆ ಮಾಡಿದರು? ಅವರೇಕೆ ವಿವರಣೆಗಳನ್ನು ತಳ್ಳಿಹಾಕುತ್ತಿದ್ದರು? ನನ್ನನ್ನೇಕೆ ಮನನೋಯಿಸಿದರು? ತಮ್ಮ ಪ್ರೀತಿಯ ಬಲದಿಂದ

ನನ್ನನ್ನೇಕೆ ಅವರು ತಿದ್ದಲಿಲ್ಲ? ಅಥವಾ ಅವರಿಗೆ ನನ್ನ ಬಗ್ಗೆ ಪ್ರೀತಿಯೇ ಇರಲಿಲ್ಲವೋ?" ಎಂಬಂತಹ ಪ್ರಶ್ನೆಗಳು ನನ್ನ ಮನದಾಳದಲ್ಲಿ ಸುಳಿದವು. ಅವರನ್ನು ಅನ್ನಬೇಕೆ ಬೇಡವೇ ಎಂದು ಗೊತ್ತಾಗದಿದ್ದರೂ, ಆ ಅಪರಿಚಿತನ ಮುತ್ತು ನನ್ನ ಕೆನ್ನೆಯಲ್ಲಿ ಇನ್ನೂ ಉಳಿದಿದ್ದಂತೆನಿಸಿತು. ನಾವು ಹೈಡಲ್‌ಬರ್ಗ್‌ಗೆ ಹತ್ತಿರ ಬರುತ್ತಿದ್ದಂತೆ ನಮ್ಮ ಯಜಮಾನರ ಚಿತ್ರ ಸ್ಪಷ್ಟವಾಗತೊಡಗಿತು, ಅವರಿಗೆ ಮುಖ ತೋರಿಸಲು ಅಳುಕು ಹೆಚ್ಚಾಯಿತು. "ಅವರಿಗೆಲ್ಲ ಹೇಳಿಬಿಡಬೇಕು, ಪಶ್ಚಾತ್ತಾಪದ ಕಣ್ಣೀರಿನಿಂದ ಎಲ್ಲವನ್ನೂ ತೊಡೆದುಹಾಕಿಬಿಡಬೇಕು; ಅವರು ಖಂಡಿತ ನನ್ನನ್ನು ಕ್ಷಮಿಸುತ್ತಾರೆ" ಎಂಬ ಧೈರ್ಯ ಬಂತು. ಆದರೆ 'ಎಲ್ಲ' ಎಂಬುದರ ಅರ್ಥವೇನು ಎಂಬುದು ಇನ್ನೂ ಖಚಿತವಾಗಲಿಲ್ಲ; ಜೊತೆಗೆ ಅವರು ನನ್ನನ್ನು ಕ್ಷಮಿಸುತ್ತಾರೆಂಬ ಭರವಸೆಯೂ ನನ್ನಲ್ಲಿ ಉಂಟಾಗಲಿಲ್ಲ.

ನಮ್ಮ ಯಜಮಾನರ ಕೋಣೆಯನ್ನು ಹೊಕ್ಕ ಕ್ಷಣ ನನಗೆ ಎದುರಾದದ್ದು ಅವರ ಪ್ರಶಾಂತವಾದ ಆದರೆ ಆಶ್ಚರ್ಯಭರಿತ ಮುಖ; ತಕ್ಷಣವೇ ನಾನವರಿಗೆ ಏನೂ ಹೇಳಬೇಕಾಗಿಲ್ಲವೆನಿಸಿತು, ಯಾವುದೇ ಅಪರಾಧ ನಿವೇದನೆ ಬೇಕಿಲ್ಲವೆನಿಸಿತು, ಕ್ಷಮೆ ಕೇಳಬೇಕಾಗಿಲ್ಲವೆನಿಸಿತು. ನನ್ನ ಅವ್ಯಕ್ತ ನೋವು ಪಶ್ಚಾತ್ತಾಪಗಳನ್ನು ಅದುಮಿಕೊಳ್ಳಬೇಕಾಯಿತು.

"ಇದೇನು ಆಲೋಚನೆ ಮಾಡಿದೆ ನೀನು? ನಾಳೆ ನಾನೇ ಬೇಡನ್‌ಗೆ ಬರಬೇಕೂಂತ ಇದ್ದೆ: ಎಂದವರು ಕೇಳಿ ನನ್ನ ಮುಖವನ್ನು ಆಳವಾಗಿ ನೋಡಿ ಗಾಬರಿಗೊಂಡಂತೆ ಕಾಣಿಸಿತು. "ಏನಾಯ್ತು ನಿಂಗೆ? ಏನು ನಡೀತು" ಎಂದು ಪ್ರಶ್ನೆಗಳನ್ನು ಸುರಿಸಿದರು.

"ಏನೂ ಆಗಿಲ್ಲ. ನಾನು ಮತ್ತೆ ಅಲ್ಲಿಗೆ ಹೋಗಲ್ಲ, ಅಷ್ಟೆ. ಊರಿಗೆ ಹೋಗೋಣ, ನಾಳೇನೆ, ನೀವು ಒಪ್ಪೋದಾದ್ರೆ" ಎಂದೆ, ಅಳು ತುಟಿಯವರೆಗೂ ಬಂತು.

ಸ್ವಲ್ಪ ಕಾಲ ಅವರೇನೂ ಹೇಳಲಿಲ್ಲ, ನನ್ನ ಕಡೇನೇ ತದೇಕದಿಂದ ನೋಡುತ್ತಿದ್ದರು. ಆನಂತರ "ಏನಾಯ್ತು, ಹೇಳಲೇ ಬೇಕು ನೀನು" ಎಂದರು.

ನನ್ನಲ್ಲಿ ನಾಚಿಕೆ ಉದಿಸಿ ತಲೆ ಬಾಗಿಸಿದೆ. ಇದ್ದಕ್ಕಿದ್ದಂತೆ ಅವರ ಕಣ್ಣುಗಳಲ್ಲಿ ಕೋಪ ಮತ್ತು ಅಸಂತೋಷಗಳ ಮಿಂಚುಗಳು ತುಳುಕಾಡಿದುವು. ಮುಂದೆ ಏನಾಗಬಹುದೋ ಎಂಬ ಭಯದಿಂದ, ನನಗೇ ಅಚ್ಚರಿ ಉಂಟುಮಾಡುವಂತಹ ತೋರಿಕೆಯ ಮುಖಭಾವದಿಂದ ನಾನು ಹೇಳಿದೆ:

"ಏನೂ ಆಗಲಿಲ್ಲ. ನನಗೆ ಅಲ್ಲಿ ಬೇಸರ ಬಂತು, ದುಃಖವೂ ಉಂಟಾಯಿತು; ನನಗೆ ನಮ್ಮ ಜೀವನದ ಬಗ್ಗೇನೇ ಆಲೋಚನೆಗಳು ಬಂದುವು, ನಿಮ್ಮ ನೆನಪೂ ಬಂತು. ಇದಕ್ಕೆಲ್ಲ ನಿಮ್ಮನ್ನೇ ಬೈಯಬೇಕಾಗಿದೆ. ನಿಮಗೇ ಅಲ್ಲಿ ಸರಿಹೋಗದಿದ್ದ ಮೇಲೆ ನನ್ನನ್ನೇಕೆ ವಿದೇಶಕ್ಕೆ ಕರ್ಕೊಂಡು ಹೋದ್ರಿ ನೀವು? ನನ್ನನ್ನೂ ಬೈದುಕೋಬೇಕು, ನಿಜ. ಈಗ ನಿಕೋಲ್ಸ್ಕೊಯೆಗೆ ಹೋಗಿ ಅಲ್ಲೇ ಇದ್ಬಿಡೋಣ" ಅಂದೆ.

"ಈ ಭಾವುಕತೆಯನ್ನೆಲ್ಲ ಬಿಟ್ಟುಬಿಡು, ಚಿನ್ನ. ನಿಕೋಲ್ಸ್ಕೊಯೆಗೆ ಹೋಗೋದೇನೋ

ಸರಿಯೆ, ಯಾಕಂದ್ರೆ ನನ್ನ ಹತ್ರ ಹಣವೂ ಬರಿದಾಗ್ತಿದೆ. ಆದರೆ ಅಲ್ಲೇ ಇದ್ಬಿಡೋದು ಅಂದ್ರೆ ವಿಪರೀತವಾಯ್ತು. ಅಲ್ಲಿ ನೀನೇ ಉಳಿದುಬಿಡೋಕೆ ಇಷ್ಟಪಡಲ್ಲ ಅಂತ ನನಗೆ ಗೊತ್ತು. ಈಗ ಸ್ವಲ್ಪ ಟೀ ಕುಡಿ, ಮನಸ್ಸಿಗೆ ಹಾಯನ್ನಿಸತ್ತೆ" ಎಂದು ವೇಟರ್ಗಾಗಿ ಕೂಗಿದರು.

ನನ್ನ ಬಗ್ಗೆ ಅವರ ಮನಸ್ಸಲ್ಲಿ ಏನೆಲ್ಲ ಆಲೋಚನೆಗಳು ಬಂದಿರಬಹುದೂಂತ ಆಲೋಚನೆ ಮಾಡಿದೆ; ನನ್ನ ಕಡೆ ಅನುಮಾನ ಅವಮಾನಗಳಿಂದ ನೋಡಿದ ಅವರ ನೋಟ ಎದುರಾದಾಗ ನನ್ನ ಮನಸ್ಸಲ್ಲಿ ಅವರ ಬಗ್ಗೆ ಪುಟಿದೆದ್ದ ಅನಿಸಿಕೆಗಳನ್ನೆಲ್ಲ ನೆನೆಸಿಕೊಂಡು ಖಾಸಿ ಅನ್ನಿಸಿತು. "ಅವರು ಖಂಡಿತ ನನ್ನನರ್ಥಮಾಡ್ಕೊಳ್ಳೋದಿಲ್ಲ, ಮಾಡಿಕೊಳ್ಳಲಾರರು" ಅನ್ನಿಸಿತು. ಮತ್ತೆ ಊರಿಗೆ ಹೋಗಿ ಮಗುವನ್ನು ನೋಡಬೇಕು ಅನ್ನಿಸಿ ರೂಮಿನಿಂದ ಹೊರಬಂದೆ. ನನಗೆ ಏಕಾಂತ ಬೇಕಾಗಿತ್ತು, ಮನಃಪೂರ್ತಿ ಅತ್ತುಬಿಡಬೇಕು ಅನ್ನಿಸಿತ್ತು...

## 4

ಬಹಳ ದಿನಗಳಿಂದ ಒಲೆ ಹೊತ್ತದಿದ್ದ, ಜನ ವಾಸಿಸದಿದ್ದ ನಿಕೋಲ್ಸ್ಕೊಯೆಯಲ್ಲಿನ ಮನೆಗೆ ಮತ್ತೆ ಜೀವಕಳೆ ಬಂತು; ಆದರ ಹಳೆಯದರಲ್ಲಿ ಬಹುಪಾಲು ನೆನಪುಳಿಯದಂತೆ ಮಾಸಿಹೋಗಿತ್ತು. ತಾತ್ಯಾನಾ ಸೆಮೆನೋವ್ನಾ ಬದುಕಿರಲಿಲ್ಲ, ಈಗ ನಾವಿಬ್ಬರೇ ಮನೆಯ ತುಂಬ. ಆದರೆ ನಮ್ಮಿಬ್ಬರಿಗೂ ಅಂತಹ ನಿಕಟತೆಯೇನೂ ಬೇಕಾಗದಿದ್ದುದರಿಂದ ಅದು ಇರಿಸುಮುರಿಸಿನದೇ ಆಗಿತ್ತು. ನನಗಂತೂ ಆ ಚಳಿಗಾಲ ತೀರ ಸಂಕಷ್ಟದ್ದು, ಯಾಕಂದರೆ ನನ್ನ ಆರೋಗ್ಯ ಕೆಟ್ಟಿತ್ತು; ನನ್ನ ಎರಡನೆಯ ಮಗು ಹುಟ್ಟಿದ ಮೇಲೆ ಪರಿಸ್ಥಿತಿ ಸ್ವಲ್ಪ ಸುಧಾರಿಸಿತು. ನಮ್ಮ ಯಜಮಾನರ ಹಾಗೂ ನನ್ನ ನಡುವಣ ಬಾಂಧವ್ಯದ ರೀತಿ ಪೀಟರ್ಸ್‌ಬರ್ಗ್‌ನಲ್ಲಿದ್ದಾಗಿನಂತಹ ಹಳೆಯ ರೀತಿಯಲ್ಲೇ ಮುಂದುವರಿದಿತ್ತು; ಒಬ್ಬೊಬ್ಬರಲ್ಲಿನ ಆತ್ಮೀಯತೆಯು ತಣ್ಣನೆಯ ಸ್ವರೂಪದ್ದಾಗಿತ್ತು. ಆದರೆ ಹಳ್ಳಿಯ ಮನೆಯ ಪ್ರತಿ ಕೋಣೆ ಗೋಡೆ ಸೋಫಾ ಕೂಡ ನಾವು ಹಿಂದಿದ್ದ ರೀತಿಯನ್ನು ನೆನಪಿಸುತ್ತಿದ್ದುವು, ಆದರೆ ಈಗ ಅವೆಲ್ಲ ಮಾಯವಾಗಿತ್ತು. ನಮ್ಮಿಬ್ಬರನ್ನು ಬೇರ್ಪಡಿಸಿದ್ದುದು ಕ್ಷಮಾರ್ಹವಲ್ಲದ ಅಡ್ಡಿಯಾಗಿದ್ದಂತೆ ಅವರು ನನ್ನನ್ನು ಶಿಕ್ಷಿಸುತ್ತಿದ್ದರೂ ಅದರ ಅರಿವಿಲ್ಲದವರಂತೆ ಇದ್ದರು. ಆದರೆ ಕ್ಷಮೆ ಕೇಳಬೇಕಾದುದೇನೂ ಇರಲಿಲ್ಲ, ತೆರಬೇಕಾದ ಜುಲ್ಮಾನೆಗೆ ಕಾರಣವೇ ಇರಲಿಲ್ಲ; ನನಗೆ ನೀಡುತ್ತಿದ್ದ ಶಿಕ್ಷೆಯ ಪರಿಯೆಂದರೆ, ಹಿಂದಿನಂತೆ ಅವರು ನನ್ನ ಕಡೆ ಪೂರ್ಣವಾಗಿ ತಮ್ಮ ಹೃದಯ ಮತ್ತು ಆಲೋಚನೆಗಳನ್ನು ಕೊಡುತ್ತಿರಲಿಲ್ಲ. ಆದರೆ ಅವುಗಳನ್ನವರು ಬೇರಾವುದರ ಅಥವಾ ಬೇರಾವ ವ್ಯಕ್ತಿಗೆ ಅರ್ಪಿಸಿರಲಿಲ್ಲ; ಅವರಿಗೆ ಈಗ ನೀಡಲು ಹೃದಯವೇ ಇದ್ದಂತಿರಲಿಲ್ಲ. ಹಳೆಯ ನೆನಪುಗಳನ್ನು ಮನಸ್ಸಿನಲ್ಲಿ ತುಂಬಿಕೊಂಡು, ನನಗೆ ಶಿಕ್ಷೆ ಕೊಡಲೆಂದೇ ಅವರು ಈ ರೀತಿ ಸೋಗು ಹಾಕುತ್ತಿದ್ದರೆಂಬ ಭಾವನೆ ನನ್ನಲ್ಲಿ ಕೆಲವೊಮ್ಮೆ ಉಂಟಾಗುತ್ತಿತ್ತು. ನಾನದನ್ನು

ನೆನಪಿಸಲು ಪ್ರಯತ್ನಿಸುತ್ತಿದ್ದೆ; ಆದರೆ ನಾನು ವಿಫಲಳಾಗಿದ್ದೆ. ಮನಬಿಚ್ಚಿ ಮಾತಾಡುವುದನ್ನು ಸದಾ ಅವರು ತಪ್ಪಿಸಿಕೊಳ್ಳುವಂತೆ ತೋರುತ್ತಿತ್ತು, ನನ್ನ ನಿಷ್ಠೆಯ ಬಗ್ಗೆ ಅವರಿಗೆ ಸಂಶಯವಿದ್ದಂತೆ ಕಾಣುತ್ತಿತ್ತು, ಗೋಳುಕರೆಯನ್ನೆಲ್ಲಿ ಎದುರಿಸಬೇಕಾಗುವುದೋ ಎಂಬ ಅಳುಕಿನಲ್ಲಿದ್ದಂತೆ ತೋರುತ್ತಿತ್ತು. ನಾನದನ್ನು ಅವರ ಮುಖದಲ್ಲಿ ಹಾಗೂ ಮಾತುಕತೆಗಳಲ್ಲಿ ಗುರುತಿಸಬಲ್ಲವಳಾಗಿದ್ದೆ. "ಮಾತಾಡುವುದರಿಂದೇನು ಪ್ರಯೋಜನ? ನನಗಾಗಲೇ ಎಲ್ಲ ವಿಷಯ ಗೊತ್ತಾಯಿತು, ನಿನ್ನ ನಾಲಗೆ ತುದಿಯಲ್ಲಿ ಏನಿದೆ ಎಂಬುದೂ ನನಗೆ ಗೊತ್ತು, ಏನಾದ್ರೂ ಒಂದು ಹೇಳ್ತೀಯ ಅಂತಲೂ ಗೊತ್ತು" ಎನ್ನುತ್ತಿದ್ದರು. ಹೃತ್ಪೂರ್ವಕತೆಯಿಲ್ಲದ ಅವರ ಈ ಪರಿಯಿಂದ ನನಗೆ ಮೊದಮೊದಲು ಖಿನ್ನತೆಯುಂಟಾಗುತ್ತಿತ್ತು, ಆದರೆ ಅದಕ್ಕೆ ಕಾರಣ ಅವರಿಗೇ ಹೃತ್ಪೂರ್ವಕತೆಯಿಲ್ಲದಿರುವುದು ಎಂದು ಆಲೋಚಿಸತೊಡಗಿದೆ. ಅದೆಲ್ಲ ಈಗ ನನಗೆ ನೆನಪಾಗುತ್ತಲೇ ಇರಲಿಲ್ಲ, ಇದ್ದಕ್ಕಿದ್ದಂತೆ ಅವರ ಬಗ್ಗೆ ನನಗಿದ್ದ ಪ್ರೀತಿಯನ್ನು ಹೇಳಬೇಕೆಂದೂ ಅನ್ನಿಸುತ್ತಿರಲಿಲ್ಲ, ನನ್ನ ಜೊತೆಗೆ ಪ್ರಾರ್ಥನೆ ಮಾಡಬೇಕೆಂದಾಗಲೀ ನನ್ನ ಪಿಯಾನೋ ನುಡಿಸುವಿಕೆಯನ್ನು ಕೇಳಿರೆಂದಾಗಲೀ ಹೇಳುವ ಮನಸ್ಸಾಗುತ್ತಿರಲಿಲ್ಲ. ಸನ್ನಡತೆಯ ಸಂಹಿತೆಯೊಂದಕ್ಕೆ ಬದ್ಧವಾಗಿದ್ದಂತೆ ನಮ್ಮಿಬ್ಬರ ನಡುವಣ ಸಂಬಂಧಗಳು ಮುಂದುವರಿದವು. ನಮ್ಮಿಬ್ಬರ ಬದುಕು ಭಿನ್ನವಾಗಿತ್ತು: ಅವರಿಗೆ ತಮ್ಮದೇ ಕೆಲಸಕಾರ್ಯಗಳು, ಅದರಲ್ಲೆಲ್ಲ ನನ್ನ ಅವಶ್ಯಕತೆಯಿರಲಿಲ್ಲ, ಅವುಗಳ ಬಗ್ಗೆ ಕೇಳುವ ಅಥವಾ ಅವುಗಳಲ್ಲಿ ತಲೆಹಾಕುವ ಕುತೂಹಲವೂ ನನ್ನಲ್ಲಿರಲಿಲ್ಲ; ನನ್ನ ಬದುಕಾದರೋ ಅವರಿಗೆ ತೊಂದರೆ ಕೊಡದ ಅಥವಾ ನೋವನ್ನುಂಟುಮಾಡದ ರೀತಿಯದಾಗಿತ್ತು. ನಮ್ಮಿಬ್ಬರ ಜೊತೆಗೆ ಬಾಂಧವ್ಯ ಬೆಳೆಸಿಕೊಳ್ಳಬಹುದಾದ ವಯಸ್ಸಿನ್ನೂ ಮಕ್ಕಳದಾಗಿರಲಿಲ್ಲ.

ವಸಂತ ಬಂತು, ಹೀಗಾಗಿ ಕಾತ್ಯಾ ಮತ್ತು ಸೋನ್ಯಾ ಹಳ್ಳಿಯಲ್ಲಿ ನಮ್ಮ ಜೊತೆ ಬೇಸಿಗೆ ಕಳೆಯಲು ಬರುವಂತಾಯಿತು. ನಿಕೋಲ್ಸ್ಕೊಯೆನಲ್ಲಿನ ನಮ್ಮ ಮನೆ ರಿಪೇರಿಯಾಗುತ್ತಿದ್ದುದರಿಂದ ನಾವು ಪೋಕ್ರೋಸ್ಕೊಯೆನಲ್ಲಿರಲು ಹೋದೆವು. ಹಳೆಯ ಮನೆ ಹಿಂದಿದ್ದ ಹಾಗೇ ಇತ್ತು - ವರಾಂಡ, ಮಡಿಸುವ ಮೇಜು, ಬಿಸಲು ತುಂಬಿದ ಕೋಣೆಯಲ್ಲಿನ ಪಿಯಾನೊ, ಬಿಳಿ ಪರದೆಗಳು ಹಾಗೂ ಹಿಂದೆ ಬಿಟ್ಟು ಬಂದಿದ್ದಂತೆ ಕಾಣುತ್ತಿದ್ದ ಬಾಲ್ಯದ ಕನಸುಗಳಿದ್ದ ನನ್ನ ಹಳೆಯ ಮಲಗುವ ಕೋಣೆ - ಎಲ್ಲ ಯಥಾಪ್ರಕಾರ ಇದ್ದುವು. ಕೋಣೆಯಲ್ಲಿ ಎರಡು ಮಂಚಗಳಿದ್ದುವು, ಒಂದು ನನ್ನದು, ಈಗ ಅದರ ಮೇಲೆ ನನ್ನ ದುಂಡಗಿನ ಪುಟ್ಟ ಮಗು ಕೊಕೋಸಾ ತೆವಳುತ್ತಿದ್ದ; ಮತ್ತೊಂದು ಮಗುವಿನ ಮಂಚ, ಅದರಲ್ಲಿ ನನ್ನ ಇನ್ನೊಂದು ಕೂಸು ವಾನ್ಯಾ ಮಲಗಿ, ಸುತ್ತಿದ್ದ ಬಟ್ಟೆಗಳ ಮೂಲಕ ತನ್ನ ಪಿಳಿಪಿಳಿ ಕಣ್ಣುಗಳಿಂದ ನೋಡುತ್ತಿತ್ತು. ಅವುಗಳ ಎದೆಗಳ ಮೇಲೆ ಶಿಲುಬೆ ಗುರುತು ಮಾಡಿ ನೀರವ ಕೋಣೆಯ ಮಧ್ಯೆ ನಿಂತುಕೊಂಡಿರುವಾಗ ಕೆಲವು ಸಲ ಹಳೆಯ ಪಳಕೆಯ ಯೌವನದ ನೆನಪುಗಳು ಇದ್ದಕ್ಕಿದ್ದಂತೆ ಎಲ್ಲ ಮೂಲೆಗಳಿಂದ ಗೋಡೆಗಳಿಂದ ಪರದೆಗಳಿಂದ ಪುಟಿದು ಬರುತ್ತಿದ್ದವು. ಚಿಕ್ಕಂದಿನ

ಹಾಡುಗಳನ್ನು ಹಳೆಯ ದನಿಗಳು ಹಾಡಲು ತೊಡಗುತ್ತಿದ್ದವು. ಆ ಕಾಣ್ಕೆಗಳೆಲ್ಲ ಈಗೆಲ್ಲಿ ಹೋದುವು? ಆ ಮಧುರ ಹಾಡುಗಳೆಲ್ಲ ಎಲ್ಲಿ ಮಾಯವಾದುವು? ನಾನು ಎದುರಿಸಲಾರೆನೆಂದು ಭಯಪಟ್ಟು ನಿರೀಕ್ಷಿಸಿದ್ದ ಎಲ್ಲವೂ ಈಗ ಕಳೆದುಹೋಗಿದ್ದುವು. ನನ್ನ ಅಸ್ಪಷ್ಟ ಗೊಂದಲದ ಕನಸು ಈಗ ನನಸಾಗಿತ್ತು, ಈ ನನಸು ದಮನಕಾರಿಯಾಗಿ, ತೊಂದರೆ ಕೊಡುತ್ತ, ಕಾಡುತ್ತ ನನ್ನ ಬದುಕನ್ನು ಸಂತಸಹೀನವಾಗಿಸಿತ್ತು. ಎಲ್ಲ ಎಂದಿನಂತೆಯೇ ಇದ್ದುವು - ಕಿಟಕಿಯ ಮೂಲಕ ಕಾಣುತ್ತಿದ್ದ ತೋಟ, ಹುಲ್ಲುಹಾಸಲು, ಕಾಲುದಾರಿ, ದೂರದ ಕಿರುಕಣಿವೆಯಲ್ಲಿನ ಕಲ್ಲುಬೆಂಚು, ಕೊಳದಲ್ಲಿ ಹಾಡುವ ನೈಟಿಂಗೇಲ್ ಹಕ್ಕಿಯ ಇನಿದನಿ, ಪೂರ್ಣ ಅರಳಿದ ಲೈಲಕ್ ಹೂಗಳು, ಮನೆಯ ಮೇಲೆ ನಗುತ್ತಿದ್ದ ಪೂರ್ಣಚಂದ್ರ - ಎಂದಿನಂತಿದ್ದರೂ ನನಗಂತೂ ಊಹೆಗೂ ನಿಲುಕದ ಭಯಾನಕ ಬದಲಾವಣೆ ಕಾಣಿಸುತ್ತಿತ್ತು. ನನ್ನೆದೆಗೆ ಹತ್ತಿರವಾಗಬಹುದಾದ ಮಧುರವೆನಿಸಬಹುದಾದ ಎಲ್ಲವೂ ಆತ್ಮೀಯತೆಯ ಬಿಸುಪಿನಿಂದ ವಂಚಿತವಾಗಿದ್ದುವು! ಹಿಂದಿನಂತೆ ಕಾತ್ಯಾ ಮತ್ತು ನಾನು ಒಬ್ಬೊಬ್ಬರೇ ನಡುಮನೆಯಲ್ಲಿ ಮೌನವಾಗಿ ಕೂತಿರುತ್ತಿದ್ದೆವು, ಕೆಲವೇಳೆ ಅವರ ಬಗ್ಗೆ ಸುಮ್ಮನೆ ಮಾತಾಡಿಕೊಳ್ಳುತ್ತಿದ್ದೆವು. ಆದರೆ ಕಾತ್ಯಾಗೆ ಸುಕ್ಕುಗಳು ಬರತೊಡಗಿದ್ದುವು, ಮುಖ ಪೇಲವವಾಗಿತ್ತು, ಅವಳ ಕಣ್ಣುಗಳಲ್ಲೀಗ ಹಿಂದಿನ ಸಂತೋಷ-ನಿರೀಕ್ಷೆಗಳ ಹೊಳಪಿರಲಿಲ್ಲ, ಆದರೆ ಅವುಗಳಲ್ಲಿ ಸಹಾನುಭೂತಿ, ನೋವು, ವಿಷಾದಗಳು ಉಕ್ಕುತ್ತಿದ್ದುವು. ನಮಗೀಗ ಹಿಂದಿನ ಆನಂದೋತ್ಸಾಹ ಉಂಟಾಗುತ್ತಿರಲಿಲ್ಲ, ಅವರ ಬಗ್ಗೆ ತಣ್ಣಗೆ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದೆವು; ಅಂಥ ಸಂತೋಷ ಅನುಭವಿಸಲು ನಾವೇನು ಮಾಡಿದ್ದೇವೆ ಎಂಬ ಹಿಂದಿನ ಅಚ್ಚರಿ ಈಗಿರಲಿಲ್ಲ, ನಮ್ಮ ಆಲೋಚನೆಗಳನ್ನು ಲೋಕಕ್ಕೆ ಸಾರಿ ಹೇಳಬೇಕೆಂಬ ತುಡಿತವಿರಲಿಲ್ಲ. ಉಹ್ಞೂ! ನಮ್ಮಿಬ್ಬರ ಪಿಸುಮಾತು ಯಾವುದೋ ಪಿತೂರಿಯಂತಿರುತ್ತಿತ್ತು; ಇದ್ದಕ್ಕಿದ್ದಂತೆ ಇಂಥ ನೋವಿನ ಬದಲಾವಣೆ ಯಾಕಾಯಿತು ಎಂದು ನಮ್ಮಲ್ಲಿ ನಾವೇ ನೂರಾರು ಬಾರಿ ಕೇಳಿಕೊಳ್ಳುವ ಹಾಗಾಗಿತ್ತು. ಆದರೆ ಅವರಂತೂ ಹಿಂದಿನ ಮನುಷ್ಯರೇ, ಹುಬ್ಬುಗಳ ನಡುವೆ ಹಣೆಯ ಅಡ್ಡಗೆರೆಗಳು ಆಳವಾಗಿದ್ದುದರ ಹೊರತಾಗಿ, ಕಿವಿಯ ಮೇಲಿನ ಕೂದಲು ನೆರೆತಿದ್ದುದರ ಹೊರತಾಗಿ. ಆದರೆ ಅವರ ಸ್ಥಿರವಾದ ಗಂಭೀರ ನೋಟವನ್ನು ಮೋಡದ ತೆರೆಯೊಂದು ಸದಾ ಮುಸುಕಿದೆಯೇನೋ ಎಂಬ ಭಾವನೆ ನನ್ನಲ್ಲುಂಟಾಗಿತ್ತು. ನಾನೂ ಹಿಂದಿನ ಹೆಂಗಸೇ, ಆದರೆ ಪ್ರೀತಿಯೂ ಇರಲಿಲ್ಲ, ಪ್ರೀತಿಯ ಬಯಕೆಯೂ ಇರಲಿಲ್ಲ; ಕೆಲಸ ಮಾಡುವ ಉತ್ಸಾಹವಿರಲಿಲ್ಲ, ನನ್ನ ಬಗ್ಗೆ ತೃಪ್ತಿಯೂ ಉಳಿದಿರಲಿಲ್ಲ. ನನ್ನ ಧಾರ್ಮಿಕ ಔತ್ಸುಕ್ಯ, ಗಂಡನ ಬಗೆಗಿನ ಅದಮ್ಯ ಪ್ರೇಮ, ಹಿಂದಿನ ಬದುಕಿನ ಪರಿಪೂರ್ಣತೆ - ಇವೆಲ್ಲ ಯಾವುದೋ ಜನ್ಮದ್ದೆಂಬ, ಕನಸಿನ ನೆನಪಿನದೆಂಬ ಭಾವನೆ. ಹಿಂದೊಮ್ಮೆ ಮತ್ತೊಬ್ಬರಿಗಾಗಿ ಬದುಕುವುದೇ ನಿಜವಾದ ಸಂತೋಷವೆಂಬ ಭಾವನೆ ಉಂಟಾಗುತ್ತಿತ್ತು, ಆದರೀಗ ಅದೆಲ್ಲ ಅರ್ಥವೇ ಅಗುತ್ತಿರಲಿಲ್ಲ. ತನ್ನ ಬದುಕೇ ಅರ್ಥಹೀನವಾಗಿರುವಾಗ ಬೇರೆಯವರಿಗಾಗಿ ಏಕೆ ಬದುಕಬೇಕು?

ಪೀಟರ್ಸ್‌ಬರ್ಗ್‌ಗೆ ಮೊದಲ ಬಾರಿ ಹೋದ ಕ್ಷಣದಿಂದಲೂ ನಾನು ಸಂಗೀತವನ್ನು ಪೂರ್ತಿ ತೊರೆದುಬಿಟ್ಟಿದ್ದೆ; ಆದರೆ ಈಗ ಮಾತ್ರ ಹಳೆಯ ಪಿಯಾನೋ ಮತ್ತು ಹಳೆಯ ಸಂಗಿತ ಮತ್ತೆ ಆರಂಭಿಸಲು ನನ್ನನ್ನು ಕೈಬೀಸಿ ಕರೆಯುತ್ತಿತ್ತು.

ಒಂದಿನ ನನ್ನ ಮೈಲಿ ಹುಷಾರಿರಲಿಲ್ಲ, ಹೀಗಾಗಿ ಹೊರಗೆಲ್ಲೂ ಹೋಗದೆ ಮನೆಯೊಳಗೇ ಇದ್ದೆ. ನಮ್ಮ ಯಜಮಾನರು ಕಾತ್ಯಾ ಹಾಗೂ ಸೋನ್ಯಾಳನ್ನು ನಿಕೋಲ್ಸ್ಕೊಯೆಯ ಹೊಸ ಕಟ್ಟಡಗಳನ್ನು ತೋರಿಸಲು ಕರೆದುಕೊಂಡು ಹೋಗಿದ್ದರು. ಟೀ ಸಿದ್ಧವಾಗಿತ್ತು; ಕೆಳಗೆ ಇಳಿದು ಹೋಗಿ ಅವರಿಗಾಗಿ ಕಾಯುತ್ತ ಪಿಯಾನೋ ಮುಂದೆ ಕುಳಿತೆ. 'ಮೂನ್‌ಲೈಟ್ ಸೊನಾಟ' ತೆರೆದು ಪಿಯಾನೋ ನುಡಿಸಲು ತೊಡಗಿದೆ. ಹತ್ತಿರ ಯಾರಾದರೂ ಇದ್ದುದು ಕಣ್ಣಿಗಾಗಲೀ ಕಿವಿಗಾಗಲೀ ಬೀಳಲಿಲ್ಲ. ತೋಟದ ಕಡೆಗಿದ್ದ ಕಿಟಕಿಗಳ ಬಾಗಿಲುಗಳೆಲ್ಲ ತೆರೆದಿದ್ದವು. ಆಗ ಕೋಣೆಯಲ್ಲೆಲ್ಲ ಸುಪರಿಚಿತವಾದ ಸದ್ದುಗಳು ನಿಗೂಢ ರೀತಿಯಲ್ಲಿ ತೇಲಾಡಿದವು. ಮೊದಲ ಚರಣ ಮುಗಿಸಿ, ಹಿಂದೆಲ್ಲ ಅವರು ಕೂತು ನನ್ನ ನುಡಿಸುವಿಕೆಯನ್ನು ಕೇಳುತ್ತಿದ್ದ ಮೂಲೆಯ ಕಡೆಗೆ ನನ್ನ ನೋಟ ಅಪ್ರಯತ್ನವಾಗಿ ಹರಿಯಿತು. ಈಗ ಅವರು ಅಲ್ಲಿರಲಿಲ್ಲ, ಅವರು ಕುಳಿತುಕೊಳ್ಳುತ್ತಿದ್ದ ಕುರ್ಚಿ ಯಾರೂ ಬಹುದಿನಗಳಿಂದ ಎತ್ತಿಡದೆ ತನ್ನ ಜಾಗದಲ್ಲೇ ಕೂತಿತ್ತು; ಕಿಟಕಿಯ ಮೂಲಕ ಮುಳುಗುವ ಸೂರ್ಯನ ಹೊಂಗಿರಣಗಳಲ್ಲಿ ನೆನೆದ ಲೈಲಕ್ ಹೂಗೊಂಚಲೊಂದು ಕಣ್ಣಿಗೆ ಬಿತ್ತು; ತೆರೆದ ಕಿಟಕಿಗಳ ಮೂಲಕ ಸಂಜೆಯ ಆಪ್ಯಾಯಮಾನವಾದ ಗಾಳಿ ಒಳನುಗ್ಗಿತು. ಪಿಯಾನೋ ಮೇಲೆಯೇ ನನ್ನ ಹಣೆಯನ್ನಿಟ್ಟು ಮುಖವನ್ನು ಎರಡು ಕೈಗಳಿಂದಲೂ ಮುಚ್ಚಿಕೊಂಡೆ. ಯೋಚನೆಯಲ್ಲಿ ಮುಳುಗಿ ಹೀಗೇ ಬಹಳ ಹೊತ್ತು ಕೂತಿದ್ದೆ. ಮರುಕಳಿಸಲಾಗದ ಗತದಿನಗಳು ನೋವಿನೊಂದಿಗೆ ನೆನಪಿಗೆ ಬಂದವು, ಆ ಕ್ಷಣವೇ ಭವಿಷ್ಯದ ಕಲ್ಪನೆ ಮೂಡಿ ಭಯವಾಯಿತು. ಆದರೆ ನನ್ನ ಮಟ್ಟಿಗೆ ಭವಿಷ್ಯವೇ ಇಲ್ಲವೆನ್ನಿಸಿತು, ಬಯಕೆಗಳೆಲ್ಲ ಹೂತುಹೋಗಿದ್ದವು, ನಿರೀಕ್ಷೆಗಳೆಲ್ಲ ಮಣ್ಣುಪಾಲಾಗಿದ್ದವು. 'ನನ್ನ ಬದುಕು ಮತ್ತೆ ಸಿಕ್ಕಬಹುದೇ?' ಎಂಬ ಯೋಚನೆ ಸುಳಿಯಿತು; ಜೊತೆಗೆ ದಿಗ್ಭ್ರಮೆ ಕೂಡ. ಆನಂತರ ತಲೆ ಮೇಲೆತ್ತಿ ಹಿಂದಿನದನ್ನು ಮರೆಯಲು ಹಾಗೂ ಯೋಚನೆ ಮಾಡದಿರಲು ಪ್ರಯತ್ನಿಸುತ್ತ, ಹಳೆಯ ಚರಣವನ್ನೇ ಮತ್ತೆ ನುಡಿಸತೊಡಗಿದೆ. "ದೇವರೇ, ನಾನು ತಪ್ಪು ಮಾಡಿದ್ದರೆ ಕ್ಷಮಿಸು ಅಥವಾ ನನ್ನೆದೆಯಲ್ಲಿ ಹಿಂದಿದ್ದ ಉಲ್ಲಾಸವನ್ನು ಮತ್ತೆ ಬಿತ್ತು ಅಥವಾ ಮುಂದೆ ಹೇಗಿರಬೇಕು ಹೇಗೆ ಬದುಕಬೇಕು ಎಂಬ ದಾರಿಯನ್ನಾದರೂ ತೋರಿಸು" ಎಂದು ಪ್ರಾರ್ಥಿಸಿದೆ. ಹೊರಗೆ ಹುಲ್ಲುಹಾಸಿನ ಮೇಲೆ ಚಕ್ರಗಳು ಉರುಳುವ ದನಿ ಕೇಳಿಸಿತು, ಮನೆಯ ಮುಂದೆ ಹೆಜ್ಜೆಗಳ ಸಪ್ಪುಳ. ಆನಂತರ ವರಾಂಡದ ಮೂಲಕ ಸುಪರಿಚಿತ ಹೆಜ್ಜೆಗಳ ಸದ್ದು ಸ್ವಲ್ಪ ಹೊತ್ತು ಕೇಳಿಸಿ ನಿಂತಿತು. ಆದರೆ ನನ್ನ ಹೃದಯ ಈ ಸಪ್ಪಳಕ್ಕೆ ಸ್ಪಂದಿಸಲಿಲ್ಲ. ನುಡಿಸಾಣಿಕೆಯನ್ನು ನಿಲ್ಲಿಸಿದ ಮೇಲೆ ಹೆಜ್ಜೆಗಳ ಸದ್ದು ನನ್ನ ಹಿಂದೆಯೇ ಸುಳಿಯಿತು, ನನ್ನ ಭುಜದ ಮೇಲೆ ಕೈಯೊಂದು ಬಂದು ನಿಂತಿತು.

"ಇದನ್ನು ನುಡಿಸೋ ಯೋಚನೆ ಬಂದ ನೀನು ಅದೆಷ್ಟು ಜಾಣೆ!" ಎಂದರು.

ನಾನೇನೂ ಹೇಳಲಿಲ್ಲ.

"ನೀನು ಟೀ ತಗೊಂಡ್ಯಾ?" ಎಂಬ ಪ್ರಶ್ನೆ.

ಇಲ್ಲವೆಂಬಂತೆ ತಲೆಯಾಡಿಸಿದೆ, ಆದರೆ ಅವರ ಕಡೆ ಮುಖ ತಿರುಗಿಸಲಿಲ್ಲ, ನನ್ನ ಮುಖದ ಮೇಲೆ ಹೆಪ್ಪುಗಟ್ಟಿದ್ದ ಭಾವುಕತೆಯನ್ನು ಅವರಿಗೆ ಕಾಣಿಸಲು ಇಷ್ಟಪಡಲಿಲ್ಲ.

"ಅವರೆಲ್ಲ ಇನ್ನೇನು ಬಂದುಬಿಡ್ತಾರೆ. ಕುದುರೆ ಸ್ವಲ್ಪ ತೊಂದರೆ ಕೊಡ್ತು. ಗಾಡಿಯಿಂದಿಳಿದು ಅವರು ಹೆದ್ದಾರಿಯಲ್ಲಿ ನಡಕೊಂಡು ಬರ್ತಾ ಇದಾರೆ."

"ಅವರಿಗೋಸ್ಕರ ಕಾಯೋಣ" ಎಂದು ಹೇಳಿ ನಾನು ವರಾಂಡ ಕಡೆ ಹೊರಟೆ, ಅವರೂ ಹಿಂದೆ ಬರಬಹುದು ಅನ್ನೋ ಆಸೆ ನನ್ನಲ್ಲುದಿಸಿತು. ಆದರೆ ಅವರು ಮಾತ್ರ ಮಕ್ಕಳ ಬಗ್ಗೆ ವಿಚಾರಿಸಿ ಅವರನ್ನು ನೋಡಲು ಮಹಡಿ ಮೇಲಕ್ಕೆ ಹೋದರು. ಅವರ ಇರುವಿಕೆ ಮತ್ತು ಸರಳವಾದ ಮಿದುಮಾತುಗಳನ್ನು ಕೇಳಿ ನಾನು ಏನನ್ನಾದರೂ ಕಳೆದುಕೊಂಡದ್ದೇ ಸುಳ್ಳೇ ಅನ್ನಿಸಿತು. ಇದಕ್ಕಿಂತ ಹೆಚ್ಚಿನದೇನನ್ನು ಬಯಸಲಿ ನಾನು? "ಅವರು ಮೃದುಹೃದಯಿಗಳು, ಸೌಜನ್ಯಮೂರ್ತಿ, ಒಳ್ಳೇ ಗಂಡ, ಒಳ್ಳೆ ತಂದೆ; ಇದಕ್ಕಿಂತ ಹೆಚ್ಚಿನದೇನಿದೆ? ನನಗೆ ಅರ್ಥವೇ ಆಗಲಿಲ್ಲವಲ್ಲ" ಅಂದುಕೊಂಡೆ. ವರಾಂಡದಲ್ಲಿ ನಮ್ಮ ನಿಶ್ಚಿತಾರ್ಥದ ಕಾಲದಲ್ಲಿ ನಾವಿಬ್ಬರೂ ಕೂತಿದ್ದ ಬೆಂಚಿನ ಮೇಲೆ ಬಟ್ಟೆ ಹಾಸಿ ಕೂತೆ. ಸೂರ್ಯ ಆಗಲೇ ಮುಳುಗಿದ್ದ, ಮನೆ ಮತ್ತು ತೋಟಗಳ ಮೇಲೆ ಬೇಸಿಗೆಯ ಸಣ್ಣ ಮೋಡ ತೇಲಾಡಿತು, ಮರಗಳ ಹಿಂದೆ ದಿಗಂತ ಮಾತ್ರ ಶುಭ್ರವಾಗಿತ್ತು, ಅಲ್ಲಿ ಮಸುಕಾಗುತ್ತಿದ್ದ ಸಂಜೆಗೆಂಪು ಹರಡಿತ್ತು, ಅದರ ನಡುವೆಯೇ ಚಿಕ್ಕೆಯೊಂದು ಮೂಡಿ ಮಿನುಗತೊಡಗಿತು. ಮೋಡದ ನೆರಳಲ್ಲಿ ಹರಡಿಕೊಂಡಿದ್ದ ಎದುರಿನ ದೃಶ್ಯ ಮುಂಗಾರಿನ ತುಂತುರನ್ನು ಎದುರುನೋಡುತ್ತಿತ್ತು. ಗಾಳಿಯ ಸುಳಿವಂತೂ ಇರಲೇ ಇಲ್ಲ; ಹುಲ್ಲು ಎಸಳಾಗಲೀ ಎಲೆಯಾಗಲೀ ಅಲುಗಾಡದೆ ನಿಶ್ಚಲವಾಗಿದ್ದವು; ಲೈಲಕ್ ಹೂಗಳ ಹಾಗೂ ಚೆರಿಗಳ ಕಂಪು ತೋಟದಲ್ಲೂ ವರಾಂಡದಲ್ಲೂ ಎಷ್ಟು ಗಾಢವಾಗಿತ್ತೆಂದರೆ ಇಡೀ ಆಗಸವೇ ಹೂವಾಗಿ ಅರಳಿದೆಯೇನೋ ಅನ್ನಿಸುತ್ತಿತ್ತು. ಪರಿಮಳವು ಅಲೆಅಲೆಯಾಗಿ ಒಮ್ಮೆ ಗಾಢವಾಗಿ ಆಮೇಲೆ ಹಗುರಾಗಿ ತೇಲಿಬರುತ್ತಿತ್ತು, ಕಣ್ಣುಗಳೆರಡನ್ನೂ ಮುಚ್ಚಿಕೊಂಡು ಆ ಕಂಪನ್ನೇ ಕೇಳುವ ಹೀರುವ ಆಸೆಯಾಗುವ[illegible]. ಇನ್ನೂ ಹೂಬಿಡದ ಡೇಲಿಯಗಳು ಹಾಗೂ ಗುಲಾಬಿ ಪೊದೆಗಳು ಕಪ್ಪು ಹಿನ್ನೆಲೆಯಲ್ಲ[illegible]ಶ್ಚಲವಾಗಿ ನಿಂತಿದ್ದವು, ಅವೆಲ್ಲ ನಿಧಾನವಾಗಿ ತಮ್ಮ ಬೋಳು ಆಸರೆಕೋಲುಗಳ ಕಡೆ ನಿಧಾನವಾಗಿ ಚಲಿಸುತ್ತಿರುವಂತೆ ಭಾಸವಾಗುತ್ತಿತ್ತು. ಕಣಿವೆಯ ದೂರದಲ್ಲಿ ಮಳೆಯನ್ನೆದುರು ನೋಡುತ್ತ ಕಪ್ಪೆಗಳು ಕೊಳದ ಕಡೆ ಸಾಗುತ್ತ ವಟಗುಟ್ಟುತ್ತಿದ್ದವು. ದೂರದಲ್ಲೆಲ್ಲೋ ಮೇಲಿನಿಂದ ಬೀಳುತ್ತಿದ್ದ ನೀರಿನ ಸದ್ದು ಮಾತ್ರ ಆ ವಟಗುಟ್ಟುವಿಕೆಯನ್ನು ಮೀರಿಸುವಂತಿತ್ತು. ಆಗಾಗ್ಗೆ ನೈಟಿಂಗೇಲ್‌ಗಳು ಪರಸ್ಪರ

ಸಂಭಾಷಣೆಯಲ್ಲಿ ತೊಡಗುತ್ತ, ಪೊದೆಯಿಂದ ಪೊದೆಗೆ ಅವು ಹಾರಿಹೋಗುತ್ತಿದ್ದುದು ಕಾಣಿಸುತ್ತಿತ್ತು. ಪುನಃ ಈ ಬೇಸಗೆಯಲ್ಲಿ ನೈಟಿಂಗೇಲ್ ಒಂದು ಕಿಟಕಿಯ ಕೆಳಗೆ ಗೂಡೊಂದನ್ನು ಕಟ್ಟತೊಡಗಿತ್ತು. ಅದು ರಸ್ತೆಯಗುಂಟ ಪುರ್ರೆಂದು ಹಾರಿಹೋಗುವ ಸದ್ದು ಕೇಳಿಸಿತು. ನಾನು ವರಾಂಡಕ್ಕೆ ಬಂದೆ. ಅಲ್ಲಿಂದಲೇ ಆ ಹಕ್ಕಿ ಕೂಜಿಸಿತು, ಅದನ್ನು ಕೇಳಿ ನಾನು ಮತ್ತೆ ನಿಂತೆ. ಅದು ಕೂಡ ಮಳೆಯ ನಿರೀಕ್ಷೆಯಲ್ಲಿತ್ತು.

ನನ್ನಲ್ಲಿ ಪುಟಿಯುತ್ತಿದ್ದ ಭಾವನೆಗಳನ್ನು ಅದುಮಿಕೊಳ್ಳಲು ಮಾಡುತ್ತಿದ್ದ ಪ್ರಯತ್ನ ಸೋಲುತ್ತಿತ್ತು. ನನ್ನ ಮನಸ್ಸಿನಲ್ಲಿ ನಿರೀಕ್ಷೆ-ವಿಷಾದಗಳೆರಡೂ ಒಮ್ಮೆಯೇ ಸುಳಿದಾಡಿದವು.

ನಮ್ಮ ಯಜಮಾನರು ಮೇಲಿನಿಂದ ಇಳಿದು ಬಂದು ನನ್ನ ಪಕ್ಕದಲ್ಲಿಯೇ ಕೂತರು.

"ಅವರು ನೆಂದುಬಿಡ್ತಾರೋ ಏನೋ" ಅಂದರು.

"ಹ್ದೂ" ಎಂದೆ; ಇಬ್ಬರೂ ಮಾತಾಡದೆ ಬಹಳ ಹೊತ್ತು ಕೂತಿದ್ದೆವು.

ಗಾಳಿ ಬೀಸದೆಯೇ ಮೋಡ ಕೆಳಗಿಳಿಯುತ್ತಿತ್ತು. ಗಾಳಿ ಹೆಚ್ಚೆಚ್ಚು ನಿಶ್ಚಲವಾಯಿತು, ಹೆಚ್ಚು ಪರಿಮಳಭರಿತವಾಯಿತು. ಇದ್ದಕ್ಕಿದ್ದಂತೆ ಬೆಂಚಿನ ಮೇಲುಹೊದಿಕೆಯ ಮೇಲೆ ಒಂದು ಹನಿ ಬಿದ್ದುದಲ್ಲದೆ, ಅಲ್ಲಿಂದ ಪುಟಿಯುವಂತೆ ಕಾಣಿಸಿತು; ಆಮೇಲೆ ಮತ್ತೊಂದು ಹನಿ ಕಲ್ಲು ಕಾಲುದಾರಿಯ ಮೇಲೆ; ಬಹು ಬೇಗ ಬುರ್ಡಕ್ ಎಲೆಗಳ ಮೇಲೆ ಸಿಂಪಡಿಕೆ, ಆನಂತರ ದೊಡ್ಡ ಹನಿಗಳು ಒಂದಾದ ಮೇಲೊಂದು ರಭಸವಾಗಿ ಧರೆಗಿಳಿದುವು. ನೈಟಿಂಗೇಲ್‌ಗಳು ಕಪ್ಪೆಗಳು ಮೂಕವಾಗಿದ್ದುವು; ಕೇಳಿಸಿದ್ದುದೆಲ್ಲ ಸುರಿಯುವ ನೀರಿನ ಜೋರು ದನಿ. ಪೂರ್ಣಪ್ರಮಾಣದ ಮಳೆ ದೂರದಲ್ಲಿದ್ದಂತೆ ತೋರಿದರೂ, ಹನಿಗಳು ಮಾತ್ರ ಇಳಿಯುವುದನ್ನು ಮುಂದುವರಿಸಿದವು. ವರಾಂಡದ ಬಳಿ ಒಣ ಎಲೆಗಳ ನಡುವೆ ಆಶ್ರಯ ಪಡೆದಿದ್ದ ಹಕ್ಕಿಯೊಂದು ಒಂದೇ ಸಮನೆ ಕ್ರಮವಾದ ಎರಡು ಸ್ವರಗಳಲ್ಲಿ ಕೂಗತೊಡಗಿತು. ನಮ್ಮ ಯಜಮಾನರು ಒಳಗೆ ಹೋಗಲು ಮೇಲೆದ್ದರು.

"ಎಲ್ಲಿಗೆ ಹೋಗ್ತಿದ್ದೀರಿ, ಇಲ್ಲಿ ಎಷ್ಟು ಚೆನ್ನಾಗಿದೆ!" ಎಂದು ಕೇಳಿದೆ ನಾನು.

"ಅವರಿಗೆ ಕೊಡೆ, ಗವಸುಗಳನ್ನು ಕಳಿಸಬೇಕು" ಎಂದುತ್ತರಿಸಿದರು.

"ಅಷ್ಟೆಲ್ಲ ಯಾಕೆ, ಇದು ಬೇಗ ನಿಂತುಬಿಡತ್ತೆ."

ನಾನು ಹೇಳ್ತಿರೋದು ಸರಿ ಅಂತ ಅವರಿಗನ್ನಿಸಿತು, ವರಾಂಡದಲ್ಲಿ ಉಳಿದರು. ಒದ್ದೆಯಾಗಿ ಜಾರುತ್ತಿದ್ದ ಕಂಬಿಯ ಮೇಲೆ ಕೈಯೊಂದನ್ನಿಟ್ಟು ತಲೆಯನ್ನು ಮುಂದೆ ಚಾಚಿದೆ. ಹನಿಗಳು ನನ್ನ ತಲೆ ಮತ್ತು ಕೊರಳನ್ನು ಅಲ್ಲಲ್ಲಿ ತೋಯಿಸಿತು. ಬರಬರುತ್ತ ಬೆಳ್ಳಬೆಳ್ಳಗೆ ತೆಳುವಾಗುತ್ತಿದ್ದ ಮೋಡ ತಲೆಯ ಮೇಲೆ ಓಡುತ್ತಿತ್ತು. ಇದುವರೆಗೆ ಒಂದೇ ಸಮನೆ ಸುರಿದ ಮಳೆ ಈಗ ಆಕಾಶದಿಂದಲೋ, ನೆಂದ ಎಲೆಗಳ ತುದಿಗಳಿಂದಲೋ ಆಗೊಮ್ಮೆ ಈಗೊಮ್ಮೆ ಬೀಳುವ ಹನಿಯಾಯಿತು. ಕಪ್ಪೆಗಳು ಕಣಿವೆಯಲ್ಲಿ ಮತ್ತೆ ವಟಗುಟ್ಟತೊಡಗಿದವು; ನೈಟಿಂಗೇಲ್‌ಗಳು ಎಚ್ಚೆತ್ತು ಹನಿಯುತ್ತಿದ್ದ ಪೊದೆಗಳಿಂದ ಅಲ್ಲಿಂದ ಇಲ್ಲಿಂದ ಕೂಜಿಸತೊಡಗಿದವು. ನಮ್ಮ ಕಣ್ಣೆದುರಿಗಿನ ವಾತಾವರಣ

ಸ್ಪಷ್ಟವಾಗುತ್ತ ಹೋಯಿತು.

"ಎಂಥ ಚೆನ್ನಾಗಿದೆ!" ಎಂದವರು ಉದ್ಗರಿಸಿದರು, ವರಾಂಡದ ಕೈಪಿಡಿಯ ಮೇಲೆ ಕುಳಿತುಕೊಳ್ಳುತ್ತ, ಅವರ ಒಂದು ಕೈ ನನ್ನ ನೆನೆದಿದ್ದ ತಲೆಯ ಮೇಲಾಡುತ್ತಿತ್ತು.

ಆ ಸರಳವಾದ ನೇವರಿಕೆ ನನ್ನನ್ನು ಛೇಡಿಸಿದ ಹಾಗೆ ತೋರಿತು, ನನಗೆ ಅಳು ಬರುವಂತಾಯಿತು.

"ಇದಕ್ಕಿಂತ ಮನುಷ್ಯನಿಗೆ ಇನ್ನೇನು ಬೇಕು? ಈಗ ನನಗೆ ಎಷ್ಟು ಹಾಯಾಗಿದೆ ಅಂದರೆ ಹಿಂದೆ ನಾನೇನೂ ಆಗಿರಲಿಲ್ಲ; ಈಗಂತೂ ನನ್ನಲ್ಲಿ ಸಂತೋಷ ತುಂಬಿದೆ" ಎಂದರು.

ಅವರು ಬೇರಾವುದೋ ಒಂದು ಕತೆ ಹೇಳುತ್ತಿದ್ದರು ಅಂತ ನನಗನ್ನಿಸಿತು. ತಮ್ಮ ಸಂತಸ ಎಂಥದ್ದೇ ಆಗಿರಲಿ, ಮತ್ತಷ್ಟು ಬೇಕು ಅನ್ನಿಸತ್ತೆ ಅನ್ನೋ ಭಾವನೆಯನ್ನವರು ಹೇಳುತ್ತಿದ್ದ ಹಾಗಿತ್ತು. ಅವರು ತೃಪ್ತಿ ಪ್ರಸನ್ನತೆಗಳಿಂದ ಕೂಡಿದ್ದರು: ನನ್ನ ಹೃದಯದಲ್ಲಿ ಅವ್ಯಕ್ತವಾದ ಪಶ್ಚಾತ್ತಾಪ ಹಾಗೂ ಹೊಮ್ಮದ ಕಂಬನಿಗಳು ತುಂಬಿದ್ದವು.

"ಎಂಥ ಚೆನ್ನ ಅಂತ ನನಗೂ ಅನ್ನಿಸತ್ತೆ. ಆದರೆ ಅದರ ಚೆಲುವೇ ನನಗೆ ಯಾವುದೋ ನೋವನ್ನುಂಟುಮಾಡುತ್ತದೆ. ನನ್ನ ಹೊರಗಿರೋದೆಲ್ಲ ಎಷ್ಟೊಂದು ಸುಂದರವಾಗಿದೆ, ಶುಭ್ರವಾಗಿದೆ, ಆದರೆ ನನ್ನ ಹೃದಯ ಮಾತ್ರ ಗೊಂದಲದ ಗೂಡಾಗಿದೆ, ಎಂಥದೋ ಅತೃಪ್ತ ಆಸೆ ಹೊಗೆಯಾಡ್ತಿದೆ. ನಿಸರ್ಗದ ಈ ಚೆಲುವನ್ನು ಕಂಡ ಸಂತಸದ ಆಳದಲ್ಲಿ ಒಂದಿಷ್ಟು ನೋವು, ಹಿಂದಿನದರ ಹಂಬಲ ಇಲ್ಲದಿರೋದು ಸಾಧ್ಯವೇ" ಎಂದೆ.

ನನ್ನ ತಲೆಯ ಮೇಲಿದ್ದ ತಮ್ಮ ಕೈಯನ್ನವರು ಹಿಂತೆಗೆದುಕೊಂಡರು, ಸ್ವಲ್ಪ ಹೊತ್ತು ಮೌನವಾಗಿದ್ದರು.

"ನನಗೂ ಹಾಗನ್ನಿಸ್ತಿತ್ತು, ಅದೂ ವಸಂತಮಾಸದಲ್ಲಿ. ಇಡೀ ರಾತ್ರಿ ಎದ್ದು ಕೂತಿರ್ತಿದ್ದೆ, ನನ್ನ ಸಂಗಾತಿಗಳಾಗಿ ನಿರೀಕ್ಷೆಗಳು ಭಯಗಳು ಇರ್ತಿದ್ದವು, ನಿಜವಾಗಿಯೂ ಒಳ್ಳೆ ಸಂಗಾತಿಗಳವು! ಇಡೀ ಬದುಕು ಆಗ ನನ್ನ ಮುಂದಿತ್ತು, ಈಗ ಅದೆಲ್ಲ ನನ್ನ ಹಿಂದೆ ಇದೆ, ಈಗ ಇರೋದ್ರಲ್ಲೇ ನನಗೆ ತೃಪ್ತಿ. ನನಗೆ ಬದುಕು ಈಗ ಗುರುತರವಾಗಿದೆ" ಎಂದು ಯಾವುದೋ ಆತ್ಮವಿಶ್ವಾಸದಿಂದ ನುಡಿದರು. ಅದನ್ನು ಕೇಳಿದಾಗ ನನ್ನಲ್ಲಿ ಎಂತಹ ನೋವೇ ಉಂಟಾಗಿರಲಿ, ಅವರು ಹೇಳಿದ್ದು ನಿಜ ಅನ್ನಿಸಿತು.

"ನೀವು ಆಸೆಪಡೋ ಅಂಥದು ಏನೂ ಇಲ್ಲವೇ ಇಲ್ಲವಾ?" ಎಂದು ಕೇಳಿದೆ ನಾನು.

"ನಾನೀಗ ಅಸಾಧ್ಯವಾದದ್ದಕ್ಕೆ ಆಸೆಪಡೋದಿಲ್ಲ" ಅಂದರು ನನ್ನ ಯೋಚನೆಗಳನ್ನು ಗ್ರಹಿಸಿದವರಂತೆ; ಮಗುವಿನದರಂತೆ ನನ್ನ ತಲೆಯನ್ನು ನೇವರಿಸಿ, ಮತ್ತೊಮ್ಮೆ ತಲೆಯಿಡೀ ಕೈಯಾಡಿಸುತ್ತ, "ಹೋಗಿ ತಲೆ ಒರಸ್ಕೋ" ಎಂದು ಒತ್ತಾಯಿಸಿದರು.

"ಎಲೆಗಳು ಹುಲ್ಲು ಮಳೆಯಲ್ಲಿ ತೋಯೋದನ್ನ ಕಂಡರೆ ನಿನಗೆ ಹೊಟ್ಟೇಕಿಚ್ಚು ಅನ್ನಿಸತ್ತೆ, ಮಳೆ ಬರೋವಾಗ ನೀನು ಹುಲ್ಲಾಗಬೇಕು ಎಲೆಯಾಗಬೇಕು ಅಂತ ಅನ್ನಿಸತ್ತಾ? ಆದರೆ ನನಗೆ ಅವುಗಳನ್ನು ಕಂಡರೆ ಸಾಕು, ಸಂತೋಷ, ಅಷ್ಟು ಮಾತ್ರ ಅಲ್ಲ, ಯಾವುಯಾವುದು ಒಳ್ಳೆದೋ ಕಿರಿಯದೋ ಸುಖವಾದದ್ದೋ ಅವುಗಳನ್ನ ಕಾಣೋದೆ ನನಗೆ ಸಂತೋಷ."

"ಹಿಂದಿನ ಯಾವುದರ ಬಗ್ಗೆಯೂ ನಿಮಗೆ ವಿಷಾದವಿಲ್ಲವಾ?" ಎಂದು ಕೇಳಿದೆ, ನನ್ನ ಹೃದಯ ಬರಬರುತ್ತ ಭಾರವಾಗತೊಡಗಿತು.

ಉತ್ತರ ಕೊಡುವುದಕ್ಕೆ ಮುಂಚೆ ಅವರು ಕೊಂಚ ಯೋಚಿಸಿದರು. ಮನಸ್ಸು ಬಿಚ್ಚಿ ಮಾತಾಡೋದಕ್ಕೆ ಅವರು ಬಯಸುತ್ತಿರುವ ಹಾಗೆ ನನಗೆ ಕಾಣಿಸಿತು.

"ಉಹ್ಞೂ, ಇಲ್ಲ" ಎಂದರು ಕಿರಿದಾಗಿ.

"ನಿಜ ಅಲ್ಲ, ಅಲ್ಲವಾ" ಎಂದೆ ನಾನು, ಅವರ ಕಡೆ ಮುಖ ತಿರುಗಿಸಿ ಅವರ ಕಣ್ಣಲ್ಲೇ ನೋಡುತ್ತ, "ನಿಮಗೆ ಹಿಂದಿನ ಯಾವುದರ ಬಗ್ಗೆಯೂ ಖೇದವಿಲ್ಲವಾ?"

"ಇಲ್ಲ!, ಅದಕ್ಕೆ ನಾನು ಕೃತಜ್ಞನಾಗಿದ್ದೀನಿ, ಖಂಡಿತ ವಿಷಾದವಿಲ್ಲ" ಎಂದು ಒತ್ತಿ ಹೇಳುತ್ತ.

"ನಿಮಗೆ ಹಿಂದಿನದು ವಾಪಸು ಬರಲಿ ಅನ್ನಿಸೊಲ್ಲವಾ?"

"ಉಹ್ಞೂ; ನನಗೆ ರೆಕ್ಕೆಗಳಿರಬೇಕು ಅಂತ ಆಸೆ, ಆದರೆ ಅದು ಸಾಧ್ಯ ಇಲ್ಲ."

"ನಿಮಗೆ ಹಿಂದಿನದನ್ನು ಬದಲಾಯಿಸಬೇಕು ಅನ್ನಿಸೊಲ್ಲವಾ? ನಿಮ್ಮನ್ನಾಗಲೀ ನನ್ನನ್ನಾಗಲೀ ಆಕ್ಷೇಪಣೆ ಮಾಡಲ್ಲವಾ?"

"ಎಂದೆಂದಿಗೂ ಇಲ್ಲ! ಆದದ್ದೆಲ್ಲ ಒಳಿತೇ ಆಯಿತು!"

"ನನ್ನ ಮಾತು ಕೇಳಿ!" ಎಂದೆ ನಾನು ಅವರ ತೋಳನ್ನು ಮುಟ್ಟಿ, ನನ್ನ ಕಡೆ ತಿರುಗಿ ನೋಡಲಿ ಎಂದು. "ನಾನು ಹೇಗೆ ಬದುಕಬೇಕೂಂತ ನಿಮಗೆ ನಿಜವಾಗಿ ಅನ್ನಿಸಿತೋ ಹಾಗೆ ಬದುಕು ಅಂತ ಯಾಕೆ ನನಗೆ ನೀವು ಹೇಳಲಿಲ್ಲ? ನಾನು ಅನರ್ಹಳಾಗಿದ್ದ ಸ್ವಾತಂತ್ರ್ಯವನ್ನು ನನಗೇಕೆ ಕೊಟ್ಟಿರಿ? ನನಗೆ ಬುದ್ಧಿವಾದ ಹೇಳೋದನ್ನ ಯಾಕೆ ನಿಲ್ಲಿಸಿದಿರಿ? ನಿಮಗೆ ಇಷ್ಟ ಇದ್ದಿದ್ರೆ, ಬೇರೆ ರೀತೀಲಿ ದಾರಿ ತೋರಿಸಿದ್ದಿದ್ರೆ, ಇವೆಲ್ಲ ಆಗ್ತಾನೇ ಇರಲಿಲ್ಲ!" ಎಂದೆ. ನನ್ನ ಧ್ವನಿಯಲ್ಲಿ ಅಪಾರ ಅಸಂತೋಷ, ಜೊತೆಗೆ ಹಿಂದಿದ್ದ ಪ್ರೇಮದ ಬದಲಿಗೆ ಬೇಡಿಕೆಗಳು ಕಾಣಿಸಿದ್ದುವು.

"ಏನು ಆಗ್ತಾ ಇರಲಿಲ್ಲ?" ಎಂದು ಕೇಳಿದರು ಅಚ್ಚರಿಯಿಂದ ನನ್ನ ಕಡೆ ತಿರುಗಿ. "ಅದೇನೇ ಇರಲಿ, ಆದರಲ್ಲೇನೂ ತಪ್ಪಿಲ್ಲ, ಎಲ್ಲ ಸರಿಯಾಗೇ ಇದೆ, ಸರಿಯಾಗಿದೆ" ಎಂದರು ಮುಗುಳ್ನಗೆ ಸೂಸುತ್ತ.

'ನಿಜವಾಗ್ಲೂ ಅವರಿಗೇನೂ ಅರ್ಥವಾಗ್ತಾನೇ ಇಲ್ಲವಾ? ಅಥವಾ ಅದಕ್ಕೂ

ಕೆಟ್ಟದ್ದೆಂದರೆ, ಅರ್ಥಮಾಡಿಕೊಳ್ಳೋಕೆ ಅವರಿಗೆ ಇಷ್ಟವಿಲ್ಲವಾ?' ಎಂಬ ಆಲೋಚನೆ ನನ್ನ ಮನಸ್ಸಲ್ಲಿ ಸುಳಿಯಿತು.

ತಕ್ಷಣ ನನಗೆ ಅಳು ಬಂತು. "ನೀವು ಬೇರೆ ರೀತಿ ವರ್ತಿಸಿದ್ದರೆ, ಕಾರಣವಿಲ್ಲದೆ ನಾನೀಗ ಶಿಕ್ಷೆ ಅನುಭವಿಸಬೇಕಾಗಿರಲಿಲ್ಲ, ಅದೆಲ್ಲ ನಿಮ್ಮ ನಿರ್ಲಕ್ಷ್ಯ ತಿರಸ್ಕಾರಗಳಿಂದ ಆದದ್ದು, ನನಗೆ ಅಮೂಲ್ಯವೆನಿಸಿದ್ದನ್ನೆಲ್ಲ ನೀವು ಕಿತ್ಕೊಂಡುಬಿಡ್ತಿರ್ಲಿಲ್ಲ."

"ಏನು ನೀನು ಹೇಳ್ತಿರೋದು, ಮರಿ?" ಅವರಿಗೆ ನನ್ನ ಮಾತುಗಳು ಅರ್ಥವಾದಂತೆ ಕಾಣಲಿಲ್ಲ.

"ಉಹ್ಞೂ! ಮಧ್ಯೆ ತಡೀಬೇಡಿ! ನನ್ನನ್ನು ನಿಮ್ಮ ನಂಬಿಕೆಯಿಂದ, ಪ್ರೀತಿಯಿಂದ, ನಿಮ್ಮ ಗೌರವದಿಂದ ಕೂಡ ಹೊರಹಾಕಿದ್ದೀರಿ. ಹಿಂದಿನದನ್ನೆಲ್ಲ ಜ್ಞಾಪಿಸಿಕೊಂಡಾಗ ನೀವು ನನ್ನನ್ನಿನ್ನೂ ಪ್ರೀತಿಸ್ತಿದ್ದೀರಿ ಅಂತ ನಂಬಕಾಗಲ್ಲ. ಇಲ್ಲ, ಮಾತಾಡೊಲ್ಲ! ತುಂಬ ದಿನಗಳಿಂದ ನನಗೆ ಚಿತ್ರಹಿಂಸೆ ಕೊಡ್ತಾ ಇದ್ದದ್ದು ಏನೂಂತ ಹೇಳಿಬಿಡ್ತೀನಿ. ಬದುಕಿನ ಬಗ್ಗೆ ನನಗೆ ಏನೂ ಗೊತ್ತಿರಲಿಲ್ಲ ಅನ್ನೋದು, ಅನುಭವಪಡೀಲಿ ಅಂತ ನೀವು ನನ್ನನ್ನು ಬಿಟ್ಟುಹೋದ್ದು ನನ್ನ ತಪ್ಪೇ? ತಿಳಿವಳಿಕೆ ಬಂದಿರೋ ಈಗ ಮತ್ತೆ ನಿಮ್ಮ ಹತ್ತಿರ ಬರೋದಕ್ಕೆ ಒಂದು ವರ್ಷದಿಂದ ಹೆಣಗ್ತಾ ಇರೋ ನನ್ನ ನೀವು ದೂರಕ್ಕೆ ತಳ್ಳಿ ನನಗೆ ಏನು ಬೇಕು ಅನ್ನೋದು ನಿಮಗೆ ಅರ್ಥವೇ ಆಗ್ತಾ ಇಲ್ಲ ಅನ್ನೋ ರೀತಿ ನಟಿಸ್ತಾ ಇದೀರಲ್ಲ? ನೀವು ಹಾಗೆ ಮಾಡ್ತಾ ಇದ್ರೂ ನಿಮ್ಮನ್ನ ಬೈಯೋಕಾಗಬಾರ್ದು, ನನ್ನದೇ ತಪ್ಪು ಅಂತ ಕೊರಗ್ತಾ ಇರೋ ಹಾಗೆ ಮಾಡ್ತಿದ್ದೀರಿ. ಹೌದು, ನಮ್ಮಿಬ್ಬರ ಸಂತೋಷಾನ ಪೂರ್ತಿ ಕಿತ್ಕೋಬಹುದಾದ ಬದುಕಿನ ಕಡೆ ನೀವು ಮತ್ತೆ ನನ್ನನ್ನ ತಳ್ಳಿಬಿಡೋಕೆ ಪ್ರಯತ್ನಪಡ್ತಿದ್ದೀರಿ."

"ಹಾಗೆ ನಾನೆಲ್ಲಿ ಮಾಡ್ದೆ?" ಗಾಬರಿ ಅಚ್ಚರಿಗಳನ್ನು ತೋರ್ಪಡಿಸುತ್ತ ಕೇಳಿದರು.

"ನಿನ್ನೆವರೆಗೂ ಹೇಳ್ತಾನೇ ಇದ್ರಿ, ನಿನ್ನೇನೂ ಹೇಳಿದ್ರಿ - ನೀವಿಲ್ಲಿರೋದಕ್ಕೆ ಸಾಧ್ಯ ಇಲ್ಲ, ಈ ಚಳಿಗಾಲಾನೂ ಪೀಟರ್ಸ್‌ಬರ್ಗ್‌ನಲ್ಲೇ ಕಳೀಬೇಕು ಅಂತ. ನನಗೆ ಆ ಪೀಟರ್ಸ್‌ಬರ್ಗ್ ಅಂದ್ರೆ ಆಗಲ್ಲ. ನನಗೆ ಬೆಂಬಲ ಕೊಡೋದರ ಬದಲು, ನೇರ ಮಾತನ್ನು ಹೇಗೋ ತಪ್ಪಿಸಿಕೋತೀರಿ, ನನ್ನ ಬಗ್ಗೆ ಮನದಾಳದಿಂದ ಒಂದೇ ಒಂದು ಪ್ರೀತಿಯ ಮಾತನ್ನೂ ಆಡಲ್ಲ. ಅಷ್ಟೇ ಅಲ್ಲ, ನಾನು ಬಿದ್ದರೆ ಬೈತೀರಿ, ಬಿದ್ದದ್ದಕ್ಕೆ ಸಂತೋಷಪಡ್ತೀರಿ."

"ನಿಲ್ಲಿಸು!" ಎಂದರು ಜೋರಾಗಿ, ಕಟುವಾಗಿ. "ಹಾಗೆ ಹೇಳಕ್ಕೆ ನಿಂಗೆ ಯಾವ ಹಕ್ಕೂ ಅಧಿಕಾರಾನೂ ಇಲ್ಲ. ನಿಂಗೆ ನನ್ನ ಕಂಡ್ರೆ ಆಗಲ್ಲ ಅನ್ನೋದು ಇದರಿಂದ ಗೊತ್ತಾಗತ್ತೆ, ನೀನು ನನ್ನನ್ನ ...."

'ಪ್ರೀತಿಸಲ್ಲ, ಅಲ್ಲವಾ? ಹಾಗಂತ ಹೇಳಿಬಿಡಿ' ಅಂದುಕೊಂಡೆ, ಆದರೆ ನನ್ನ ಗಂಟಲನ್ನು ಗದ್ಗದ ಹಿಡಿದಿತ್ತು. "ನಮ್ಮ ಹಿಂದಿನ ಪ್ರೀತಿ ಎಲ್ಲ ಹೋಯ್ತು, ಹೊರಟೇ

ಹೋಯ್ತು" ಅಂತ ನನ್ನ ಮನಸ್ಸು ಚೀರಿ ಹೇಳಿತು. ಅವರೇನೂ ನನ್ನ ಹತ್ತಿರ ಬಂದು ಸಮಾಧಾನ ಹೇಳಕ್ಕೆ ಪ್ರಯತ್ನಿಸಲಿಲ್ಲ. ಅವರ ಬಗ್ಗೆ ನಾನು ಅಂದಿದ್ದ ಮಾತಿನಿಂದ ಅವರಿಗೆ ನೋವಾಗಿತ್ತು. ಮತ್ತೆ ಅವರು ಮಾತಾಡಿದಾಗ ಅವರ ಧ್ವನಿ ತಣ್ಣಗೆ, ನಿರ್ಭಾವುಕವಾಗಿತ್ತು.

"ನೀನು ನನ್ನನ್ನ ಯಾಕೆ ಆಕ್ಷೇಪ ಮಾಡ್ತಿದ್ದೀ ಅನ್ನೋದೇ ನಂಗೆ ಅರ್ಥ ಆಗ್ತಿಲ್ಲ. ಹಿಂದಿನ ಹಾಗೆ ನಾನು ನಿನ್ನನ್ನ ಪ್ರೀತಿಸ್ತಾ ಇಲ್ಲ ಅಂತ ನಿಂಗೆ ಅನ್ನಿಸಿದ್ರೆ .. .."

"ಪ್ರೀತಿಸ್ತಿದ್ರಿ!" ಕರ್ಚೀಫಿನಲ್ಲಿ ಮುಖ ಹುದುಗಿಸಿಕೊಂಡು ಹೇಳಿದೆ, ಕಣ್ಣೀರು ಧಾರಾಕಾರವಾಗಿ ಸುರೀತು.

"ಹಾಗಾದ್ರೆ, ಅದಕ್ಕೆ ನಮ್ಮನ್ನ ನಾವು ಬೈಯ್ಕೋಬೇಕು. ಬದುಕಿನ ಪ್ರತಿ ಹಂತದಲ್ಲೂ ತನ್ನದೇ ರೀತಿಯ ಪ್ರೀತಿ ಇರತ್ತೆ." ಎಂದು ಹೇಳಿ ಸ್ವಲ್ಪ ಹೊತ್ತು ಸುಮ್ಮನಿದ್ದರು. "ನೀನು ಪ್ರಾಮಾಣಿಕತೇನ ಬಯಸೋದಾದ್ರೆ, ಪೂರ್ತಿ ಸತ್ಯವನ್ನು ಹೇಳಿಬಿಡಲಾ? ನಿನ್ನ ಕಂಡ ಆ ಮೊದಲಿನ ಬೇಸಿಗೆ ಕಾಲದಲ್ಲಿ, ರಾತ್ರಿ ಪೂರ್ತಿ ನಿದ್ದೆ ಇಲ್ಲದೆ ಬಿದ್ಕೊಂಡಿರ್ತಿದ್ದೆ, ನಿನ್ನದೇ ಯೋಚನೆ, ನಾನಾಗೇ ನಿನ್ನ ಪ್ರೀತಿಸಿದ್ದೆ, ನನ್ನ ಹೃದಯದಲ್ಲೇ ಅದನ್ನು ಪೋಷಿಸಿಕೊಂಡು ಬಂದೆ. ಹಾಗೇ ಮತ್ತೆ, ಪೀಟರ್ಸ್‌ಬರ್ಗ್‌ನಲ್ಲಿ ಮತ್ತು ಇತರ ಕಡೆ, ಅದು ನನ್ನ ಹೃದಯದಲ್ಲಿ ಬೆಳೀತಾನೇ ಹೋಯ್ತು. ಆ ರಾತ್ರಿಗಳೆಲ್ಲ ಭಯಂಕರವಾಗಿದ್ವು ನಿದ್ದೆ ಇಲ್ಲದೆ; ಆ ಪ್ರೀತೀನ ನಾನು ಒಡೆದು ಚೂರು ಚೂರು ಮಾಡೋದಕ್ಕೆ ಹರಸಾಹಸಪಟ್ಟೆ. ಯಾಕಂದ್ರೆ ಅದು ನನ್ನ ಜೀವ ಹಿಂಡ್ತಿತ್ತು. ಆದರೆ ನಾನದನ್ನು ಹಾಳುಮಾಡಲಿಲ್ಲ, ನನಗೆ ನೋವು ಕೊಡ್ತಾ ಇದ್ದ ಭಾಗಾನ ಮಾತ್ರ ಕತ್ತರಿಸಿ ಹಾಕ್ದೆ. ಆಮೇಲೆ ನನ್ನಲ್ಲಿ ಸಮಾಧಾನ ಮೂಡಿತು. ಇನ್ನೂ ನನಗೆ ಪ್ರೀತಿ ಇದೆ, ಆದ್ರೆ ಬೇರೆ ಥರದ್ದು."

"ನೀವು ಅದನ್ನ ಪ್ರೀತಿ ಅಂತೀರಿ, ನಾನದನ್ನ ಚಿತ್ರಹಿಂಸೆ ಅಂತೀನಿ. ನಿಮಗೆ ಅದು ಅಷ್ಟೊಂದು ಇಷ್ಟ ಇಲ್ದಿದ್ರೆ, ಆ ಮೇಲಂತಸ್ತಿನ ಜನರ ಜೊತೆ ಬೆರೆಯೋದಕ್ಕೆ ನೀವ್ಯಾಕೆ ಅವಕಾಶ ಮಾಡಿಕೊಟ್ಟಿರಿ, ಆ ಕಾರಣದಿಂದ ನನ್ನ ಮೇಲಿನ ಪ್ರೀತಿ ಕಳಕೊಂಡಿರಿ?"

"ಅದು ಆ ಜನ ಅಲ್ಲ, ಮರಿ."

"ನೀವ್ಯಾಕೆ ನನ್ನ ಮೇಲೆ ಅಧಿಕಾರ ತೋರಿಸ್ಲಿಲ್ಲ? ನನ್ನನ್ನ ಯಾಕೆ ಕೂಡಿಹಾಕಲಿಲ್ಲ, ಕೊಂದು ಹಾಕಲಿಲ್ಲ? ಹಿಂದಿನ ಎಲ್ಲ ಸಂತೋಷನ ಕಳ್ಕೊಳ್ಳೊ ಬದಲು ಹಾಗೆ ಮಾಡಿದ್ದಿದ್ರೆ ಎಷ್ಟೋ ಚೆನ್ನಾಗಿರ್ತಿತ್ತು. ಆಗ ನಾನು ಸುಖವಾಗಿರ್ತಿದ್ದೆ, ಈಗಿನ ಅವಮಾನ ಇರ್ತಿಲ್ಲಿಲ್ಲ."

ಮುಖ ಮುಚ್ಚಿಕೊಂಡು ನಾನು ಮತ್ತೆ ಬಿಕ್ಕತೊಡಗಿದೆ.

ಅಷ್ಟು ಹೊತ್ತಿಗೆ ಕಾತ್ಯಾ ಮತ್ತು ಸೋನಾ ಒದ್ದೆಮುದ್ದೆಯಾಗಿ ನಗುನಗುತ್ತ ಜೋರಾಗಿ ಮಾತಾಡುತ್ತ ವರಾಂಡದಿಂದ ಹೊರಗೆ ಬಂದರು. ನಮ್ಮನ್ನು ನೋಡಿದ ಅವರಿಬ್ಬರೂ ಸುಮ್ಮನಾಗಿ ತಕ್ಷಣವೇ ಒಳಗೆ ಹೋದರು.

ತುಂಬ ಹೊತ್ತು ಮೌನದಿಂದಿದ್ದೆವು. ಚೆನ್ನಾಗಿ ಅತ್ತುಬಿಟ್ಟಿದ್ದರಿಂದ ನನಗೆ ಮನಸ್ಸು ಹಗುರ ಎನಿಸಿತ್ತು. ನಾನು ಅವರ ಕಡೆ ದೃಷ್ಟಿಹರಿಸಿದೆ. ಅವರು ತಮ್ಮ ಕೈಯ ಮೇಲೆ ತಲೆಯನ್ನಾನಿಸಿ ಕೂತಿದ್ದರು. ನನ್ನ ದೃಷ್ಟಿಗೆ ಉತ್ತರ ಎಂಬಂತೆ ಏನೋ ಹೇಳಕ್ಕೆ ಇಷ್ಟಪಡ್ತಿದ್ದ ಹಾಗಿತ್ತು. ಆದರೆ ಬರೀ ನೀಳ ಉಸಿರೊಂದನ್ನು ಬಿಟ್ಟು ಹಿಂದಿನ ತಮ್ಮ ಭಂಗಿಯಲ್ಲೇ ಕೂತರು.

ಅವರ ಬಳಿ ಹೋಗಿ ಕೈ ತೆಗೆದೆ. ನನ್ನ ಕಡೆ ಯೋಚನೆಯಿಂದ ಕೂಡಿದ ತಮ್ಮ ಮುಖ ತಿರುಗಿಸಿದರು.

ತಮ್ಮ ಆಲೋಚನೆಗಳಿಗೆ ಮಾತಿನ ರೂಪ ಕೊಟ್ಟ ಹಾಗೆ ಅವರೆಂದರು: "ಹ್ಞೂ, ನಾವೆಲ್ಲ, ಅದರಲ್ಲೂ ಹೆಂಗಸರು ನೀವು, ಬದುಕಿನ ಅನಿಷ್ಟಗಳ ಅನುಭವವನ್ನೆಲ್ಲ ಸ್ವತಃ ಪಡೀಲೇಬೇಕು, ಆಗಲೇ ನಿಜವಾದ ಜೀವನಕ್ಕೆ ಮರಳೋದಕ್ಕೆ ಸಾಧ್ಯವಾಗೋದು. ಅದಕ್ಕೆ ಜನರನ್ನ ಹೊಣೆ ಮಾಡೋದು ಸರಿ ಅಲ್ಲ. ಆ ಹೊತ್ತಿಗೆ ನಿನ್ನ ಬಗ್ಗೆ ನನಗಿದ್ದ ಮೂರ್ಖ ಆಕರ್ಷಣೆಯ ಕೊನೆ ಏನೂ ಬಂದಿರ್ಲಿಲ್ಲ. ನೀನೇ ಅದನ್ನ ಹೋಗಗೊಟ್ಟೆ, ನಿನ್ನ ಮೇಲೆ ನಾನು ಯಾವುದೇ ಒತ್ತಡ ಹಾಕೋ ಹಾಗಿಲ್ಲ ಅಂದ್ಕೊಂಡೆ, ಅಷ್ಟು ಹೊತ್ತಿಗೆ ಆ ಅನ್ನಿಸಿಕೆ ನನ್ನಿಂದ ದೂರ ಹೋಗಿಬಿಟ್ಟಿತ್ತು."

"ನೀವು ನನ್ನ ಪ್ರೀತಿಸ್ತಿದ್ದರೆ ನನ್ನ ಪಕ್ಕದಲ್ಲೇ ನಿಂತ್ಕೊಂಡು ನಾನದಕ್ಕೆ ಸಿಕ್ಕಿ ನರಳೋ ಹಾಗೆ ಯಾಕೆ ಮಾಡ್ತಿದ್ರಿ?" ಎಂದು ಕೇಳಿದೆ.

"ಯಾಕಂದ್ರೆ, ಆ ವಿಷಯದಲ್ಲಿ ನೀನು ನನ್ನ ಮಾತು ಕೇಳೋ ಸ್ಥಿತೀಲಿರ್ಲಿಲ್ಲ, ಪ್ರಯತ್ನವನ್ನೇನೋಪಡ್ತಿದ್ದಿರಬಹುದು. ನಿಂಗೆ ಸ್ವಂತ ಅನುಭವ ಆವಶ್ಯಕವಾಗಿತ್ತು, ಈಗ ನಿಂಗೆ ಅದಾಗಿದೆ."

"ಅಂದ್ರೆ ಅದನ್ನೆಲ್ಲ ಲೆಕ್ಕಾಚಾರ ಹಾಕಿದ್ರಿ, ಪ್ರೀತಿ ಮಾತ್ರ ಇರ್ಲಿಲ್ಲ."

ಮತ್ತೆ ಅವರು ಮೌನದ ಮೊರೆಹೊಕ್ಕರು.

"ನೀನೀಗ ಹೇಳಿದ್ದು ಕಟುವಾದರೂ, ನಿಜ" ಎಂದು ಮೇಲೆದ್ದು ವರಾಂಡದಲ್ಲಿ ಸುತ್ತಾಡುತ್ತ ಮುಂದುವರಿಸಿದರು: "ಹೌದು, ಅದು ನಿಜ. ಅದಕ್ಕೆ ನನ್ನನ್ನೇ ಬೈಯಬೇಕು" ಎಂದು ನಿಲ್ಲಿಸಿದರು ನನ್ನೆದುರು ಬಂದು. "ನಿನ್ನನ್ನ ಪ್ರೀತಿಯಿಂದ ದೂರ ಇಟ್ಟಿರ್ಬೇಕಾಗಿತ್ತು ಅಥವಾ ಸರಳ ರೀತಿಯ ಪ್ರೀತೀನ ಅಳವಡಿಸ್ಕೋಬೇಕಾಗಿತ್ತು."

"ಅದನ್ನೆಲ್ಲ ಈಗ ಮರೆತುಬಿಡೋಣ" ಎಂದೆ ನಾನು ಅಳುಕಿನಿಂದ.

"ಇಲ್ಲ, ಹಳೇದೆಂದಿಗೂ ವಾಪಸ್ಸು ಬರಲ್ಲ" ಎಂದರು, ಈಗ ಅವರ ಧ್ವನಿ ಮೃದುವಾಗಿತ್ತು.

"ಅದಾಗಲೇ ತನ್ನ ಜಾಗ ಸೇರಿದೆ" ಅಂದೆ ನಾನು ಅವರ ಭುಜದ ಮೇಲೆ ಕೈಯಿಡುತ್ತ. ಅದನ್ನವರು ತೆಗೆದು ತಮ್ಮ ಕೈಯಲ್ಲಿಟ್ಟುಕೊಂಡು ಅದುಮಿದರು.

"ಹಿಂದಸದರ ಬಗ್ಗೆ ನನಗೇನೂ ವಿಷಾದವಿಲ್ಲ ಎಂದೇನಲ್ಲ, ಅದು ತಪ್ಪು. ಅದರ ಬಗ್ಗೆ ವಿಷಾದವಿದೆ; ಇನ್ನೆಂದೂ ಮರುಕಳಿಸಲಾರದ ಹಿಂದಿನ ಪ್ರೀತಿಗಾಗಿ ನಾನು ಕಣ್ಣೀರು ಸುರಿಸ್ತೀನಿ. ಇದಕ್ಕೆ ಯಾರು ಹೊಣೆ, ನನಗಂತೂ ಗೊತ್ತಿಲ್ಲ. ಪ್ರೀತಿಯೇನೋ ಇದೆ, ಆದರೆ ಹಳೇದಲ್ಲ. ಅದರ ಸ್ಥಾನ ಗಟ್ಟಿ, ಆದರೆ ಅದು ದೀರ್ಘಕಾಲ ಕಾದು ತನ್ನ ಸಾಮರ್ಥ್ಯ ಕಳಕೊಂಡಿದೆ. ನೆನಪುಗಳಿನ್ನೂ ಇವೆ, ಕೃತಜ್ಞತೆ ಕೂಡ, ಆದರೆ ...."

"ಇನ್ನೇನೂ ಹೇಳ್ಬೇಡಿ" ಮಧ್ಯೆ ಪ್ರವೇಶಿಸಿ ನುಡಿದೆ: "ಎಲ್ಲ ಹಿಂದೆ ಹೇಗಿತ್ತೋ ಹಾಗೇ ಇರಲಿ! ಅದು ಖಂಡಿತ ಸಾಧ್ಯ, ಅಲ್ಲವಾ?" ಅಂದೆ, ಅವರ ಕಣ್ಣುಗಳಲ್ಲೇ ನೋಟ ನೆಟ್ಟು. ಆದರೆ ಅಲ್ಲಿನ ನೋಟ ಸ್ಪಷ್ಟವೂ ಪ್ರಶಾಂತವೂ ಆಗಿತ್ತು, ನನ್ನ ಕಣ್ಣುಗಳಲ್ಲಿ ಆಳವಾಗಿ ನಾಟಲಿಲ್ಲ.

ನಾನು ಮಾತಾಡುತ್ತ ಇರೋವಾಗಲೂ, ನನ್ನ ಆಸೆಗಳಾಗಲೀ ಬಿನ್ನಹಗಳಾಗಲೀ ನಿಜವಾಗಕ್ಕೆ ಸಾಧ್ಯವಿಲ್ಲ ಅನ್ನೋದು ನನಗೆ ಗೊತ್ತಿತ್ತು. ಅವರು ಪ್ರಶಾಂತತೆಯಿಂದ, ನವುರಾಗಿ ನಕ್ಕರು; ಅದು ನನಗೆ ವಯಸ್ಸಾದವನೊಬ್ಬನ ನಗೆಯಾಗಿ ಕಾಣಿಸಿತು.

"ನೀನಿನ್ನೂ ಅದೆಷ್ಟು ಚಿಕ್ಕವಳಾಗಿದ್ದೀ! ನಾನೋ ವಯಸ್ಸಾದವನು. ನೀನು ನನ್ನಲ್ಲಿ ಏನನ್ನ ಅಪೇಕ್ಷಿಸ್ತಿದ್ದೀಯೋ ಅದು ನನ್ನಲ್ಲಿ ಉಳಿದಿಲ್ಲ. ನಾವ್ಯಾಕೆ ಆತ್ಮವಂಚನೆ ಮಾಡ್ಕೋಬೇಕು?" ನಗುತ್ತಲೇ ಹೇಳಿದರು.

ಅವರೆದುರು ಮೌನದಿಂದ ನಿಂತೆ, ನನ್ನ ಹೃದಯವೂ ಕ್ರಮೇಣ ಶಾಂತವಾಯಿತು.

"ಹಳೇದನ್ನೇ ನಾವು ಮರುಕಳಿಸೋದು ಬೇಡ. ಮುಖವಾಡಗಳನ್ನ ಧರಿಸಿ ಬದುಕೋದು ಬೇಡ. ಹಳೆಯ ಭಾವನೆಗಳಿಗೂ ಉತ್ಕಂಠತೆಗಳಿಗೂ ಕೊನೆ ಇದೆ ಅನ್ನೋದಕ್ಕೆ ನಾವು ಕೃತಜ್ಞರಾಗಿರ್ಬೇಕು. ಹುಡುಕಾಟದ ಉತ್ಕಂಠತೆ ನಮ್ಮ ಪಾಲಿಗೆ ಮುಗಿದು ಹೋದ ಕತೆ; ನಮ್ಮ ಹುಡುಕಾಟ ಮುಗಿದಿದೆ. ನಮಗೆ ಸಾಕಷ್ಟು ಸುಖ ಸಿಕ್ಕಿದೆ. ನಾವೀಗ ದೂರ ನಿಂತು ಅವನಿಗೆ ಅವಕಾಶ ಮಾಡಿಕೊಡೋಣ" ಅಂದರು ಬಾಗಿಲ ಬಳಿ ನಿಂತಿದ್ದ ದಾದಿಯ ಮಡಿಲಲ್ಲಿದ್ದ ವಾನ್ಯಾ ಕಡೆ ನೋಟ ಬೀರಿ. "ಅದೇ ಈಗ ಸತ್ಯ, ಮರಿ" ಎಂದರು ನನ್ನ ಮುಖವನ್ನು ತಮ್ಮೆಡೆಗೆ ಸೆಳೆದುಕೊಂಡು ಮುತ್ತಿಟ್ಟು; ಅವರೀಗ ಹಿಂದಿನ ಪ್ರೇಮಿಯಲ್ಲ, ಹಿರಿಯ ಗೆಳೆಯ ಅಷ್ಟೆ.

ತೋಟದಿಂದ ಹೊಮ್ಮುತ್ತಿದ್ದ ರಾತ್ರಿಯ ಸುಗಂಧಭರಿತ ಹೊಸತನ ಮತ್ತಷ್ಟು ಹೆಚ್ಚಾಯಿತು; ಸದ್ದುಗಳು ಮೌನವೂ ಈಗ ಹೆಚ್ಚು ಗಂಭೀರವಾದವು; ಒಂದಾದ ಮೇಲೊಂದರಂತೆ ಆಗಸದಲ್ಲಿ ಚಿಕ್ಕೆಗಳು ಮಿನುಗತೊಡಗಿದವು. ನಾನವರ ಕಡೆ ನೋಡಿದೆ, ನನ್ನ ಮನಸ್ಸು ತುಂಬ ಹಗುರವಾಗಿದೆ ಅನ್ನಿಸಿತು. ನೋವನ್ನು ಕೊಡುತ್ತಿದ್ದ ನರವನ್ನು ಕತ್ತರಿಸಿ ಹಾಕಿದ ಹಾಗೆ ನನ್ನ ಸಂಕಟದ ಬೇರನ್ನು ಕಿತ್ತೆಸೆದಾಗಿತ್ತು. ಇದ್ದಕ್ಕಿದ್ದಂತೆ ನನ್ನ ಹಿಂದಿನ ಭಾವನೆಗಳೆಲ್ಲ, ಗತಕಾಲದ ಹಾಗೆಯೇ ನೆನಪಿಗೆ ಬಾರದಷ್ಟು ಹಿಂದೆ ಸರಿದಿತ್ತು; ಅದನ್ನು ವಾಪಸ್ಸು ತರುವುದು ಅಸಾಧ್ಯ ಮಾತ್ರವಲ್ಲ, ನೋವಿನದೂ

ಇರಿಸುಮುರಿಸಿನದೂ ಅನ್ನುವ ಅರಿವು ನನ್ನಲ್ಲುಂಟಾಯಿತು.

ನನಗೆ ಸಂತಸದಾಯಕ ಅನ್ನಿಸಿದ ಆ ಕಾಲ ನಿಜವಾಗಿಯೂ ಅಷ್ಟೊಂದು ಒಳ್ಳೆಯದೇ? ಅದೆಲ್ಲ ಹಿಂದಿನದು, ತುಂಬ ಹಿಂದಿನದು!

"ಟೀ ತೊಗೊಳ್ಳಕ್ಕೆ ಸರಿಯಾದ ಸಮಯ" ಅಂದರವರು. ಇಬ್ಬರೂ ನಡುಮನೆಗೆ ಹೋದೆವು. ಬಾಗಿಲ ಹತ್ತಿರ ಮಗುವನ್ನು ಮಡಿಲಲ್ಲಿ ಹೊತ್ತಿದ್ದ ದಾದಿ ಕಾಣಿಸಿದಳು. ಅದನ್ನ ನನ್ನ ತೋಳುಗಳಲ್ಲಿ ತೆಗದುಕೊಂಡೆ, ಕೆಂಭಾರದಿಂದ ಹೊಳೆಯುತ್ತಿದ್ದ ಎಳೆಯ ಕಾಲುಗಳಿಗೆ ಹೊದಿಸಿದೆ, ಎದೆಗೆ ಅಪ್ಪಿಕೊಂಡು ನನ್ನ ತುಟಿಗಳಿಂದ ಹೂಮುತ್ತನ್ನಿತ್ತೆ. ಇನ್ನೂ ನಿದ್ದೆಯಲ್ಲಿದ್ದ ಮಗು ಮುಚ್ಚಿಕೊಂಡಿದ್ದ ಪುಟ್ಟ ಕೈಬೆರಳುಗಳನ್ನು ಬಿಡಿಸುತ್ತ ತನ್ನ ಕಣ್ಣುಗಳನ್ನು ಅರೆತೆರೆದು ನೋಡಿದಾಗ ಏನನ್ನೋ ಹುಡುಕುತ್ತಿರುವ ಹಾಗೆ ಅಥವಾ ನೆನಪಿಸಿಕೊಳ್ಳುತ್ತಿರುವ ಹಾಗೆ ಕಾಣಿಸಿತು. ಇದ್ದಕ್ಕಿದ್ದಂತೆ ಅದರ ಕಣ್ಣುಗಳು ನನ್ನ ಮೇಲೆ ನೆಟ್ಟು ಪ್ರಜ್ಞೆಯ ಹೊಳಹು ಕಾಣಿಸಿತು, ಊದಿಸಿಕೊಂಡಂತಿದ್ದ ತುಟಿಗಳು ಈಗ ಬಿರಿದು ಹೂನಗೆಯಾಯಿತು. "ನನ್ನ ಕಂದಮ್ಮ, ಕಂದಮ್ಮ!" ಎಂದುಕೊಂಡೆ ನನ್ನೆದೆಗೆ ಅವುಚಿಕೊಳ್ಳುತ್ತ; ನನ್ನ ನರನಾಡಿಗಳಲ್ಲೆಲ್ಲ ಹರ್ಷದ ಹೊನಲು ಹರಿಯಿತು; ಅದಕ್ಕೆ ನೋವಾಗಬಹುದೆಂಬುದನ್ನೂ ಲೆಕ್ಕಿಸವೆ ಜೋರಾಗಿ ಅಪ್ಪಿಕೊಂಡೆ. ಅದರ ತಣ್ಣನೆಯ ಪುಟ್ಟ ಪಾದಗಳನ್ನು, ಹೊಟ್ಟೆಯನ್ನು, ತೆಳು ಹೊದಿಕೆಯಿದ್ದ ತಲೆಯನ್ನು ಮುದ್ದಿಸಲು ಬಾಗಿದೆ. ನಮ್ಮ ಯಜಮಾನರು ನನ್ನ ಬಳಿ ಬಂದರು, ಬೇಗ ಮಗುವಿನ ಮುಖದ ಮೇಲೆ ಮುಸುಕು ಹಾಕಿ ಮತ್ತೆ ತೆಗೆದರು.

"ಇವಾನ್ ಸೆರ್ಗೆಯಿಚ್!" ಎಂದರು ಅವರು, ಮಗುವಿನ ಕತ್ತಲ್ಲಿ ಕಚಗುಳಿಯಿರಿಸುತ್ತ. ಆದರೆ ನಾನು ಮತ್ತೆ ಬೇಗ ಇವಾನ್ ಸೆರ್ಗೆಯಿಚ್ ಮೇಲೆ ಹೊದಿಕೆ ಹೊದಿಸಿದೆ. ನನ್ನ ಬಿಟ್ಟು ಯಾರೂ ಅದರ ಕಡೆ ನೆಟ್ಟ ನೋಟದಿಂದ ನೋಡೋ ಹಾಗಿಲ್ಲ. ಯಜಮಾನರ ಕಡೆ ನೋಡಿದೆ. ನನ್ನ ಕಡೆ ನೋಡಿದಾಗ ಅವರ ಕಣ್ಣುಗಳಲ್ಲಿ ನಗು ಸುಳಿದಾಡಿತು. ಅವುಗಳಲ್ಲಿ ನಾನೀಗ ಸುಲಭವಾಗಿಯೂ ಸಂತೋಷದಿಂದಲೂ ನನ್ನ ನೋಟವನ್ನಿರಿಸಿದೆ. ಹೀಗೆ ಮಾಡಿ ಬಹು ಕಾಲವಾಗಿತ್ತು.

ಆವತ್ತು ನಮ್ಮ ರಮ್ಯ ಪ್ರಣಯಕಾಲ ಮುಗಿಯಿತು; ಹಳೆಯ ಭಾವನೆಗಳೀಗ ಅಮೂಲ್ಯವಾದವು, ಮರಳಿ ನನಸಾಗಲಾರದ ನೆನಪುಗಳಾದವು; ಆದರೆ ನನ್ನ ಮಕ್ಕಳ ಬಗ್ಗೆ ಹಾಗೂ ಅವುಗಳ ಅಪ್ಪನ ಬಗ್ಗೆ ಹೊಚ್ಚ ಹೊಸ ಪ್ರೇಮ ಕಣ್ತೆರೆಯಿತು. ಅದೇ ಆನಂತರದ ಬದುಕಿಗೆ ಹೊಸ ಬಗೆಯ ಸಂತಸಕ್ಕೆ ಬುನಾದಿಯಾಯಿತು. ಆ ಬದುಕು, ಆ ಸಂತಸ ಈಗಲೂ ಜೀವಂತವಾಗಿವೆ. (1859)

# ಕ್ರೂಸರ್ ಸೊನಾಟ

"ಯಾವನಾದರೂ ಗಂಡಸು ಹೆಂಗಸೊಬ್ಬಳ ಕಡೆ ಕಾಮುಕ ದೃಷ್ಟಿ ಹರಿಸಿದರೆ ಅವನಾಗಲೇ ಮನಸ್ಸಿನಲ್ಲಿ ಅವಳೊಡನೆ ಹಾದರಕ್ಕಿಳಿದಿರುತ್ತಾನೆ" - ಮ್ಯಾಥ್ಯೂ, 5. 28

"ಇದು ತನ್ನ ಹೆಂಡತಿಯ ಬಗೆಗೇ ಆಗಿದ್ದರೆ, ಅವನು ಅವಳನ್ನು ಮದುವೆಯಾಗುವ ಪ್ರಶ್ನೆ ಅನ್ವಯವಾಗದು ಅಲ್ಲವೇ?" ಎಂದು ಶಿಷ್ಯರು ಕೇಳಿದರು; "ಈ ಮಾತು ಯಾರನ್ನು ಕುರಿತು ಹೇಳಿದೆಯೋ ಅಂಥವರಿಗೆ ಮಾತ್ರ ಅನ್ವಯಿಸುವುದೇ ಹೊರತು ಇತರರಿಗಲ್ಲ" ಎಂದವನು ಹೇಳಿದ - ಅದೇ, 19. 10.11

ರೈಲು ಪ್ರತಿ ಸ್ಟೇಷನ್ನಲ್ಲಿ ನಿಂತಾಗಲೂ ನಮ್ಮ ಗಾಡಿಯಲ್ಲಿದ್ದ ಪ್ರಯಾಣಿಕರು ಇಳಿದು ಹೊಸಬರು ಬರುತ್ತಿದ್ದರು. ಆದರೆ ದೂರಕ್ಕೆ ಪ್ರಯಾಣ ಮಾಡುತ್ತಿದ್ದ ಮೂವರು, ಹಾಗೆಯೇ ನಾನೂ, ನಮ್ಮ ನಮ್ಮ ಜಾಗಗಳಿಗೆ ಅಂಟಿಕೊಂಡಿದ್ದೆವು. ಅವರಲ್ಲಿ ಒಬ್ಬ ಹೆಂಗಸು ಮತ್ತವಳ ಸಂಗಾತಿಯಿದ್ದರು. ಆ ಹೆಣ್ಣು ಕಿರುಹರೆಯದವಳೂ ಅಲ್ಲ, ಚೆಲುವೆಯೂ ಅಲ್ಲ. ಚಿಕ್ಕ ಮುಖದ ಆಕೆಯ ಬಾಯಲ್ಲಿ ಸಿಗರೇಟಿತ್ತು; ಗಂಡಸರು ತೊಟ್ಟುಕೊಳ್ಳುವಂತಹ ಜಾಕೆಟ್ ಒಂದನ್ನು ಧರಿಸಿದ್ದಳು, ತಲೆಯ ಮೇಲೊಂದು ಟೋಪಿ. ಆಕೆಯ ಸಂಗಾತಿ ಮಾತ್ರ ಮಾತುಗಾರ. ಆತನಿಗೆ ಸುಮಾರು ನಲವತ್ತು ವರ್ಷಗಳಾಗಿತ್ತು. ಅವರಿಬ್ಬರ ಬ್ಯಾಗೇಜುಗಳು ಹೊಸವೂ ನೀಟಾಗಿ ಕಟ್ಟಿದ್ದೂ ಆಗಿದ್ದವು. ಇನ್ನೊಬ್ಬ ಮಹನೀಯ ಮಾತ್ರ ತನ್ನ ಪಾಡಿಗೆ ತಾನು ಕುಳಿತಿದ್ದ. ಅಷ್ಟೇನೂ ಎತ್ತರವಲ್ಲದ ದೇಹ, ತೀರ ಸಂಕೋಚ ಸ್ವಭಾವದವನಂತಿದ್ದ ಆತನ ವಯಸ್ಸು ಇಷ್ಟೇ ಎಂದು ಹೇಳಲಾಗುತ್ತಿರಲಿಲ್ಲ; ಕಣ್ಣುಗಳು ಮಾತ್ರ ಹೊಳೆಯುತ್ತಿದ್ದವು, ಅತ್ತಿಂದಿತ್ತ ಅವು ಲಕಲಕನೆ ನೋಡುತ್ತಿದ್ದವು; ಅಂಥದ್ದೇನೂ ಎದ್ದು ಕಾಣುವ ಮೈಬಣ್ಣವಲ್ಲದಿದ್ದರೂ ಆತ ತುಂಬ ಅಂದವಾಗಿದ್ದ.

ಈ ವ್ಯಕ್ತಿ, ಅಲ್ಲಿಯವರೆಗಿನ ಪ್ರಯಾಣದಲ್ಲಿ, ಯಾರೊಂದಿಗೂ ಮಾತನಾಡಿದವನಲ್ಲ; ಇತರರೊಂದಿಗಿನ ಮಾತನ್ನು ಬೇಕಂತಲೇ ತಪ್ಪಿಸಿಕೊಳ್ಳುತ್ತಿದ್ದಂತಿತ್ತು.

ಯಾರಾದರೂ ಮಾತಾಡಿಸಿದರೆ ಅವನ ಉತ್ತರ ಕಡ್ಡಿ ತುಂಡು ಮಾಡಿದ ಹಾಗೆ ಎಷ್ಟು ಬೇಕೋ ಅಷ್ಟು. ಹ್ಞಾ ಹ್ಞೂ ಅಂತ ಹೇಳಿ ಮುಖ ತಿರುಗಿಸಿಕೊಂಡು ಕಿಟಕಿಯಾಚೆಗೆ ದೃಷ್ಟಿ ಹೊರಳಿಸುತ್ತಿದ್ದ.

ಆದರೆ ಒಂಟಿತನ ಆತನಿಗೆ ದುರ್ಭರವಾಗುತ್ತಿದೆ ಎಂದು ನನಗನ್ನಿಸಿತು. ನನ್ನ ಈ ಆಲೋಚನೆ ಆತನಿಗೆ ಕಾಣಿಸಿತೇನೋ; ನಮ್ಮ ದೃಷ್ಟಿಗಳು ಸೇರಿದಾಗ - ನಾವಿಬ್ಬರೂ ಎದುರುಬದುರೇ ಕೂತಿದ್ದುದರಿಂದ ಆಗಾಗ ಹಾಗೆ ಆಗುತ್ತಿತ್ತು - ತನ್ನ ಮುಖ ತಿರುಗಿಸಿಕೊಂಡು ಇತರರೊಂದಿಗೆ ಹೇಗೋ ಹಾಗೆಯೇ ನನ್ನೊಡನೆಯೂ ಮಾತುಕತೆಯನ್ನು ದೂರಮಾಡುತ್ತಿದ್ದ. ರಾತ್ರಿಯಾಗಿ ಯಾವುದೋ ಸ್ಟೇಷನ್ ಬಂದಾಗ, ನೀಟಾದ ಬ್ಯಾಗೇಜುಗಳ ವ್ಯಕ್ತಿ - ಆತ ಒಬ್ಬ ವಕೀಲ ಎಂದು ಇಷ್ಟು ಹೊತ್ತಿಗಾಗಲೇ ತಿಳಿದಿತ್ತು - ಹತ್ತಿರದಲ್ಲೇ ಇದ್ದ ರೆಸ್ಟೊರೆಂಟಲ್ಲಿ ಟೀ ಕುಡಿಯಲೆಂದು ತನ್ನ ಸಂಗಾತಿಯೊಂದಿಗೆ ಗಾಡಿಯಿಂದ ಇಳಿದುಹೋದ. ಅವರಿಲ್ಲದಾಗ ಅನೇಕ ಹೊಸ ಪ್ರಯಾಣಿಕರು ಗಾಡಿಯೊಳಕ್ಕೆ ಬಂದರು. ಅವರಲ್ಲಿ ಒಬ್ಬ ನೀಳವಾಗಿದ್ದ. ವಯಸ್ಸಾದವನು, ನೋಡಿದರೆ ವ್ಯಾಪಾರಿಯಂತಿದ್ದ - ಮುಖ ಕ್ಷೌರ ಮಾಡಿಕೊಂಡಿದ್ದರಿಂದಾಗಿ ಅವನ ಮುಖದ ಸುಕ್ಕು ಕಾಣಿಸುತ್ತಿತ್ತು; ಎದ್ದು ಕಾಣುವ ಹೊಲಿಗೆಯಿದ್ದ ನಿಲುವಂಗಿ ತೊಟ್ಟು ತಲೆಯ ಮೇಲೊಂದು ಟೋಪಿ ಇರಿಸಿಕೊಂಡಿದ್ದ. ವಕೀಲ ಮತ್ತವನ ಸಂಗಾತಿಯ ಸೀಟುಗಳೆದುರಿನ ಖಾಲಿ ಜಾಗದಲ್ಲಿ ಈ ವ್ಯಾಪಾರಿ ಕೂತ. ಕೂತವನೇ ತನ್ನಂತೆಯೇ ಆಗ ತಾನೇ ಗಾಡಿಗೆ ಹತ್ತಿದ್ದ - ಅಂಗಡಿಯೊಂದರಲ್ಲಿ ನೌಕರಿಯಲ್ಲಿದ್ದಂತಿದ್ದ - ಯುವಕನೊಂದಿಗೆ ನೇರವಾಗಿ ಮಾತಿಗಿಳಿದ. ಎದುರಿನ ಸೀಟಲ್ಲಿ ಯಾರೋ ಕೂತಿದ್ದಾರೆಂದು ಆ ಕ್ಲರ್ಕ್ ಮೊದಲೇ ತಿಳಿಸಿದ; ಆದರೆ ತಾನು ಮುಂದಿನ ಸ್ಟೇಷನ್ನಿನಲ್ಲಿಯೇ ಇಳಿದುಬಿಡುವುದಾಗಿ ಹೇಳಿ ಅವನು ಮಾತು ಮುಂದುವರಿಸಿದ.

ನಾನು ಕುಳಿತಿದ್ದ ಜಾಗ ಅವರಿಬ್ಬರಿದ್ದ ಕಡೆಗೇನೂ ದೂರವಿರಲಿಲ್ಲ. ರೈಲು ಹೊರಟಾಗ ಬೇರೆಯವರಾರೂ ಮಾತಾಡದಿದ್ದಾಗ ಅವರಿಬ್ಬರ ಒಂದಷ್ಟು ಮಾತುಗಳು ನನ್ನ ಕಿವಿಗೂ ಬೀಳುತ್ತಿತ್ತು. ಅವರು ಮೊದಲು ಮಾತಾಡಿದ ವಿಷಯವೆಂದರೆ ವಸ್ತುಗಳ ಧಾರಣೆಯ ಬಗ್ಗೆ, ವ್ಯಾಪಾರದ ಪರಿಸ್ಥಿತಿಯ ಬಗ್ಗೆ. ಅವರಿಬ್ಬರ ಮಾತು ಇಬ್ಬರಿಗೂ ಪರಿಚಯವಿದ್ದ ವ್ಯಕ್ತಿಯೊಬ್ಬನ ಕಡೆ ಹರಿಯಿತು: ಆಮೇಲೆ ಹೊರಳಿದ್ದು ನಿಜ್ನಿ ನೊವ್ಗೊರೋದ್ನ ಪರಿಷೆಯ ಬಗ್ಗೆ. ಆ ಊರಲ್ಲಿ ಐಷಾರಾಮಿ ಜೀವನ ನಡೆಸುತ್ತಿದ್ದ ಅನೇಕರು ತನಗೆ ಗೊತ್ತಿರುವರೆಂದು ಆ ಯುವಕ ಜಂಬ ಕೊಚ್ಚಿಕೊಳ್ಳುತ್ತಿದ್ದ. ಆದರೆ ಅವನ ಮಾತು ಮುಂದುವರಿಯದಂತೆ ಮುದುಕ ತಡೆದು ತಾನು ಹಿಂದಿನ ವರ್ಷ ಭಾಗವಹಿಸಿದ್ದ ಕೌನವಿನೋದಲ್ಲಿನ ಸಮಾರಂಭಗಳ ಬಗ್ಗೆ ಮಾತಾಡಿದ. ಆ ಬಗ್ಗೆ ಅವನಿಗೆ ಹೆಮ್ಮೆಯಿದ್ದುದು ಸ್ಪಷ್ಟವಾಗಿತ್ತು; ತನ್ನ ಮುಖದ ಗಾಂಭೀರ್ಯ ಹಾಗೂ ನಡವಳಿಕೆಯ ಸಭ್ಯತೆಯನ್ನು ಕಡಿಮೆಗೊಳಿಸದೆಂದು ತಿಳಿದಿದ್ದುದರಿಂದಲೋ ಏನೋ ಕೌನವಿನೋದಲ್ಲಿ ತಾನು ಕುಡಿದು ಗುಂಡು ಹಾರಿಸಿದುದನ್ನು ಹೆಮ್ಮೆಯಿಂದ ಹೇಳಿಕೊಂಡ, ಆದರೆ

ಪಿಸುಮಾತಲ್ಲಿ.

ಈ ಮಾತು ಕೇಳಿ ಕ್ಲರ್ಕ್ ಜೋರಾಗಿ ನಕ್ಕ; ಮುದುಕನೂ ನಕ್ಕ, ಉದ್ದನೆಯ ತನ್ನೆರಡು ಹಳದಿ ಹಲ್ಲುಗಳು ಕಾಣುವಂತೆ. ಅವರ ಮಾತುಕತೆ ನನ್ನಲ್ಲಿ ಯಾವ ಆಸಕ್ತಿಯನ್ನೂ ಉಂಟುಮಾಡಲಿಲ್ಲ. ಕಾಲನ್ನು ಚಾಚುವುದಕ್ಕಾಗಿ ಮೇಲೆದ್ದು ನನ್ನ ಜಾಗ ಬಿಟ್ಟು ಹೊರಟೆ; ಬಾಗಿಲಲ್ಲಿ ವಕೀಲ ಮತ್ತವನ ಸಂಗಾತಿ ಎದುರಾದರು. "ಸಮಯ ಇಲ್ಲ, ಇನ್ನೇನು ಎರಡನೇ ಬೆಲ್ಲು ಹೊಡೆಯೋ ಹೊತ್ತು" ಎಂದ ವಕೀಲ ನನ್ನೆಡೆಗೆ ತಿರುಗಿ. ನಾನಿನ್ನೂ ಗಾಡಿಯ ಹಿಂತುದಿಯನ್ನು ತಲುಪಿರಲಿಲ್ಲ, ಬೆಲ್ಲು ಬಾರಿಸಿದ್ದು ಕೇಳಿಸಿತು. ನಾನು ಮತ್ತೆ ಗಾಡಿಯೊಳಕ್ಕೆ ಬಂದಾಗ, ವಕೀಲ ತನ್ನ ಸಂಗಾತಿಯೊಡನೆ ಏನೋ ಭರಾಟೆಯ ಮಾತುಕತೆಗೆ ತೊಡಗಿದ್ದ. ಅವನೆದುರಿಗೇ ಕುಳಿತಿದ್ದ ಮುದುಕ ಈಗ ಮೌನದ ಮೊರೆ ಹೊಕ್ಕ.

ಅವರನ್ನು ಹಾದು ಹೋಗುವಾಗ ಆ ವಕೀಲ ಮುಗುಳ್ನಗುತ್ತ, "ಆಗವಳು ತನ್ನ ಗಂಡನಿಗೆ ನೇರವಾಗಿಯೇ ಹೇಳಿಬಿಟ್ಟಳು, ನಾನಿನ್ನು ನಿಮ್ಮ ಜೊತೆಯಲ್ಲಿ ಬಾಳಲಾರೆ ಅಂತ. ಯಾಕಂದ್ರೆ ..." ಎಂದು ಮಾತನ್ನೇನೋ ಮುಂದುವರಿಸಿದ. ಆದರೆ ನನ್ನ ಗಮನ ಎದುರಿಗೆ ಬಂದ ಕಂಡಕ್ಟರ್ ಮತ್ತು ಹೊಸಬ ಪ್ರಯಾಣಿಕರೊಬ್ಬರ ಕಡೆಗೆ ಹರಿದಿದ್ದರಿಂದ ಆ ಮಾತುಗಳು ನನಗೆ ಕೇಳಿಸಲಿಲ್ಲ. ಮತ್ತೆ ಮೌನ ಆವರಿಸಿದಾಗ, ಮರಳಿ ವಕೀಲನ ಧ್ವನಿ ಕೇಳಿಸಿತು. ಇಷ್ಟು ಹೊತ್ತಿಗೆ ಆತನ ಮಾತು ವ್ಯಕ್ತಿಯೊಬ್ಬನ ಬದಲು ಸಾಮಾನ್ಯವಾದುದರ ಕಡೆಗೆ ಹೊರಳಿತ್ತು.

"ಆಮೇಲೆ ಬರೋದು ಭಿನ್ನಾಭಿಪ್ರಾಯ, ಹಣಕಾಸು ಮುಗ್ಗಟ್ಟು, ಇಬ್ಬರ ನಡುವೆ ವಿವಾದಗಳು, ಕೊನೆಗೆ ಗಂಡ-ಹೆಂಡತಿ ಬೇರೆಯಾಗೋದು. ಇವೆಲ್ಲ ಹಿಂದಿನ ಕಾಲದಲ್ಲಿ ನಡೀತಾನೇ ಇರ್ಲಿಲ್ಲ, ಅಲ್ವಾ?" ಎಂದು ವಕೀಲ ಇಬ್ಬರೂ ವ್ಯಾಪಾರಿಗಳನ್ನು ಕೇಳಿದ; ಅವನು ಮಾತುಕತೆಗೆ ಅವರಿಬ್ಬರನ್ನೂ ತೊಡಗಿಸಿಕೊಳ್ಳೋ ಭರಾಟೆಯಲ್ಲಿದ್ದಂತೆ ಕಾಣಿಸಿತು.

ಅಷ್ಟು ಹೊತ್ತಿಗೆ ರೈಲು ಚಲಿಸತೊಡಗಿತು. ಮುದುಕ ಉತ್ತರ ಕೊಡದೆ, ತನ್ನ ಟೋಪಿ ತೆಗೆದು ತನ್ನಲ್ಲೇ ಪ್ರಾರ್ಥನೆಯನ್ನು ಗೊಣಗಿಕೊಳ್ಳುತ್ತ ಮೂರು ಬಾರಿ ಎದೆ ಮೇಲೆ ಶಿಲುಬೆ ಆಕಾರ ಬರೆದ. ಅದು ಮುಗಿದ ಮೇಲೆ ಟೋಪಿಯನ್ನು ತಲೆಯ ಮೇಲೆ ಟಪ್ಪನೆ ಹಾಕಿಕೊಂಡು, "ಹೌದು ಸಾರ್, ಆದ್ರೆ ಅದು ಹಿಂದಿನ ಕಾಲ್ದಲ್ಲೂ ನಡೀತಾನೇ ಇತ್ತು, ಆದ್ರೆ ಈಗಿನಷ್ಟು ಅಲ್ಲ ಅನ್ನಿ. ಈ ಕಾಲ್ದಲ್ಲಿ ಅದು ಆಗಿಂದಾಗ್ಗೆ ನಡೀತಾನೇ ಇರ್ಬೇಕು. ಜನ ತುಂಬ ಬುದ್ಧಿವಂತರಾಗಿಬಿಟ್ಟಿದಾರೆ" ಎಂದ.

ವಕೀಲ ಮುದುಕನಿಗೆ ಏನೋ ಹೇಳಿದ, ಆದರೆ ತನ್ನ ವೇಗ ಹೆಚ್ಚು ಮಾಡಿಕೊಳ್ಳುತ್ತಿದ್ದ ರೈಲು ಆಡಿದ ಮಾತು ಸ್ಪಷ್ಟವಾಗಿ ಕೇಳಿಸದಷ್ಟು ಜೋರಾಗಿ ಸದ್ದು ಮಾಡತೊಡಗಿತ್ತು. ಮುದುಕ ಹೇಳುತ್ತ ಇದ್ದುದು ನನ್ನ ಕುತೂಹಲ ಕೆರಳಿಸಿತ್ತು; ನಾನು ಹತ್ತಿರಕ್ಕೆ ಸರಿದೆ. ನನ್ನ

ಪಕ್ಕದ ಪ್ರಯಾಣಿಕ ಕೂಡ ಅದೇ ಸಂಕೋಚ ಸ್ವಭಾವದವನು, ತನ್ನ ಜಾಗ ಬದಲಿಸದೆಯೇ ಕಿವಿ ನಿಮಿರಿಸಿಕೊಂಡು ಕೂತ.

"ಅಲ್ಲ, ವಿದ್ಯೆ ಕಲಿಯೋದ್ರಲ್ಲಿ ಏನಿದೆ ತೊಂದ್ರೆ ಅಂತ?" ಎಂದು ಕೇಳಿದವಳು ಆ ಹೆಂಗಸು. ಕಂಡೂ ಕಾಣಿಸದಷ್ಟು ಮೆಲುನಗೆ ಸೂಸುತ್ತ ಆಕೆ ತನ್ನ ಮಾತನ್ನು ಮುಂದುವರಿಸಿದಳು: "ಹುಡುಗ ಹುಡುಗಿ ಪರಸ್ಪರರ ಮುಖ ಕೂಡ ನೋಡದೇನೇ ಮದುವೆಯಾಗ್ತಿದ್ದ ಹಿಂದಿನ ಪದ್ಧತೀನೇ ಒಳ್ಳೇದಾ?" ಹೆಂಗಸರ ಅಭ್ಯಾಸದಂತೆ ತನ್ನ ಜೊತೆ ಮಾತಾಡುವವನು ಇನ್ನೂ ಆಡದೇ ಇರೋ ಮಾತಿಗೆ, ಮುಂದೆ ಆಡಬಹುದು ಅನ್ನೋ ಹಾಗೆ, ಈಗಲೇ ಉತ್ತರ ಕೊಡುವ ರೀತಿಯಲ್ಲಿ ಹೇಳಿದಳು. "ಹೆಂಗಸಂತೂ ತನಗೆ ಗಂಡಿನ ಮೇಲೆ ಪ್ರೀತಿ ಇದೆಯಾ, ಅವನು ತನ್ನನ್ನ ಪ್ರೀತಿಸ್ತಾನಾ ಅಂತ ತಿಳಿತಾನೇ ಇರ್ಲಿಲ್ಲ. ಒಪ್ಪಿದ ಮೊದಲ ಗಂಡಿನ ಜೊತೇಲಿ ಮದುವೆ ಮಾಡಿಬಿಡ್ತಿದ್ದರು. ಹೀಗಾಗಿ ಜೀವನ ಪೂರ್ತಿ ನವೀಬೇಕಾಗ್ತಿತ್ತು. ಅದೇ ಉತ್ತಮ ಅಂತಲಾ ನೀವು ಹೇಳೋದು?" ಆಕೆ ವಕೀಲ ಹಾಗೂ ನನ್ನ ಕಡೆ ತಿರುಗಿ ಈ ಮಾತು ಹೇಳಿದ್ದಳು, ಮುದುಕನಿಗೆ ಈ ಪ್ರಶ್ನೇನ ಕೇಳಿರ್ಲಿಲ್ಲ.

"ಜನವಂತೂ ತುಂಬ ಜಾಣರಾಗಿಬಿಟ್ಟಿದಾರೆ" ಎಂದ ಮುದುಕ, ಆ ಮಹಿಳೆಯ ಕಡೆಗೆ ತಿರುಗಿ. ಅವನ ಮುಖದಲ್ಲಿ ತಿರಸ್ಕಾರವೇನೂ ಇರಲಿಲ್ಲ, ಆದರೆ ಸ್ಪಷ್ಟ ಉತ್ತರ ಮಾತ್ರ ಕೊಟ್ಟಿರಲಿಲ್ಲ.

"ವಿದ್ಯೆಗೂ ಗಂಡಹೆಂಡತಿ ಬಾಳ್ವೆಗೂ ಸಂಬಂಧ ಹೇಗೆ ಅನ್ನೋ ವಿಷಯದಲ್ಲಿ ನೀವೇನು ಹೇಳ್ತೀರೋ ಕೇಳಕ್ಕೆ ತುಂಬ ಕುತೂಹಲ ಇದೆ" ಎಂದ ಮುಗುಳ್ನಗುತ್ತ ವಕೀಲ.

ವ್ಯಾಪಾರಿ ಏನೋ ಉತ್ತರ ಕೊಡಬೇಕೂಂತ ಅಂತ ತವಕಿಸುತ್ತಿದ್ದ, ಆದರೆ ಮಹಿಳೆ ನಡುವೆ ಬಾಯಿಹಾಕಿ, "ಆ ದಿನಗಳು ಈಗ ಗತಕಾಲದವು" ಅಂದಳು.

ಈ ಬಾರಿ ವಕೀಲ ಅವಳ ಮಾತಿನ ನಡುವೆ ತಡೆದು, "ಮೊದಲು ಅವರು ಏನು ಹೇಳ್ತಾರೋ ಕೇಳೋಣ" ಎಂದ.

"ಯಾಕಂದ್ರೆ ಇನ್ನೇನು ಭಯವಿಲ್ಲವಲ್ಲ" ಎಂದುತ್ತರವಿತ್ತ ಮುದುಕ.

"ಆದರೆ ಪರಸ್ಪರ ಪ್ರೀತಿಸದೇ ಇರೋರಿಗೆ ಮದುವೆ ಹೇಗೆ ಮಾಡ್ತೀರಿ? ಪ್ರಾಣಿಗಳು ಮಾತ್ರ ಯಜಮಾನನ ಇರಾದೆ ಮೇಲೆ ಒಂದಾಗಬಹುದು, ಅಷ್ಟೆ. ಆದರೆ ಮನುಷ್ಯರಿಗೆ ಬೇಕು ಬೇಡಗಳಿರತ್ವೆ, ಆತ್ಮೀಯತೆ ಅನ್ನೋದೊಂದು ಇರತ್ತೆ" ಎಂದು ಮಹಿಳೆ ಸೇರಿಸಿ, ವಕೀಲನ ಕಡೆ ದೃಷ್ಟಿ ಹರಿಸಿದಳು, ಆಮೇಲೆ ನನ್ನ ಕಡೆ, ಕೊನೆಗೆ, ನಿಂತುಕೊಂಡು ಸೀಟಿನ ಹಿಂಬದಿಗೆ ತನ್ನ ಮೊಣಕೈಯೂರಿ ಮುಗುಳ್ನಗೆಯಿಂದ ಕೂಡಿ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದ ಆ ಕ್ಲರ್ಕ್ನ ಕಡೆ ಕೂಡ ನೋಡಿದಳು.

"ನೀವು ಹೇಳ್ತಿರೋದು ಸರಿಯಲ್ಲ, ಮೇಡಂ. ಪ್ರಾಣಿಗಳು ವಿವೇಕ ಇಲ್ಲದವು, ಆದರೆ ಮನುಷ್ಯನಿಗೆ ನೀತಿನಿಯಮ ಅಂತ ಇದೆ" ಎಂದ ಮುದುಕ.

"ಏನಾದ್ರೂ ಆಗಲಿ, ಪ್ರೀತಿಯೇ ಇಲ್ಲದ ಗಂಡನ ಜೊತೇಲಿ ಹೆಣ್ಣು ಜೀವಮಾನ ಪೂರ್ತಿ ಕಳೆಯೋದು ಹೇಗೇಂತ?" ಎಂದು ಹೇಳಿದಳು ಮಹಿಳೆ. ಎಲ್ಲರ ಗಮನ ಹಾಗೂ ಸಹಾನುಭೂತಿ ಇದ್ದುದರಿಂದ ಆಕೆ ಉತ್ಸುಕಳಾದಂತೆ ತೋರಿತು.

"ಹಿಂದೆ ಅಂಥ ವ್ಯತ್ಯಾಸಾನೇ ಮಾಡ್ತಿರಲಿಲ್ಲ. ನಾವು ಅಭ್ಯಾಸದ ಭಾಗವಾಗಿರೋದು ಈಗಲೇ. ಏನಾದ್ರೂ ಒಂದು ಸಣ್ಣದು ಸಂಭವಿಸಿದ್ರೂ ಹೆಂಗಸು, 'ನಾನು ಮನೇ ಬಿಟ್ಟು ತೌರಿಗೆ ಹೋಗ್ತೀನಿ' ಅಂತ ಹೇಳ್ತಾಳೆ. ರೈತಾಪಿ ಜನರಲ್ಲಿ ಕೂಡ ಈ ಚಾಳಿ ಜಾಸ್ತಿಯಾಗಿ ಹೋಗಿದೆ. 'ಇಲ್ನೋಡಿ, ನಿಮ್ಮ ಷರ್ಟು ಬಟ್ಟೆ ಎಲ್ಲ ಇಲ್ಲಿದೆ. ನಾನು ವ್ಯಾಂಕ್‌ನ ಹತ್ರ ಹೋಗ್ತೀನಿ. ಅವನಿಗೆ ನಿಮಗಿಂತ ಚೆನ್ನಾದ ಗುಂಗುರು ಕೂದಲಿದೆ' ಅಂತಾಳೆ ಹೆಂಡತಿ. ಬೇಕಾದ್ರೆ ಅಂಥವರ ಜೊತೆ ಮಾತಾಡಿ ನೋಡಿ. ಹೆಂಡತಿಗೆ ಮುಖ್ಯವಾಗಿರಬೇಕಾದ ಮೊದಲನೇ ಗುಣ ಅಂದ್ರೆ ಭಯ" ಎಂದು ಹೇಳಿದ ಮುದುಕ ಗಂಭೀರ ಧ್ವನಿಯಿಂದ.

ಕ್ಲರ್ಕ್ ವಕೀಲನ ಕಡೆ, ನನ್ನ ಕಡೆ ಹಾಗೂ ಮಹಿಳೆಯ ಕಡೆ ನೋಡಿದ. ಅವನು ತನ್ನ ನಗುವನ್ನು ತಡೆದುಕೊಂಡಿದ್ದಂತಿತ್ತು; ಇತರರ ಅಭಿಪ್ರಾಯಕ್ಕನುಗುಣವಾಗಿ ವ್ಯಾಪಾರಿಯ ಮಾತನ್ನು ಅಣಕಿಸೋದೋ ಒಪ್ಪಿಕೊಳ್ಳೋದೋ ಮಾಡಕ್ಕೆ ಅವನು ಸಿದ್ಧವಾಗಿದ್ದ ಹಾಗಿತ್ತು.

"ಎಂಥ ಭಯ?" ಎಂದು ಕೇಳಿದಳು ಹೆಂಗಸು.

"ಎಂಥದು ಅಂದ್ರೆ - ತನ್ನ ಗಂಡನ ಬಗ್ಗೆ ಭಯ ಇರ್ಬೇಕು ಅಂತ, ಭಯ ಅಂದ್ರೆ ಅದು."

"ಆದ್ರೆ, ಅಪ್ಪಾವರೆ, ಆ ಕಾಲ ಮುಗಿದುಹೋಯ್ತು."

"ಉಹ್ಞೂ, ಮೇಡಂ, ಅದು ಮುಗಿಯೋದಕ್ಕೆ ಸಾಧ್ಯವಿಲ್ಲ. ಅವಳನ್ನ, ಅಂದ್ರೆ ಈವ್ನನ್ನ, ಗಂಡಸಿನ ಪಕ್ಕೆಗಳಿಂದ ಮಾಡಿರೋದು, ಆದ್ದರಿಂದ ಪ್ರಪಂಚ ಇರೋತನಕ ಅದೂ ಇರತ್ತೆ" ಎಂದ ಮುದುಕ, ಗೆಲುವಿನ ಮುಖದಿಂದ ತಲೆ ಜೋರಾಗಿ ಆಡಿಸುತ್ತ. ಗೆಲುವು ಅವನ ಕಡೆಗಾಯ್ತು ಅಂತ ತೀರ್ಮಾನ ಮಾಡಿದವನ ಹಾಗೆ ಆ ಕ್ಲರ್ಕ್ ಜೋರಾಗಿ ನಕ್ಕ.

ಆದರೆ ಅದಕ್ಕೆ ಶರಣಾಗದೆ ಆ ಮಹಿಳೆ ನಮ್ಮ ಯಾರ ಕಡೆಗೂ ದೃಷ್ಟಿ ಹಾಯಿಸದೆ ಹೇಳಿದಳು: "ಹ್ಞೂ, ಗಂಡಸರು ಯೋಚನೆ ಮಾಡೋದು ಯಾವಾಗ್ಲೂ ಹಾಗೇನೇ. ನಿಮಗೆ ನೀವೇ ಸ್ವಾತಂತ್ರ್ಯ ಕೊಟ್ಕೊಂಡುಬಿಟ್ಟಿದ್ದೀರ. ಹೆಂಗಸರು ಮಾತ್ರ ಅಂತಃಪುರದಲ್ಲೇ ಕೊಳೀಬೇಕು ಅಂತ ಆಸೆಪಡ್ತೀರ. ನೀವಾದ್ರೆ ಏನು ಬೇಕಾದ್ರೂ ಮಾಡ್ಬಹುದು, ಅಲ್ಲವಾ?"

"ಅಯ್ಯೋ ದೇವ್ರೇ, ಅದು ಬೇರೆ ವಿಷಯ."

"ಅಂದ್ರೆ, ನಿಮ್ಮ ಪ್ರಕಾರ ಗಂಡು ಏನು ಮಾಡೋದಕ್ಕೂ ಅವಕಾಶ ಇದೆಯಾ?"

"ಅವನಿಗೆ ಯಾರೂ ಅವಕಾಶ ಕೊಡಲ್ಲ. ಯಾರಾದ್ರೂ ಗಂಡಸು ಹೊರಗಡೆ ಸರಿಯಾಗಿ ನಡಕೊಳ್ಳದಿದ್ರೆ ಕುಟುಂಬ ಬೆಳೆಯೋಲ್ಲ, ಆದರೆ ಹೆಂಗಸು, ಹೆಂಡತಿ ಅಂದ್ರೆ ಬಿದ್ರೆ ಒಡೆಯೋ ಮಡಕೆ" ಎಂದ ವ್ಯಾಪಾರಿ ಕಟುವಾಗಿ.

ಅವನ ಅಧಿಕಾರಯುತ ಮಾತುಗಳು ಎಲ್ಲರನ್ನೂ ಸುಮ್ಮನಾಗಿಸಿದಂತೆ ಕಾಣಿಸಿತು. ಆ ಮಹಿಳೆ ಕೂಡ ಅಡಗಿದಂತೆ ಕಂಡಳು, ಆದರೆ ಪೂರ್ತಿ ಶರಣಾಗಲಿಲ್ಲ.

"ಅದು ಸರಿ, ಆದ್ರೆ ಹೆಂಗಸು ಒಬ್ಬ ಮನುಷ್ಯಳು ಅಂತ ನೀವು ಒಪ್ತೀರಿ ತಾನೇ? ಅವಳ ಭಾವನೆಗಳೂ ಗಂಡನ ಥರವೇ ತಾನೇ? ತನ್ನ ಗಂಡನ ಬಗ್ಗೆ ಅವಳಿಗೆ ಪ್ರೀತಿ ಇಲ್ದೆ ಇದ್ರೆ ಅವಳೇನು ಮಾಡ್ಬೇಕೂಂತ?"

"ಗಂಡನ್ನ ಪ್ರೀತಿಸ್ದೇ ಇದ್ರೆ!" ಎಂದು ಮತ್ತೊಮ್ಮೆ ಹೇಳಿಕೊಂಡು ಮುದುಕ ಹುಬ್ಬು ಗಂಟಿಕ್ಕಿಕೊಂಡು ಅಬ್ಬರಿಸಿ ಹೇಳಿದ: "ಅದು ಹ್ಯಾಗಾಗತ್ತೆ, ಅವನನ್ನು ಪ್ರೀತಿಸೋ ಹಾಗೆ ಮಾಡೋದ್ರಿಂದ."

ಈ ಅನಿರೀಕ್ಷಿತ ಚರ್ಚೆ ಕ್ಲರ್ಕ್‌ಗೆ ತುಂಬ ಖುಷಿಕೊಟ್ಟಂತೆ ತೋರಿತು. ಅದನ್ನು ಒಪ್ಪುವವನ ಹಾಗೆ ಏನೋ ಗೊಣಗಿದ.

"ಅವಳನ್ನ ಬಲವಂತ ಹೇಗೆ ಮಾಡ್ತೀರಿ? ಪ್ರೀತಿ ಇಲ್ಲದ ಕಡೆ ತನ್ನ ಇಷ್ಟಕ್ಕೆ ವಿರುದ್ಧವಾಗಿ ಅವಳು ಪ್ರೀತಿಸೋದಾದ್ರೂ ಹೇಗೆ?"

"ಹೆಂಡತಿ ಗಂಡನಿಗೆ ಮೋಸ ಮಾಡಿದ್ರೆ, ಆಗೇನು ಮಾಡ್ಬೇಕು?" ಎಂದು ಕೇಳಿದ ವಕೀಲ.

"ಅದು ಆಗಲೇಕೂಡದು. ಅವನು ಅವಳ ಸುತ್ತಮುತ್ತ ಕಣ್ಣಿಟ್ಟಿರ್ಬೇಕು."

"ಆಗಿಯೇ ಆದ್ರೆ? ಅಂಥದ್ದು ಆಗಬಹುದೂಂತ ಒಪ್ತೀರಿ ತಾನೇ?"

"ಅದು ಆಗೋದು ಮೇಲು ವರ್ಗದೋರ ಮನೆಗಳಲ್ಲಿ, ನಮ್ಮಂಥೋರ ಮನೇಲಲ್ಲ. ಗಂಡಸು ತನ್ನ ಹೆಂಡತಿಯನ್ನ ತಹಬಂದಿಗೆ ಇಟ್ಕೊಳ್ಳಲಾರದ ಹೆಡ್ಡನಾಗಿದ್ರೆ, ಅವನು ಅವಳನ್ನು ಶೋಷಣೆ ಮಾಡಿರಲಾರ. ಆದರೆ ಅದರಿಂದೇನೂ ಕೆಡಕಾಗಲ್ಲವಲ್ಲ. ಪ್ರೀತಿ ಇದೆಯೋ ಇಲ್ಲವೋ, ಕುಟುಂಬವನ್ನು ಒಡೀಬಾರ್ದು. ಪ್ರತಿ ಗಂಡಸೂ ತನ್ನ ಹೆಂಡತೀನ ಆಳಬಲ್ಲ. ಅವನಿಗೆ ಆ ಅಧಿಕಾರ ಇದೆ. ಹಾಗೆ ಮಾಡಲಾರದೋನು ಎಳಸು ಅಷ್ಟೆ" ಎಂದು ಉತ್ತರಿಸಿದ ಮುದುಕ.

ಎಲ್ಲರೂ ಮೌನಕ್ಕೆ ಶರಣಾದರು. ಕ್ಲರ್ಕ್ ಮುಂದಕ್ಕೆ ಬಂದು, ಇತರರಿಗಿಂತ ತಾನು ಸಂಭಾಷಣೆಯಲ್ಲಿ ಹಿಂದೆ ಬೀಳಬಾರದು ಅಂತ, ತನ್ನ ಎಂದಿನ ಮುಗುಳ್ನಗೆಯಿಂದ ಕೂಡಿ ತನ್ನ ಮಾತಿಗೆ ಶುರುಮಾಡಿದ: "ಅದು ನಿಜ. ನಮ್ಮ ಯಜಮಾನರ ಮನೇಲಿ ಒಂದು ಹಗರಣ ಶುರುವಾಗಿದೆ. ಅದೇನು ಅಂತ ಸ್ಪಷ್ಟವಾಗಿ ತಿಳಕೊಳ್ಳೋದೂ ಕಷ್ಟವೇ. ಹೆಂಡತಿಗೆ ತನ್ನ ಸಂತೋಷವೇ ಮುಖ್ಯ, ಯಾವಯಾವುದರಲ್ಲೋ ತೊಡಗಿದರು. ನಮ್ಮ

ಯಜಮಾನರೋ ತುಂಬ ಸಮರ್ಥರು, ಗಂಭೀರ ವ್ಯಕ್ತಿ. ಮೊದಲು ಅದು ಶುರುವಾದದ್ದು ಗುಮಾಸ್ತನ ಜೊತೆ. ಯಜಮಾನರು ಒಳ್ಳೇ ಮಾತಲ್ಲೇ ತಮ್ಮ ಹೆಂಡತೀನ ತಹಬಂದಿಗೆ ತರಕ್ಕೆ ಪ್ರಯತ್ನಪಟ್ಟರು. ಆದರೆ ಆಕೆ ಮಾತ್ರ ತಮ್ಮ ನಡತೇನ ತಿದ್ದಿಕೊಳ್ಳಲಿಲ್ಲ. ಆಯಮ್ಮ ಎಲ್ಲ ರೀತಿ ಆಟಗಳಲ್ಲೂ ತೊಡಗಿದಳು. ಯಜಮಾನರ ದುಡ್ಡು ಕದಿಯೋದು ಆರಂಭವಾಯ್ತು. ಯಜಮಾನರು ಆಯಮ್ಮನಿಗೆ ಹೊಡೆದರು, ಆದರೆ ಆಕೆ ಮಾತ್ರ ದಿನದಿನಕ್ಕೆ ಹದಗೆಡ್ತಾ ಹೋದಳು. ಕ್ರೈಸ್ತದೀಕ್ಷೆ ತಗೊಳ್ಳದ ಪಾಗನ್ ಜೊತೆ, ಅಂದರೆ ಯೆಹೂದಿಯೊಬ್ಬನ ಜೊತೆ, ಆಯಮ್ಮ ಚಕ್ಕಂದಕ್ಕೆ ಶುರುಮಾಡಿದಳು. ಯಜಮಾನರು ಈಗೇನು ಮಾಡ್ಬೇಕು? ಆಯಮ್ಮನ್ನ ಸಂಪೂರ್ಣವಾಗಿ ಬಿಟ್ಟುಬಿಟ್ಟರು, ಈಗ ಒಬ್ಬರೇ, ಮದುವೆಯಾಗ್ದೇ ಇರೋರ ಥರ ಜೀವಿಸ್ತಿದಾರೆ. ಆಕೇನೋ ಇನ್ನೂ ಆಳ ಆಳಕ್ಕೆ ಇಳೀತಿದಾಳೆ."

"ಅವರೆಲ್ಲೋ ದಡ್ಡ ಶಿಖಾಮಣಿ. ಮೊದಲಿಂದ ಆಕೆ ಮಾಡಿದ್ದಕ್ಕೆ ಅವಕಾಶ ಕೊಡದೆ ಕಡಿವಾಣ ಹಾಕಿದ್ದಿದ್ರೆ, ಆಕೆ ಪ್ರಾಮಾಣಿಕವಾಗಿ ಬದುಕ್ತಿದ್ದಳು, ಯಾವ ತೊಂದರೇನೂ ಆಗ್ತಿರಲಿಲ್ಲ. ಮೊದಲಿಂದಲೇ ಸ್ವಾತಂತ್ರ್ಯಕ್ಕೆ ತಂತಿಬೇಲಿ ಹಾಕ್ಬೇಕು. ಹೆದ್ದಾರೀನಲ್ಲಿ ಕುದುರೇನ ಅದರ ಪಾಡಿಗೆ ಬಿಟ್ಟುಬಿಡಬಾರದು. ಮನೇನಲ್ಲಿ ಹೆಂಡತಿ ವಿಷಯದಲ್ಲಿ ಯಾವಾಗ್ಲೂ ಎಚ್ಚರದಿಂದ ಇರಬೇಕು."

ಆ ಹೊತ್ತಿಗೆ ಕಂಡಕ್ಟರ್ ಟಿಕೆಟ್ ಚೆಕ್ ಮಾಡ್ತಾ ಆ ಕಡೆ ಹಾದು ಹೋದ. ಮುದುಕ ತನ್ನ ಕೊನೆ ಮಾತನ್ನ ಹೇಳಿದ:

"ನಿಜವೇ, ಹೆಣ್ಣನ್ನ ಕೆಲವು ಕಾಲ ಹತೋಟೀಲಿ ಇಡಬೇಕು. ಇಲ್ದಿದ್ರೆ ಎಲ್ಲ ನಾಶವಾಗಿಬಿಡತ್ತೆ."

"ನೀವೇನೇ ಕೌನವಿನೋದದಲ್ಲಿ ಚೆಲುವೆ ಹುಡುಗೀರ ಜೊತೆ ಸರಸದಲ್ಲಿ ತೊಡಗಿರಲಿಲ್ವಾ?" ಎಂದು ಕೇಳಿದ ವಕೀಲ ಮುಗುಳ್ನಗುತ್ತ.

"ಓ, ಅದು ಬೇರೇನೇ ವಿಷಯ" ಎಂದು ವ್ಯಾಪಾರಿ ಗಂಭೀರವಾಗಿ, ಆಮೇಲೆ ಎಲ್ಲರಿಗೂ ಗುಡ್ ಬೈ ಹೇಳುತ್ತ ಮೇಲೆದ್ದ. ನಿಲುವಂಗಿ ಹಾಕಿಕೊಂಡು ಟೋಪಿ ಮೇಲೆತ್ತಿ, ತನ್ನ ಕೈಚೀಲ ಹಿಡಿದು ಗಾಡಿಯಿಂದ ಇಳಿದು ಹೋದ.

## 2

ಆ ಮುದುಕ ಇಳಿದು ಹೋದ ತಕ್ಷಣ ಮಾತುಕತೆ ಸಾಮಾನ್ಯ ವಿಷಯದತ್ತ ಹೊರಳಿತು.

"ಅವರೊಬ್ಬ ಹಳೆ ಒಡಂಬಡಿಕೆ ಕಾಲದ ತಂದೆ" ಅಂದ ಕ್ಲರ್ಕ್

"ಸಾಕ್ಷಾತ್ ಡೊಮೊಸ್ಟ್ರೊಯ್! ಹೆಂಗಸು-ಮದುವೆ ಬಗ್ಗೆ ಅದೆಂಥ ಅನಾಗರಿಕ ಅಭಿಪ್ರಾಯಗಳು!" ಎಂದಳು ಮಹಿಳೆ.

"ಅದ್ಸರಿ, ಮದುವೆ ವಿಷಯದಲ್ಲಿ ನಾವಿನ್ನೂ ಯೂರೋಪಿಯನ್ ಆಲೋಚನೆಗಳಿಗಿಂತ ತುಂಬ ದೂರ ಇದ್ದೀವಿ. ಮೊದಲನೇದು ಅಂದ್ರೆ, ಮಹಿಳೆಯರ ಹಕ್ಕುಗಳು, ಆನಂತರ ವಿಚ್ಛೇದನ, ಇನ್ನೂ ಈ ಪ್ರಶ್ನೆ ಬಗೆಹರಿದಿಲ್ಲ . . . ."

"ಡೊಮೊಸ್ಟ್ರೊಯ್ ಅಂದ್ರೆ ಮಹಾ ಭಯಂಕರ ಐವಾನ್ ಕಾಲದ ಮದುವೆ ನೀತಿ."

"ಅಂಥ ಜನರು ಅರ್ಥಮಾಡಿಕೊಳ್ಳದೇ ಇರೋ ಮುಖ್ಯವಾದ ವಿಷಯ ಅಂದ್ರೆ, ಮದುವೆ. ಪ್ರೀತಿಯಿಂದಲೇ ಮದುವೆಗೆ ಪಾವಿತ್ರ್ಯ ಬರೋದು. ಪ್ರೀತಿಯಿರೋ ಮದುವೆಯೇ ನಿಜವಾದ ಮದುವೆ" ಎಂದಳು ಮಹಿಳೆ ಮಾತಿಗೆ ಸೇರಿ.

ಕ್ಲರ್ಕ್ ಈ ಮಾತು ಕೇಳಿ ನಕ್ಕ. ಇದನ್ನ ನೋಡಿದರೆ ತಾನು ಕೇಳಿದ್ದ ಎಲ್ಲ ಬುದ್ಧಿವಂತ ಮಾತುಕತೆಯನ್ನೂ ಮನಸ್ಸಿನಲ್ಲಿ ಕೂಡಿಟ್ಟುಕೊಂಡು, ಬೇಕಾದಾಗ ಬಳಸಿಕೊಳ್ಳೋನ ಥರ ಇತ್ತು. "ಮದುವೇನ ಪವಿತ್ರವಾಗಿಸೋ ಈ ಪ್ರೀತಿ ಅಂದ್ರಲ್ಲ, ಹಾಗಂದ್ರೇನು?" ಎಂದು ಕೇಳಿದ ಸರಕ್ಕನೆ; ನೋಡಿದರೆ, ಗುಬ್ಬಚ್ಚಿ ಥರ ಸಂಕೋಚದಿಂದ ಮಾತಿಲ್ಲದೆ ಕೂತಿದ್ದನಲ್ಲ ಆ ವ್ಯಕ್ತಿಯದು, ಆ ಧ್ವನಿ!

ಅವನ ಕಡೆ ತಿರುಗಿ ನೋಡಿದಾಗ ಆತ ಸೀಟಿನ ಮೇಲೆ ಕೈಯಿಟ್ಟುಕೊಂಡು ಎದ್ದು ನಿಂತಿದ್ದ; ಗಮನಿಸಿ ನೋಡಿದರೆ ವಿಚಲಿತನಾಗಿದ್ದಂತೆ ಕಾಣಿಸುತ್ತಿತ್ತು. ಅವನ ಮುಖ ಕೆಂಪಗಾಗಿತ್ತು, ಹಣೆಯ ಮೇಲಿನ ಒಂದು ನರ ಉಬ್ಬಿತ್ತು, ಅವನ ಕೆನ್ನೆಯ ಮಾಂಸಖಂಡಗಳು ಕಂಪಿಸುತ್ತಿದ್ದವು. "ಮದುವೇನ ಪವಿತ್ರವಾಗಿಸೋ ಈ ಪ್ರೀತಿ ಅಂದ್ರಲ್ಲ, ಹಾಗಂದ್ರೇನು?" ಎಂದು ಕೇಳಿದ ಮತ್ತೆ.

"ಯಾವ ಪ್ರೀತಿ ಅಂದ್ರೆ, ಗಂಡ ಹೆಂಡಿರ ಮಧ್ಯೆ ಇರೋ ಸಾಮಾನ್ಯವಾದ ಪ್ರೀತಿ" ಎಂದಳು ಮಹಿಳೆ.

"ಅದ್ಹೇಗೆ? ಸಾಮಾನ್ಯ ಪ್ರೀತಿ ಮದುವೇನ ಪವಿತ್ರ ಮಾಡೋದು ಹೇಗೆ?" ಎಂದ ಈ ಸಂಕೋಚದ ವ್ಯಕ್ತಿ ಉದ್ವಿಗ್ನನಾದಂತೆ, ಆಕೆಯ ಮಾತನ್ನು ಒಪ್ಪದವನಂತೆ ಕೇಳಿದ. ಆ ಮಹಿಳೆಗೆ ಇಷ್ಟವಾಗದ ಏನನ್ನೋ ಹೇಳಲು ಆತ ಬಯಸುತ್ತಿದ್ದ ಹಾಗಿತ್ತು. ಆಕೆಗೂ ಅದು ತಿಳಿಯಿತು, ಇದರಿಂದ ಆಕೆ ಸ್ವಲ್ಪ ಚಕಿತಳಾದಳು.

"ಹೇಗೆ ಅಂದ್ರೆ? ತುಂಬ ಸರಳ ಅದು."

ಆಕೆಯ ತುಟಿಗಳಿಂದ ಉದುರಿದ ಆ ಪದವನ್ನು ಅವನು ಗಟ್ಟಿಯಾಗಿ ಹಿಡಿದುಕೊಂಡ. "ಉಹ್ಞೂ, ಸರಳ ಅಲ್ಲ."

ಈಗ ಆ ವಕೀಲ ಮಧ್ಯೆ ಬಾಯಿ ಹಾಕಿ, "ಮೇಡಂ ಅವರು ಹೇಳ್ತಿರೋದು ಅಂದ್ರೆ ಮದುವೆ ಅನ್ನೋದು ಮೊದಲು ಆತ್ಮೀಯತೆಯ, ಬೇಕಾದ್ರೆ ಅದನ್ನೇ ಪ್ರೀತಿ ಅನ್ನಿ, ಬೆಸುಗೆ ಆಗಬೇಕು. ಅಂಥ ಪ್ರೀತಿ ಇದ್ದರೆ, ಅಂಥ ಮದುವೇನಲ್ಲಿ ಯಾವುದೋ ಒಂದು ಬಗೆಯ ಪಾವಿತ್ರ್ಯ ಇರತ್ತೆ ಅಂತ. ಆದರೆ ಎಲ್ಲ ಮದುವೆಗಳೂ ಆತ್ಮೀಯತೆಯಿಂದ, ಪ್ರೀತಿಯಿಂದ

ಕೂಡಿರೋಲ್ಲ. ಹೀಗಾಗಿ ಪರಸ್ಪರ ನೈತಿಕವಾದ ಹೊಣೆಗಾರಿಕೆ ಇರಲ್ಲ. ಇದನ್ನೇ ಅಲ್ವಾ ನೀವು ಹೇಳಕ್ಕೆ ಪ್ರಯತ್ನಿಸಿದ್ದು" ಎಂದ ಮಹಿಳೆಯ ಕಡೆ ತಿರುಗಿ.

ತನ್ನ ಆಲೋಚನೆಯನ್ನ ಮಾತಿನ ಮೂಲಕ ಅಭಿವ್ಯಕ್ತಿಗೊಳಿಸಿದ್ದಕ್ಕೆ ತಲೆ ಆಡಿಸಿ ಆ ಮಹಿಳೆ ಒಪ್ಪಿಗೆ ಸೂಚಿಸಿದಳು.

"ಆಗ .. .." ಎಂದು ವಕೀಲ ತನ್ನ ಮಾತನ್ನು ಮುಂದುವರಿಸಲು ನೋಡಿದ. ಆದರೆ ಆ ಸಂಕೋಚದ ವ್ಯಕ್ತಿ, ತನ್ನನ್ನ ತಾನು ನಿಯಂತ್ರಿಸೋದಕ್ಕೆ ಸಾಧ್ಯವಾಗದೆ, ವಕೀಲ ತನ್ನ ಮಾತನ್ನ ಮುಗಿಸೋದಕ್ಕೂ ಅವಕಾಶ ಕೊಡದೆ ಹೇಳಿದ: "ಅದೇನೋ ಸರಿ ಸಾರ್, ಮದುವೆಯನ್ನ ಪವಿತ್ರಗೊಳಿಸೋ ಏಕೈಕ ವಸ್ತುವಾದ ಪ್ರೀತಿ ಅನ್ನೋದನ್ನ ನಾವು ಹೇಗೆ ಅರ್ಥಮಾಡ್ಕೋಬೇಕೂಂತ?"

"ಪ್ರೀತಿ ಅಂದ್ರೆ ಏನು ಅನ್ನೋದು ಎಲ್ಲರಿಗೂ ಗೊತ್ತು" ಎಂದಳು ಮಹಿಳೆ.

"ಆದರೆ ನನಗೆ ಗೊತ್ತಿಲ್ಲವಲ್ಲ! ಅದನ್ನ ಹೇಗೆ ವ್ಯಾಖ್ಯಾನಿಸ್ತೀರಿ ಅನ್ನೋದನ್ನ ನಾನು ಕೇಳಬೇಕು."

"ಹೇಗೆ ಅಂದ್ರೆ, ತುಂಬ ಸರಳವಾದ್ದು ಅದು" ಎಂದಳು ಮಹಿಳೆ.

ಆನಂತರ ಆಲೋಚನೆ ಮಾಡುವವಳಂತೆ ಸ್ವಲ್ಪ ಹೊತ್ತು ಸುಮ್ಮನಿದ್ದು ಆಮೇಲೆ, "ಪ್ರೀತಿ ಅಂದ್ರೆ, ಪ್ರೀತಿ ಅನ್ನೋದು ಒಬ್ಬರಿಗೊಬ್ಬರು ಬೇರೆಯೋರಿಗಿಂತ ಹೆಚ್ಚಾಗಿ ಇಷ್ಟಪಡೋದು .. .."

"ಈ ಇಷ್ಟಪಡೋದು ಎಷ್ಟು ಕಾಲ? ... ಒಂದು ತಿಂಗಳು, ಎರಡು ದಿನ, ಅರ್ಧ ಗಂಟೆ?" ಎಂದ ಸಂಕೋಚದ ವ್ಯಕ್ತಿ ಕೆರಳಿದವನಂತೆ.

"ಇಲ್ಲ, ನೀವು ಹೇಳ್ತಿರೋದು ನನ್ನ ಮನಸ್ಸಿನಲ್ಲಿರೋದ್ರ ಬಗ್ಗೆ ಅಲ್ಲ."

"ನಾನು ಮಾತಾಡ್ತಿರೋದು ಖಂಡಿತ ನಿಮ್ಮ ಮನಸ್ಸಲ್ಲಿರೋದ್ರ ಬಗ್ಗೇನೇ. ಅದೇ ಗಂಡು ಹೆಣ್ಣು ಪರಸ್ಪರ ಒಬ್ಬರಿಗೊಬ್ಬರು ಇತರರಿಗಿಂತ ಹೆಚ್ಚು ಇಷ್ಟಪಡೋದು, ಅದ್ರ ಬಗ್ಗೇನೇ. ನಾನು ಕೇಳೊ ಪ್ರಶ್ನೆ: ಈ ಇಷ್ಟಪಡೋದು ಎಷ್ಟು ಕಾಲ ಅಂತ?"

"ಎಷ್ಟು ಕಾಲ ಅಂದ್ರೆ? ತುಂಬ ದೀರ್ಘ ಕಾಲ, ಕೆಲವು ಸಲ ಜೀವನ ಪೂರ್ತಿ."

"ಆದ್ರೆ ಹಾಗೆ ಆಗೋದು ಕಾದಂಬರಿಗಳಲ್ಲಿ ಮಾತ್ರ. ಖಂಡಿತ ಬದುಕಿನಲ್ಲಲ್ಲ. ತುಂಬ ಅಪರೂಪವಾಗಿ ಹೀಗೆ ಒಬ್ಬರನ್ನೊಬ್ಬರು ಬೇರೆಯೋರಿಗಿಂತ ಹೆಚ್ಚಾಗಿ ಇಷ್ಟಪಡೋದು ಹೆಚ್ಚು ಕಾಲ ಇರಬಹುದು. ಬಹಳ ವೇಳೆ ಇದು ಇರೋದು ಕೆಲವು ತಿಂಗಳು, ಅಷ್ಟೆ. ಕೆಲವು ವಾರಗಳಾಗಬಹುದು, ದಿನಗಳಾಗಬಹುದು, ಕೆಲವೇ ಗಂಟೆಗಳೂ ಆಗ್ಬಹುದು .. .."

"ಇಲ್ಲ, ಇಲ್ಲ, ಇಲ್ಲ, ಇಲ್ಲಿ ಸ್ವಲ್ಪ ಕೇಳಿ" ಎಂದೆವು ನಾವು ಮೂವರೂ, ಒಂದೇ ಬಾರಿಗೆ.

ಕ್ಲರ್ಕ್ ಕೂಡ ಒಂದೇ ಮಾತಿನಲ್ಲಿ ತನ್ನ ನಿರಾಕರಣೆಯನ್ನು ಸೂಚಿಸಿದ. ಅವನು ನಮ್ಮೆಲ್ಲರಿಗಿಂತ ಜೋರಾಗಿ ಕೂಗುತ್ತ, "ನಂಗೆ ಗೊತ್ತು, ನೀವೆಲ್ಲ ಮಾತಾಡ್ತಿರೋದು ಯಾವುದನ್ನ ಇದೆ ಅಂತ ನಂಬ್ತೀರೋ ಅದರ ಬಗ್ಗೆ; ಆದರೆ ನಾನು ಹೇಳ್ತಾ ಇರೋದು ಯಾವುದು ಇದ್ಯೋ ಅದರ ಬಗ್ಗೆ. ಒಬ್ಬ ಚೆಲುವೆಯನ್ನು ನೋಡಿದಾಗ ಎಲ್ಲ ಗಂಡಸರೂ ಅವಳ ಬಗ್ಗೆ ತನಗೆ ಪ್ರೀತಿ ಇದೇಂತ ಅಂದ್ಕೋತಾರೆ, ಆದ್ರೆ ಈ ಭಾವನೆ ಹೆಂಡ್ತೀ ಬಗ್ಗೆ ಮಾತ್ರ ಇರಲ್ಲ. 'ಪಕ್ಕದ್ಮನೆ ಹೆಂಗಸು ಹಂಸ, ನಮ್ಮನೆಯೋಳು ಒಂದು ಹೆಣ್ಣು ಘೇಂಡಾಮೃಗ' ಅನ್ನೋ ಗಾದೆಗೆ ಈ ಭಾವನೆಯೇ ಮೂಲ ಕಾರಣ, ಆ ಮಾತು ನಿಜವೇ ತಾನೇ" ಎಂದ.

"ಓ, ಏನು ಘೋರವಾದ್ದನ್ನ ಹೇಳ್ತ ಇದ್ದೀ ನೀನು! ಈ ಪ್ರೀತಿ ಅನ್ನೋ ಭಾವನೆ ಮನುಷ್ಯರ ಮನಸ್ಸಲ್ಲಿ ಖಂಡಿತ ಇರತ್ತೆ; ಅದು ಉಳಿದಿರೋದು ಬರೀ ತಿಂಗಳುಗಳ ಕಾಲ ಅಥವಾ ವರ್ಷಗಳ ಕಾಲ ಅಲ್ಲ, ಜೀವನ ಪೂರ್ತಿ."

"ಉಹ್ಞೂ, ಅಂಥದ್ದು ಇಲ್ಲವೇ ಇಲ್ಲ. ಹೆಲೆನ್ ಜೀವನಪೂರ್ತಿ ತನ್ನ ಜೊತೆಗಿರಬೇಕು ಅಂತ ಮೆನೆಲಾಸ್‌ಗೆ ಅನ್ನಿಸಿತ್ತು ಅನ್ನೋದನ್ನ ನಾವು ಒಪ್ಪಿಕೊಂಡ್ರೂ, ಹೆಲೆನ್‌ಗೆ ಮಾತ್ರ ಪ್ಯಾರಿಸ್ ಬಗ್ಗೇನೇ ಆಕರ್ಷಣೆ. ಅದು ಹಿಂದೆ ಇದ್ದದ್ದೂ ಹಾಗೆ, ಈಗಿರೋದೂ ಹಾಗೇನೇ, ಮುಂದೆಯೂ ಕೂಡ ಅದೇ ರೀತೀನೆ. ಬೇರೆ ಆಗಕ್ಕೆ ಸಾಧ್ಯವೇ ಇಲ್ಲ; ಎರಡು ಬಟಾಣಿ ಕಾಳುಗಳ ಮೇಲೆ ವಿಶೇಷ ಚಿಹ್ನೆ ಹಾಕಿ ರಾಶಿ ಸುರಿದಾಗ ಎರಡೂ ಅಕ್ಕಪಕ್ಕ ಬೀಳ್ಬೇಕು ಅಂತ ನಿರೀಕ್ಷೆ ಮಾಡೋ ಹಾಗೆ. ಅಲ್ಲದೆ, ಇದು ಬರೀ ಅಸಂಭವ ಅಲ್ಲ, ಒಂದಲ್ಲ ಒಂದು ಕಾಲದಲ್ಲಿ ಹೆಲೆನ್‌ಗಾಗಲೀ ಮೆನೆಲಾಸ್‌ಗಾಗಲೀ ಅದು ಕಟರೆಯಾಗಿಬಿಡತ್ತೆ. ಇರೋ ವ್ಯತ್ಯಾಸ ಅಂದ್ರೆ ಕೆಲವರಿಗೆ ಅಂಥ ಕಟರೆ ಬೇಗ ಆದರೆ, ಮತ್ತೆ ಕೆಲವರಿಗೆ ಸ್ವಲ್ಪ ತಡವಾಗಿ, ಅಷ್ಟೆ. 'ಅವರು ಜೀವಮಾನ ಪೂರ್ತಿ ಒಬ್ಬರನ್ನೊಬ್ಬರು ಪ್ರೀತಿಸ್ತಾ ಇದ್ದರು' ಅನ್ನೋ ಅಂತ ಹೇಳಿಕೆ ಶುದ್ಧ ಮೂರ್ಖ ಕಾದಂಬರೀಲಿ ಮಾತ್ರ ಬರ್ಬಹುದು. ಅದನ್ನ ಮಕ್ಕಳು ಮಾತ್ರ ನಂಬಬಹುದು. ಜೀವಮಾನಪೂರ್ತಿ ಪ್ರೀತಿ ಇಟ್ಕೊಂಡಿರೋ ಗಂಡಸಿನ ಬಗ್ಗೇನೋ ಹೆಂಗಸಿನ ಬಗ್ಗೇನೋ ಮಾತಾಡೋದು ಅಂದ್ರೆ ಮೇಣದ ಬತ್ತಿ ಸದಾ ಕಾಲ ಉರಿಯತ್ತೆ ಅನ್ನೋ ಹಾಗೆ."

"ನೀವು ಹೇಳ್ತಾ ಇರೋದು ದೈಹಿಕ ಆಕರ್ಷಣೆ ಬಗ್ಗೆ. ಆದರ್ಶಗಳ ಮೇಲೆ ನಿಂತಿರೋ ದೈವೀ ಪ್ರೇಮದ ಬಗ್ಗೆ ನಿಮಗೆ ನಂಬಿಕೆ ಇಲ್ವಾ?"

"ಯಾಕಿಲ್ಲ? ಆದ್ರೆ ಅಂಥ ಸಂದರ್ಭದಲ್ಲಿ ಇಬ್ಬರೂ ಮಕ್ಕಳನ್ನ ಹುಟ್ಟಿಸೋ ಆವಶ್ಯಕತೆ ಇರಲ್ಲ, ದಯವಿಟ್ಟು ನನ್ನ ಒರಟು ಮಾತನ್ನ ಕ್ಷಮಿಸಿ. ನಾನು ಹೇಳ್ತಾ ಇರೋದು ಏನೂಂದ್ರೆ, ಈ ಆದರ್ಶಗಳ ಅನುರೂಪತೆ ವಯಸ್ಸಾದೋರ ನಡುವೆ ಇರಕ್ಕೆ ಸಾಧ್ಯ ಇಲ್ಲ, ಅದಿರೋದು ಕೇವಲ ಚಿಕ್ಕ ವಯಸ್ಸಿನ ಸುಂದರ ಯುವಕ ಯುವತಿಯರ ನಡುವೆ" ಎಂದು ವ್ಯಂಗ್ಯವಾಗಿ ನುಡಿದು ಜೋರಾಗಿ ನಗತೊಡಗಿದ. "ಅಂಥ ಪ್ರೀತಿ, ಅಂದ್ರೆ ನಿಜವಾದ ಪ್ರೀತಿ ಇರೋದು ನಿಜ ಅಂತ ಒಪ್ತೀನಿ. ಆದ್ರೆ ಅದು, ನಾವು ನಂಬ್ತೀವಲ್ಲ

ಹಾಗೆ, ಮದುವೆಯಿಂದ ಪವಿತ್ರವಾಗತ್ತೆ ಅನ್ನೋದನ್ನಲ್ಲ. ಅದಕ್ಕೆ ವಿರುದ್ಧವಾಗಿ, ಮದುವೆ ಅಂಥ ಪ್ರೀತೀನ ನಾಶಮಾಡತ್ತೆ."

"ದಯವಿಟ್ಟು ಇಲ್ಲಿ ಸ್ವಲ್ಪ ಕೇಳಿ. ಸತ್ಯ ನಿಮ್ಮ ಮಾತಿಗೆ ವ್ಯತಿರಿಕ್ತವಾಗಿದೆ. ಮದುವೆಗಳು ಉಳಿದುಕೊಳ್ಳೋದು, ಕೊನೇ ಪಕ್ಷ, ಬಹುಪಾಲು ಮದುವೆಯಾದೋರು ಕೊನೇವರೆಗೂ ಜೊತೇಲಿರೋದು ನಿಜ ತಾನೇ? ಸಾಕಷ್ಟು ಮಂದಿ ಗಂಡಹೆಂಡಿರು ಪ್ರಾಮಾಣಿಕವಾಗಿ ಜೀವನ ಪೂರ್ತಿ ಒಟ್ಟಿಗೇ ಇರ್ತಾರಲ್ಲ" ಎಂದ ವಕೀಲ.

ಈ ಮಾತನ್ನ ಕೇಳಿದ ಆ ಸಂಕೋಚದ ವ್ಯಕ್ತಿಯ ಮುಖದ ಮೇಲೆ ಕಹಿ ಮುಗುಳ್ನಗೆಯೊಂದು ಮೂಡಿತು.

"ಆಮೇಲೆ? ನಿಮ್ಮ ಪ್ರಕಾರ ಮದುವೆ ಪ್ರೀತಿಯ ಅಡಿಪಾಯದ ಮೇಲೆ ನಿಂತಿದೆ ತಾನೇ? ದೈಹಿಕ ಆಕರ್ಷಣೆಯಲ್ಲದೆ ಬೇರೆ ರೀತಿಯ ಪ್ರೀತಿ ಇರೋದರ ಬಗ್ಗೆ ನಾನೇನಾದ್ರೂ ಸಂಶಯ ವ್ಯಕ್ತಪಡಿಸಿದರೆ, ಮದುವೆಯಲ್ಲಿನ ಪ್ರೀತಿಯ ಬಗ್ಗೆ ಹೇಳಿ ನಿಮ್ಮ ಮಾತನ್ನ ಸಮರ್ಥಿಸೋಕ್ಕೆ ಪ್ರಯತ್ನಿಸ್ತೀರಿ. ಆದರೆ ನಮ್ಮ ಈ ಕಾಲದಲ್ಲಿ ಮದುವೆ ಅಂದ್ರೆ ಹಿಂಸೆ, ಮಹಾ ಸುಳ್ಳು."

"ಉಹ್ಞೂ, ಖಂಡಿತ ಅಲ್ಲ. ಹಿಂದೆಯೂ ಮದುವೆಗಳು ಉಳೀತಿದ್ವು, ಮುಂದೆಯೂ ಹಾಗೇ ಇರತ್ವೆ" ಎಂದ ವಕೀಲ.

"ಆದ್ರೆ ಹೇಗೆ ಮತ್ತು ಯಾಕೆ ಉಳಿಯುತ್ವೆ? ಅವುಗಳು ಇದ್ವು, ಮುಂದೆಯೂ ಇರತ್ವೆ, ಆದ್ರೆ ಯಾರಲ್ಲಿ? ಯಾರಿಗೆ ಮದುವೆಗಳಲ್ಲಿ ಪವಿತ್ರವಾದ್ದು, ದೇವರ ಮುಂದೆ ನಡೆದ ಪವಿತ್ರ ಬಂಧನ ಅನ್ನೋದು ಕಾಣಿಸತ್ತೋ ಅವರಲ್ಲಿ ಮಾತ್ರ. ಅಂಥವರ ದೃಷ್ಟಿಯಲ್ಲಿ ಮದುವೆಗಳು ಉಳಿಯುತ್ವೆ, ಆದರೆ ನಮ್ಮಂಥೋರ ದೃಷ್ಟೀಲಿ ಮದುವೆ ಅನ್ನೋದು ಒಂದು ಮೋಸ, ಹಿಂಸೆ. ನಮಗೆ ಅದು ಅನುಭವಕ್ಕೆ ಬರೋದರಿಂದ ನಾವು ಮುಕ್ತ ಪ್ರೇಮವನ್ನು ಸಮರ್ಥಿಸ್ತೀವಿ; ಆದರೆ ವಾಸ್ತವದಲ್ಲಿ ಮುಕ್ತ ಪ್ರೇಮ ಅನ್ನೋದು ಸ್ವಚ್ಛಂದ ಲೈಂಗಿಕತೆಗೆ ಒಂದು ಹೆಜ್ಜೆ ಹಿಂದೆ, ಕೆಲವರು ಬೇವಾರ್ಸಿಗಳು ಮಾಡೋ ಆಕಸ್ಮಿಕ ಪಾಪ, ಅಷ್ಟೆ, (ಮಹಿಳೆಯ ಕಡೆ ತಿರುಗಿ) ದಯವಿಟ್ಟು ಕ್ಷಮಿಸಿ. ಹಳೆಯ ಅಡಿಪಾಯ ಕಿತ್ತು ಹೋಗಿದೆ, ನಾವು ಹೊಸದೊಂದನ್ನು ಈಗ ಹಾಕ್ಬೇಕಾಗಿದೆ. ಆದರೆ ವ್ಯಭಿಚಾರವನ್ನು ಉತ್ತೇಜಿಸಬಾರದು."

ಅವನು ಎಷ್ಟು ತೀವ್ರತೆಯಿಂದ ಮಾತನಾಡಿದನೆಂದರೆ ಮಿಕ್ಕವರೆಲ್ಲ ಸುಮ್ಮನಾದರು, ಅವನ ಮುಖವನ್ನೇ ಅಚ್ಚರಿಯಿಂದ ನೋಡುತ್ತ.

"ಆದರೆ ಒಂದು ಇನ್ನೊಂದಾಗೋ ಸಂಕ್ರಮಣ ಸ್ಥಿತಿ ಇನ್ನೂ ಭಯಂಕರವಾದ್ದು. ಆಕಸ್ಮಿಕ ಪಾಪ ನಡೀಕೂಡದು ಅನ್ನೋದು ಕೆಲವರ ಅನಿಸಿಕೆ. ಆದ್ರೆ ಯಾವುದಾದ್ರೂ ಒಂದು ರೀತೀಲಿ ಲೈಂಗಿಕ ಸಂಬಂಧಗಳನ್ನು ಕಟ್ಟುಪಾಡಿಗೆ ಒಳಪಡಿಸೋದಕ್ಕೆ ಅದು ಅನಿವಾರ್ಯ. ಆದರೆ ಈಗಿರೋದು ಹಳೇ ಅಡಿಪಾಯ ಮಾತ್ರ, ಆದ್ರೆ ಈಗ ಅದರಲ್ಲಿ

ಜನ ನಂಬಿಕೆ ಕಳ್ಕೊಂಡಿದಾರೆ. ಜನ ಹಳೇ ಥರವೇ ಮದುವೆಯಾಗ್ತಾರೆ, ಆದರೆ ತಾವು ಮಾಡ್ತಿರೋದ್ರಲ್ಲಿ ತಮಗೇ ನಂಬಿಕೆ ಇರಲ್ಲ; ಹೀಗಾಗಿ ಪರಿಣಾಮ ಸುಳ್ಳಿಂದ, ಹಿಂಸೆಯಿಂದ ಕೂಡಿರತ್ತೆ. ಬರೀ ಸುಳ್ಳೆ ಇದ್ರೆ ಪರವಾಯಿಲ್ಲ, ಸಹಿಸ್ಕೋಬಹುದು. ಗಂಡ ಹೆಂಡತಿ ಇಬ್ಬರೂ ಏಕಸಂಗಾತಿವ್ರತ ಹೊತ್ತವರಂತೆ ಜಗತ್ತಿನ ಕಣ್ಣಿಗೆ ಮಣ್ಣೆರಚಬಹುದು. ಅವರು ಕಾಣೋ ಹಾಗೆ ಬಹುಪತ್ನಿ ಅಥವಾ ಬಹುಪತಿನಿಷ್ಠರಾದ್ರೆ ಕೆಟ್ಟದ್ದು, ಆದ್ರೆ ಒಪ್ಪಿಕೋಬಹುದಾದ್ದು. ಆದರೆ ಕೆಲವು ವೇಳೆ ಆಗೋ ಹಾಗೆ, ಗಂಡ ಹೆಂಡತಿ ಇಬ್ಬರೂ ಒಟ್ಟಿಗೆ ವಾಸಮಾಡೋ ಜವಾಬ್ದಾರಿ ಹೊತ್ತುಕೊಂಡರೆ - ಹಾಗೆ ಯಾಕಿರಬೇಕು ಅಂತ ಅವರಿಗೇ ಸ್ಪಷ್ಟವಾಗಿರಲ್ಲ - ಮದುವೆಯಾದ ಎರಡನೇ ತಿಂಗಳಿಂದ಼್ಲೇ ಬೇರೆಯಾಗೋ ತುಡಿತ ಶುರುವಾಗಿರತ್ತೆ; ಆದ್ರೆ ಒಟ್ಟಿಗೇ ಇರ್ತಾರೆ. ಇನ್ನೂ ಸ್ವಲ್ಪ ಕಾಲ ಆದ್ಮೇಲೆ ಬದುಕು ನರಕವಾಗತ್ತೆ, ಕುಡಿಯೋಕ್ಕೆ ಶುರು ಮಾಡ್ತಾರೆ, ಮತ್ತಿನಿಂದ ಒಬ್ಬರ ಮೇಲೊಬ್ಬರು ಗುಂಡು ಹಾರಿಸ್ತಾರೆ, ಇಲ್ಲ ವಿಷವಿಕ್ಕಿ ಒಬ್ಬರನ್ನೊಬ್ರು ಕೊಂದ್ಕೋತಾರೆ."

ಎಲ್ಲರೂ ಮೌನವಾಗೇ ಇದ್ರು. ಆದರೆ ನಮಗೆಲ್ಲ ಇರಿಸುಮುರಿಸಾಗ್ತಿತ್ತು.

"ನೀವು ಹೇಳೋದು ನಿಜ, ದಾಂಪತ್ಯ ಜೀವನದಲ್ಲಿ ಇಂಥವು ನಡೀತಿರತ್ವೆ. ಉದಾಹರಣೆಗೆ, ಪಾಸ್ನಿಚೆಫ್ ಪ್ರಸಂಗ" ಎಂದ ವಕೀಲ, ಮುಜುಗರ ಮಾಡೋ ಈ ಭಾವನಾತ್ಮಕ ವಿಷಯದ ಬಗ್ಗೆ ಮಾತನ್ನ ನಿಲ್ಲಿಸೋ ಉದ್ದೇಶದಿಂದ. "ಹೊಟ್ಟೆಕಿಚ್ಚಿಂದಾಗಿ ಅವನು ತನ್ನ ಹೆಂಡತೀನ ಯಾವ ರೀತಿ ಕೊಂದ ಅನ್ನೋದನ್ನ ಓದಿದ್ದೀರಾ?"

ತಾನದನ್ನು ಓದಿಲ್ಲ ಎಂದು ಮಹಿಳೆ ಹೇಳಿದಳು. ಆ ಸಂಕೋಚದ ವ್ಯಕ್ತಿ ಏನೂ ಹೇಳಲಿಲ್ಲ. ಅವನ ಮುಖದ ಬಣ್ಣ ಬದಲಾಯಿಸಿತು.

"ಉಹ್ಞೂ, ಆ ಸೌಭಾಗ್ಯ ನಂಗೆ ಸಿಕ್ಕಲಿಲ್ಲ."

"ಅದೇನು ಸೌಭಾಗ್ಯದ ವಿಷಯ ಅಲ್ಲ, ಯಾಕಂದ್ರೆ ನಾನೇ ಆ ಪಾಸ್ನಿಚೆಫ್."

ಈಗ ಇನ್ನೊಂದು ಬಗೆಯ ಮೌನ ಆವರಿಸಿತು. ಅವನ ಮುಖ ಕೆಂಪಗಾಯಿತು, ಸ್ವಲ್ಪ ಹೊತ್ತಿನ ಮೇಲೆ ಬಿಳಿಚಿಕೊಂಡಿತು.

"ಅದರಿಂದೇನು ಉಪಯೋಗ ಈಗ? ದಯವಿಟ್ಟು ಕ್ಷಮಿಸಿ, ನಾನು ನಿಮಗೆ ಮುಜುಗರ ಉಂಟುಮಾಡಲ್ಲ" ಎಂದು ಅವನು ತಾನು ಹಿಂದೆ ಕೂತಿದ್ದ ಜಾಗಕ್ಕೆ ಹೋದ.

ನಾನೂ ನನ್ನ ಸೀಟಲ್ಲಿ ಕುಳಿತೆ. ವಕೀಲ ಹಾಗೂ ಮಹಿಳೆ ಪಿಸುದನಿಯಲ್ಲಿ ಮಾತಾಡಿಕೊಳ್ಳತೊಡಗಿದರು. ನಾನು ಪಾಸ್ನಿಚೆಫ್ ಪಕ್ಕದಲ್ಲಿ ಕುಳಿತಿದ್ದೆ, ಮೌನವಾಗಿದ್ದೆ. ನನಗೆ ಅವನೊಡನೆ ಮಾತಾಡಲು ಇಷ್ಟವಾದರೂ ಮಾತನ್ನು ಹೇಗೆ ಆರಂಭಿಸಬೇಕೆಂಬುದೇ ತಿಳಿಯದಾಯಿತು. ಹೀಗೇ ಒಂದು ಗಂಟೆ ಕಾಲ ಸರಿಯಿತು, ಅಷ್ಟು ಹೊತ್ತಿಗೆ ಮುಂದಿನ ಸ್ಟೇಷನ್ ಬಂತು.

ಅಲ್ಲಿಯೂ ವಕೀಲ ಹಾಗೂ ಮಹಿಳೆ ಗಾಡಿಯಿಂದ ಇಳಿದುಹೋದರು. ಕ್ಲರ್ಕ್

ಕೂಡ ಇಳಿದ. ನಾವಿಬ್ಬರೇ ಉಳಿದೆವು - ಪಾಸ್ನಿಚೆಫ್ ಮತ್ತು ನಾನು.

"ಜನ ಹಾಗಂತಾರೆ, ಅವರು ಸುಳ್ಳು ಹೇಳ್ತಾರೆ, ಆದರೆ ಅವರಿಗೆ ಅರ್ಥವೇ ಆಗಲ್ಲ" ಎಂದ ಪಾಸ್ನಿಚೆಫ್.

"ಯಾವ ವಿಷ್ಯ ಮಾತಾಡ್ತಿದ್ದೀರಿ ನೀವು?"

"ಇನ್ನು ಯಾವುದು, ಹಳೆಯ ವಿಷಯವೇ!"

ಆತ ತನ್ನ ಮೊಣಕೈಗಳನ್ನು ತನ್ನ ತೊಡೆಗಳ ಮೇಲಿರಿಸಿಕೊಂಡು ಕೈಗಳಿಂದ ತಲೆಯ ಎರಡೂ ಬದಿಗಳನ್ನು ಒತ್ತಿ ಹಿಡಿದುಕೊಂಡ.

"ಪ್ರೇಮ ವಿವಾಹ, ಸಂಸಾರ - ಇವೆಲ್ಲ ಸುಳ್ಳು, ಸುಳ್ಳು, ಮಹಾ ಸುಳ್ಳು."

ಮೇಲೆದ್ದು ದೀಪದ ಮೇಲ್ಮುಚ್ಚಳವನ್ನು ಕೆಳಗಿಳಿಸಿ, ತನ್ನ ಮೊಳಕೈಗಳನ್ನು ಮೆತ್ತೆಯ ಮೇಲಿರಿಸಿಕೊಂಡು ಕಣ್ಣುಗಳನ್ನು ಮುಚ್ಚಿಕೊಂಡ. ಹೀಗೇ ಒಂದು ನಿಮಿಷ ಮೌನವಾಗಿ ಕುಳಿತಿದ್ದ.

"ನಾನು ಯಾರೂಂತ ಗೊತ್ತಾದ ಮೇಲೆ ನಿಮಗೆ ನನ್ನ ಜೊತೆ ಕೂತುಕೊಳ್ಳೋದಕ್ಕೆ ಮುಜುಗರವಾಗ್ತಿದ್ಯಾ?"

"ಇಲ್ಲ, ಇಲ್ಲ."

"ನಿದ್ದೆ ಮಾಡ್ಬೇಕೂಂತ ಅನ್ನಿಸ್ತಿದ್ಯಾ?"

"ಉಹ್ಞೂ."

"ಹಾಗಾದ್ರೆ ನನ್ನ ಕತೇನ ನಿಮ್ಮ ಮುಂದೆ ಹೇಳಿಕೋಬಹುದಾ?"

ಆ ಹೊತ್ತಿಗೆ ಸರಿಯಾಗಿ ಕಂಡಕ್ಟರ್ ಆ ಕಡೆ ಹಾದು ಹೋದ. ಅವನು ಹೋದ ಕಡೆಯೇ ಕೆಟ್ಟದಾಗಿ ನೋಡುತ್ತ, ಹೋಗಿಯಾದ ಮೇಲೆ ಯಥಾಸ್ಥಿತಿಗೆ ಬಂದ. ಆಮೇಲೆ ತನ್ನ ಕತೆ ಶುರುಮಾಡಿದ; ಕತೆ ಮುಗಿಯೋವರೆಗೂ ಒಮ್ಮೆಯೂ ನಿಲ್ಲಿಸಲಿಲ್ಲ. ಹೊಸ ಪ್ರಯಾಣಿಕರು ಒಳಬಂದಾಗಲೂ ಅವನ ಕತೆಗೆ ತಡೆ ಬೀಳಲಿಲ್ಲ.

## 3

ಮಾತಾಡುತ್ತಿದ್ದಾಗ ಅವನ ಮುಖದ ಸ್ವರೂಪ ಅನೇಕ ವೇಳೆ ಬದಲಾಯಿಸುತ್ತಿತ್ತು, ಅದು ಎಷ್ಟು ಅಂದರೆ ಮೊದಲಿನಂತೆ ಅದು ಮುಂದೆಂದೂ ಕಾಣಿಸಲೇ ಇಲ್ಲ. ಅವನ ಕಣ್ಣುಗಳು, ಬಾಯಿ, ಮೀಸೆ, ಅವನ ಗಡ್ಡ ಕೂಡ ಹೊಸತಾದುವು. ಪ್ರತಿ ಬದಲಾವಣೆಯಲ್ಲೂ ಮುಖಭಾವ ಹೆಚ್ಚು ಆಕರ್ಷಕವಾಗುತ್ತಿತ್ತು, ಹೃದಯವನ್ನು ಮೀಟುವಂತಿತ್ತು. ಈ ಬದಲಾವಣೆಗಳೆಲ್ಲ ಇದ್ದಕ್ಕಿದ್ದಂತೆ ಆಗುತ್ತಿದ್ದವು. ಆದರೆ ಈ ಐದು ನಿಮಿಷಗಳಿಂದ ಅದು ಒಂದೇ ಬಗೆಯಾಗಿತ್ತು, ಅದನ್ನು ಐದು ನಿಮಿಷದ ಹಿಂದೆ ಇದ್ದುದರ ಜೊತೆ ಹೋಲಿಸುವ ಹಾಗೆಯೇ ಇರಲಿಲ್ಲ. ಆಮೇಲೆ, ಅದು ಹೇಗೆಂದು ನನಗೆ

ಗೊತ್ತಾಗಲಿಲ್ಲ, ಅದು ಮತ್ತೆ ಬದಲಾಯಿತು, ಗುರುತಿಸದ ಹಾಗೆ ಆಗಿಬಿಟ್ಟಿತು.

"ಈಗ ನನ್ನ ಬದುಕಿನ ಚರಿತ್ರೆ ಹೇಳ್ತೀನಿ, ಕೇಳಿ, ನನ್ನ ಜೀವನದ ದುರ್ಭರ ಕತೆ. ಕತೆಯೇ ಅದರ ಪರಿಣಾಮಕ್ಕಿಂತ ಘೋರವಾದ್ದು" ಎಂದು ಒಂದು ಕ್ಷಣ ಮೌನವಾದ, ತನ್ನ ಕೈಗಳಿಂದ ಕಣ್ಣುಗ್ಗಳನ್ನುಜ್ಜಿಕೊಂಡು ಮತ್ತೆ ಆರಂಭಿಸಿದ.

"ಎಲ್ಲ ಸ್ಪಷ್ಟವಾಗಿ ಅರ್ಥವಾಗ್ಬೇಕಾದ್ರೆ ಕತೇನ ಪೂರ್ತಿ ಹೇಳ್ಬೇಕು. ಅಂದ್ರೆ ನನಗೆ ಮದುವೆ ಹೇಗಾಯ್ತು, ಮದುವೆಗೆ ಮುಂಚೆ ನಾನು ಹೇಗಿದ್ದೆ - ಎಲ್ಲ. ಮೊದಲು ನನ್ನ ವಿಷ್ಯ ಹೇಳ್ಕೋತೀನಿ: ನಾನು ಸ್ಟೆಪ್ಸ್ ಪ್ರಾಂತದ ಒಬ್ಬ ಸಾಹುಕಾರ ರೈತನ ಮಗ, ನಾನು ವಿಶ್ವವಿದ್ಯಾನಿಲಯದಲ್ಲಿ ಓದಿದೆ, ಲಾ ಶಾಲೆಯಲ್ಲಿ. ನನಗೆ ಮದುವೆಯಾದಾಗ ಮೂವತ್ತು ವರ್ಷ. ನನ್ನ ಮದುವೆ ವಿಷ್ಯ ಹೇಳಕ್ಕೆ ಮುಂಚೆ ಮೊದಲು ನನ್ನ ಜೀವನ ಹೇಗಿತ್ತು ಅಂತ ಹೇಳ್ಬೇಕು, ದಾಂಪತ್ಯದ ಬಗ್ಗೆ ನನ್ನ ಭಾವನೆ ಹೇಗಿತ್ತು ಅಂತ ಹೇಳ್ಬೇಕು. ನಾನು ಇತರ ಅನೇಕ ಗೌರವಾನ್ವಿತ ಜನಗಳ ಹಾಗೆಯೇ ಬದುಕ್ತಿದ್ದೋನು, ಅಂದರೆ ಹಾದರ ಇಲ್ಲದೆ ಅಂತ. ಬಹಳ ಜನಗಳ ಹಾಗೇ, ಹಾದರ ಮಾಡ್ತಾ ಜೀವಿಸ್ತಿದ್ದಾಗ, ನಾನು ಪ್ರಶ್ನಾತೀತವಾದ ನೀತಿವಂತ ಅನ್ನೋ ಭಾವನೆ ನನಗೆ ಇತ್ತು.

"ನನ್ನ ನೈತಿಕತೆಯ ಬಗೆಗಿನ ಭಾವನೆ ಬಂದದ್ದಕ್ಕೆ ಕಾರಣ, ಸುತ್ತುಮುತ್ತಲಲ್ಲಿ ತುಂಬಿಕೊಂಡಿದ್ದಂಥ ವಿಶೇಷ ರೀತಿಯ ಹಾದರ ನಮ್ಮ ಕುಟುಂಬದಲ್ಲಿ ಇರ್ಲಿಲ್ಲ, ನಮ್ಮ ತಂದೆ ತಾಯಿ ಪರಸ್ಪರರಿಗೆ ಮೋಸ ಮಾಡ್ತಿರಲಿಲ್ಲ. ಇದರ ಪರಿಣಾಮವಾಗಿ, ಚಿಕ್ಕಂದಿನಿಂದಲೇ ದಾಂಪತ್ಯದ ಬಗ್ಗೆ ನಾನು ಒಂದು ರೀತಿ ಉನ್ನತವಾದ ಕಾವ್ಯಾತ್ಮಕವಾದ ಕನಸನ್ನು ಕಟ್ಟಿಕೊಂಡಿದ್ದೆ. ನನ್ನ ಹೆಂಡತಿಯೂ ಪರಿಪೂರ್ಣಳಾಗಿರ್ಬೇಕು, ನಮ್ಮ ಅನ್ಯೋನ್ಯ ಪ್ರೇಮ ಅನುಪಮವಾಗಿರ್ಬೇಕು, ನಮ್ಮ ದಾಂಪತ್ಯದ ಶುಚಿ ಮಸಿಯಿಲ್ಲದೆ ಇರ್ಬೇಕು ಅನ್ನೋ ಕನಸು. ನನ್ನ ಉನ್ನತ ಆಲೋಚನೆಗಳ ಬಗ್ಗೆ ನನಗೊಂಥರ ಮೇಲುಮಟ್ಟದ ಭಾವನೆ.

"ಅದೇ ಹೊತ್ತಿಗೆ ನನ್ನ ತಾರುಣ್ಯದ ಹತ್ತು ವರ್ಷಗಳು ಕಳೆದುಹೋದುವು, ಆದರೆ ಮದುವೆ ಬಗ್ಗೆ ಆತುರವೇನೂ ಇರ್ಲಿಲ್ಲ. ನಾನು ಶಿಸ್ತುಬದ್ಧ ಬ್ರಹ್ಮಚರ್ಯದ ಜೀವನ ನಡೆಸುತ್ತಿದ್ದೆ. ನಾನು ಆ ಬಗ್ಗೆ ಗೆಳೆಯರ ಹತ್ರ ಹೆಮ್ಮೆಯಿಂದ ಹೇಳಿಕೋತಿದ್ದೆ, ಏನೇನೋ ಉಸಾಬರಿಗಳಲ್ಲಿ ತೊಡಗಿದ್ದ ನನ್ನ ಓರಗೆಯವರೊಡನೆ ಈ ವಿಷಯ ಕುರಿತು ಮಾತಾಡ್ತಿದ್ದೆ. ನಾನೆಂದೂ ಕೆಟ್ಟ ಕೆಲಸಕ್ಕೆ ಇತರರನ್ನು ಪ್ರೇರಿಸಿದೋನಲ್ಲ, ಹಾದರ ಅನ್ನೋದು ನನ್ನ ಬದುಕಲ್ಲಿ ಮುಖ್ಯವಾಗಿರ್ಲಿಲ್ಲ, ನನ್ನದು ಸಮಾಜದ ಕಟ್ಟುಪಾಡುಗಳ ಮಿತಿಯಲ್ಲೇ ಸಂತೋಷ ಕಾಣುವ ಸ್ವಭಾವ. ಇದರಿಂದಾಗಿ ನಂಗೆ ನನ್ನ ನೈತಿಕ ಮಟ್ಟದ ಬಗ್ಗೆ ಅತೀವ ಅಭಿಮಾನ. ನಾನು ಸಂಬಂಧ ಇರಿಸಿಕೊಂಡಿದ್ದ ಹೆಂಗಸರು ನನ್ನ ಜೊತೆ ಮಾತ್ರ ಸಂಬಂಧ ಇರಿಸಿಕೊಂಡವರಲ್ಲ; ನನಗೆ ಆ ಕ್ಷಣದ ಸಂತೋಷ ಮುಖ್ಯವಾಗಿತ್ತೇ ಹೊರತು ಹೆಚ್ಚಿನದೇನೂ ಅಲ್ಲ.

“ಇದರಲ್ಲಿ ಅಂಥ ವಿಚಿತ್ರವಾದುದೇನೂ ನನಗೆ ಕಾಣಿಸಲಿಲ್ಲ. ಅದಕ್ಕೆ ಬದಲು, ನನ್ನ ಹೃದಯವನ್ನು ಯಾರಿಗೂ ತೆತ್ತಿಲ್ಲದೆ, ಬರಿಯ ಹಣ ಮಾತ್ರ ಕೊಟ್ಟಿದ್ದುದರಿಂದ, ನಾನು ಪ್ರಾಮಾಣಿಕನಾಗಿದ್ದೆನೆಂದೇ ನಂಬಿದ್ದೆ. ನನ್ನ ಜೊತೆ ನಿಕಟತೆಯನ್ನು ಹೊಂದಿದ ಹಾಗೂ ನನಗೆ ಮಗುವಿನ ಬಳುವಳಿಯಿತ್ತ ಹೆಂಗಸರೊಡನೆ ನಾನು ಒಡನಾಟವನ್ನು ಹೊಂದಿರಲಿಲ್ಲ, ಹೀಗಾಗಿ ನನ್ನ ಭವಿಷ್ಯ ಸಿಕ್ಕಿಹಾಕಿಕೊಂಡಿರಲಿಲ್ಲ. ಮಿಗಿಲಾಗಿ, ಮಕ್ಕಳೋ ನಿಕಟತೆಯೋ ಇದ್ದಿರಬಹುದಾದರೂ ನನಗೆ ಅರಿವಿಗೆ ಬಾರದ ರೀತಿಯಲ್ಲಿ ಅವುಗಳನ್ನು ನಿರ್ವಹಿಸಿದ್ದೆ.

“ಹೀಗೆ ಬದುಕುತ್ತ ನಾನು ಮಹಾ ಪ್ರಾಮಾಣಿಕನೆಂದೇ ಭಾವಿಸಿದ್ದೆ. ಹಾದರವೆಂದರೆ ಬರೀ ದೈಹಿಕ ಕ್ರಿಯೆ ಮಾತ್ರವಲ್ಲ ಎಂಬ ತಿಳಿವಳಿಕೆ ನನಗೆ ಬಂದಿರಲಿಲ್ಲ; ದೈಹಿಕ ಕ್ಷುದ್ರತೆ ಹೇಗೇ ಇರಲಿ ಅದು ಹಾದರವೆನ್ನಿಸಿರಲಿಲ್ಲ. ನಿಜವಾದ ಹಾದರವೆಂದರೆ ತಾನು ಲೈಂಗಿಕ ಸಂಬಂಧ ಹೊಂದಿದ್ದ ಹೆಂಗಸರೊಡನೆ ಯಾವುದೇ ನೈತಿಕ ಕಟ್ಟುಪಾಡಿಲ್ಲದಿರುವುದೇ ಸ್ವಾತಂತ್ರ್ಯವೆಂದು ತಿಳಿದು ಅಂಥ ಸ್ವಾತಂತ್ರ್ಯವು ದೊಡ್ಡ ಸಾಧನೆಯೆಂದೇ ಭಾವಿಸಿದ್ದೆ. ಒಮ್ಮೆ ಪ್ರಾಯಶಃ ನನ್ನ ಜೊತೆ ಪ್ರೀತಿಯಿಂದಲೇ ತನ್ನನ್ನು ಅರ್ಪಿಸಿಕೊಂಡಿದ್ದ ಒಬ್ಬ ಹೆಂಗಸಿಗೆ ಹಣ ಕೊಡದೇ ಮರೆತುದಕ್ಕಾಗಿ ನಾನು ತೀವ್ರವಾದ ಪಶ್ಚಾತ್ತಾಪಕ್ಕೊಳಗಾಗಿದ್ದೆ. ಅವಳಿಗೆ ಒಂದಷ್ಟು ಹಣವನ್ನು ಕಳಿಸಿದ ಮೇಲೆಯೇ ನನಗೆ ಸಮಾಧಾನವೆನಿಸಿದ್ದು. ನಾನು ಅವಳೊಂದಿಗೆ ಯಾವ ರೀತಿಯಲ್ಲಿಯೂ ಸಂಬಂಧ ಹೊಂದಿಲ್ಲವೆಂಬುದನ್ನು ನಾನು ಈ ರೀತಿಯಲ್ಲಿ ತೋರಿಸಿಕೊಂಡಿದ್ದೆ. ನನ್ನ ಮಾತುಗಳನ್ನು ಒಪ್ಪುವ ಹಾಗೆ ದಯವಿಟ್ಟು ತಲೆಯಾಡಿಸಬೇಡಿ. ಇದೆಲ್ಲ ನಾಟಕವೆಂದು ನನಗೆ ಗೊತ್ತು. ನೀವೆಲ್ಲ, ಅದರಲ್ಲೂ ನೀವು, ನೀವೇನಾದರೂ ಅಪರೂಪದ ವ್ಯಕ್ತಿಯಾಗಿಲ್ಲದಿದ್ದರೆ, ನನಗೆ ಆಗ ಯಾವ ಭಾವನೆಯಿತ್ತೋ ಅದೇ ನಿಮ್ಮಲ್ಲೂ ಇರುತ್ತದೆ. ನನ್ನ ಮಾತನ್ನು ನೀವು ಒಪ್ಪುವುದಾದರೆ, ಅದು ಈಗ ಮಾತ್ರ. ಹಿಂದೆ ನಿಮಗೆ ಅಂಥ ಭಾವನೆಯಿರಲಿಲ್ಲ, ನನಗೂ ಇರಲಿಲ್ಲ. ಈಗ ನಾನು ನಿಮಗೆ ಹೇಳಿದ್ದನ್ನು ನನಗೇನಾದರೂ ಹೇಳಿದ್ದರೆ, ಈಗ ನಡೆದಿರುವುದು ನಡೆಯುತ್ತಲೇ ಇರಲಿಲ್ಲ. ಎಲ್ಲ ಒಂದೇ. ಕ್ಷಮಿಸಿ, ಸತ್ಯವೆಂದರೆ ಅದು ಭಯಾನಕವಾದ್ದು. ಹೆಂಗಸರ ವಿಷಯದಲ್ಲಿ ನಾವು ಬಿದ್ದು ಒದ್ದಾಡುವ ಈ ಹಾದರ ಮತ್ತು ತಪ್ಪುಗಳು, ಅವರೊಡನೆ ಇರಿಸಿಕೊಳ್ಳುವ ಸಂಬಂಧಗಳು. ಉಹ್ಞೂ, ನಾನು ಅದರ ಬಗ್ಗೆ ಸಮಾಧಾನದಿಂದ ಮಾತನಾಡಲೇ ಆರೆ. ಅದಕ್ಕೆ ಕಾರಣ ಅವರು ಹೇಳಿದ ನನ್ನ ಬದುಕಿನ ಆ ಪ್ರಸಂಗವಲ್ಲ, ಅದು ಸಂಭವಿಸಿದಾಗಿನಿಂದ ನನ್ನ ಕಣ್ಣುಗಳು ತೆರೆದಿವೆ, ಎಲ್ಲವನ್ನೂ ವಿಭಿನ್ನ ದೃಷ್ಟಿಕೋನದಿಂದ ನೋಡುವಂತೆ ಮಾಡಿದೆ. ಎಲ್ಲ ತಲೆಕೆಳಗಾಗಿದೆ, ಬುಡಮೇಲಾಗಿದೆ!” ಇಷ್ಟು ಹೇಳಿ ಅವನು ಸಿಗರೇಟು ಹತ್ತಿಸಿ, ಮೊಳಕೈಗಳನ್ನು ತನ್ನ ಮಂಡಿಗಳ ಮೇಲಿರಿಸಿಕೊಂಡು ಮಾತನ್ನು ಮುಂದುವರಿಸಿದ. ಮುಖ ಕಪ್ಪಗಾಗಿತ್ತು, ಆದರೆ, ರೈಲಿನ ತೂಗಾಟವನ್ನು ಮೀರಿದ ಸಂತಸದ ಅವನ ಆಕರ್ಷಕ ಧ್ವನಿ ನನಗೆ ಕೇಳಿಸಿತು.

## 4

"ನಿಜ, ನಾನು ಅನುಭವಿಸಿದಂಥ ತೊಳಲಾಟಗಳ ನಂತರ ಹಾಗೂ ಅವುಗಳ ಕಾರಣದಿಂದಲೇ ವಿಷಯದ ಬೇರು ಎಲ್ಲಿದೆ, ಮುಂದೇನಾಗಬೇಕು, ಅದರ ಭಯಾನಕತೆ ಎಂಥದು ಎಂಬುದನ್ನು ತಿಳಿಯಲು ನನಗೆ ಸಾಧ್ಯವಾದುದು. ಈಗ ನಿಮಗೆ ಆ ಪ್ರಸಂಗ ಹೇಗೆ ಮತ್ತು ಎಲ್ಲಿ ಆರಂಭಗೊಂಡಿತು ಎಂಬುದು ಅರ್ಥವಾಗಬಹುದು. ಇದು ಆರಂಭವಾದಾಗ ನನಗಿನ್ನೂ ಹದಿನಾರು ತುಂಬಿರಲಿಲ್ಲ. ಆಗ ಇನ್ನೂ ನಾನು ಗ್ರಾಮರ್ ಶಾಲೆಯಲ್ಲಿ ಓದುತ್ತಿದ್ದೆ, ನನ್ನ ಅಣ್ಣ ವಿಶ್ವವಿದ್ಯಾನಿಲಯದ ಮೊದಲ ವರ್ಷದ ವಿದ್ಯಾರ್ಥಿಯಾಗಿದ್ದ. ನನಗಿನ್ನೂ ಆಗ ಯಾವ ಹೆಂಗಸರೂ ಗೊತ್ತಿರಲಿಲ್ಲ, ಆದರೆ ನಮ್ಮ ತರಗತಿಯ ಇತರರೆಲ್ಲ ನತದೃಷ್ಟ ವಿದ್ಯಾರ್ಥಿಗಳಂತೆ ನಾನೂ ಮುಗ್ಧನಾಗೇನೂ ಉಳಿದಿರಲಿಲ್ಲ; ಅದಕ್ಕಿಂತ ಎರಡು ವರ್ಷ ಮುಂಚಿನಿಂದಲೇ ನಾನು ಇತರ ಬಾಲಕರಿಂದಾಗಿ ನೀತಿಗೆಟ್ಟಿದ್ದೆ. ಆಗಲೇ ಹೆಂಗಸು, ನಿರ್ದಿಷ್ಟ ವ್ಯಕ್ತಿಯಲ್ಲ, ಒಟ್ಟಾರೆ ಹೆಂಗಸು, ಯಾರೇ ಆಗಿರಲಿ, ಬತ್ತಲಾದವಳು ಬಯಕೆಯ ವಸ್ತು ಅನ್ನಿಸಿ ನನ್ನ ಮನಸ್ಸು ಒದ್ದಾಡುವಂತಾಗಿತ್ತು. ನನ್ನ ಏಕಾಂತ ಪರಿಶುದ್ಧವಾಗಿರಲಿಲ್ಲ. ನಾನು ತೊಂಬತ್ತೊಂಬತ್ತು ಭಾಗದಷ್ಟು ಮಟ್ಟಿಗೆ ಕೋಟಲೆಗೊಳಗಾಗಿದ್ದೆ. ನನಗೆ ಭಯವೆನ್ನಿಸುತ್ತಿತ್ತು, ಹಿಂಸೆಯಾಗುತ್ತಿತ್ತು, 'ದೇವರೇ' ಎಂದು ಪ್ರಾರ್ಥನೆ ಮಾಡುವಂತಾಗುತ್ತಿತ್ತು, ಹೀಗೆ ಪತನಗೊಂಡೆ. ನಾನು ಮಾನಸಿಕವಾಗಿಯೂ ಕ್ರಿಯೆಯಲ್ಲಿಯೂ ಹಾದಿ ತಪ್ಪಿದ್ದೆ; ಆದರೆ ನಾನಿನ್ನೂ ಯಾವುದೇ ವ್ಯಕ್ತಿಯನ್ನು ಮುಟ್ಟಿರಲಿಲ್ಲ. ಆದರೆ ನನ್ನ ಅಣ್ಣನ ಷೋಕಿಲಾಲ ಗೆಳೆಯನೊಬ್ಬ, ಒಳ್ಳೆಯವನೆನ್ನಿಸಿಕೊಂಡವನು, ಅಂದರೆ ಕೆಲಸಕ್ಕೆ ಬಾರದಂಥವನು, ನಮಗಾಗಲೇ ಕುಡಿತ ಮತ್ತು ಇಸ್ಪೀಟಾಟಗಳನ್ನು ಕಲಿಸಿದ್ದವನು, ಒಂದು ದಿನ ಕುಡಿತದ ಕೂಟವಾದನಂತರ ಅಲ್ಲಿಗೆ ಕರೆದೊಯ್ದಿದ್ದ, ನಾವು ಹೋದೆವು. ನಮ್ಮಣ್ಣನೂ ಇನ್ನೂ ಮುಗ್ಧನಾಗಿದ್ದ, ಅವನೂ ಆ ರಾತ್ರಿ ಹಾದಿತಪ್ಪಿದ. ಹದಿನೈದು ವರ್ಷದ ಹುಡುಗನಾಗಿದ್ದ ನಾನು, ನನ್ನನ್ನು ಮಲಿನಗೊಳಿಸಿಕೊಂಡೆ, ಒಬ್ಬ ಹೆಂಗಸು ಮಲಿನಗೊಳ್ಳುವಂತೆಯೂ ಮಾಡಿದೆ; ಆದರೆ ನನಗೆ ನಾನೇನು ಮಾಡುತ್ತಿದ್ದೇನೆಂಬುದರ ಅರಿವೇ ಇರಲಿಲ್ಲ. ನಾನು ಮಾಡುತ್ತಿರುವುದು ತಪ್ಪು ಎಂದು ಯಾವ ಹಿರಿಯರೂ ನನಗೆ ಹೇಳಿರಲಿಲ್ಲ. ಹಾಗೆ ಹೇಳಿದರೆ ಈಗ ಯಾರೂ ನಂಬುವುದಿಲ್ಲ. ದಶವಿಧಿಗಳಲ್ಲಿ ಅದೂ ಸೇರಿದೆ, ನಿಜ; ಆದರೆ ಆ ದಶವಿಧಿಗಳು ಪಾದ್ರಿಯಾಗಲು ಮಾಡಬೇಕಾದ ಧರ್ಮಗ್ರಂಥಗಳ ಬಗೆಗಿನ ಪರೀಕ್ಷೆಯಲ್ಲಿ ಉತ್ತರಿಸಲು ಮಾತ್ರ ಆವಶ್ಯಕವಾಗಿತ್ತೇ ಹೊರತು ನಿತ್ಯ ಪರಿಪಾಲಿಸಲು ಬೇಕಾದ ವಿಧಿಯೆಂದೇನೂ ಅಂದುಕೊಂಡಿರಲಿಲ್ಲ. ಹೀಗಾಗಿ ನಾನು ಹಿರಿಯರೆಂದು ಗೌರವಿಸುತ್ತಿದ್ದ ಯಾರೂ ಅದೊಂದು ಪಾಪಕಾರ್ಯ ಎಂದು ಎಚ್ಚರಿಸಿರಲಿಲ್ಲ. ಅದಕ್ಕೆ ಬದಲು ನಾನು ಗೌರವಿಸುತ್ತಿದ್ದ ಹಿರಿಯರು ಅದನ್ನು ಒಳ್ಳೆಯದೆಂದೇ ಹೇಳುತ್ತಿದ್ದರು. ಅದರ ನಂತರ ನನ್ನ ಹೋರಾಟ ನರಳಿಕೆಗಳೆಲ್ಲ ಮಾಯವಾಗುತ್ತದೆಂದು ಕೇಳಿದ್ದೆ. ಹಾಗೆಂದು ಕೇಳಿಯೂ ಇದ್ದೆ, ಓದಿಯೂ ಇದ್ದೆ; ಹಾಗೆಯೇ ಅದು ನನ್ನ ಆರೋಗ್ಯಕ್ಕೆ ಒಳ್ಳೆಯದೆಂದು

ಹಿರಿಯರು ಹೇಳಿದ್ದನ್ನೂ ಕೇಳಿಸಿಕೊಂಡಿದ್ದೆ. ಜೊತೆಗೆ ಅದೊಂದು ಸುಖಕರವಾದ ಹಾಗೂ ಉತ್ಸಾಹದಿಂದ ತೊಡಗಬೇಕಾದ ಕ್ರಿಯೆಯೆಂದು ಗೆಳೆಯರು ಹೇಳುತ್ತಿದ್ದುದನ್ನು ಕೇಳಿದ್ದೆ. ಹೀಗಾಗಿ, ಅದರಿಂದ ಕೆಟ್ಟುದಕ್ಕಿಂತ ಒಳ್ಳೆಯದೇ ಆಗುತ್ತದೆಂದು ಭಾವಿಸಿದ್ದೆ. ಆದರೆ ರೋಗ ಅಂಟುವ ಅಪಾಯ? ಅದನ್ನೂ ಮುಂಚೆಯೇ ಊಹಿಸಲಾಗಿತ್ತು. ತಂದೆಯಂತಹ ಸರ್ಕಾರ ಆ ಬಗ್ಗೆ ನಿಗಾ ವಹಿಸಿತ್ತು; ಸೂಳೆಗೇರಿಗಳು ಆರೋಗ್ಯಕರ ವಾತಾವರಣ ದಲ್ಲಿರುವಂತೆ ಗಮನಹರಿಸಿತ್ತು, ಲೈಂಗಿಕತೆಯು ಶಾಲಾ ಬಾಲಕರಿಗೂ ಅಪಾಯಕಾರಿ ಯಾಗದಂತೆ ನೋಡಿಕೊಂಡಿತ್ತು. ವೈದ್ಯರೂ ಶುಲ್ಕ ಪಡೆದು ಔಷಧಿ ಕೊಡುತ್ತಾರಲ್ಲ. ಹಾಗಾಗಿ ಅದು ಸರಿ ಎನಿಸಿತ್ತು. ಆರೋಗ್ಯಕ್ಕೆ ಹಾದರ ಒಳ್ಳೆಯದೆಂದು ಭಾವಿಸಿ, ನಿಯಂತ್ರಿತ ರೀತಿಯಲ್ಲಿ ಸುಸಂಘಟಿತ ಹಾದರದ ವ್ಯವಸ್ಥೆ ಮಾಡಿದ್ದರು. ಕೆಲವು ತಾಯಂದಿರೂ ತಮ್ಮ ಮಕ್ಕಳ ಆರೋಗ್ಯವನ್ನು ಆ ರೀತಿಯಲ್ಲೇ ಕಾಪಾಡುವುದೂ ನನಗೆ ತಿಳಿದಿತ್ತು. ವಿಜ್ಞಾನವೇ ಸೂಳೆಗೇರಿಗೆ ಜನರನ್ನು ಕಳಿಸುತ್ತಿತ್ತು.

" 'ವಿಜ್ಞಾನ' ಎಂದೇಕೆ ಹೇಳುತ್ತೀರಿ?" ಎಂದೆ ನಾನು.

"ಯಾಕೆ, ವೈದ್ಯರು ವಿಜ್ಞಾನಿಗಳಲ್ಲವೇ? ಆರೋಗ್ಯಕ್ಕೆ ಇದು ಅವಶ್ಯಕವೆಂದು ಹೇಳಿ ಯುವಕರನ್ನು ತಪ್ಪುದಾರಿಗೆಳೆಯುತ್ತಿರುವವರು ಯಾರು? ಅವರೇ. ಇಷ್ಟಾದರೂ, ಸಿಫಿಲಿಸ್ ರೋಗವನ್ನು ವಾಸಿಮಾಡಲು ಮಾಡುವ ಪ್ರಯತ್ನದ ನೂರನೇ ಒಂದು ಭಾಗದಷ್ಟು ಪ್ರಯತ್ನವನ್ನು ಹಾದರವನ್ನು ತಡೆಗಟ್ಟಲು ಮಾಡಿದ್ದರೆ ಸಿಫಿಲಿಸ್‌ನ ಹೆಸರೇ ಇರುತ್ತಿರಲಿಲ್ಲ. ಆದರೆ ವಾಸ್ತವವೆಂದರೆ, ನಡೆಸುತ್ತಿರುವ ಪ್ರಯತ್ನ ಹಾದರದ ನಿಲುಗಡೆಗಲ್ಲದೆ ಅದನ್ನು ಉತ್ತೇಜಿಸಲು ಹಾಗೂ ಅದನ್ನು ಸುರಕ್ಷಿತವಾಗಿಸಲು. ಈಗಿನ ವಿಷಯ ಅದಲ್ಲ ಅಂತ ಇಟ್ಟುಕೊಳ್ಳಿ. ಹೇಳಬೇಕಾದ್ದೆಂದರೆ - ನನ್ನ ಹಾಗೂ ತೊಂಬತ್ತು ಭಾಗದಷ್ಟು ಜನರ - ಬರಿ ನಮ್ಮ ವರ್ಗದವರಲ್ಲ, ಎಲ್ಲ ವರ್ಗಗಳವರ, ರೈತಾಪಿ ಜನರದ್ದು ಕೂಡ - ನನಗಾದ ಈ ಭಯಂಕರ ಅನುಭವಕ್ಕೆ ಕಾರಣ ಹೆಂಗಸರು ನಮ್ಮನ್ನು ಸೆಳೆಯುವ ಕಾರಣದಿಂದಲ್ಲ; ಯಾವುದೋ ಒಬ್ಬ ಹೆಂಗಸಿನ ಆಕರ್ಷಣೆಗೊಳಗಾಗಿ ನಾನು ಈ ಚಾಳಿಗೆ ಬಿದ್ದುದಲ್ಲ, ಹಾಗಾದದ್ದು ಇಡೀ ವಾತಾವರಣದ ಕಾರಣದಿಂದ. ನಿಜವಾದ ಕೆಟ್ಟ ಚಾಳಿ ಎಂದರೆ ಇದು ಆರೋಗ್ಯಕ್ಕೆ ಸಹಾಯಕ ಎಂಬ ಕೆಲವರ ಭಾವನೆ ಮತ್ತು ಇನ್ನೂ ಕೆಲವರು ಇದು ಬಹಳ ಸಹಜವಾದ್ದು ಹಾಗೂ ಕ್ಷಮ್ಯವಾದ್ದು, ಅಷ್ಟೇ ಅಲ್ಲ ಯುವಕರ ಇದು ಮುಗ್ಧ ಮನರಂಜನ ಸಾಧನ ಎಂಬ ತಿಳಿವಳಿಕೆ. ಅದು ಕೆಟ್ಟ ದಾರಿ ಎಂಬ ಅರಿವೇ ನನಗಿರಲಿಲ್ಲ, ಸುಮ್ಮನೆ ಆ ಅರೆಸಂತಸ ಅರೆ ಅವಶ್ಯಕತೆಯಲ್ಲಿ ತೊಡಗಿದೆ. ಯಾಕಂದರೆ ಅದು ಒಂದು ವಯಸ್ಸಿನಲ್ಲಿ ತೀರ ಸಹಜ ಎಂಬ ಪುಸಲಾವಣೆ. ಕುಡಿತ ಮತ್ತು ಹೊಗೆಬತ್ತಿ ಸೇದುವಂತೆಯೇ ನಾನು ಹಾದರಕ್ಕೂ ಬಿದ್ದೆ. ಆದರೂ ಮೊದಲ ಬೀಳುವಿಕೆಯಲ್ಲಿ ಏನೋ ವಿಶೇಷವೂ ವಿಷಾದಕರವೂ ಆದುದಿತ್ತು. ಇದ್ದಕ್ಕಿದ್ದಂತೆ ನನಗೆ ಆ ಭಾವನೆ ಬಂತು. ಆಗ ಕೋಣೆ ಬಿಡುವ ಮುನ್ನವೇ ನಾನು ಖಿನ್ನತೆಗೊಳಗಾದೆ, ಅಳಬೇಕೆಂಬಷ್ಟು ದುಃಖ ಒತ್ತರಿಸಿಕೊಂಡು ಬಂತು, ಮುಗ್ಧತೆಯನ್ನು ಹಾಳು

ಮಾಡಿಕೊಂಡದ್ದಕ್ಕಾಗಿ, ಹೆಂಗಸರೊಡನೆ ಪಡೆದ ಸಂಬಂಧಕ್ಕಾಗಿ; ಈಗಂತೂ ಕಲುಷತೆ ಅಂಟಿಕೊಂಡೇ ಇದೆ.

"ಹ್ಞೂ, ಈಗಂತೂ ಹೆಂಗಸರ ಜೊತೆಗಿನ ಸರಳ ಸಂಬಂಧ ಶಾಶ್ವತವಾಗಿ ಮುಗಿದಿದೆ. ಆವತ್ತಿನಿಂದ ನನಗೆ ಹೆಂಗಸರೊಡನೆ ಪರಿಶುದ್ಧ ಸಂಬಂಧ ಹೊಂದಲು ಸಾಧ್ಯವೇ ಆಗುತ್ತಿಲ್ಲ. ಲಂಪಟ ಅಂತಾರಲ್ಲ, ಹಾಗಾಗಿದ್ದೆ ನಾನು. ಲಂಪಟನಾಗುವುದು ಅಂದರೆ ದೈಹಿಕವಾಗಿ ನೋವು ನಿವಾರಕ ಚಟ ಆಗುತ್ತಲ್ಲ, ಆ ಥರ. ಒಬ್ಬ ಚಟಗಾರನಾಗಿ, ಕುಡುಕನಾಗಿ, ಹೊಗೆಬತ್ತಿ ಸೇದುಗಾರನಾಗಿ ನಾನು ಸಹಜತೆಯಿಂದ ದೂರವಾಗಿ ಬಿಟ್ಟಿದ್ದೀನಿ. ಯಾವ ಯಾವದೋ ಹೆಂಗಸರ ಜೊತೆ ಇರಿಸ್ಕೊಂಡಿರೋ ಯಾವೊಬ್ಬನೂ ಸಹಜ ಮನುಷ್ಯನಾಗಿರಲ್ಲ, ಬದಲು ವಿಕೃತಗೊಂಡಿರ್ತಾನೆ, ಲಂಪಟನಾಗಿರ್ತಾನೆ. ಇಂಥವರನ್ನು ಅವರ ಮುಖ ನೋಡಿದರೇ, ನಡವಳಿಕೆಯಿಂದಲೇ ಗುರುತಿಸಬಹುದು. ಲಂಪಟ ತನ್ನನ್ನ ತಾನು ಹತೋಟೀಲಿ ಇಟ್ಕೊಂಡಿರಬಹುದು, ಪರಿಶುದ್ಧನಾಗಕ್ಕೆ ಪರದಾಡಬಹುದು, ಆದರೆ ಅವನ ಹಿಂದಿನ ಪರಿಶುದ್ಧತೆಯಾಗಲೀ, ಸರಳತೆಯಾಗಲೀ, ಸ್ಪಷ್ಟತೆಯಾಗಲೀ, ಹೆಂಗಸರ ಜೊತೆಗೆ ಸೋದರಭಾವನೆಯಾಗಲೀ ಇರಕ್ಕೆ ಸಾಧ್ಯವೇ ಆಗಲ್ಲ. ಒಬ್ಬ ಯುವತಿಯ ಕಡೆ ಅವನು ನೋಡೋ ದೃಷ್ಟಿಯೇ, ಅವಳನ್ನು ಪರೀಕ್ಷಿಸೋ ರೀತಿಯೇ - ಇವನು ಲಂಪಟ ಅಂತ ಗುರುತಿಸೋದಕ್ಕೆ ಸಾಕು, ನಾನು ಇಂಥ ಲಂಪಟನಾದೆ, ಆಗಿಯೇ ಇದ್ದೀನಿ, ಇದೇ ನನ್ನ ಸರ್ವನಾಶಕ್ಕೂ ಕಾರಣವಾಗಿರೋದು."

## 5

"ಹ್ಞೂ, ಆವತ್ತಿನಿಂದ ದಿನದಿನಕ್ಕೆ ಪರಿಸ್ಥಿತಿ ಹದಗೆಡುತ್ತ ಹೋಯಿತು, ಎಲ್ಲ ರೀತಿಯಲ್ಲೂ ಹಾದಿ ತಪ್ಪುವಂತಾಯಿತು. ಅಯ್ಯೋ ದೇವರೇ! ಈ ವಿಷಯದಲ್ಲಿ ನಾನು ಮಾಡಿದ ಘೋರಗಳನ್ನು ನೆನೆಸಿಕೊಂಡರೆ ಭಯ ನನ್ನನ್ನು ಹಿಂಡುತ್ತದೆ. ಇದು ನಿಜ, ನನ್ನ ಗೆಳೆಯರು ನನ್ನ 'ಅರಿಯದ ಕೂಸು' ಅಂತ ಲೇವಡಿ ಮಾಡುತ್ತಿದ್ದರು. ಷೋಕಿಲಾಲ ಅಂತ ಅಧಿಕಾರಗಳನ್ನೋ ಪ್ಯಾರಿಸ್ಸಿಗರನ್ನೋ ಕರೆದಾಗ, ಇವರೆಲ್ಲ ಹಾಗೂ ನಾನು - ನಾವೆಲ್ಲ ಹೆಂಗಸರ ಬಗ್ಗೆ ಅಸಂಖ್ಯಾತ ಅಪರಾಧಗಳನ್ನೆಸಗಿದವರು - ಮೂವತ್ತನ್ನು ದಾಟಿದ ಹಾದಿಗೆಟ್ಟವರಾಗಿದ್ದುಕೊಂಡು ಚೆನ್ನಾಗಿ ಸ್ನಾನಮಾಡಿ, ನಯವಾಗಿ ಷೇವ್ ಮಾಡಿಕೊಂಡು, ಮೈಗೆಲ್ಲ ಪರಿಮಳ ಪೂಸಿಕೊಂಡು, ಒಳ್ಳೇ ಬಟ್ಟೆ ಹಾಕಿಕೊಂಡು ಒಂದು ಬಾಲ್ರೂಮನ್ನೋ ಪಡಸಾಲೆಯನ್ನೋ ಪ್ರವೇಶಿಸಿದಾಗ ನಾವೆಲ್ಲ ಪರಿಶುದ್ಧತೆಯ ಲವಲವಿಕೆಯ ಸಾಕಾರಗಳು ಅನ್ನಿಸಬೇಕು! ಏನಾಗಬೇಕು, ಏನಾಗಿದೆ ಅಂತ ಯೋಚಿಸಿ, ಅಂಥ ವ್ಯಕ್ತಿಗಳು ನನ್ನ ತಂಗಿಗೋ ಮಗಳಿಗೋ ವರವಾಗಿ ಬಂದರೆ, ನನಗಂಥವರ ಬದುಕು ಎಂಥದು ಅಂತ ಗೊತ್ತಿರೋದರಿಂದ, ಅವರ ಹತ್ತಿರ ಹೋಗಿ ಪಕ್ಕಕ್ಕೆ ಕರೆದು ಮೆಲುವಾಗಿ 'ಪ್ರಿಯ ಯುವಕನೇ, ನೀನು ಎಂಥ ಬದುಕು ಬದುಕುತ್ತಿದ್ದೀ ಅಂತ ನನಗೆ ಗೊತ್ತು, ರಾತ್ರಿಗಳನ್ನು ನೀನು ಯಾರ ಜೊತೆ ಎಂಥೋರ ಜೊತೆ ಕಳೀತೀ ಅಂತಲೂ

ಗೊತ್ತು, ಹೀಗಾಗಿ ಇದು ನಿನಗೆ ತಕ್ಕ ಜಾಗವಲ್ಲ. ಇಲ್ಲಿರೋರು ಪರಿಶುದ್ಧರೂ ಮುಗ್ಧರೂ ಆದ ಹುಡುಗಿಯರು. ಆದ್ದರಿಂದ ಹೊರಟು ಹೋಗು!' ಅಂತ ಹೇಳಬೇಕು. ಆದರೆ ಏನಾಗತ್ತೆ ಅಂದ್ರೆ, ಅಂಥೋರು ಡ್ಯಾನ್ಸ್‌ಗೆ ಬಂದು ನನ್ನ ತಂಗೀನೋ ಮಗಳನ್ನೋ ಅಪ್ಪಿಕೊಂಡು ನರ್ತಿಸಿದರೆ, ಅಂಥೋನು ಶ್ರೀಮಂತನಾಗಿದ್ದು ಒಳ್ಳೆ ಸಂಬಂಧಗಳನ್ನು ಹೊಂದಿದ್ರೆ, ನಾವು ಆನಂದ ಸಾಗರದಲ್ಲಿ ತೇಲಿಬಿಡ್ತೀವಿ! ನನ್ನ ಮಗಳಿಗೆ ಗೌರವ ತೋರಿಸ್ತಿದಾನೆ ಅಂದುಕೋತೀವಿ. ರೋಗ ಲಕ್ಷಣಗಳು ಇನ್ನೂ ಉಳಿದುಕೊಂಡಿದ್ದರೂ, ಪರವಾಯಿಲ್ಲ! ಅಂಥದನ್ನು ವಾಸಿಮಾಡೋ ಉಪಾಯಗಳು ಈಗ ಸುಲಭವಾಗಿ ಸಿಗತ್ವೆ. ಒಳ್ಳೆ ಮನೆತನದ ಅನೇಕ ಹುಡುಗೀರ ತಾಯ್ತಂದೆಯರು ರೋಗಗಳಿಂದ ಕೂಡಿರೋ ಅಂಥ ಹುಡುಗರಿಗೆ ಉತ್ಸಾಹದಿಂದ ತಮ್ಮ ಮಕ್ಕಳನ್ನ ಮದುವೆ ಮಾಡಿಕೊಡ್ತಾರೆ. ಓ ಓ, ಎಂಥ ಅವಿವೇಕ! ಆದರೆ ಇಂಥ ಅವಿವೇಕ, ಇಂಥ ಪೊಳ್ಳುತನಗಳು ಹೊರಗೆ ಬರೋ ಕಾಲ ಬಂದೇ ಬರತ್ತೆ!" ಇದನ್ನು ಹೇಳುತ್ತ ಅವನು ಅನೇಕ ಸಲ ವಿಚಿತ್ರ ಶಬ್ದಗಳನ್ನು ಮಾಡ್ತಾ ಇದ್ದ, ಅನೇಕ ಸಲ ಟೀ ಕುಡಿದ. ಅದಂತೂ ಕಡುಗಹಿಯದು, ಅದನ್ನು ತಿಳಿ ಮಾಡೋದಕ್ಕೆ ನೀರು ಸಾಕಾಗೋದಿಲ್ಲ. ಅಂಥ ಟೀನ ಎರಡು ಬಟ್ಟಲು ಕುಡಿದು ನನಗೆ ಮತ್ತು ಬರೋ ಹಾಗಾಗಿತ್ತು!

ಪ್ರಾಯಶಃ ಟೀ ಅವನ ಮೇಲೂ ಪರಿಣಾಮ ಬೀರಿರಬೇಕು; ಯಾಕಂದರೆ, ಅವನು ಬರಬರುತ್ತ ಹೆಚ್ಚೆಚ್ಚು ಉತ್ಸಾಹಿತನಾಗುತ್ತಿದ್ದ. ಅವನ ಧ್ವನಿ ಕ್ರಮೇಣ ಮೃದುವಾಯಿತು, ಭಾವನಾತ್ಮಕವಾಯಿತು. ಪದೇ ಪದೇ ತನ್ನ ಭಂಗಿಯನ್ನು ಬದಲಿಸುತ್ತ, ಒಮ್ಮೆ ಟೋಪಿ ತೆಗೆದು, ಮತ್ತೊಮ್ಮೆ ಅದನ್ನು ತಲೆಯ ಮೇಲಿರಿಸಿಕೊಂಡು, ಮಾಡುತ್ತಿದ್ದ; ಹಾಗೆಯೇ ನಾವು ಕುಳಿತ ಮಬ್ಬುಗತ್ತಲೆಯಲ್ಲಿ ಅವನ ಚಹರೆ ವಿಚಿತ್ರವಾದ ರೂಪು ತಳೆಯುತ್ತಿತ್ತು. "ಹ್ಲ್ಞ, ಈ ರೀತಿ ನಾನು ಮೂವತ್ತು ವರ್ಷದವನಾಗುವವರೆಗೂ ಬೆಳೆದೆ. ಆದರೆ ನನ್ನ ಮನಸ್ಸಿನಲ್ಲಿ ಮದುವೆಯಾಗಿ ಉನ್ನತವೂ ಪರಿಶುದ್ಧವೂ ಆದ ಜೀವನವನ್ನು ನಡೆಸುವ ಬಯಕೆಯೇನೂ ಹೋಗಿರಲಿಲ್ಲ. ಆ ಉದ್ದೇಶದಿಂದ ನನಗೆ ತಕ್ಕ ಹುಡುಗಿ ಸಿಕ್ಕುತ್ತಾಳೇನೋ ಎಂಬ ಹುಡುಕಾಟದಲ್ಲಿದ್ದೆ" ಎಂದು ಸ್ವಲ್ಪ ಹೊತ್ತು ಸುಮ್ಮನಿದ್ದು ಮುಂದುವರಿದ: "ನಾನಂತೂ ಹಾದರದ ಕೆಸರಿನಲ್ಲಿ ಹೊರಳಾಡುತ್ತಿದ್ದೆ. ಆದರೆ ಅದೇ ಹೊತ್ತಿಗೆ ನನಗೆ ಸೂಕ್ತಳಾದ ಹುಡುಗಿಗಾಗಿ ನೋಡುತ್ತಿದ್ದೆ. ನನಗೆ ತಕ್ಕ ಪರಿಶುದ್ಧ ಹುಡುಗಿಯಲ್ಲವೆಂದು ಎಷ್ಟೋ ಮಂದಿಯನ್ನು ನಾನು ತಿರಸ್ಕರಿಸಿದ್ದೆ. ಕೊನೆಗೂ ನನಗೆ ತಕ್ಕವಳೆಂಬ ಹುಡುಗಿಯೊಬ್ಬಳು ಸಿಕ್ಕಿದಳು. ಅವಳು ಒಂದೊಮ್ಮೆ ಶ್ರೀಮಂತ ಪೆಂಜ ಜಮೀನುದಾರನಾಗಿದ್ದು ಈಗ ಬಡಿಗೈಯಾಗಿದ್ದವರೊಬ್ಬರ ಇಬ್ಬರು ಮಗಳಂದಿರಲ್ಲಿ ಒಬ್ಬಳು. ಒಂದು ಸಂಜೆ ನಾವು ದೋಣಿವಿಹಾರ ಮಾಡುತ್ತಿದ್ದು ಬೆಳದಿಂಗಳು ಮೂಡುವ ಹೊತ್ತಿಗೆ ವಾಪಸಾಗಿದ್ದೆವು - ನಾನು ಅವಳ ಪಕ್ಕದಲ್ಲೇ ಕೂತು ಅವಳ ಗುಂಗುರು ಕೂದಲು ಹಾಗೂ ಬಿಗಿಯಾದ ಜೆ಼ರ್ಸಿ ಧರಿಸಿದ್ದ ಮೈಮಾಟವನ್ನು ಹೆಮ್ಮೆಯಿಂದ ನೋಡುತ್ತ ಇದ್ದೆ. ಅವಳು ನನಗಾಗಿಯೇ ಹುಟ್ಟಿದವಳು ಎಂದು ನಿರ್ಧರಿಸಿದೆ! ನನ್ನ

ಮನಸ್ಸಿನಲ್ಲಾಗುತ್ತಿದ್ದ ಭಾವನೆ ಆಲೋಚನೆಗಳನ್ನೆಲ್ಲ ತಿಳಿದ ಹಾಗೆ, ನನ್ನ ಅನಿಸಿಕೆಗಳೆಲ್ಲ ನಿಜವಾದವು ಎಂದು ಅವಳೂ ಅಂದುಕೊಂಡಿದ್ದಂತೆ ತೋರಿತು. ವಾಸ್ತವವಾಗಿ ಅವಳ ಗುಂಗುರು ಕೂದಲು ಹಾಗೂ ಜೆರ್ಸಿ ಧರಿಸಿದ್ದ ಮೈಮಾಟ ಮೋಹಕವಾಗಿದ್ದು, ಮಾರನೇ ದಿನ ನಾನು ಅವಳಿಗೆ ಮತ್ತಷ್ಟು ಹತ್ತಿರವಾಗಲು ಪ್ರಯತ್ನಿಸಿದೆ.

"ಮುಖದ ಚೆಲುವೇ ಒಳ್ಳೆಯತನ ಎಂಬ ತಿಳಿವಳಿಕೆ ಅದೆಂಥ ಭ್ರಮೆ! ಒಬ್ಬ ಚೆಲುವೆ ದಡ್ಡತನದಿಂದ ಮಾತಾಡಿದರೂ ಕೇಳುತ್ತ ಅದೇ ಜಾಣತನ ಎಂದುಕೊಳ್ಳುವುದು ಎಂಥ ವಿಸ್ಮಯ! ಅವಳು ಮಾಡುವುದು ಮಾತಾಡುವುದು ಘೋರವಾದುದಾಗಿರ ಬಹುದು, ಆದರೂ ಅಂಥ ಚೆಲುವೆ ಹಾಗಿರಲಾರಳು ಎಂಬಂತೆ ಅವಳು ಪರಿಶುದ್ಧೆ ಹಾಗೂ ಬುದ್ಧಿವಂತೆ ಎಂದು ತೀರ್ಮಾನಿಸಿಬಿಡುವಂತಾಗುತ್ತದೆ.

"ನಾನು ಮನೆಗೆ ಬಂದಾಗ ಮನದುಂಬಿತ್ತು, ನನ್ನ ಹುಡುಗಿ ನೈತಿಕತೆಯ ಉತ್ತುಂಗ ಅನ್ನಿಸಿತ್ತು, ಹೀಗಾಗಿ ನನಗೆ ಅನುರೂಪ ವಧು ಎಂಬ ಭಾವನೆ ಬಂದಿತ್ತು. ಮಾರನೆಯ ದಿನವೇ 'ನನ್ನ ಮದುವೆಯಾಗುವೆಯಾ?' ಎಂದು ಕೇಳಿದೆ. ಎಂಥ ಗೊಂದಲ! ಮದುವೆಯಾಗುವ ಸಾವಿರ ಗಂಡಸರಲ್ಲಿ ಪ್ರತಿಯೊಬ್ಬನೂ ಮದುವೆಗೆ ಮುಂಚೆಯೇ, ಹತ್ತು ಬಾರಿ, ನೂರು ಬಾರಿ, ಡಾನ್ ಜುವಾನ್‌ನಂತೆ ಸಾವಿರ ಬಾರಿ ಮದುವೆ ಯಾಗಿರುತ್ತಾನೆ! ನಾನು ಕೇಳಿದಂತೆ ಹಾಗೂ ನನಗೇ ಅನುಭವವಾದಂತೆ ಅದು ನಿಜ; ಇದನ್ನು ಒಂದು ತಮಾಷೆಯೆಂದು ಭಾವಿಸದೆ ನಿಜವೆಂದೇ ನಂಬುವ ಕೆಲವು ಅಕಲುಷಿತ ಗಂಡಸರು ಈಗಲೂ ಇದ್ದಾರೆ. ಅವರನ್ನು ದೇವರೇ ಕಾಪಾಡಬೇಕು! ಎಲ್ಲ ಕಾದಂಬರಿಗಳಲ್ಲೂ ನಾಯಕನ ಭಾವನೆಗಳನ್ನೂ ಅವನು ಓಡಾಡುವ ಕೊಳಗಳ ಪೊದರುಗಳ ಪರಿಸರವನ್ನೂ ದೀರ್ಘವಾಗಿ ವರ್ಣಿಸಿರುತ್ತಾರೆ. ಆದರೆ ಅವರ ಪ್ರೇಮವನ್ನು ವರ್ಣಿಸುವಾಗ ಹಿಂದೆ ಅವರೆಲ್ಲ ಹೇಗಿದ್ದರು ಎಂದು ಹೇಳುವುದಿಲ್ಲ; ಅವರು ಪದೇ ಪದೇ ಭೇಟಿಕೊಟ್ಟ ಮನೆಗಳ ಪ್ರಸ್ತಾಪ ಇರುವುದಿಲ್ಲ, ಅವರ ಮನೆಯ ಕೆಲಸದ ಹುಡುಗಿಯರಿಗೆ, ಅಡುಗೆ ಹೆಂಗಸರಿಗೆ, ಅಕ್ಕಪಕ್ಕದ ಮನೆಯ ಗೃಹಿಣಿಯರಿಗೆ ಏನಾಯಿತು ಎಂಬ ಬಗ್ಗೆ ವಿವರ ಇರುವುದಿಲ್ಲ, ಅಂಥ ಅಸಂಬದ್ಧ ಕಾದಂಬರಿಗಳನ್ನು ಆ ವಿಷಯ ಯಾರಿಗೇ ಬೇಕೋ ಅಂಥವರಿಗೆ, ಅಂದರೆ ಮದುವೆಯಾಗದ ಹುಡುಗಿಯರಿಗೆ, ಸಿಕ್ಕುವುದೇ ಇಲ್ಲ! ನಮ್ಮ ನಗರಗಳಲ್ಲಿ, ಅಷ್ಟೇಕೆ ಹಳ್ಳಿಗಳಲ್ಲೂ ಅರ್ಧಭಾಗದಷ್ಟಿರುವ ಹಾದರದ ವಿಷಯ ಇಲ್ಲವೇ ಇಲ್ಲವೆಂಬಂತೆ ಸೋಗು ಹಾಕುತ್ತೇವೆ. ಈ ಸೋಗಿಗೆ ನಾವೆಷ್ಟು ಹೊಂದಿಕೊಂಡಿರುತ್ತೇವೆ ಎಂದರೆ, ಕೊನೆಗೆ ನಾವೇ ಇದನ್ನೆಲ್ಲ ನಂಬುವಂತಾಗಿಬಿಡುತ್ತದೆ.

"ಇದನ್ನೇ ನನ್ನ ನತದೃಷ್ಟ ಹೆಂಡತಿಯೂ ಮಾಡಿದಳು. ನಮ್ಮ ನಿಶ್ಚಿತಾರ್ಥ ನಡೆದಾಗ, ನಾನವಳಿಗೆ ನನ್ನ ಡೈರಿ ತೋರಿಸಿದೆ, ಅದನ್ನೋದಿ ನನ್ನ ಹಿಂದಿನದರ ಬಗ್ಗೆ, ಅದರಲ್ಲೂ ನಾನು ಹೊಂದಿದ್ದ ಸಂಬಂಧಗಳ ಬಗ್ಗೆ, ಕೊಂಚವಾದರೂ ತಿಳಿಯಬಹುದು, ಇತರರನ್ನು ವಿಚಾರಿಸಿ ಅರಿಯಬಹುದು ಎಂಬ ನಿರೀಕ್ಷೆಯಿಂದ. ಇದೆಲ್ಲ ಅವಳಿಗೆ

ತಿಳಿಯಬೇಕೆಂದು ಬಯಸಿದ್ದೆ. ಅದನ್ನೆಲ್ಲ ತಿಳಿದುಕೊಂಡ ಮೇಲೆ ಅವಳು ಅನುಭವಿಸಿದ ಯಾತನೆ ಎಂತಹುದು, ನನ್ನನ್ನು ತೊರೆದುಬಿಡಬೇಕೆಂದು ಅಂದುಕೊಂಡಿದ್ದು ನನಗೆ ನೆನಪಿದೆ. ಆದರೂ ಅವಳೇಕೆ ಹಾಗೆ ಮಾಡಲಿಲ್ಲ?..." ಎಂದು ವಿಚಿತ್ರ ಶಬ್ದವನ್ನು ಮಾಡಿ, ಮತ್ತೆ ಟೀಯನ್ನು ಗುಟುಕರಿಸಿ ಸ್ವಲ್ಪ ಹೊತ್ತು ಸುಮ್ಮನಿದ್ದ.

## 6

"ಇಲ್ಲ, ಎಷ್ಟೇ ಆಗಲಿ ಅದೇ ಉತ್ತಮ! ಅದೇ ಸರಿ! ನಾನು ಹೇಳ್ತಾ ಇರೋದು ಆ ವಿಷಯವನ್ನಲ್ಲ - ನನಗನ್ನಿಸೋದು, ಪಾಪ, ನತದೃಷ್ಟ ಹೆಣ್ಣುಮಕ್ಕಳು ಮೋಸ ಹೋಗ್ತಾರಲ್ಲ ಅಂತ. ತಾಯಂದಿರಿಗೂ ಆ ವಿಷಯ ಗೊತ್ತು, ಅದರಲ್ಲೂ ತಮ್ಮ ಗಂಡಂದಿರಿಂದ ತಿದ್ದಲ್ಪಟ್ಟ ತಾಯಂದಿರು, ಅವರಿಗೆ ವಿಷಯ ಎಲ್ಲ ಚೆನ್ನಾಗೇ ತಿಳಿದಿರತ್ತೆ. ಗಂಡಸರ ಪರಿಶುದ್ಧತೆಯನ್ನು ನಂಬುವವರಂತೆ ಅವರು ನಡೆದುಕೊಳ್ಳುವ ರೀತಿ ಬೇರೇದೇ ಆಗಿರುತ್ತೆ. ತಮಗೂ ತಮ್ಮ ಮಗಳಂದಿರಿಗೂ ಯಾವ ಥರ ಗಂಡಸರನ್ನು ಗಾಳ ಹಾಕಿ ಹಿಡೀಬೇಕು ಅನ್ನೋದು ಅವರಿಗೆ ಗೊತ್ತಿರತ್ತೆ. ಕಾವ್ಯಮಯವಾದ ಪ್ರೇಮ ಅಂತಾರಲ್ಲ ಅದು ನಿಲ್ಲೋದು ನೈತಿಕ ಗುಣಗಳ ಮೇಲಲ್ಲದೆ ದೈಹಿಕ ರೂಪದ ಮೇಲೆ, ಗುಂಗುರು ಕೂದಲ ಮೇಲೆ ಮತ್ತು ತೊಡೋ ಬಟ್ಟೆಗಳ ವಿನ್ಯಾಸ-ಬಣ್ಣಗಳ ಮೇಲೆ ಅಂತ ಹೆಂಗಸರಿಗೆ ತಿಳಿದಿರೋದು ಗಂಡಸರಾದ ನಮಗೇ ಗೊತ್ತಿರಲ್ಲ; ಯಾಕಂದ್ರೆ ತಿಳಿದುಕೊಳ್ಳಕ್ಕೆ ನಮಗೆ ಇಷ್ಟ ಇರಲ್ವಲ್ಲ, ಅದಕ್ಕೆ! ಸುಳ್ಳು ಹೇಳಿದ್ದಕ್ಕೆ, ಕ್ರೌರ್ಯ ತೋರಿಸಿದ್ದಕ್ಕೆ ಅಥವಾ ಕಡೆಗೆ ಲಂಪಟತನಕ್ಕೆ ಗಂಡಸಿನ ಮುಂದೆ ಶಿಕ್ಷೆ ಹೊಂದುವುದೋ ಅಥವಾ ಅವನ ಮುಂದೆ ಕೆಟ್ಟದಾದ ಉಡುಪಿನಲ್ಲಿ ಕಾಣಿಸಿಕೊಳ್ಳೋದೋ ಯಾವುದನ್ನ ಆರಿಸಿಕೋತೀಯ ಅಂತ ಗಂಡಸನ್ನು ಆಕರ್ಷಿಸೋ ಉದ್ದೇಶವನ್ನ ಹೊಂದಿದ ಪರಿಣತಳಾದ ಒಬ್ಬ ವಯ್ಯಾರೀನ ಕೇಳಿದ್ರೆ, ಅವಳು ಯಾವಾಗಲೂ ಆರಿಸಿಕೊಳ್ಳೋದು ಮೊದಲನೇದನ್ನೇ. ದೊಡ್ಡ ಭಾವನೆಗಳ ಬಗ್ಗೆ ನಾವು ಬರೀ ಸುಳ್ಳು ಹೇಳ್ತಿರ್ತೀವೆಯೇ ಹೊರ್ತು ನಮಗೆ ಬೇಕಾದ್ದು ಅವಳ ದೇಹ ಮಾತ್ರ, ಆದ್ದರಿಂದ ನಾವು ಕೆಟ್ಟದಾಗಿ ಉಡುಪು ತೊಟ್ಟಿರೋದನ್ನ ಬಿಟ್ರೆ ಬೇರಾವ ಘೋರ ತಪ್ಪನ್ನೂ ಸಹಿಸೋದಿಲ್ಲ ಅನ್ನೋದು ಅವಳಿಗೆ ಗೊತ್ತಿರತ್ತೆ. ಬಿನ್ನಾಣಗಿತ್ತಿಗೆ ಅದು ಪ್ರಜ್ಞಾಪೂರ್ವಕವಾಗೇ ಗೊತ್ತಿದ್ರೆ, ಮುಗ್ಧ ಹೆಣ್ಣು ಮಕ್ಕಳಿಗೆ ಅದು ಅಪ್ರಜ್ಞಾಪೂರ್ವಕವಾಗಿ ತಿಳಿವಳಿಕೆಗೆ ಬಂದಿರತ್ತೆ, ಪ್ರಾಣಿಗಳಿಗೆ ಗೊತ್ತಾಗೋ ಥರ. ಅದಕ್ಕೋಸ್ಕರವಾಗಿಯೇ ಆ ದರಿದ್ರ ಜೆರ್ಸಿಗಳು, ರವಿಕೆ ಬಣ್ಣ, ಬತ್ತಲು ಭುಜಗಳು, ತೋಳುಗಳು, ಕೊನೆಗೆ ಎದೆಗಳು ಇರೋದು. ಗಂಡಸರ ಶಾಲೆಯಲ್ಲಿ ಉತ್ತೀರ್ಣಳಾಗಿರೋ ಅಂಥ ಹುಡುಗಿಗೆ ದೊಡ್ಡ ದೊಡ್ಡ ಮಾತುಗಳು ಬರೀ ಮಾತುಗಳೇ ಹೊರತು, ಗಂಡಸಿಗೆ ಬೇಕಾಗಿರೋದು ತನ್ನ ದೇಹ ಮಾತ್ರ, ಅದನ್ನ ಆಕರ್ಷಕವಾಗಿ ಮಾಡೋದಕ್ಕೆ ಅವನಿಗೆ ಇಷ್ಟವಾಗೋ ರೀತಿ ತೋರಿಸಿಕೊಳ್ಳೋದು ಮಾತ್ರ ಅಂತ ಚೆನ್ನಾಗಿ ಗೊತ್ತಿರತ್ತೆ; ಅದಕ್ಕೆ ತಕ್ಕ ಹಾಗೆಯೇ ಅವಳು ನಡಕೋತಾಳೆ. ಸಹಜವೆಂಬಂತೆ

ಆಗಿಬಿಟ್ಟಿರೋ ಈ ಅಸಭ್ಯತೆಯನ್ನ ನಾವು ಪಕ್ಕಕ್ಕೆ ಇಟ್ಟು ಮೇಲುವರ್ಗಗಳ ನಾಚಿಕೆಗೇಡಿನ ಬದುಕನ್ನು ಇರೋ ರೀತೀಲೇ ನೋಡಿದರೆ, ಅದೊಂದು ಸೂಳೆಗೇರಿ ಥರವೇ ಕಾಣಿಸತ್ತೆ. ಈ ಮಾತನ್ನ ನೀವು ಒಪ್ಪೋದಿಲ್ವೇನೋ! ಆದ್ರೆ, ಅದನ್ನು ಸಾಬೀತುಪಡಿಸೋದಕ್ಕೆ ನನಗೆ ಅವಕಾಶ ಕೊಡಿ" ಎಂದ ಆಡಬೇಕೂಂತಿದ್ದ ನನ್ನ ಮಾತನ್ನ ತಡೆದು. "ನಮ್ಮ ಸಮಾಜಗಳ ಹೆಂಗಸರಿಗೆ ಜೀವನದಲ್ಲಿ ಸೂಳೆಗೇರಿಗಿರೋದಕ್ಕಿಂತ ಭಿನ್ನವಾದ ಬೇರೆ ಆಸಕ್ತಿಗಳಿರತ್ವೆ ಅಂತ ನೀವು ಹೇಳಬಹುದು, ಆದರೆ ಇರಲ್ಲ ಅಂತ ನಾನಂತೀನಿ. ಜನರು ತಮ್ಮ ಬದುಕಿನ ಹೊಂದಿರೋ ಗುರಿಗಳಲ್ಲಿ ವ್ಯತ್ಯಾಸ ಇದ್ದರೆ, ತಮ್ಮ ಬದುಕಿನ ಸಾರದಲ್ಲಿ ಬದಲಾದರೆ ಅದು ಅವರ ಹೊರ ಬದುಕಿನಲ್ಲಿ ಕಾಣಿಸ್ಕೋಬೇಕು, ಹಾಗಾಗಿ ಅಂತವರ ಹೊರ ಬದುಕು ಬೇರೆ ಥರ ಇರ್ಬೇಕು. ಆದರೆ ಆ ನತದೃಷ್ಟ ಹೆಂಗಸರನ್ನೂ, ಮೇಲ್ವರ್ಗದ ಹೆಂಗಸರನ್ನೂ ನೋಡಿ: ಇಬ್ಬರದೂ ಒಂದೇ ರೀತಿಯ ಉಡುಪು, ಅದೇ ಫ್ಯಾಷನ್ನು, ಅದೇ ಪರಿಮಳಗಳು, ಒಂದೇ ಥರ ಭುಜ-ತೋಳುಗಳ ಎದೆಗಳ ಪ್ರದರ್ಶನ, ಅವೇ ಬಿಗಿಯಾದ ಉಡುಪು, ಒಡವೆಗಳ ಬಗ್ಗೆ ಅದೇ ಒಲವು, ದುಬಾರಿಯಾದವುಗಳ ಮೇಲಿನ ವ್ಯಾಮೋಹ, ಥಳಥಳ ಹೊಳೆಯೋದರ ಬಗೆಗಿನ ಬಯಕೆ, ಅದೇ ಮನರಂಜನೆ, ನರ್ತನಗಳು, ಹಾಡು - ಎಲ್ಲ. ಆಕರ್ಷಿಸೋದಕ್ಕೆ ಅವರು ಏನೆಲ್ಲ ಪ್ರದರ್ಶನ ಮಾಡ್ತಾರೋ ಇವರು ಮಾಡೋದೂ ಅದನ್ನೇ."

## 7

ಟೀ ಮತ್ತು ಸಕ್ಕರೆಗಳನ್ನು ಚೀಲದಲ್ಲಿಡುತ್ತ ಅವನು ಮತ್ತೆ ಆರಂಭಿಸಿದ: "ನಿಮಗೆ ಗೊತ್ತಲ್ಲ, ಜಗತ್ತಿನ ನರಳಿಕೆಯ ಕಾರಣವಾದ ಹೆಂಗಸರ ದಬ್ಬಾಳಿಕೆಯ ಮೂಲ ಇದೇ" ಎಂದ.

"ಎಂಥ ದಬ್ಬಾಳಿಕೆ? ಯಾಕಂದರೆ, ಎಲ್ಲ ಹಕ್ಕುಗಳೂ ಕಾನೂನು ಸವಲತ್ತುಗಳೂ ಗಂಡಸರ ಪರವಾಗಿಯೇ ಇವೆಯೆಲ್ಲ?" ಎಂದು ನಾನು ಕೇಳಿದೆ ಅಚ್ಚರಿಯಿಂದ.

"ನಿಜ, ನೀವು ಹೇಳೋದು ಸರಿಯೇ. ನಾನು ಹೇಳೋಕ್ಕೆ ಹೊರಟಿರೋದೂ ಅದನ್ನೇ. ಒಂದು ಕಡೆ ಇದು ಹೆಂಗಸರನ್ನು ಅತ್ಯಂತ ಹೀನಾಯಸ್ಥಿತಿಗೆ ದೂಡಿರುವ ಅಸಾಧಾರಣ ಸಂಗತಿಯನ್ನದು ವಿವರಿಸುತ್ತೆ; ಇನ್ನೊಂದು ಕಡೆ ಅವಳೇ ದಬ್ಬಾಳಿಕೆ ಮಾಡ್ತಾಳೆ. ಯೆಹೂದಿಗಳ ಹಾಗೆ: ಆಕೆ ದಬ್ಬಾಳಿಕೆ ಮಾಡಿದ್ದಕ್ಕೆ ಅವರು ವಾಪಸು ಕೊಡ್ತಾರಲ್ಲ, ಹೆಂಗಸರ ವಿಷಯವೂ ಅದೇ. 'ನಾವು ಬರೀ ವ್ಯಾಪಾರಿಗಳಾಗಿರ್ಬೇಕು, ಅಲ್ವಾ? ಸರಿ, ನಾವು ನಿಮ್ಮ ಮೇಲೆ ದಬ್ಬಾಳಿಕೆ ಮಾಡತೀವಿ' ಅಂತ ಅವರು ಅನ್ನೋ ಹಾಗೆಯೇ 'ನಾವು ಕೇವಲ ಭೋಗದ ವಸ್ತುಗಳಾಗ್ಬೇಕು, ಅಲ್ವಾ, ಸರಿ ಭೋಗದ ವಸ್ತುಗಳಾಗಿಯೇ ನಾವು ನಿಮ್ಮನ್ನು ಗುಲಾಮರನ್ನಾಗಿಸಿಕೋತೀವಿ' ಅಂತ ಅವಳಂತಾಳೆ. ಹೆಂಗಸರ ಹಕ್ಕುಗಳು ಅಸಮರ್ಪಕವಾದೋವು ಅನ್ನೋದಕ್ಕೆ ಕಾರಣ ಅವಳು ಓಟು ಕೊಡೋ ಹಾಗಿಲ್ಲ ಅನ್ನೋದೋ ನ್ಯಾಯಾಧೀಶಳಾಗೋ ಹಾಗಿಲ್ಲ ಅನ್ನೋದೋ ಅಲ್ಲ.

ಅಂಥ ಕೆಲಸ ಮಾಡೋದು ವಿಶೇಷ ಸವಲತ್ತೇನಲ್ಲ; ಆ ಕಾರಣ ಅಂದ್ರೆ ಅವಳು ಸಂಭೋಗದಲ್ಲಿ ಗಂಡಸಿಗೆ ಸಮಾನಳಲ್ಲ ಅನ್ನೋದು, ತನಗೆ ಬೇಕಾದಾಗ ಗಂಡಸನ್ನ ಬಳಸಿಕೊಳ್ಳೋದಕ್ಕೋ ತಿರಸ್ಕರಿಸೋದಕ್ಕೋ ಅವಳಿಗೆ ಸಾಧ್ಯವಿಲ್ಲ ಅನ್ನೋದು, ತನ್ನನ್ನ ಗಂಡಸು ಆಯ್ಕೆ ಮಾಡ್ಕೊಳೋ ಹಾಗೆ ತಾನು ಬೇಕಾದ ಗಂಡಸನ್ನು ಆಯ್ಕೆ ಮಾಡ್ಕೊಳೋ ಅವಕಾಶ ಹೆಂಗಸಿಗಿಲ್ಲ ಅನ್ನೋದು. ಈ ವಾದ ಭಯಂಕರ ಅಂತ ನಿಮಗನ್ನಿಸಬಹುದು. ಆಯ್ತು! ಆದ್ರೆ ಹಾಗನ್ನಬಹುದಾದ್ದು ಯಾವಾಗ ಅಂದ್ರೆ, ಈ ಹಕ್ಕುಗಳು ಗಂಡಸರಿಗೂ ಇಲ್ದಿರೋವಾಗ. ಈಗಾದ್ರೆ, ಆ ಹಕ್ಕು ಹೆಂಗಸಿಗೆ ಇಲ್ಲದೆ, ಗಂಡಸಿಗೆ ಮಾತ್ರ ಇದೆ. ಇದನ್ನ ಸರಿದೂಗಿಸ್ಕೊಳ್ಳೋದಕ್ಕೋಸ್ಕರ ಅವಳು ಗಂಡಸಿನ ಭೋಗಲಾಲಸೆಯನ್ನೇ ಬಂಡ್ವಾಳ ಮಾಡ್ಕೋತಾಳೆ; ಅವನ ಲಾಲಸೆಯ ಮೂಲಕವೇ ಅವನನ್ನು ಹಿಡಿತದಲ್ಲಿಟ್ಕೋತಾಳೆ. ಹೀಗಾಗಿ, ಅವನಿಗೆ ಕೇವಲ ಆಯ್ಕೆಯ ಸ್ವಾತಂತ್ರ್ಯ ಇದೆ, ಆದರೆ ವಾಸ್ತವವಾಗಿ ಆ ಸ್ವಾತಂತ್ರ್ಯ ಅವಳದೇ. ಇವುಗಳನ್ನ ಪಡೆದುಕೊಂಡ ಮೇಲೆ ಅವಳು ಅವುಗಳ ದುರುಪಯೋಗ ಮಾಡ್ಕೋತಾಳೆ, ಗಂಡಸರ ಮೇಲೆ ಕಪಿಹಿಡಿತ ಸಾಧಿಸ್ತಾಳೆ."

"ಆದರೆ ಈ ವಿಶೇಷಾಧಿಕಾರ ಎಲ್ಲಿದೇಂತ?" ಎಂದು ಕೇಳಿದೆ ನಾನು.

"ಎಲ್ಲಿದೇಂದ್ರೆ? ಎಲ್ಲ ಕಡೆಯೂ ಇದೆ, ಎಲ್ಲದರಲ್ಲೂ ಇದೆ! ಯಾವುದೇ ದೊಡ್ಡ ಊರಿನ ಅಂಗಡೀಗೆ ಹೋಗಿ. ಅಲ್ಲಿ ಕೋಟ್ಯಂತರ ಬೆಲೆ ಬಾಳೋ ವಸ್ತುಗಳಿರತ್ವೆ, ಅವುಗಳನ್ನ ತಯಾರಿಸೋದಕ್ಕೆ ಎಷ್ಟು ಜನರ ದುಡಿಮೆ ಖರ್ಚಾಗಿರತ್ತೆ, ಯೋಚನೆ ಮಾಡಿ. ಇಂಥ ಅಂಗಡಿಗಳಲ್ಲಿ ಗಂಡಸರಿಗೆ ಬೇಕಾಗೋ ಅಂಥ ವಸ್ತುಗಳು ಶೇಕಡ ಹತ್ತರಷ್ಟು ಭಾಗವೂ ಇರಲ್ಲ. ಬದುಕಿನಲ್ಲಿ ಎಲ್ಲ ವೈಭವದ ವಸ್ತುಗಳೂ ಹೆಂಗಸರಿಗಾಗಿಯೇ ಇರೋದು, ಅವುಗಳು ಬೇಕೂಂತ ಕೇಳೋಳೂ ಅವಳೇ. ಇರೋ ಕಾರ್ಖಾನೆಗಳ ಲೆಕ್ಕ ಹಾಕಿ, ಅವುಗಳಲ್ಲಿ ಬಹುಪಾಲು ತಯಾರುಮಾಡೋದು ಕೆಲಸಕ್ಕೆ ಬಾರದ ಆಭರಣಗಳನ್ನ, ಥಳಕುಪಳುಕು ವಸ್ತುಗಳನ್ನ; ಅವೆಲ್ಲವೂ ಹೆಂಗಸರಿಗೋಸ್ಕರ! ಲಕ್ಷಾಂತರ ಜನ, ಸೇವಕರ ಅನೇಕ ಪೀಳಿಗೆಗಳು ಕಾರ್ಖಾನೆಗಳಲ್ಲಿ ದುಡಿದು ನವೀತಾರೆ, ಎಲ್ಲ ಹೆಂಗಸರ ಆಸೆಬುರುಕುತನಾನ ತೃಪ್ತಿಪಡಿಸೋದಕ್ಕೆ. ಹೆಂಗಸರು, ರಾಣಿಯರ ಹಾಗೆ, ನೂರಕ್ಕೆ ತೊಂಬತ್ತರಷ್ಟು ಗಂಡಸರನ್ನು ಕಠಿಣ ದುಡಿತದ ಗುಲಾಮತನದಲ್ಲಿ ಕಟ್ಟಿಹಾಕ್ತಾರೆ. ಇದಕ್ಕೆಲ್ಲ ಕಾರಣ, ಅವರಿಗೆ ಗಂಡಸರ ಜೊತೆಗೆ ಸಮಾನ ಹಕ್ಕುಗಳಿಲ್ಲ, ಅದಕ್ಕೆ. ನಮ್ಮ ಭೋಗಲಾಲಸೆಯನ್ನೇ ಬಳಸಿಕೊಂಡು ತಮ್ಮ ಬಲೇಲಿ ಹಾಕ್ಕೊಳ್ಳೋ ಮೂಲಕ ಅವರು ನಮ್ಮ ಮೇಲೆ ಅವರು ಸೇಡು ತೀರಿಸ್ಕೋತಾರೆ, ಅಲ್ಲವಾ? ಇದಕ್ಕೆಲ್ಲ ಮೂಲ ಕಾರಣ ಅದೇ ಅಲ್ವಾ? ಹೆಂಗಸರು ನಮ್ಮ ಭೋಗದಾಹದ ಮೇಲೆ ಆಟವಾಡೋ ದಾಳಗಳಾಗಿರೋದರಿಂದ, ಯಾವ ಗಂಡಸೂ ಒಬ್ಬ ಹೆಂಗಸಿನ ಜೊತೆ ಸಮರಸವಾಗಿ ಬಾಳಲಾರ!"

## 8

"ಈಗ ಕೇಳಿ: ನಾನೂ ಆ ಸುಳಿಯಲ್ಲಿ ಸಿಕ್ಕೆ, ಅಂದರೆ ಪ್ರೇಮದಲ್ಲಿ ಸಿಲುಕಿದೆ! ಅವಳು ಪರಿಪೂರ್ಣತೆಯ ಶಿಖರ ಅಂತ ಭಾವಿಸುವುದರ ಜೊತೆಗೆ, ನಮ್ಮ ನಿಶ್ಚಿತಾರ್ಥದ ಹೊತ್ತಿಗೆ, ನಾನೂ ಪರಿಪೂರ್ಣತೆಯ ಶಿಖರವೇ ಅಂತ ಭಾವಿಸತೊಡಗಿದೆ. ಯಾವನೇ ಲಫಂಗ ಪ್ರಯತ್ನಪಟ್ಟರೆ ತನಗೆ ಮಿಗಿಲಾದ, ತನ್ನ ಬಗ್ಗೆ ಹೆಮ್ಮೆ ಮತ್ತು ಆತ್ಮತೃಪ್ತಿಗಳನ್ನು ಪಡೆಯಲು ಕಾರಣಗಳೇ ಇಲ್ಲದ ಲಫಂಗನನ್ನು ಕಾಣುವುದು ಅಸಾಧ್ಯವೇನಲ್ಲ. ನನ್ನ ವಿಷಯದಲ್ಲೂ ಹಾಗೆಯೇ ಆಯಿತು. ನನ್ನ ಸ್ನೇಹಿತರಲ್ಲಿ ಬಹುಪಾಲು ಜನರಂತೆ ನಾನು ವರದಕ್ಷಿಣೆಯ ಆಸೆಯಿಂದಲೋ ಸಂಬಂಧಗಳ ದೃಷ್ಟಿಯಿಂದಲೋ ಮದುವೆ ಯಾಗ್ತಿರಲಿಲ್ಲ - ನನ್ನ ಮದುವೆಗೂ ದುರಾಸೆಗೂ ಸಂಬಂಧವಿರಲಿಲ್ಲ - ನಾನು ಹಣವಂತನೇ ಆಗಿದ್ದೆ, ಅವಳು ಮಾತ್ರ ಬಡವಿ. ಅದೊಂದು ವಿಷಯ. ನನ್ನ ಹೆಮ್ಮೆಗೆ ಇನ್ನೊಂದು ಕಾರಣ ಅಂದ್ರೆ, ಮದುವೆಗೆ ಮುಂಚೆ ಇದ್ದಂತೆಯೇ ಮದುವೆಯ ಬಳಿಕವೂ ಬಹಳ ಜನ ತಮ್ಮ ಹಿಂದಿನ ಚಾಳಿಯನ್ನೇ ಮುಂದುವರಿಸುವ ಇರಾದೆಯವರಾದರೆ, ನಾನು ಮಾತ್ರ ಮದುವೆಯ ನಂತರ ಪತ್ನೀನಿಷ್ಠನಾಗಿರಲು ತೀರ್ಮಾನಿಸಿದ್ದೆ. ಈ ಕಾರಣದಿಂದಾಗಿ ನನ್ನ ಹೆಮ್ಮೆಗೆ ಮೇರೆಯೇ ಇರಲಿಲ್ಲ. ನಾನು ಹಂದಿಯಾಗಿದ್ದುದು ನಿಜವಾದರೂ ಕಿನ್ನರನಾಗಿದ್ದೆನೆಂದೇ ಭಾವಿಸಿದ್ದೆ.

"ಆದರೆ ನಮ್ಮ ನಿಶ್ಚಿತಾರ್ಥ ದೀರ್ಘಕಾಲದ್ದಾಗಿರಲಿಲ್ಲ.. ಆ ಬಗ್ಗೆ ಯೋಚಿಸಿದರೆ ಈಗಲೂ ನನಗೆ ನಾಚಿಕೆಯಾಗತ್ತೆ. ಎಂಥ ಹೇಯತೆ! ಪ್ರೇಮವೆಂಬುದು ದೈವಿಕವೇ ಹೊರತು ದೈಹಿಕವಲ್ಲ ಅಂತ ಹೇಳ್ತಾರೆ. ಇದು ನಿಜವೇ ಆದರೆ, ಇಂಥ ದೈವಿಕ ಮಿಲನವು ಮಾತುಗಳಲ್ಲಿ ವ್ಯಕ್ತಗೊಳ್ಳಬೇಕು, ಮಾತುಕತೆಗಳಲ್ಲಿ, ಸಂಭಾಷಣೆಯಲ್ಲಿ. ಆದರೆ ಅಂಥದ್ದೇನೂ ಇರಲಿಲ್ಲ. ನಾವಿಬ್ಬರೇ ಇದ್ದಾಗ ಮಾತೇ ಅಸಾಧ್ಯವಾಗಿತ್ತು. ಮಾತನಾಡುವುದೆಂದರೆ ಗಜಗರ್ಭ. ಏನನ್ನಾದರೂ ಹೇಳಬೇಕೆಂದುಕೊಂಡು ಹೇಳಿದ ಮಾರನೆಯ ಕ್ಷಣವೇ ಮತ್ತೆ ಮೌನದ ಮೊರೆಹೊಗಬೇಕಾಗಿತ್ತು, ಇನ್ನೇನು ಮಾತನಾಡಲಿ ಎಂಬ ಯೋಚನೆಯಲ್ಲಿ ಮುಳುಗಿ. ಮಾತನಾಡಲು ಇನ್ನೇನೂ ಉಳಿದಿರುತ್ತಿರಲಿಲ್ಲ. ಮುಂದಿನ ನಮ್ಮ ಭವಿಷ್ಯದ ಬದುಕನ್ನು ಕುರಿತು, ನಮ್ಮ ಯೋಜನೆಗಳು ಹಾಗೂ ವ್ಯವಸ್ಥೆಗಳನ್ನು ಕುರಿತು - ಎಲ್ಲದರ ಬಗ್ಗೆಯೂ ಮಾತನಾಡಿದ್ದಾಗಿದೆ, ಹೇಳಲು ಏನುಳಿದಿದೆ? ನಾವೇನಾದರೂ ಪ್ರಾಣಿಗಳಾಗಿದ್ದರೆ ನಮಗೆ ಮಾತೇ ಅನವಶ್ಯಕ ವೆನಿಸುತ್ತಿತ್ತೇನೋ! ಆದರೆ ಇಲ್ಲಿ ಅದಕ್ಕೆ ವ್ಯತಿರಿಕ್ತವಾಗಿ ಮಾತು ಅವಶ್ಯಕವಾಗಿತ್ತು, ಆದರೆ ಮಾತನಾಡಲು ವಿಷಯವೇ ಇರುತ್ತಿರಲಿಲ್ಲ, ಯಾಕಂದರೆ ಮಾತಿನಲ್ಲಿ ಹೇಳ ಬಹುದಾದುದು ನಮ್ಮನ್ನು ಆವರಿಸಿರಲಿಲ್ಲ. ಅಲ್ಲದೆ, ನಿಶ್ಚಿತಾರ್ಥದಲ್ಲಿನ ಸಿಹಿ ಹಂಚುವ ಅಪ್ರಬುದ್ಧ ಪದ್ಧತಿ, ಸಿಹಿಯನ್ನು ಮುಕ್ಕುವ ಅಭ್ಯಾಸ ಮುಂತಾದ ಕೆಲಸಕ್ಕೆ ಬಾರದ ವಿಧಿಗಳು; ಅಲ್ಲದೆ, ಮನೆ ಹಾಗೂ ಮಲಗುವ ಕೋಣೆ, ಮಗ್ಗುಲು ಹಾಸಿಗೆ ತಲೆದಿಂಬು, ಉಡುಗೆ ತೊಡುಗೆಗಳು, ಒಳಉಡುಪುಗಳು, ಒಡವೆಗಳು ಇವುಗಳ ಬಗ್ಗೆ ಟೀಕೆ

ಟಿಪ್ಪಣಿಗಳು - ಇವು ಬೇರೆ ಇದೆಯಲ್ಲ. ಶಾಸ್ತ್ರೋಕ್ತವಾಗಿ ಮದುವೆಯಲ್ಲಿ ನಡೆಸಬೇಕಾದ ಆಚರಣೆಗಳು ಬೇರೆ. ಆದರೆ ಮದುವೆಯಾಗೋ ಹತ್ತರಲ್ಲಿ ಒಂಬತ್ತು ಜನಕ್ಕೆ ಈ ಶಾಸ್ತ್ರಗಳಲ್ಲಿ ಯಾವ ನಂಬಿಕೆ ಇಲ್ಲದಿದ್ದರೂ, ತಾವು ಮಾಡ್ತಾ ಇರೋದರ ಬಗ್ಗೆಯೂ ನಂಬಿಕೆ ಇಲ್ಲದಿದ್ದರೂ, ಅದೆಲ್ಲ ಮಾಡಲೇಬೇಕಾದ ಕರ್ತವ್ಯಗಳು. ಚರ್ಚ್‌ಗೆ ಹೋಗಿ ಮದುವೆಯಾಗೋದು ಅಂದ್ರೆ ಬಹುಪಾಲು ಗಂಡಸರಿಗೆ ಒಬ್ಬ ಹೆಣ್ಣಿನ ಮೇಲೆ ಒಡೆತನ ಸ್ಥಾಪಿಸೋದಕ್ಕೆ ಸಿಗೋ ಅವಕಾಶ ಅನ್ನೋ ಭಾವನೆ. ಅಷ್ಟೇ ಹೊರತು ಮಿಕ್ಕ ಯಾವ ವಿಧಿಗೂ ಅರ್ಥವೇ ಇಲ್ಲ. ಅದೊಂದು ರೀತಿ ವ್ಯಾಪಾರ - ಕೊಡುವುದು ಕೊಳ್ಳುವುದು. ಒಬ್ಬ ಮುಗ್ಧ ಹುಡುಗಿಯನ್ನು ಲಂಪಟನೊಬ್ಬನಿಗೆ ಮಾರಾಟ ಮಾಡೋದು, ಆ ವ್ಯಾಪಾರ ಶಾಸ್ತ್ರೋಕ್ತವಾಗಿ ಆಗಬೇಕಾದರೆ ಇವೆಲ್ಲ ನಡೆಯಬೇಕಾದ ಪ್ರಕ್ರಿಯೆಗಳು!"

## 9

"ಎಲ್ಲರೂ ಮದುವೆಯಾಗೋದು ಹೀಗೇನೇ, ನಾನು ಮದುವೆಯಾದ್ದೂ ಹೀಗೇನೇ! ಎಲ್ಲ ಆಗಿ, ಕಾತರದಿಂದ ಕಾದಿದ್ದ ಮಧುಚಂದ್ರ ಆರಂಭವಾಯಿತು. ಅದರ ಹೆಸರೇ ಅಬದ್ಧ!" ಎಂದವನು ಮುಖ ಸೊಟ್ಟಗೆ ಮಾಡಿಕೊಂಡ. "ಒಮ್ಮೆ ನಾನು ಪ್ಯಾರಿಸ್‌ನ ನಗರ ವೀಕ್ಷಣೆಗೆ ಅಂತ ಹೊರಟೆ. ಒಂದು ಕಡೆ ಬೋರ್ಡ್‌ನಲ್ಲಿದ್ದ ಗಡ್ಡದ ಹೆಂಗಸು ಹಾಗೂ ನೀರು ನಾಯಿಗಳ ಚಿತ್ರ ನೋಡಿ, ಅದನ್ನು ನೋಡಕ್ಕೆ ಅಂತ ಒಳಗೆ ಹೋದೆ. ನೋಡಿದ್ರೆ ಅಲ್ಲಿದ್ದದ್ದು ಲೋನೆಕ್ ಬ್ಲೌಸ್ ತೊಟ್ಟು ಹೆಣ್ಣುಡುಗೆಯಲ್ಲಿದ್ದ ಗಂಡುಸೇ! ಜೊತೆಗೆ, ವಾಲ್ರಸ್‌ನ ಚರ್ಮ ಹೊದ್ದು ನೀರಲ್ಲಿ ತೇಲ್ತಾ ಇದ್ದ ಒಂದು ನಾಯಿ. ಎರಡೂ ಕುತೂಹಲ ಹುಟ್ಟಿಸಲು ಸಾಧ್ಯವೇ ಇರಲಿಲ್ಲ. ಹೊರಕ್ಕೆ ಹೊರಡುವಾಗ ಉಸ್ತುವಾರಿ ಹೊತ್ತಿದ್ದವನು ನಯವಾಗಿ ನನಗೆ ಹೊರದಾರಿ ತೋರಿಸಿ, 'ಒಳಗಿರೋದನ್ನು ನೋಡೋದು ಸ್ವಾರಸ್ಯಕರವೇ ಅಲ್ಲವೇ ಅನ್ನೋದನ್ನ ಬೇಕಾದ್ರೆ ಈ ಮಹನೀಯರನ್ನೇ ಕೇಳಿ! ಬನ್ನಿ ಬನ್ನಿ, ಪ್ರವೇಶದರ ಒಂದೇ ಫ್ರಾಂಕ್!' ಎಂದು ಕರೆಯಲು ತೊಡಗಿದ. ಒಳಗೆ ಸ್ವಾರಸ್ಯಕರವಾದ್ದು ಏನೂ ಇಲ್ಲ ಎಂದು ಹೇಳಕ್ಕೆ ನನಗೆ ನಾಚಿಕೆ, ಈ ದಾಕ್ಷಿಣ್ಯ ಉಸ್ತುವಾರಿ ವ್ಯಕ್ತಿಗೆ ಗೊತ್ತಾಗಿರಬೇಕು. ಮಧುಚಂದ್ರದ ಅನುಭವವೂ ಇಂಥದೇ ಅರ್ಥವಿಲ್ಲದ್ದು, ಅದರ ಅನುಭವ ಆದ್ರೂ ಬೇರೆಯವರಿಗೆ ಹೇಳಲಾರರು. ನಾನು ಯಾರಿಗೂ ಈ ವಿಷಯದಲ್ಲಿ ಇದನ್ನೆಲ್ಲ ಹೇಳಹೋಗಲಿಲ್ಲ. ಆದರೆ ಈಗ ಅನ್ನಿಸ್ತಾ ಇದೆ ನಾನ್ಯಾಕೆ ನಿಜ ಹೇಳ್ಬಾರ್ದಾಗಿತ್ತು ಅಂತ. ಆ ಬಗ್ಗೆ ಇರೋದನ್ನ ಹೇಳ್ಬೇಕಾದ ಆವಶ್ಯಕತೆ ಇದೆ ಅನ್ನೋದು ನನ್ನ ಭಾವನೆ. ಇದರಲ್ಲಿ ಪ್ರತಿಯೊಬ್ಬರಿಗೂ ಆಗೋದು ಇರಿಸುಮುರಿಸು, ಖೇದ, ಎಲ್ಲಕ್ಕಿಂತ ಮಿಗಿಲಾಗಿ ತಾಳಲಾರದ ಬೇಸರ! ಹೊಸದಾಗಿ ಸಿಗರೇಟು ಸೇದೋದನ್ನ ಕಲಿತಾಗ ನನಗಾಗಿದ್ದ ಅನುಭವದ ಥರವೇ - ತಲೆ ಗಿರ್ರಂತ ಅನ್ನಿಸಿ, ಬಾಯಲ್ಲಿ ಎಂಜಲು ತುಂಬಿಕೊಂಡಾಗ ಅದನ್ನು ನುಂಗಿಕೊಂಡು ನನಗೆ ಭಾರಿ ಸಂತೋಷ ಆಗ್ತಿದೆ ಅಂತ ನಟಿಸಿದ್ನಲ್ಲಾ - ಅದೇ ಥರದ್ದೇ. ಧೂಮಪಾನದ ಸಂತೋಷ, ಬರೋದೇ ಆದ್ರೆ ಆಮೇಲೆ

ಬರತ್ತೆ, ಮೊದಲೇ ಅಲ್ಲ. ಇದೂ ಹಾಗೇನೇ. ಹೆಂಡತಿಯಿಂದ ಸುಖ ಪಡೆಯೋದಕ್ಕೆ ಬೇಕಾದ ದುರಭ್ಯಾಸ ನಡೆಸಬೇಕು."

"ಅದ್ಯಾಕೆ, ಅದು ದುರಭ್ಯಾಸ? ನೀವು ಮಾತಾಡ್ತಾ ಇರೋದು ಮನುಷ್ಯನ ಅತ್ಯಂತ ಸಹಜ ಕಾರ್ಯದ ಬಗ್ಗೆ" ಅಂದೆ ನಾನು.

"ಸಹಜವೇ. ಉಹ್ಞೂ, ನಾನು ಯಾವ ತೀರ್ಮಾನಕ್ಕೆ ಬಂದಿದ್ದೀನೀಂತ ಈಗ ಹೇಳ್ತೀನಿ: ನೀವು ಹೇಳಿದ್ದಕ್ಕೆ ವಿರುದ್ಧವಾಗಿ, ಅದು ಅಸಹಜ ಕಾರ್ಯ. ಹೌದು ಅಸಹಜವೇ. ಒಂದು ಮಗುವಾಗಿ, ಇನ್ನೂ ಮುಗ್ಧ ಹುಡುಗಿ ವಿಷಯದಲ್ಲಿ ಅದು ಅಸಹಜ. ನೀವು ಸಹಜ ಅಂತೀರಿ. ತಿನ್ನೋದು ಸಹಜ, ತಿನ್ನೋದು ಮೊದಲಿನಿಂದಲೂ ಸಂತೋಷದಾಯಕ, ಸುಲಭ, ತೃಪ್ತಿ ತರೋ ಅಂಥದು, ಅದನ್ನು ಮಾಡೋದರಲ್ಲಿ ಯಾವ ನಾಚಿಕೆಯ ಅನುಭವವೂ ಇಲ್ಲ. ಆದರೆ ಇದು, ನಾಚಿಕೆ ಹುಟ್ಟಿಸೋದು, ಭಯಂಕರವಾದ್ದು, ನೋವು ಅನುಭವಿಸೋದು. ಅದಕ್ಕೇ ಅದು ಅಸಹಜ! ಒಬ್ಬ ಅಕಲುಷಿತ ಹುಡುಗಿಯಂತೂ ಅದನ್ನ ದ್ವೇಷಿಸ್ತಾಳೆ ಅನ್ನೋದು ನನಗೆ ಮನವರಿಕೆಯಾಗಿದೆ."

"ಹಾಗಾದ್ರೆ ಮನುಷ್ಯ ಸಂತಾನ ಮುಂದುವರಿಯೋ ರೀತಿ ಮತ್ತೇಗೆ?" ಎಂದು ಕೇಳಿದೆ ನಾನು.

ನನ್ನ ಅಭ್ಯಂತರವನ್ನು ನಿರೀಕ್ಷೆ ಮಾಡ್ತಿದ್ದವನ ಹಾಗೆ ಅವನೆಂದ: "ಹೌದಲ್ಲವಾ! ಅದಿಲ್ದಿದ್ದರೆ ಮನುಷ್ಯ ಸಂತಾನ ಮುಂದುವರಿಯೋದಿಲ್ಲ, ಅಲ್ಲವಾ? ಬಾಲ್ಯದಿಂದಲೇ ಹುಡುಗರಿಗೆ ಇಂದ್ರಿಯನಿಗ್ರಹ ಕಲಿಸಿ, ಇಂಗ್ಲಿಷ್ ಲಾರ್ಡ್‌ಗಳಿಗೆ ಗಬಗಬ ತಿನ್ನೋದನ್ನ ತಪ್ಪಿಸಿ, ಅಂತ ಬೋಧಿಸಿದರೆ ಅದು ಸರಿ. ಇನ್ನೂ ದೊಡ್ಡ ಸಂತೋಷಕ್ಕಾಗಿ ಇದನ್ನು ಅನುಸರಿಸಿ ಅಂತ ಉಪದೇಶ ಮಾಡಿ, ಅದೂ ಸರಿ. ಆದರೆ ಕುಟುಂಬದಲ್ಲಿ ನೀತಿಯ ಹೆಸರಲ್ಲಿ ಬ್ರಹ್ಮಚರ್ಯದ ಬಗ್ಗೆ ಮಾತಾಡಿ, ಏನೆಲ್ಲ ಕೋಲಾಹಲವಾಗ್ಬಿಡತ್ತೆ! ಹಂದಿಗಳ ಥರ ಆಡೋದನ್ನ ತಪ್ಪಿಸಿಬಿಟ್ರೆ ಮನುಷ್ಯ ಸಂತಾನವೇ ಉಳಿಯೋಲ್ಲ, ಅಲ್ಲವಾ? ದಯವಿಟ್ಟು ಕ್ಷಮಿಸಿ, ಈ ಬೆಳಕು ಕಣ್ಣಿಗೆ ಹೊಡೀತಿದೆ, ಮರೆ ಮಾಡ್ತೀನಿ" ಎಂದ ಅವನು ದೀಪದ ಕಡೆ ತೋರಿಸ್ತಾ. "ಆಗಬಹುದು" ಎಂದೆ. ಅವನಿಗೆ ಸಹಜವಾಗಿದ್ದ ತರಾತುರಿಯಿಂದಲೇ ದೀಪದ ಮೇಲೆ ವುಲನ್‌ನಿಂದ ಮರೆ ಮಾಡಿದ.

"ನೀವೇನೇ ಹೇಳಿ, ಎಲ್ಲರೂ ಇದೇ ರೀತಿ ಯೋಚನೆ ಮಾಡ್ತಾ ಹೋದ್ರೆ ಮನುಷ್ಯ ಸಂಕುಲ ನಾಶವಾಗಿಬಿಡತ್ತೆ" ಎಂದೆ ನಾನು.

ಅವನು ತಕ್ಷಣ ಉತ್ತರಿಸಲಿಲ್ಲ. ಕೊಂಚ ಹೊತ್ತಿನ ಬಳಿಕ, ತನ್ನೆರಡು ಕಾಲುಗಳನ್ನು ಅಗಲಿಸಿ ಅವುಗಳ ಮೇಲೆ ಮೊಳಕೈಗಳನ್ನಿರಿಸಿಕೊಂಡು, ಮುಂದುವರಿಸಿದ: "ಮಾನವ ಕುಲ ಉಳಿಯೋದು ಹೇಗೆ ಅನ್ನೋದಲ್ವೇ ನಿಮ್ಮ ಪ್ರಶ್ನೆ? ಅದು ಉಳಿಬೇಕೇಕೆ ಅನ್ನೋದು ನನ್ನ ಪ್ರಶ್ನೆ."

"ಇಲ್ಲದಿದ್ರೆ ನಾವಿರೋಲ್ಲ."

"ನಾವ್ಯಾಕೆ ಬದುಕಿರಬೇಕೂಂತ?"

"ಯಾಕೇಂದ್ರೆ, ಇರಬೇಕಲ್ಲ, ಅದಕ್ಕೆ!"

"ಅದೇ ನಾವು ಯಾಕೆ ಬದುಕಬೇಕೂಂತ? ಬದುಕಿಗೆ ಒಂದು ಗುರಿ ಇಲ್ಲದಿದ್ರೆ, ಬದುಕು ಬರೀ ಜೀವಿಸಿರೋದಕ್ಕೇ ಆದರೆ, ಬದುಕೋದಕ್ಕೆ ಕಾರಣ ಎಲ್ಲಿರತ್ತೇಂತ? ಹಾಗಾದ್ರೆ ಶಾಫೆನ್‌ಹಾರ್ಗಳು, ಹಾರ್ಟ್‌ಮನ್‌ಗಳು, ಎಲ್ಲ ಬುದ್ಧಿವಂತರು ಹೇಳೋದು ಸರಿಯೇ. ಬದುಕಿಗೆ ಒಂದು ಗುರಿ ಇರೋದೇ ಆದ್ರೆ, ಅದನ್ನ ತಲುಪಿದ ತಕ್ಷಣ ಅದು ಕೊನೆಗೊಳ್ಳಬೇಕು ಅನ್ನೋದು ಸ್ಪಷ್ಟವೇ ಅಲ್ಲವೇ?" ಅವನ ಮುಖದ ಮೇಲೆ ಒಂದು ಬಗೆಯ ತಳಮಳ ಕಾಣಿಸಿತು, ತನ್ನ ಆಲೋಚನೆ ತುಂಬ ಘನವಾದದ್ದು ಅನ್ನೋ ಭಾವನೆ ಅವನಿಗಿದ್ದಂತೆ ತೋರಿತು. "ಅದು ಆಗೋದು ಹಾಗೇನೇ. ಯೋಚನೆ ಮಾಡಿ, ಮನುಷ್ಯನ ಗುರಿ ಒಳ್ಳೇತನ, ಸಭ್ಯ ನಡವಳಿಕೆ, ಪ್ರೇಮ - ಅದಕ್ಕೆ ಏನು ಹೆಸರು ಬೇಕಾದ್ರೂ ಕೊಡಿ ನೀವು - ಇದೇ ಆದರೆ, ಪ್ರವಾದಿಗಳು ಹೇಳಿದ್ದೂ ಮಾನವಕುಲವೆಲ್ಲ ಪ್ರೇಮದಿಂದ ಒಂದಾಗಬೇಕು ಅನ್ನೋದೇ ಆದರೆ, ಇದನ್ನ ಪಡೆಯೋದಕ್ಕೆ ಏನು ಅಡ್ಡೀಂತ? ಅಡ್ಡಿ ಅಂದ್ರೆ ರಾಗದ್ವೇಷಗಳು, ಅವುಗಳಲ್ಲಿ ಪ್ರಬಲವಾದದ್ದು, ಕ್ರೂರವಾದದ್ದು ಹಾಗೂ ಹಟಮಾರಿಯಾದ್ದು ಅಂದರೆ ಕಾಮ, ದೈಹಿಕ ಬಯಕೆ; ಆದ್ದರಿಂದ ಈ ರಾಗದ್ವೇಷಗಳನ್ನ, ಅವುಗಳ ಪೈಕಿ ಅತ್ಯಂತ ಪ್ರಬಲವಾದ್ದನ್ನೂ ತೊಡೆದುಹಾಕಿದರೆ ಮಾನವಸಂಕುಲದಲ್ಲಿ ಐಕಮತ್ಯ ಮೂಡತ್ತೆ, ಮಾನವರ ಗುರಿ ತಲುಪಿದ ಹಾಗಾಗತ್ತೆ, ಆಗ ಬದುಕಿರೋದಕ್ಕೆ ಯಾವ ಕಾರಣವೂ ಉಳಿದಿರಲ್ಲ. ಮನುಷ್ಯಸಂಕುಲ ಇರೋವರೆಗೂ ಅದರ ಮುಂದಿರುವ ಗುರಿ ಅಂದ್ರೆ, ಹಂದಿಗಳು, ಮೊಲಗಳ ಹಾಗೆ ಬರೀ ಸಂತಾನಾಭಿವೃದ್ಧಿಯಲ್ಲ ಅಥವಾ ಕೋತಿಗಳು ಮತ್ತು ಪ್ಯಾರಿಸಿಗರ ಹಾಗೆ ಕಾಮವನ್ನು ಸುಸಂಸ್ಕೃತ ರೀತಿಯಲ್ಲಿ ಅನುಭವಿಸೋದಲ್ಲ, ಇಂದ್ರಿಯನಿಗ್ರಹ ಮತ್ತು ಪರಿಶುದ್ಧತೆಗಳಿಂದ ಕೂಡಿದ ಜೀವನ ನಡೆಸೋದು. ಇದನ್ನ ಸೇರಕ್ಕೇ ಜನಗಳು ಯಾವಾಗ್ಲಿಂದಾನೂ ಹೆಣಗ್ತಾ ಇದ್ದದ್ದು, ಹೆಣಗ್ತಾ ಇರೋದು. ಅದರಿಂದೇನಾಗತ್ತೇಂದ್ರೆ, ದೈಹಿಕ ಬಯಕೆ ಅನ್ನೋದು ಕೇವಲ ರಕ್ಷಣೆಯ ಸಾಧನವಾಗತ್ತೆ. ಈಗಿನ ಪೀಳಿಗೆ ತನ್ನ ಗುರಿಯನ್ನ ಮುಟ್ಟದೇ ಇದ್ರೆ, ಅದಕ್ಕೆ ಕಾರಣ ರಾಗದ್ವೇಷಗಳು, ಅದರಲ್ಲೂ ಅತ್ಯಂತ ಪ್ರಬಲವಾದ ಕಾಮ. ಈ ಕಾಮ ಮುಂದುವರಿದರೆ ಹೊಸ ಪೀಳಿಗೆ ಉದಯಿಸತ್ತೆ, ಅದು ಈ ಗುರಿಯನ್ನ ತಲುಪೋ ಸಾಧ್ಯತೆ ಇರತ್ತೆ, ಅದೂ ಈ ಗುರಿಯನ್ನ ಮುಟ್ಟದಿದ್ರೆ, ಅದರ ಮುಂದಿನದರ ಮುಂದೆ ಈ ಗುರಿ ಇರತ್ತೆ, ಹೀಗೇ ಗುರಿ ಮುಟ್ಟೋವರೆಗೂ, ಪ್ರವಾದಿಗಳ ಮಾತು ನಿಜವಾಗೋವರೆಗೂ, ಮಾನವಸಂಕುಲ ಒಂದಾಗೋವರೆಗೂ ಮುಂದುವರಿಯುತ್ತೆ. ಹೀಗಾಗದಿದ್ರೆ ಉಂಟಾಗೋ ಪರಿಣಾಮವೇನು? ದೇವರು ಜನರನ್ನ ಸೃಷ್ಟಿಸಿರೋದು ಯಾವುದೋ ಗುರಿಯನ್ನ ತಲುಪೋದಕ್ಕೆ ಆಗಿರದೆ, ಅವನನ್ನ ಕಾಮವಿರಹಿತನಾಗಿಯೋ ಅಥವಾ ಅಮರನನ್ನಾಗಿಯೋ ಸೃಷ್ಟಿಸಿದ್ದರೆ ಏನಾಗ್ತಾ ಇತ್ತು?

ಮನುಷ್ಯ ಕಾಮವಿಲ್ಲದ ಮರ್ತ್ಯನಾಗಿದ್ದು ತನ್ನ ಗುರಿಯನ್ನು ತಲುಪದೇ ಇದ್ದರೆ ದೇವರು ಆ ಗುರಿಯನ್ನು ತಲುಪೋದಕ್ಕಾಗಿ ಹೊಸ ಮನುಷ್ಯಕುಲವನ್ನೇ ಸೃಷ್ಟಿಸಬೇಕಾಗಿತ್ತು ಅಥವಾ ಮನುಷ್ಯ ಅಮರನಾಗಿದ್ದಿದ್ದರೆ, (ಮತ್ತೊಂದು ಪೀಳಿಗೆಯವರಿಗಿಂತ ಅವರಿಗೆ ತಮ್ಮ ತಪ್ಪುಗಳನ್ನ ಸರಿಪಡಿಸಿಕೊಳ್ಳೋದು ತುಂಬ ಕಷ್ಟ ಆಗ್ತಿತ್ತು) ತಮ್ಮ ಗುರಿಯನ್ನವರು ಎಷ್ಟೋ ಸಾವಿರ ವರ್ಷಗಳ ಅನಂತರ ತಲುಪಬಹುದು ಅಂದುಕೊಂಡರೆ, ಆಮೇಲೆ ಅವರು ಬದುಕಿದ್ದೂ ಏನುಪಯೋಗ? ಅವರು ಏನು ಮಾಡಬಹುದು? ಹಾಗಾಗಿ ಈಗಿರೋದೇ ವಾಸಿ. ಈ ರೀತಿ ಹೇಳೋದು ನಿಮಗೆ ಸರಿಹೋಗದೆ ಇರಬಹುದು; ನೀವು ವಿಕಾಸವಾದದಲ್ಲಿ ನಂಬಿಕೆಯಿಟ್ಟವರಿರಬಹುದು. ಆದರೆ ಹೇಗೆ ಹೇಳಿದರೂ ಒಂದೇ: ಪ್ರಾಣಿಗಳಲ್ಲೆಲ್ಲ ಅತ್ಯಂತ ಪ್ರಬುದ್ಧವಾದ ಮನುಷ್ಯಸಂಕುಲ, ಇತರ ಪ್ರಾಣಿವರ್ಗಗಳ ಜೊತೆಗಿನ ಸ್ಪರ್ಧೆಯಲ್ಲಿ ಬದುಕಿ ಉಳಿಯೋದಕ್ಕೆ ಒಗ್ಗಟ್ಟಿನಿಂದ ಒಂದೇ ಗುಂಪಾಗಬೇಕಾದ್ದು ಅನಿವಾರ್ಯ, ಜೇನುನೊಣಗಳ ಹಾಗೆ. ಅಂದರೆ, ಅದು ಸತತವಾಗಿ ಸಂತಾನಾಭಿವೃದ್ಧಿಯನ್ನ ಮಾಡಬಾರದು. ಜೇನುನೊಣಗಳ ಹಾಗೆ ಕಾಮರಹಿತ ವ್ಯಕ್ತಿಗಳನ್ನ ತಯಾರು ಮಾಡಬೇಕು, ಅಂದರೆ ಇಂದ್ರಿಯನಿಗ್ರಹ ಸಾಧನೆಗಾಗಿ ಹೆಣಗಬೇಕೇ ಹೊರತು ಉರಿಯೋ ಬಯಕೆಯನ್ನಲ್ಲ - ಇದರ ಕಡೆಗೇ ನಮ್ಮ ಬದುಕು ಹೋಗಬೇಕಾದ್ದು?" ಎಂದು ಆತ ಕೊಂಚ ಹೊತ್ತು ಸುಮ್ಮನಾದ. "ಮನುಷ್ಯಸಂಕುಲ ನಾಶವಾಗತ್ತೆ? ಜೀವನದ ದೃಷ್ಟಿಕೋನ ಯಾವುದೇ ಆಗಿರಲಿ, ಈ ಬಗ್ಗೆ ಯಾರಿಗಾದರೂ ಅನುಮಾನ ಬರಕ್ಕೆ ಸಾಧ್ಯವೇ? ಸಾವಿನಷ್ಟೇ ಅದೂ ಖಚಿತ. ಚರ್ಚ್‌ನ ಎಲ್ಲ ಉಪದೇಶಗಳ ಸಾರವೂ ಜಗತ್ತು ನಾಶವಾಗತ್ತೆ ಅನ್ನೋದು, ಹಾಗೆಯೇ ಎಲ್ಲ ವಿಜ್ಞಾನಗಳು ಹೇಳೋದೂ ಈ ಪರಿಣಾಮವನ್ನೇ."

## 10

"ಆದರೆ ನಮ್ಮ ಜಗತ್ತಿನಲ್ಲಿ ಇದಕ್ಕೆ ವಿರುದ್ಧ: ಅವಿವಾಹಿತನಿರುವಾಗ ಯಾರಾದರೂ ಇಂದ್ರಿಯನಿಗ್ರಹದ ಬಗ್ಗೆ ಆಲೋಚಿಸಿದರೆ, ಮದುವೆಯಾದ ಮೇಲೆ ಇಂದ್ರಿಯನಿಗ್ರಹ ಅವಶ್ಯಕವಲ್ಲವೆಂದೇ ಅವನು ಯೋಚಿಸುತ್ತಾನೆ. ಮಧುಚಂದ್ರಗಳ ಬಗ್ಗೆ ಗೊತ್ತಲ್ಲ - ತಮ್ಮ ತಾಯ್ತಂದೆಯರ ಅನುಮತಿಯೊಂದಿಗೆ ನವವಿವಾಹಿತರು ತಾವಿಬ್ಬರೇ ಹೋಗುತ್ತಾರಲ್ಲ, ಆ ಪ್ರವಾಸ - ಅದೇನು, ಕಾನೂನಾತ್ಮಕ ಹಾದರ ತಾನೇ! ಆದರೆ ಅದನ್ನು ಮೀರಿದಾಗ ನೈತಿಕ ನಿಯಮವು ಅದಕ್ಕೆ ತಕ್ಕ ಶಿಕ್ಷೆ ವಿಧಿಸುತ್ತೆ. ನಮ್ಮ ಮಧುಚಂದ್ರವನ್ನು ಸುಖಕರವನ್ನಾಗಿ ಮಾಡಲು ನಾನು ಕೈಮೀರಿ ಹೆಣಗಿದೆ, ಆದರೆ ಏನೂ ಪ್ರಯೋಜನವಾಗಲಿಲ್ಲ. ಅದಂತೂ - ಇಡೀ ಅವಧಿ - ಭಯಂಕರವಾಗಿತ್ತು, ಹೇಸಿಕೆ ಹುಟ್ಟಿಸುವಂತ್ತಿತ್ತು, ನಿಸ್ತೇಜವಾಗಿತ್ತು. ಅಲ್ಲದೆ, ಸ್ವಲ್ಪ ಕಾಲದ ಬಳಿಕ ಅದು ದುಃಖದಾಯಕವೂ, ಉಮ್ಮಳದ್ದೂ ಆಯಿತು. ಬಹು ಬೇಗ ಈ ಸ್ಥಿತಿ ಉಂಟಾಯಿತು.

"ಅದು ಆರಂಭವಾದ ಮೂರನೇ ದಿನಕ್ಕೋ ನಾಲ್ಕನೇ ದಿನಕ್ಕೋ ನನ್ನ

ಹೆಂಡತಿಯನ್ನು ಖಿನ್ನತೆ ಆವರಿಸಿತು. ಅವಳನ್ನು ಅಪ್ಪಿಕೊಂಡು ಅನುನಯದಿಂದ ಅದಕ್ಕೇನು ಕಾರಣವೆಂದು ಕೇಳಿದೆ, ಅಂದರೆ ಅವಳಿಗೇನು ಬೇಕಾಗಿದೆ ಎಂದು ವಿಚಾರಿಸಿದೆ; ಆದರೆ ಅವಳು ನನ್ನ ತೋಳುಗಳನ್ನು ಕಿತ್ತೆಸೆದು ಅಳತೊಡಗಿದಳು. ಯಾಕೆ ಎಂದು ಕೇಳಿದರೆ ಉತ್ತರವಿಲ್ಲ. ಅವಳ ದುಮ್ಮಾನ ಮತ್ತು ಖಿನ್ನತೆಗಳಂತೂ ಮುಂದುವರೆದುವು. ಪ್ರಾಯಶಃ ತನ್ನ ದುರ್ಬಲಗೊಂಡ ನರಗಳು ನಮ್ಮ ಸಂಬಂಧದ ಹೇಸಿಕೆಯನ್ನು ಸೂಚಿಸಿರಬೇಕು, ಆದರೆ ಅದನ್ನು ಹೇಗೆ ಹೇಳಬೇಕೆಂದು ಅವಳಿಗೆ ತಿಳಿಯಲಿಲ್ಲ ಅಂತ ಕಾಣುತ್ತೆ. ನಾನು ಅವಳ ಮೇಲೆ ಪ್ರಶ್ನೆಗಳ ಮಳೆಯನ್ನೇ ಸುರಿಸಿದೆ, ಆದರೆ ಜೊತೆಗೆ ತಾಯಿಯಿಲ್ಲದ್ದರಿಂದ ತನ್ನ ಮನಸ್ಸು ಖಿನ್ನವಾಗಿದೇಂತಲೋ ಏನೋ ಹೇಳಿದಳು. ಇದು ನಿಜವಲ್ಲ ಅಂತ ಅಂತ ನನಗನ್ನಿಸ್ತು; ಆದರೂ ನಾನು ಅವರ ತಾಯಿಯ ಪ್ರಸ್ತಾಪ ಮಾಡದೆ ಅವಳಿಗೆ ಸಾಂತ್ವನ ಹೇಳತೊಡಗಿದೆ. ಅವಳು ಖಿನ್ನಳಾಗಿದ್ದಾಳೆ, ಅದರೆ ಅದಕ್ಕೆ ತಾಯಿ ನೆಪ ಹೇಳ್ತಿದಾಳೆ ಅನ್ನಿಸಿತು. ಆದರೆ ತಾಯಿ ಬಗ್ಗೆ ಹೇಳದೇ ಇದ್ದದ್ದರಿಂದ ಅವಳು ಆಕ್ಷೇಪ ತೆಗೆದಳು, ತಾನು ಹೇಳಿದ್ದನ್ನ ನಾನು ನಂಬಲಿಲ್ಲಾಂತ. ನಾನು ಅವಳನ್ನು ಪ್ರೀತಿಸ್ತಾ ಇರೋ ಹಾಗೆ ಕಾಣಲ್ಲ ಅಂದಳು. ಹುಚ್ಚುಚ್ಚಾಗಿ ಯೋಚನೆ ಮಾಡ್ತೀ ಅಂತ ಬೈದೆ, ತಕ್ಷಣವೇ ಅವಳ ಮುಖದ ಬಣ್ಣವೇ ಬದಲಾಯಿಸ್ತು, ಅಲ್ಲಿ ಖಿನ್ನತೆಯ ಬದಲು ಇರಿಸುಮುರಿಸು ಕಾಣಿಸಿತು, ನನ್ನದು ಸ್ವಾರ್ಥ ಕ್ರೌರ್ಯ ಅಂತೆಲ್ಲ ಬಾಯಿಗೆ ಬಂದ ಹಾಗೆ ಅನ್ನತೊಡಗಿದಳು. ನಾನು ಅವಳನ್ನೇ ದಿಟ್ಟಿಸಿದೆ. ಅವಳ ಮುಖದಲ್ಲಿ ಇಷ್ಟು ಹೊತ್ತಿಗೆ ತಾತ್ಸಾರ ಮತ್ತು ಅಸಹನೆ - ದ್ವೇಷ ಅಂತಲೇ ಹೇಳಬಹುದು - ತುಂಬಿದ್ದವು. ಇದನ್ನು ನೋಡಿ ನಾನು ಹೇಗೆ ದಿಗ್ಭ್ರಮೆಗೊಂಡೆ ಅನ್ನೋದು ಈಗಲೂ ನೆನಪಿದೆ. 'ಇದು ಹೇಗಾಯಿತು? ಕಾರಣ ಏನು?' ಎಂಬ ಪ್ರಶ್ನೆಗಳು ನನ್ನಲ್ಲಿ ಸುಳಿದವು. 'ಪ್ರೇಮ ಅಂದ್ರೆ ಆತ್ಮಗಳ ಮಿಲನ ಅಂತಾರೆ, ಆದರೆ ಅದರ ಬದಲು ಇಲ್ಲಿರೋದು ಏನು? ಉಹ್ಞೂ, ಇದು ನಿಜವಾದ ಅವಳಲ್ಲ' ಅನ್ನಿಸ್ತು. ನಾನವಳನ್ನು ಸಮಾಧಾನ ಮಾಡಲು ಪ್ರಯತ್ನಪಟ್ಟೆ. ಆದರೆ ಅವಳು ಮಾತ್ರ ನಮ್ಮಿಬ್ಬರ ಮಧ್ಯೆ ತೀವ್ರ ದ್ವೇಷದ ಅಭೇದ್ಯವಾದ ಗೋಡೆಯನ್ನು ನಿರ್ಮಿಸಿದ್ದಳು. ಅದರಿಂದ ಬಹು ಬೇಗ ನನ್ನನ್ನೂ ಕಿರಿಕಿರಿ ಆವರಿಸಿತು. ಹೀಗಾಗಿ ಇಬ್ಬರೂ ಒಬ್ಬರೊಬ್ಬರ ಮೇಲೆ ಬೈಗುಳಗಳ ಸುರಿಮಳೆಯನ್ನೇ ಸುರಿಸಿದ್ವಿ. ಆ ಮೊದಲ ಜಗಳದ ಪರಿಣಾಮ ಭಯಂಕರವಾಗಿತ್ತು. ಅದನ್ನ ನಾನು ಜಗಳ ಅಂತಲೇ ಕರೀತೀನಿ, ಆದರೆ ಅದು ಬರೀ ಜಗಳವಾಗಿರದೆ ನಮ್ಮಿಬ್ಬರ ನಡುವೆ ಇದ್ದ ಅಗಲವಾದ ಕಂದಕ ಅನ್ನೋದರ ವ್ಯಕ್ತರೂಪವಾಗಿತ್ತು. ನಮ್ಮ ನಡುವಣ ಮೋಹ ಲೈಂಗಿಕ ತೃಪ್ತಿಯಿಂದಾಗಿ ಕಣ್ಮರೆಯಾಗಿತ್ತು, ಹಾಗಾಗಿ ನಮ್ಮಿಬ್ಬರ ನಡುವೆ ಇದ್ದ ಸಂಬಂಧ ತನ್ನ ನಿಜರೂಪದಲ್ಲಿ ಕಾಣಿಸಿಕೊಂಡಿತ್ತು. ಅಂದರೆ ಪರಸ್ಪರ ಅಪರಿಚಿತರಾದ ಇಬ್ಬರು ಅಹಂಕಾರಿಗಳು ಪರಸ್ಪರರಿಂದ ಆದಷ್ಟೂ ಸುಖವನ್ನು ಹಿರಿದುಕೊಳ್ಳುವ ಮನೋಭಾವ ನಮ್ಮಲ್ಲಿ ಕಂಡುಬಂತು. ನಮ್ಮಿಬ್ಬರ ನಡುವೆ ನಡೆದದ್ದನ್ನು ಜಗಳ ಅಂತಲೇ ಕರೀತೀನಿ, ಅದಕ್ಕೆ ಕಾರಣ ಲೈಂಗಿಕತೃಷೆ ಹೋಗಿದ್ದದ್ದು, ಆಗ ನಮ್ಮಿಬ್ಬರ ನಡುವಣ ನಿಜಸಂಬಂಧ

ಹೊರಬಂದಿತ್ತು. ಇಂಥ ಅಸಹನೆ ದ್ವೇಷಗಳ ಸಂಬಂಧ ಸಹಜವಾದ್ದು ಅಂತ ನನಗನ್ನಿಸಲಿಲ್ಲ; ಈ ಅಸಹನೆ ಬಹುಬೇಗ ಪುನರುಜ್ಜೀವನಗೊಂಡ ಕಾಮತೃಷೆಯ ಹಿಂದೆ, ಅಂದರೆ ಸಂಭೋಗಾತುರದಿಂದ ಮರೆಯಾಯ್ತು. ನಾವು ಜಗಳ ಆಡಿದ್ವಿ ನಿಜ; ಆದರೀಗ ಮತ್ತೆ ಒಂದಾಗಿದ್ದೀವಿ, ಇನ್ನು ಮುಂದೆ ಹೀಗಾಗಲ್ಲ ಅಂತ ಅಂದುಕೊಂಡೆ. ಆದರೆ ಅದೇ ಮಧುಚಂದ್ರದ ತಿಂಗಳಲ್ಲಿ ಕಾಮತೃಪ್ತಿಯ ಕಾಲ ಬೇಗ ಮರುಕಳಿಸಿತು, ಮತ್ತೆ ಇಬ್ಬರಿಗೂ ಒಬ್ಬರೊಬ್ಬರ ಆವಶ್ಯಕತೆ ಕಾಣಿಸಲಿಲ್ಲ, ಮತ್ತೆ ನಮ್ಮ ಮಧ್ಯೆ ಜಗಳ ನಡೀತು. ಮೊದಲನೇದಕ್ಕಿಂತ ಈ ಎರಡನೇ ಜಗಳ ನನ್ನ ಮೇಲೆ ಗಾಢವಾದ ನೋವಿನ ಪರಿಣಾಮ ಉಂಟುಮಾಡಿತು. ಅಂದರೆ, ಮೊದಲ ಸಲದ ಜಗಳ ಅಕಸ್ಮಾತ್ ಆದುದಲ್ಲ, ಆಗಲೇಬೇಕಾದ್ದು, ಮತ್ತೆಯೂ ಮರುಕಳಿಸುವಂಥದು ಅಂದುಕೊಂಡೆ. ಈ ಎರಡನೆಯ ಜಗಳದಿಂದಾಗಿ ನಾನು ಜರ್ಜರಿತನಾದೆ, ಯಾಕಂದರೆ ಅದಕ್ಕೆ ಕಾರಣ ಕ್ಷುಲ್ಲಕವಾದ್ದು. ಹಣಕ್ಕೆ ಸಂಬಂಧಪಟ್ಟ ಕಾರಣ, ಆ ವಿಷಯದಲ್ಲಿ ನಾನೇನೂ ಕೃಪಣನಾಗಿರ ಬೇಕಾದ್ದಿರಲಿಲ್ಲ, ಅದೂ ನನ್ನ ಹೆಂಡತಿಯ ವಿಷಯದಲ್ಲಿ. ನಾನು ಹೇಳಿದ ಯಾವುದೋ ಮಾತನ್ನು ಅವಳು ಹೇಗೆ ತಿರುಚಿದಳೆಂದರೆ ಹಣದಿಂದ ನಾನವಳ ಮೇಲೆ ಸವಾರಿ ಮಾಡಹೊರಟಿದ್ದೇನೆ - ಆ ವಿಷಯದಲ್ಲಿ ನನ್ನ ಮಾತೇ ನಡೆಯಬೇಕು - ಎಂಬರ್ಥದ ಮಾತನ್ನಾಡಿದಳು ಅನ್ನೋದು ಮಾತ್ರ ನೆನಪಿದೆ. ಅದಂತೂ ಮೂರ್ಖತನದ್ದು, ನನಗಾಗಲೀ ಅವಳಿಗಾಗಲೀ ಸಹಜವಾದುದಾಗಿರಲಿಲ್ಲ. ನನ್ನ ಕೋಪ ನೆತ್ತಿಗೇರಿತು, ನನ್ನ ಬಗ್ಗೆ ಸ್ವಲ್ಪವೂ ಗಣನೆಯಿಲ್ಲದೆ ಮಾತಾಡುವವಳೆಂದು ಜರಿದೆ. ಅವಳೂ ನನ್ನ ಮೇಲೆ ಅದೇ ಆಪಾದನೆ ಹೊರಿಸಿದಳು, ಎಲ್ಲ ಮತ್ತೆ ಮೊದಲಿಂದ ಶುರುವಾಯಿತು. ಅವಳ ಮಾತು, ಮುಖಭಾವ, ಕಣ್ಣುಗಳಲ್ಲಿನ ನೋಟದಲ್ಲಿ ಹಿಂದೆ ನನ್ನನ್ನು ಯಾವುದು ತತ್ತರಗೊಳಿಸಿತ್ತೋ ಅದೇ ಕ್ರೌರ್ಯ, ಅಸಹನೆ ನನಗೆ ಕಾಣಿಸಿತು. ಹಿಂದೆ ನನ್ನ ತಂದೆ ಜೊತೆ, ಸೋದರರ ಜೊತೆ, ಸ್ನೇಹಿತರ ಜೊತೆ ಎಷ್ಟೋ ಸಲ ಜಗಳವಾಡಿದ್ದೆ, ಆದರೆ ಅಲ್ಲೆಲ್ಲೂ ಈಗ ನನಗೆ ಕಾಣಿಸಿದ ವಿಷ ಕಂಡುಬಂದಿರಲಿಲ್ಲ. ಆದರೆ ಸ್ವಲ್ಪ ಹೊತ್ತಿಗೇ ಈ ಪರಸ್ಪರ ದ್ವೇಷ ಮೋಹದಲ್ಲಿ, ಅಂದರೆ ಕಾಮದಾಹಗಳಲ್ಲಿ ಸೋರಿಹೋಯಿತು; ಈ ಎರಡು ಜಗಳಗಳು ತಪ್ಪುಗಳು ಮುಂದೆಂದೂ ನಡೆಯವು ಎಂದು ಭಾವಿಸಿದೆ. ಆದರೆ ಕೊಂಚ ಸಮಯದಲ್ಲಿಯೇ ಮೂರನೆಯದು, ನಾಲ್ಕನೆಯದೂ ನಡೆದುಹೋಯಿತು. ಆಗ ನನಗೆ ಅರ್ಥವಾಯಿತು, ಇದಾವುದೂ ಆಕಸ್ಮಿಕವಾದುದಾಗಿರದೆ, ಮುಂದೆಯೂ ನಡೆಯುವಂಥದೇ ಎನ್ನಿಸಿ, ಭವಿಷ್ಯದ ಬಗ್ಗೆ ನನಗೆ ದಿಕ್ಕುತೋಚದಂತಾಯ್ತು. ಜೊತೆಗೆ, ನಾನೊಬ್ಬನೇ ಹೆಂಡತಿಯ ಜೊತೆಗೆ ಈ ಇಜ್ಜೋಡಿನ ಬದುಕು ನಡೆಸುತ್ತಿದ್ದೇನೆ, ಮಿಕ್ಕ ಯಾವ ದಂಪತಿಯರ ನಡುವೆಯೂ ಇಂಥದಿರಲಾರದು ಎಂಬ ಭಯಂಕರ ಆಲೋಚನೆ ನನ್ನನ್ನು ಹಿಡಿದು ಅಲ್ಲಾಡಿಸಿತು. ಇದು ಎಲ್ಲರಿಗೂ ಸಾಮಾನ್ಯ; ಆದರೆ ಎಲ್ಲರೂ ನನ್ನ ಹಾಗೆಯೇ ಯೋಚನೆ ಮಾಡ್ತಾರೆ, ಅಲ್ಲದೆ ಈ ನಾಚಿಕೆಗೇಡಿನ ವಿಷಯವನ್ನು ಇತರರಿಂದ ಮರೆಮಾಚೋದು ಮಾತ್ರವಲ್ಲ ಈ ವಿಷಯದಲ್ಲಿ ಆತ್ಮವಂಚನೆ ಮಾಡಿಕೊಳ್ತಾರೆ

ಎಂಬುದು ನನಗಾಗ ಗೊತ್ತಾಗಲಿಲ್ಲ. ಇದು ಮೊದಲಿಂದ ಆರಂಭವಾಗಿ ದಿನದಿನಕ್ಕೆ ಹೆಚ್ಚೆಚ್ಚು ಘೋರತನದಿಂದ ಮುಂದುವರೀತು. ನನ್ನ ಬದುಕು ಅಂದುಕೊಂಡಂತೆ ಸಾಗದೆ ನಾನು ದಿಕ್ಕಾಪಾಲಾದೆ, ಮದುವೆ ಅನ್ನೋದು ಸುಖಕರವಲ್ಲ ಎಂಬುದಲ್ಲದೆ ಮಹಾ ವಿಪತ್ತು ಅನ್ನುವ ಭಾವನೆ ಮನಸ್ಸಿನಾಳದಲ್ಲಿ ಸುಳಿಯಿತು; ಆದರೆ ಮಿಕ್ಕೆಲ್ಲರ ಹಾಗೆಯೇ ಇದನ್ನು ಒಪ್ಪಿಕೊಳ್ಳಲು ನನ್ನ ಮನಸ್ಸೂ ಸಿದ್ಧವಿರಲಿಲ್ಲ - ಈಗಲೂ ಇದನ್ನು ನಾನು ಒಪ್ಪಿಕೊಳ್ತಿರಲಿಲ್ಲ, ಆದರೆ ಅದರ ಪರಿಣಾಮ ಏನಾಯ್ತು ಅನ್ನೋದರಿಂದ ಹೇಳಬೇಕಾಗಿದೆ - ಈ ವಿಷಯ ಬಗ್ಗೆ ಬೇರಾರ ಮುಂದೆಯೂ ಬಾಯಿಬಿಡಲಿಲ್ಲ. ನನ್ನ ನಿಜ ಪರಿಸ್ಥಿತಿ ಏನು ಅನ್ನೋದನ್ನ ತಿಳೀಲಾರದೆ ಹೋದ ಬಗ್ಗೆ ನನಗೆ ಈಗ ನಾಚಿಕೆ ಅನ್ನಿಸ್ತಿದೆ. ಜಗಳಕ್ಕೆ ನೆಪವಾದದ್ದು ಯಾವುದು ಅನ್ನೋದು ಅದು ಮುಗಿಯೋಹೊತ್ತಿಗೆ ಪೂರ್ತಿ ಮರೆತುಹೋಗಿರತ್ತೆ. ನಮ್ಮ ಜಗಳದ ನೆಪ ಹಾಗೆ ಮರೆತುಬಿಡಬಹುದಾದಂಥದಲ್ಲ, ನಮ್ಮ ನಡುವಣ ಅಸಹನೆ ಅಂಥದ್ದು. ಇನ್ನೂ ವಿಶೇಷವೆಂದರೆ, ನಮ್ಮ ಮಧ್ಯೆ ಹೊಂದಾಣಿಕೆ ಸಾಧ್ಯವಾಗದೇ ಹೋದದ್ದು. ಎಷ್ಟೋ ವೇಳೆ ಮಾತುಗಳು, ವಿವರಣೆಗಳು, ಕೊನೆಗೆ ಕಣ್ಣೀರು ಇರುತ್ತಿದ್ದು, ಕೆಲವು ವೇಳೆಯಂತೂ - ಓ! ಆ ಬಗ್ಗೆ ಯೋಚಿಸೋದಕ್ಕೂ ಈಗ ಹೇಸಿಕೆ ಅನ್ನಿಸತ್ತೆ - ಒಬ್ಬರೊಬ್ಬರ ಬಗ್ಗೆ ಅತ್ಯಂತ ಕಟುವಾದ ಮಾತುಗಳ ನಂತರ ಮೌನವಾದ ನೋಟಗಳು, ಮುಗುಳ್ನಗೆಗಳು, ಮುತ್ತುಗಳು, ಅಪ್ಪುಗೆಗಳು ಇದ್ದಕ್ಕಿದ್ದ ಹಾಗೆಯೇ ಬರುತ್ತಿದ್ದವು. ಅಬ್ಬಾ, ಎಷ್ಟು ಭಯಂಕರ!. ಆದರೆ ಅದರ ಹಿಂದಿನ ವಿಷಮತೆ ನನಗೆ ಏಕೆ ಕಾಣಿಸಲಿಲ್ಲ ಅಂತ ನನಗೀಗ ಆಶ್ಚರ್ಯವಾಗ್ತಿದೆ!"

## 11

ಇಬ್ಬರು ಹೊಸಬ ಪ್ರಯಾಣಿಕರು ಡಬ್ಬಿಯೊಳಕ್ಕೆ ಬಂದು ದೂರದ ಸೀಟುಗಳಲ್ಲಿ ಕೂತರು. ಅವರು ಬಂದಾಗ ಈತ ಮೌನವಹಿಸಿದ್ದವನು, ಹೊಸಬರು ಕೂತ ನಂತರ, ತನ್ನ ಕತೆಯ ಎಳೆ ತುಂಡರಿಸಿಹೋಗದಂತೆ ಮತ್ತೆ ಕಥನವನ್ನು ಮುಂದುವರಿಸಿದ.: "ಅದರ ವಿಚಾರದಲ್ಲಿ ಅತ್ಯಂತ ಹೇಯವಾದ್ದು ಅಂದರೆ ತಾತ್ವಿಕವಾಗಿ ಪ್ರೇಮವೆಂಬುದು ಆದರ್ಶಯುತವಾದದ್ದು ಮತ್ತು ಉನ್ನತವಾದದ್ದು. ಆದರೆ ವಾಸ್ತವವಾಗಿ, ಒಂದು ಬಗೆಯಲ್ಲಿ ಕ್ಷುಲ್ಲಕವಾದದ್ದು, ಕ್ಷುದ್ರವಾದದ್ದು, ಭಯಂಕರವಾದದ್ದು, ನೆನಪಿಸಿಕೊಳ್ಳಲು ಅಥವಾ ಅದರ ಬಗ್ಗೆ ಮಾತನಾಡಲು ವಾಕರಿಕೆ ತರುವಂಥದ್ದು. ಪ್ರಕೃತಿ ಅದನ್ನು ಹಾಗೆ ಹೇವರಿಕೆಯದನ್ನಾಗಿಯೂ ಅವಮಾನಕರವಾಗಿಯೂ ಮಾಡಿರುವುದಕ್ಕೆ ಕಾರಣವಿಲ್ಲದಿಲ್ಲ. ಅದು ಹೇವರಿಕೆಯ ಮತ್ತು ಅವಮಾನಕಾರಕವಾಗಿರುವುದರಿಂದ ಅದರ ಸ್ವರೂಪವೇ ಅಂಥದ್ದು ಎಂದು ತಿಳಿಯಬೇಕು. ಆದರಿಲ್ಲಿ, ಅದಕ್ಕೆ ವಿರುದ್ಧವಾಗಿ, ಜನ ಅಂಥದ್ದನ್ನು ಸುಂದರವಾದ್ದು, ಉನ್ನತವಾದ್ದು ಅಂತ ನಟನೆಮಾಡ್ತಾರೆ. ನನ್ನ ಪ್ರೇಮದ ಮೊದಲ ಕುರುಹುಗಳು ಯಾವುವು? ಅವಳ ಆತ್ಮಿಕವಾದ, ಅಷ್ಟೇಕೆ ಅವಳ ದೈಹಿಕ ಸ್ವರೂಪಕ್ಕೂ ಗಮನ ಕೊಡದೆ ನಾನು ಯಾಕೆ ಪ್ರಾಣಿಯ ಹಾಗೆ ಅತಿರೇಕಗಳಿಗೆ ಎಡೆಗೊಟ್ಟೆ? ನಮ್ಮಿಬ್ಬರ

ನಡುವೆ ವೈಷಮ್ಯ ಉಂಟಾಗಲು ಕಾರಣವೇನಿರಬಹುದು ಎಂದು ಯೋಚಿಸಿದೆ. ಆದರೆ ಅದು ಮಾತ್ರ ಸರಳವಾದ್ದುದಾಗಿತ್ತು: ಆ ವಿದ್ವೇಷ ಅನ್ನೋದು ನಮ್ಮನ್ನು ಆವರಿಸಿಕೊಂಡ ಪಾಶವೀ ಸ್ವಭಾವದ ವಿರುದ್ಧ ಮಾನವ ಪ್ರಕೃತಿ ತೋರ್ಪಡಿಸಿದ ಪ್ರತಿಭಟನೆ. ನಾವು ಒಬ್ಬರೊಬ್ಬರ ಬಗ್ಗೆ ಇರಿಸಿಕೊಂಡಿದ್ದ ದ್ವೇಷದ ಬಗ್ಗೆ ನನಗೆ ಅಚ್ಚರಿಯೆನಿಸಿತು; ಆದರೂ ಅದು ಬೇರೆಯ ರೀತಿಯಾಗಲು ಸಾಧ್ಯವಿರಲಿಲ್ಲ. ಆ ದ್ವೇಷವೆಂದರೆ ಅಪರಾಧದಲ್ಲಿ ಭಾಗಿಯಾಗುವುದರ ವಿರುದ್ಧ ಪರಸ್ಪರರಲ್ಲಿ ಇದ್ದ ದ್ವೇಷವೇ? ಅಪರಾಧಕ್ಕೆ ಪ್ರೇರಣೆಯೂ ಹೌದು, ಅದರಲ್ಲಿ ಭಾಗಿಯಾಗುವುದೂ ಹೌದು. ಆ ಬಡಪಾಯಿ ಮೊದಲ ತಿಂಗಳೆ ಬಸುರಿಯಾಗಿ ನಮ್ಮ ಹೇಯ ಸಂಬಂಧಗಳು ಮುಂದುವರಿಯಿತಲ್ಲ, ಅದು ಅಪರಾಧವಲ್ಲದೆ ಬೇರೇನು? ನಾನು ವಿಷಯ ಬಿಟ್ಟು ಹೋಗ್ತಾ ಇದ್ದೀನಿ ಅಂತ ನಿಮಗನ್ನಿಸಿರಬಹುದು! ಖಂಡಿತ ಇಲ್ಲ!!! ನಾನು ನನ್ನ ಹೆಂಡತೀನ ಹೇಗೆ ಕೊಂದೆ ಅನ್ನೋದನ್ನ ಹೇಳ್ತಾ ಇದ್ದೀನಿ. ನಾನು ಅವಳನ್ನ ಹೇಗೆ ಮತ್ತು ಯಾವುದರಿಂದ ಕೊಂದೆ ಅಂತ ವಿಚಾರಣೆ ಸಮಯದಲ್ಲಿ ಕೇಳಿದ್ರು. ಮೂರ್ಖ ಜನ! ನಾನು ಅವಳನ್ನ ಅಕ್ಟೋಬರ್ ಐದನೇ ತಾರೀಕು ಚಾಕುವಿನಿಂದ ಕೊಂದಿದ್ದೆ ಎಂದು ಅವರು ತಿಳ್ಕೊಂಡಿದ್ರು, ನಾನು ಕೊಂದದ್ದು ಆವತ್ತಲ್ಲ, ಅದಕ್ಕೂ ತುಂಬ ಮುಂಚೆಯೇ ಕೊಂದಿದ್ದೆ. ಈಗೆಲ್ಲ ಕೊಲೆಗಳಾಗತ್ವಲ್ಲ, ಹಾಗೆಯೇ, ಹಾಗೆಯೇ.

"ನೀವು ಕೊಂದದ್ದು ಯಾವುದರಿಂದ ಹಾಗಾದ್ರೆ?"

"ಅದೇ ಆಶ್ಚರ್ಯದ ವಿಷಯ! ಯಾರಿಗೂ ಸ್ಪಷ್ಟವಾದ್ದನ್ನ, ನಿಜವನ್ನ ತಿಳ್ಕೊಳ್ಳೋ ಇಚ್ಛೆ ಇರೋಲ್ಲ. ಡಾಕ್ಟರುಗಳು ಯಾವುದನ್ನ ತಿಳ್ಕೋಬೇಕೋ, ಹೇಳಬೇಕೋ ಆ ಬಗ್ಗೆ ಅವರು ಮೌನವಾಗಿರ್ತಾರೆ. ಆದರೂ ವಿಷಯ ಮಾತ್ರ ತೀರ ಸರಳ. ಪ್ರಾಣಿಗಳಲ್ಲಿರೋ ಹಾಗೆಯೇ ಮನುಷ್ಯರಲ್ಲೂ ಸಂಭೋಗದಿಂದ ಬಸಿರಾಗಬೇಕು, ಹೆತ್ತು ಹಾಲೂಡಿಸ್ಬೇಕು ಅನ್ನೋದು ಸೃಷ್ಟಿ ನಿಯಮ. ಆದರೆ ಈ ಸಂದರ್ಭದಲ್ಲಿ ಸಂಭೋಗ ಹೆಣ್ಣಿಗೂ ಮಗುವಿಗೂ ಹಾನಿಕರವಾದ್ದು. ಆದರೆ ಹಾಗೆ ಮಾಡಿಕೊಳ್ಳೋರ ಸಂಖ್ಯೆ ಗಂಡಸರದಷ್ಟೇ ಹೆಂಗಸರದ್ದೂ. ಹಾಗೆ ಮಾಡಿದ್ರೆ ಏನಾಗತ್ತೆ? ಸ್ಪಷ್ಟವಾಗಿದೆ; ಅದನ್ನ ತಿಳಕೊಳ್ಳೋದಕ್ಕೆ ಮಹಾ ಬುದ್ಧಿವಂತಿಕೆ ಏನೂ ಬೇಕಿಲ್ಲ. ಪ್ರಾಣಿಗಳ ಹಾಗೆ ಅದರಿಂದ ಮನುಷ್ಯನೂ ದೂರ ಇರಬೇಕು, ಅಷ್ಟೆ. ಆದರೆ ಜನ ಹಾಗಿರಲ್ಲ. ರಕ್ತದಲ್ಲಿ ಬಿಳಿ ರಕ್ತಕಣಗಳಿರೋದನ್ನ ಹಾಗೂ ಇಂಥ ಇನ್ನೂ ಅನೇಕ ಕೆಲಸಕ್ಕೆ ಬಾರೋ ವಿಷಯಗಳನ್ನ ವಿಜ್ಞಾನಿಗಳು ಕಂಡು ಹಿಡಿದಿದಾರೆ. ಆದರೆ ಅದಕ್ಕೆ ಕಾರಣ ಏನೂಂತ ಅರ್ಥ ಮಾಡ್ಕೊಂಡಿಲ್ಲ ಅಥವಾ ಅದು ಯಾಕೆ ಅಂತ ಯಾವ ವಿಜ್ಞಾನಿಗಳೂ ಹೇಳೋದಿಲ್ಲ. ಹೀಗಾಗಿ ಹೆಂಗಸಿಗಿರೋದು ಎರಡೇ ದಾರಿ: ಒಂದು, ಗಂಡಸು ಸುಖ ಅನುಭವಿಸೋದಕ್ಕೆ ಅನುವಾಗೋ ಹಾಗೆ ಹೆಂಗಸು, ಅಂದ್ರೆ ತಾಯಿಯಾದೋಳು ತನ್ನನ್ನು ತಾನು ನಾಶಮಾಡ್ಕೊಳ್ಳೋ ರಾಕ್ಷಸಿಯಾಗೋದು; ಇಲ್ಲ, ಇನ್ನೊಂದು ದಾರಿ, ಅದು ದಾರಿಯೇ ಅಲ್ಲ, ಪ್ರಕೃತಿ ನಿಯಮಗಳನ್ನ ನೇರವಾಗಿ ಒರಟಾಗಿಯೂ ಉಲ್ಲಂಘಿಸ್ತಾ ಹೋಗೋದು? ಎಲ್ಲ

ಗೌರವಸ್ಥ ಕುಟುಂಬಗಳಲ್ಲಿ ಆಗೋ ಹಾಗೆ? ಅಂದ್ರೆ, ತಾನು ಬಸುರಿಯಾಗಿರೋವಾಗಲೂ ಬಾಣಂತಿಯಾಗಿರೋವಾಗ್ಲೂ ಗಂಡನ ಭೋಗದ ವಸ್ತುವಾಗೋದು. ಇದನ್ನ ಯಾವ ಪ್ರಾಣಿಯೂ ಮಾಡಲ್ಲ, ಯಾಕೇಂದ್ರೆ ಆ ಸ್ಥಿತೀಲಿ ಹೆಣ್ಣಿಗೆ ಸಾಕಷ್ಟು ಶಕ್ತಿ ಇರಲ್ಲ. ಇದರಿಂದ ನಮ್ಮಂಥೋರ ಮನೇಲಿ ಅವಳಿಗೆ ನರದೌರ್ಬಲ್ಯ ಉಂಟಾಗತ್ತೆ, ಸನ್ನಿ ಆಗತ್ತೆ; ರೈತಾಪಿಗಳ ಮನೆಗಳಲ್ಲಿ 'ದೆವ್ವ ಮೆಟ್ಕೊಳ್ಳೋ'ದು ಅಂತಾರಲ್ಲ, ಅಂದ್ರೆ ಮೂರ್ಛೆ ರೋಗ ಉಂಟಾಗತ್ತೆ. ಪರಿಶುದ್ಧ ಕನ್ಯೆಯರನ್ನು ಯಾವತ್ತೂ 'ದೆವ್ವ ಮೆಟ್ಕೊಳ್ಳೋ'ದಿಲ್ಲ, ಹಾಗಾಗೋದು ಮದುವೆಯಾಗಿ ಗಂಡನ ಜೊತೇಲಿರೋ ಹೆಣ್ಣುಗಳಿಗೆ ಮಾತ್ರವೇ ಅಂತ ನಿಮಗೂ ಗೊತ್ತಲ್ಲ. ಇಲ್ಲಿರೋದು ಹಾಗೆಯೇ, ಯೂರೋಪಿನಲ್ಲಿರೋದೂ ಅದೇನೇ. ಸನ್ನಿ ಹೆಂಗಸರಿಗಾಗಿರೋ ಆಸ್ಪತ್ರೆಗಳಲ್ಲಿ ತುಂಬಿಕೊಂಡಿರೋರು ಪ್ರಕೃತಿ ನಿಯಮವನ್ನು ಮೀರಿರೋ ಇಂಥ ಹೆಂಗಸರೇ. ಮೂರ್ಛೆ ರೋಗಿಗಳು ಹಾಗೂ ದೆವ್ವ ಮೆಟ್ಕೊಂಡಿರೋರು ಪೂರ ನಾಶವಾದವರೇ, ಅಂದರೆ ಜಗತ್ತಿನಲ್ಲಿರೋರು ಅರ್ಧ ಭಾಗ ಇಂಥ ಹೆಂಗಸರೇ ಅಂದಹಾಗಾಯ್ತು. ಬಸುರಿಯಾಗಿರೋವಾಗ್ಲೂ ಬಾಣಂತಿತನದಲ್ಲೂ ಹೆಂಗಸರಲ್ಲಿ ಏನೆಲ್ಲ ದೊಡ್ಡ ಬದಲಾವಣೆ ಆಗ್ತಿರತ್ತೆ ಅನ್ನೋದರ ಬಗ್ಗೆ ಯೋಚ್ನೆ ಮಾಡಿ. ಈ ಪವಿತ್ರ ಕಾರ್ಯದ ಉಲ್ಲಂಘನೆಯಾಗ್ತಿರೋದು ಯಾತಕ್ಕೆ? ಅದರ ಬಗ್ಗೆ ಯೋಚ್ನೆ ಮಾಡಿದ್ರೇ ಭಯವಾಗತ್ತೆ! ಜನರಂತೂ ಹೆಂಗಸಿನ ಹಕ್ಕುಗಳ ಬಗ್ಗೆ ಮಾತಾಡಿದ್ದೂ ಮಾತಾಡಿದ್ದೇ. ಇದು ಹ್ಯಾಗಿದೇಂದ್ರೆ, ತಾನು ತಿನ್ನೋ ಮನುಷ್ಯನನ್ನ ಬಂಧನದಲ್ಲಿಟ್ಟು ಕೊಬ್ಬಿಸಿ, ಬಂದಿಗಳ ಹಕ್ಕುಗಳ ಬಗ್ಗೆ, ಸ್ವಾತಂತ್ರ್ಯದ ಬಗ್ಗೆ ಮಾತಾಡಿದ ಹಾಗೆ!"

ಈ ವಿಷಯ ನನಗೆ ಹೊಸದಾಗಿ ತೋರಿತು, ಅಷ್ಟೇ ಅಲ್ಲ, ಗಾಬರಿ ಉಂಟುಮಾಡಿತು. "ಹಾಗಾದ್ರೆ ಏನು ಮಾಡಬೇಕೂಂತ? ಗಂಡಸು ಹೆಂಡತಿ ಜೊತೇಲಿ ಎರಡು ವರ್ಷಕ್ಕೊಮ್ಮೆ ಮಾತ್ರ ಸೇರ್ಬೇಕೂ ಅಂತಲಾ?" ಎಂದು ಕೇಳಿದೆ.

"ಗಂಡಸರು ಹಾಗೇ ಮಾಡ್ಬೇಕು" ಎಂದ ಅವನು ನನ್ನ ಮಾತುಗಳನ್ನು ತುಂಡರಿಸಿ. "ಈ ವಿಷಯದಲ್ಲಿ ಜನರ ಮನವೊಲಿಸಿರೋರು ಮತ್ತೆ ಅದೇ ವಿಜ್ಞಾನದ ಮಹಾ ಬೋಧಕರು. ಗಂಡಸಿಗೆ ವೋಡ್ಕಾ, ತಂಬಾಕು, ಅಫೀಮು ಅಂಥ ವಸ್ತುಗಳು ಅನಿವಾರ್ಯವಾಗಿ ಬೇಕೂಂತ ತಲೇಲಿ ತುಂಬಿರೋರು ಅವರೇ. ಮನುಷ್ಯನಿಗೆ ಏನು ಬೇಕು ಅನ್ನೋದು ದೇವರಿಗೇ ಗೊತ್ತಾಗ್ಲಿಲ್ಲ ಅನ್ನೋ ಹಾಗೇ ಇವರು ವಿಷಯಗಳನ್ನ ಬೇರೆ ರೀತಿ ವ್ಯವಸ್ಥೆ ಮಾಡ್ತಾರೆ. ಒಂದಕ್ಕೊಂದಕ್ಕೆ ತಾಳೆ ಆಗಲ್ಲ ಅನ್ನೋದು ಸ್ಪಷ್ಟ. ತನ್ನ ಬಯಕೆಗಳನ್ನ ತೀರಿಸಿಕೊಳ್ಳೋದು ಆವಶ್ಯಕ, ಹೀಗಾಗಿ ಬಸುರು ಬಾಣಂತನಗಳು ಅದಕ್ಕೆ ಅಡ್ಡಿ ಮಾಡಿ ಆಸೆಪಡೋನ ಬಯಕೆಗೆ ಅಡ್ಡಿಮಾಡತ್ತೆ ಅನ್ನೋದು ಅವರ ತೀರ್ಮಾನ. ಹಾಗಾದ್ರೆ ಮನುಷ್ಯ ಏನು ಮಾಡ್ಬೇಕು? ಅವರನ್ನ ಕೇಳಿದ್ರೆ, ಬೇಕಾದ್ದನ್ನ ವ್ಯವಸ್ಥೆ ಮಾಡಿಕೊಡ್ತಾರೆ. ಓ ಆ ಪಿಶಾಚಿಗಳನ್ನು ಹೇಗೆ ಕೆಳಗಿಳಿಸುವುದು? ಹಾಗೆ ಮಾಡುವುದಕ್ಕಿದು ಸಕಾಲ. ಪರಿಸ್ಥಿತಿ ಎಂಥ ಹಂತವನ್ನ ಮುಟ್ಟಿದೆ ಅಂದ್ರೆ, ಇದನ್ನೆಲ್ಲ ನೋಡೋ ಜನ ಹುಚ್ಚರಾಗಿ ಅವರನ್ನ ಗುಂಡಿಟ್ಟು ಕೊಲ್ತಾರೆ. ಇನ್ನೇನಾಗಕ್ಕೆ ಸಾಧ್ಯ?

ತಮ್ಮ ಸಂತಾನದಿಂದ ಮುಂದಿನ ಪೀಳಿಗೆಗಳು ಉಳಯುತ್ತೆ ಅನ್ನೋದು ಪ್ರಾಣಿಗಳಿಗೆ ಗೊತ್ತು, ಅದಕ್ಕೇ ಅವು ನಿಯಮಗಳನ್ನ ಪಾಲಿಸತ್ವೆ. ಮನುಷ್ಯನಿಗೆ ಮಾತ್ರ ಇದು ತಿಳಿದಿಲ್ಲ ಅಥವಾ ತಿಳಿಯೋ ಇಷ್ಟ ಇಲ್ಲ, ಅವನಿಗೆ ಗೊತ್ತಿರೋದು ಆದಷ್ಟೂ ಸುಖಪಡೀಬೇಕು ಅನ್ನೋದು ಮಾತ್ರ. ಹಾಗೆ ಮಾಡ್ತಾ ಇರೋದು ಯಾರು? ಸೃಷ್ಟಿಯ ಶಿಖರ ಅನ್ನಿಸಿಕೊಳ್ಳೋ ಮನುಷ್ಯ! ಬೆದೆ ಬಂದಾಗ ಮಾತ್ರ ಪ್ರಾಣಿಗಳು ಒಂದಾಗತ್ವೆ, ಆದರೆ ಪ್ರಕೃತಿಯ ಈ ಕೊಳಕು ಒಡೆಯ ಮಾತ್ರ ತನಗೆ ಬೇಕಾದಾಗೆಲ್ಲ ಅದನ್ನ ಪಡೆಯೋಕ್ಕೆ ಪ್ರಯತ್ನಿಸ್ತಾನೆ! ಇದು ಸಾಲದು ಅನ್ನೋ ಹಾಗೆ, ಅತ್ಯುನ್ನತ ಸೃಷ್ಟಿಯಾದ ಈ ಪಾಶವೀ ಜೀವಿ ಪ್ರೇಮದಲ್ಲಿ ಓಲಾಡ್ತಾನೆ. ಪ್ರೇಮದ ಹೆಸರಲ್ಲಿ, ಅಂದ್ರೆ ಈ ಕೊಳಕಿನ ನೆಪದಲ್ಲಿ, ಅವನು ನಾಶಮಾಡೋದು ಯಾವದನ್ನ? ಅರ್ಧ ಭಾಗದಷ್ಟು ಮನುಷ್ಯಸಂಕುಲವನ್ನೇ! ಸತ್ಯ ಮತ್ತು ಒಳ್ಳೆಯತನಗಳ ಕಡೆಗೆ ಸಾಗಲು ಅನುಕೂಲ ಮಾಡಿಕೊಡೋ ಹೆಣ್ಣುಗಳನ್ನ ತನ್ನ ಭೋಗದ ಕಾರಣಕ್ಕಾಗಿ ಸಂಗಾತಿಗಳಾಗೋ ಅಂತವರನ್ನ ಶತ್ರುಗಳನ್ನಾಗಿ ಮಾಡಿಬಿಡ್ತಾನೆ. ಮನುಷ್ಯನ ಪ್ರಗತಿಗೆ ತೊಡರುಗಾಲಾಗಿರೋದು ಯಾವುದು ಅಂತ ಈಗ ಗೊತ್ತಾಯ್ತಾ? ಅದೇ ಹೆಣ್ಣು, ಅವಳು ಹಾಗಿರೋದು ಯಾಕೆ? ಇದರಿಂದಲೇ. ಹೌದು, ಹೌದು" ಎಂದು ಅವನು ಅನೇಕ ಸಲ ಪುನರುಚ್ಚರಿಸಿದ. ಆನಂತರ ಎದ್ದು ಶತಪಥ ಹಾಕತೊಡಗಿ ಸಿಗರೇಟು ತೆಗೆದು ಕಡ್ಡಿ ಗೀರಿದ, ತನ್ನನ್ನು ತಾನು ಉಪಶಮನ ಮಾಡಿಕೊಳ್ಳಲೋಸುಗ.

## 12

ಆನಂತರ ಶುರುಮಾಡಿದ ತನ್ನ ಎಂದಿನ ದನಿಯಲ್ಲಿ, "ನಾನೂ ಇದೇ ರೀತೀಲಿ ಹಂದಿ ಥರ ಬದುಕಿದೆ. ಅದರಲ್ಲೂ ಅತ್ಯಂತ ಹೀನಾಯವಾದ್ದು ಅಂದ್ರೆ ಅಂಥ ಕ್ಷುದ್ರ ಬದುಕನ್ನೇ, ಆಮೇಲೆ ಬೇರೆ ಹೆಂಗಸರ ಹಿಂದೆ ಬೀಳದೇ ಇದ್ದದ್ದರಿಂದ, ನಾನು ಮಹಾ ಪ್ರಾಮಾಣಿಕವಾಗಿ ಬದುಕ್ತಿದ್ದೀನಿ ಅಂತ ಭಾವಿಸಿದೆ, ನಾನೊಬ್ಬ ನೀತಿವಂತ ಅಂದ್ಕೊಂಡೆ, ಕಳಂಕರಹಿತ ಅಂತ ತಿಳಿದೆ, ಏನಾದ್ರೂ ಜಗಳ ಆದ್ರೆ ಅದಕ್ಕೆಲ್ಲ ಅವಳೇ ಕಾರಣ ಅಂದ್ಕೊಂಡೆ, ಅವಳ ನಡವಳಿಕೆಯೇ ಮೂಲ ಅಂತ ತಿಳಿದೆ. ತಪ್ಪು ಅವಳದಲ್ಲ ಅನ್ನೋದು ಸ್ಪಷ್ಟವಾಗಿಯೇ ಇದೆ. ಅವಳು ಬೇರೆಯೋರ ಥರವೇ ಇದ್ದಳು, ಬಹುಪಾಲು ಹೆಂಗಸರ ಹಾಗೇ. ನಮ್ಮ ಸಮಾಜಕ್ಕೆ ರೂಢಿಯಾಗಿರೋ ರೀತೀಲೇ ಅವಳೂ ಬೆಳೆದಿದ್ದಳು, ಮೇಲುವರ್ಗದ ಎಲ್ಲ ಮನೇಲಿ ಬೆಳೆಸೋ ಹಾಗೇ ಅವಳನ್ನೂ ಬೆಳೆಸಿದ್ರು. ಹೆಂಗಸರಿಗೆ ಕೊಡಬೇಕಾದ ಹೊಸ ಬಗೆಯ ಶಿಕ್ಷಣದ ಬಗ್ಗೆ ಜನ ಮಾತಾಡ್ತಾರೆ. ಬರೀ ಮಾತುಗಳವು, ಪೊಳ್ಳು! ಆಗಬೇಕಾದ ನಿಜವಾದ ಶಿಕ್ಷಣ ಅಂದ್ರೆ ಹೆಂಗಸರ ಬಗ್ಗೆ ನಮ್ಮ ಮನಸ್ಸಿನಾಳದಲ್ಲಿರೋ ಮನೋಭಾವನೆಯ ಬಗ್ಗೆ. ಹೆಂಗಸರ ಶಿಕ್ಷಣ ಯಾವಾಗ್ಲೂ ಗಂಡಸರು ಹೆಂಗಸರ ಬಗ್ಗೆ ಇಟ್ಕೊಳ್ಳೋ ಮನೋಭಾವಕ್ಕೆ ಅನುಗುಣವಾಗಿರತ್ತೆ. ಗಂಡಸರು ಹೆಂಗಸರನ್ನು ಹೇಗೆ ಕಾಣ್ತಾರೆ ಅನ್ನೋದು ಎಲ್ಲರಿಗೂ ಗೊತ್ತು: ಹೆಂಡ,

ಹೆಣ್ಣು, ಹಾಡು ಒಂದೇ! ಕವಿಗಳು ಪದ್ಯಗಳಲ್ಲಿ ವರ್ಣಿಸ್ತಾರಲ್ಲ, ಹಾಗೆ. ಕಾವ್ಯ, ಚಿತ್ರ, ಶಿಲ್ಪ, ಪ್ರೇಮ ಕಾವ್ಯ, ನಗ್ನ ಚಿತ್ರಗಳಿಂದ ಆರಂಭವಾಗೋ ಯಾವುದನ್ನೇ ತಗೊಳ್ಳಿ, ಹೆಂಗಸು ಅಂದ್ರೆ ಒಂದು ಭೋಗದ ವಸ್ತು. ಔತಣಕೂಟಗಳಲ್ಲಿ, ಬಾಲ್‌ಗಳಲ್ಲಿ ಎಲ್ಲ ಕಡೆಯೂ. ಅವಳಿರೋದು ಭೋಗಕ್ಕಾದ್ದರಿಂದ ಹೆಣ್ಣು ಒಂದು ರುಚಿಕರವಾದ ತುತ್ತು! ಉಹ್ಞೂ, ಹಾಗಲ್ಲ, ವೀರರು ಮೊದಲು ಹೇಳೋದು ಹೆಣ್ಣು ಪೂಜ್ಯಳು ಅಂತ, ಆದ್ರೂ ನೋಡೋದು ಭೋಗದ ವಸ್ತುವಿನ ಥರ. ಹೀಗೆ ಮಾಡಿಯೂ ಗಂಡಸರು ತಾವು ಹೆಂಗಸರನ್ನು ಗೌರವಿಸ್ತೀವಿ ಅಂದ್ಕೋತಾರೆ. ಕೆಲವರು ತಮ್ಮ ಜಾಗವನ್ನು ಅವಳಿಗೆ ಬಿಟ್ಟುಕೊಡ್ತಾರೆ, ಬಿದ್ದ ಅವಳ ಕರವಸ್ತ್ರವನ್ನು ಎತ್ತಿಕೊಡ್ತಾರೆ, ಅವಳಿಗೆ ಯಾವ ಸ್ಥಾನವನ್ನು ಅಲಂಕರಿಸಲೂ, ಸರ್ಕಾರದಲ್ಲಿ ಸ್ಥಾನ ಪಡೆಯೋದಕ್ಕೂ ಅರ್ಹತೆ ಇದೆ ಮುಂತಾಗಿ ಹೇಳ್ತಾರೆ.

ಅವರು ಇಷ್ಟೆಲ್ಲ ಮಾಡಿದರೂ ಹೆಣ್ಣಿನ ಬಗ್ಗೆ ಅವರಿಗಿರೋ ಮನೋಭಾವ ಬದಲಾಗಿಲ್ಲ. ಅವಳು ಒಂದು ಭೋಗವಸ್ತು. ಅವಳ ದೇಹ ಸುಖ ಕೊಡುವ ಒಂದು ಸಾಧನ; ಗುಲಾಮ ಪದ್ಧತಿಯಲ್ಲಿರುವಂತೆಯೇ ಇದೂ. ಗುಲಾಮಗಿರಿ ಅಂದ್ರೆ ಗೊತ್ತಲ್ಲ: ಒಬ್ಬರಿಂದ ಇಷ್ಟವಿಲ್ಲದಿರೋ ಕೆಲಸವನ್ನು ಬೇರೊಬ್ಬರು ಮಾಡಿಸಿಕೊಳ್ಳೋದು. ಹೀಗಾಗಿ ಈ ಗುಲಾಮಗಿರಿಯಿಂದ ಪಾರಾಗೋಕೆ ಜನರು ಮಾಡಬೇಕಾದ್ದೆಂದರೆ ಇತರರಿಂದ ಬಲವಂತದ ಕೆಲಸ ಮಾಡಿಸಿಕೊಳ್ಳೋದನ್ನ ಇಷ್ಟಪಡದಿರೋದು, ಅದನ್ನೊಂದು ಪಾಪ, ಅವಮಾನಕರ ಅಂತ ಭಾವಿಸೋದು. ಆದರೆ ಪ್ರಭುಗಳು ಏನು ಮಾಡ್ತಾರೆ ಅಂದ್ರೆ ಅದರ ಹೊರರೂಪವನ್ನು ಮಾತ್ರ ನಿಷೇಧಿಸಿ ಯಾರನ್ನೂ ಗುಲಾಮರನ್ನಾಗಿ ಕೊಳ್ಳೋದಕ್ಕೂ ಮಾರೋದಕ್ಕೂ ಅವಕಾಶವಿಲ್ಲದಿರೋ ಹಾಗೆ ಮಾಡ್ತಾರೆ, ಇದರಿಂದ ಗುಲಾಮಗಿರಿ ಕಣ್ಮರೆಯಾಯ್ತು ಅಂತ ಅಂದ್ಕೋತಾರೆ; ಆದ್ದರಿಂದ ಅದನ್ನು ಇದೆ ಅಂತ ಒಪ್ಪಿಕೊಳ್ಳೋದಿಲ್ಲ, ಇರೋದನ್ನ ಕಾಣೋದಿಲ್ಲ, ಯಾಕಂದ್ರೆ ಕೆಲಸಗಾರರನ್ನ ಶೋಷಿಸೋದಕ್ಕೆ ಅದು ಒಳ್ಳೇ ದಾರಿ, ಹಾಗೆ ಮಾಡೋದು ಸರಿ ಅಂತ ಭಾವಿಸ್ತಾರಲ್ಲ, ಅದಕ್ಕೆ. ಎಲ್ಲ ಕಾಲದಲ್ಲೂ ಇತರರಿಗಿಂತ ಹೆಚ್ಚು ಬಲಿಷ್ಠರೂ ಚಾಣಾಕ್ಷರೂ ಆದ ಜನ ಒಳ್ಳೇದು ಅಂತ ಅದನ್ನ ಅನುಸರಿಸ್ಕೊಂಡು ಬರ್ತಾ ಇರ್ತಾರೆ. ಸ್ತ್ರೀವಿಮೋಚನೆಯ ಪ್ರಶ್ನೆಯೂ ಇದೇ ರೀತಿನೇ: ಸ್ತ್ರೀಯರ ದಾಸ್ಯಕ್ಕೆ ಕಾರಣ ಸರಳವಾಗಿ ಹೇಳ್ಬೇಕೂಂದ್ರೆ ಜನಗಳು ತಮ್ಮ ಸುಖಕ್ಕೆ ಅವಳೊಬ್ಬ ಸಾಧನವಾಗಿ ಬಳಸಿಕೊಳ್ಳೋ ಸಾಧ್ಯತೆಯನ್ನ ಇಷ್ಟಪಡೋದು ಮತ್ತು ಅದನ್ನ ಒಳ್ಳೇದು ಅಂತ ಭಾವಿಸೋದು. ಇಷ್ಟಾದ್ರೂ ಜನ ಸ್ತ್ರೀವಿಮೋಚನೆ ಮಾಡ್ತಾರೆ, ಗಂಡಸಿಗೆ ಸಮಾನವಾದ ಹಕ್ಕನ್ನ ದಯಪಾಲಿಸ್ತಾರೆ, ಆದ್ರೂ ಅವಳನ್ನ ಭೋಗದ ಸಾಧನ ಅಂತಲೇ ಪರಿಗಣಿಸ್ತಾರೆ, ಅದಕ್ಕನುಗುಣವಾಗಿ ಅವಳಿಗೆ ಶಿಕ್ಷಣ ಕೊಡ್ತಾರೆ, ಆಮೇಲೆ ಜನಾಭಿಪ್ರಾಯವೂ ಅದೇ ಆಗಿರತ್ತೆ. ಹೀಗಾಗಿ ಅವಳು ಅವಳೆಲ್ಲಿದ್ದಳೋ ಅಲ್ಲೇ ಇದಾಳೆ, ಅದೇ ದಾಸ್ಯದ ಸಂಕೋಲೇಲಿ, ಅದೇ ಅವಮಾನವನ್ನು ಅನುಭವಿಸ್ತಾ, ಗಂಡಸು ಇನ್ನೂ ಅವಳ ಕ್ಷುಲ್ಲಕ ಒಡೆಯನೇ ಆಗಿ ಮುಂದುವರಿದಿದಾನೆ.

ಜನ ಸ್ತ್ರೀವಿಮೋಚನೆ ಮಾಡೋದು ವಿಶ್ವವಿದ್ಯಾನಿಲಯಗಳಲ್ಲಿ, ನ್ಯಾಯಾಲಯಗಳಲ್ಲಿ, ಆದರೆ ಸಮಾಜದ ಒಳಗೆ ಮಾತ್ರ ಅವಳಿನ್ನೂ ಭೋಗಸಾಧನವೇ. ತಾನು ಅದಕ್ಕಾಗಿಯೇ ಹುಟ್ಟಿದವಳು ಅಂತ ಅವಳಿಗೆ ಹೇಳಿ ಹೇಳಿ ಅವಳು ಎರಡನೇ ದರ್ಜೆಯವಳಾಗಿಯೇ ಮುಂದುವರಿದಿದ್ದಾಳೆ. ಇಲ್ಲ ಅವಳು ವೈದ್ಯರು ಅನ್ನಿಸ್ಕೊಳ್ಳೋ ಮೂರ್ಖರ ಸಹಾಯದಿಂದ ಬಸಿರಾಗೋದನ್ನ ತಡೆಗಟ್ಟಿಕೊಳ್ತಾಳೆ? ಅಂದ್ರೆ ಸೂಳೆಯಾಗಿ ಮಾರ್ಪಡ್ತಾಳೆ, ತನ್ನನ್ನ ತಾನು ಪ್ರಾಣಿಯ ಮಟ್ಟಕ್ಕಲ್ಲ, ವಸ್ತುವಿನ ಮಟ್ಟಕ್ಕೆ ಇಳಿಸ್ಕೋತಾಳೆ; ಇಲ್ಲ, ಬಹುತೇಕ ಹೆಂಗಸರು ಇರೋ ಹಾಗೆ ಮಾನಸಿಕವಾಗಿ ಅಸ್ವಸ್ಥಳಾಗಿ, ಸನ್ನಿ ಬಡಿದವಳಾಗಿ, ಅಸುಖಿಯಾಗಿ ಆತ್ಮಿಕ ಬೆಳವಣಿಗೆಗೆ ಅವಕಾಶವಿಲ್ಲದೆ ಬೆಳೀತಾಳೆ. ಶಾಲೆಗಳಾಗಲೀ ವಿಶ್ವವಿದ್ಯಾನಿಲಯಗಳಾಗಲೀ ಅದನ್ನ ಹೋಗಲಾಡಿಸೋಕ್ಕಾಗಲ್ಲ. ಅದು ಬದಲಾಗಬೇಕಾದ್ರೆ ಹೆಣ್ಣಿನ ಬಗೆಗಿನ ಗಂಡಸರ ಮನೋಭಾವವೇ ಬದಲಾಗ್ಬೇಕು, ಹೆಣ್ಣು ತನ್ನತನವನ್ನ ಅರಿತುಕೋಬೇಕು, ಅದು ಬದಲಾಗಬೇಕಾದ್ರೆ ಕನ್ಯತ್ವವನ್ನು ಅತ್ಯಂತ ಮುಖ್ಯವೆಂದು ಅವಳು ಭಾವಿಸುವಂತಾಗ್ಬೇಕು, ಈಗಿರೋ ಹಾಗೆ ಅದನ್ನ ಅವಮಾನ ಅಂತಲೋ ನಾಚಿಕೆಗೇಡು ಅಂತಲೋ ಭಾವಿಸಬಾರದು. ಹಾಗಲ್ಲದಿದ್ರೆ, ಹೆಣ್ಣಿನ ವಿದ್ಯೆಯ ಮಟ್ಟ ಎಂಥದೇ ಆಗಿರಲಿ, ಅವಳ ಆದರ್ಶ ಅಂದ್ರೆ ತನ್ನ ಆಯ್ಕೆಯ ಅವಕಾಶಕ್ಕೋಸ್ಕರ ಆದಷ್ಟೂ ಗಂಡಸರನ್ನ ಆಕರ್ಷಿಸೋದೇ ಆಗಿ ಮುಂದುವರಿಯುತ್ತೆ. ಕೆಲವರಿಗೆ ಹೆಚ್ಚಿನ ಗಣಿತ ಗೊತ್ತಿರೋದಾಗಲೀ, ಇನ್ನು ಕೆಲವರಿಗೆ ವೀಣೆ ನುಡಿಸೋಕ್ಕೆ ಬರತ್ತೆ ಅನ್ನೋದಾಗಲೀ ಗಣನೆಗೆ ಬರಲ್ಲ. ಹೆಣ್ಣಿಗೆ ಸುಖ ಸಿಕ್ಕೋದು, ಅವಳ ಆದರ್ಶ ನೆರವೇರೋದು ಅವಳು ಗಂಡಸನ್ನ ಬಲೇಲಿ ಬೀಳಿಸ್ಕೊಂಡಾಗ. ಹೀಗಾಗಿ ಹೆಣ್ಣಿನ ಮುಖ್ಯ ಗುರಿ ಗಂಡಸನ್ನ ಆಕರ್ಷಿಸೋದು. ಹಿಂದೆಯೂ ಇದು ಹೀಗೇ ಇತ್ತು, ಮುಂದೂ ಹೀಗೇ ಇರತ್ತೆ; ಅವಳ ಬಾಲ್ಯದಲ್ಲಿಯೂ ಇದು ಇರತ್ತೆ, ಮದುವೆಯಾದ ಮೇಲೂ ಮುಂದುವರಿಯುತ್ತೆ. ಕನ್ಯೆಯಾದ್ರೆ ಆಯ್ಕೆಯ ಕಾರಣಕ್ಕಾಗಿ ಇದು ಅವಶ್ಯಕವಾದ್ರೆ, ಮದುವೆಯಾದವಳಿಗೆ ತನ್ನ ಗಂಡನ ಮೇಲೆ ಹಿಡಿತ ಸಾಧಿಸೋಕ್ಕೆ. ಇದನ್ನ ತಡೆಗಟ್ಟೋದು ಅಥವಾ ಒಂದಷ್ಟು ಕಾಲ ಅಡಗಿಕೊಂಡಿರೋ ಹಾಗೆ ಮಾಡೋದು ಅಂದ್ರೆ ಮಕ್ಕಳು, ಆಮೇಲಷ್ಟೇ, ಅದರಲ್ಲೂ ತಾಯಿಯಾದೋಳು ರಕ್ಕಸಿಯಾಗಿರದಿದ್ರೆ, ಅಂದ್ರೆ ತಾನೇ ಮಕ್ಕಳನ್ನ ನೋಡಿಕೊಳ್ಳೋಳಾದ್ರೆ. ಆದ್ರೆ ಇಲ್ಲೂ ವೈದ್ಯರು ಪ್ರವೇಶ ಮಾಡ್ತಾರೆ. ತನ್ನ ಮಕ್ಕಳನ್ನ ಬೆಳೆಸಬೇಕೂಂತ ಇದ್ದ ನನ್ನ ಹೆಂಡತಿ ಆಮೇಲಿನ ತನ್ನ ನಾಲ್ಕು ಮಕ್ಕಳನ್ನ ಬೆಳೆಸ್ದೋಳು, ಮೊದಲ ಮಗುವಿನ ನಂತರ ಕಾಯಿಲೆ ಬಿದ್ದಳು. ಆದರೆ ಆ ವೈದ್ಯರುಗಳು ಅವಳನ್ನ ಬೆತ್ತಲುಗೊಳಿಸಿ ಎಲ್ಲ ಕಡೆ ಮುಟ್ಟಿನೋಡಿ? ಅದಕ್ಕಾಗಿ ನಾನವರಿಗೆ ಕೃತಜ್ಞನಾಗಿದ್ದು ದುಡ್ಡು ಬೇರೆ ಕೊಡಬೇಕಾಯ್ತು? ಹೇಳಿದ್ದೇನೂಂದ್ರೆ ಅವಳು ಮಕ್ಕಳನ್ನ ತಾನು ನೋಡಿಕೋಬಾರ್ದು ಅಂತ.; ಇದರಿಂದಾಗಿ ಚೆಲ್ಲಾಟದಿಂದ ದೂರ ಇರೋ ಹಾಗೆ ಮಾಡಬಹುದಾಗಿದ್ದದ್ದರಿಂದ ಮೊಟ್ಟ ಮೊದಲ ಬಾರಿಗೆ ಅವಳು ವಂಚಿತಳಾಗಬೇಕಾಯ್ತು. ಇನ್ನೇನ್ಮಾಡೋದು, ನಾವು ಒಬ್ಬ ದಾದಿಯನ್ನ ಗೊತ್ತುಮಾಡಿಕೊಂಡ್ವಿ, ಅಂದ್ರೆ ಒಬ್ಬ

ಹೆಂಗಸಿನ ಬಡತನ-ಅಜ್ಞಾನಗಳನ್ನ ದುರುಪಯೋಗಪಡಿಸಿಕೊಂಡ್ವಿ, ತನ್ನ ಮಗುವಿನಿಂದಲೇ ಅವಳು ದೂರ ಆಗೋ ಹಾಗೆ ಮಾಡಿದ್ವಿ, ಅದರ ಬದಲು ನಾವು ಕೊಟ್ಟದ್ದು ಕಸೂತಿ ಮಾಡಿದ್ದ ಒಂದು ಚೆನ್ನಾಗಿರೋ ತಲೆಯುಡುಗೆ! ಆದರೆ ನಾನು ಹೇಳಬೇಕಾದ ಅಂಶ ಅದಲ್ಲ. ಅದು ಅಂದ್ರೆ, ನನ್ನ ಹೆಂಡತಿ ಬಸಿರು-ಬಾಣಂತನಗಳಿಂದ ಮುಕ್ತಳಾಗಿರೋ ಅವಧಿಯಲ್ಲಿ ಅವಳಲ್ಲಿ ಸುಪ್ತವಾಗಿದ್ದ ಹೆಣ್ಣುಬಿನ್ನಾಣ ಜೋರಾಗಿ ಹೊಗಬಿತ್ತು. ಇದರ ಜೊತೆ ಕಾಕತಾಳೀಯವಾಗಿ ನನ್ನಲ್ಲಿನ ಅಸೂಯೆ ಹೆಚ್ಚಾಯ್ತು. ಇದಂತೂ ವೈವಾಹಿಕ ಜೀವನ ಪೂರ್ತಿ ನನ್ನ ಕಾಡಿಸ್ತು. ತಮ್ಮ ಹೆಂಡಂದಿರ ಜೊತೆ ಇರೋ ಎಲ್ಲ ಗಂಡಂದಿರನ್ನೂ ಇದು ಕಾಡಿಸದೆ ಬಿಡಲ್ಲ, ಅಂದ್ರೆ ನಾನೂ ನನ್ನ ಹೆಂಡತಿ ಜೊತೆ ನೀತಿಬಾಹಿರವಾಗಿ ವಾಸಮಾಡ್ತಿದ್ದೆ."

## 13

"ನನ್ನ ವೈವಾಹಿಕ ಜೀವನ ಪೂರ್ತಿ ನಾನು ಮತ್ಸರದಿಂದ ಮುಕ್ತನಾಗಲೇ ಇಲ್ಲ, ಆದರೆ ಕೆಲವು ಸಮಯಗಳಲ್ಲಂತೂ ಅದು ಭಾರಿ ಘಾಸಿಗೊಳಿಸ್ತು. ಇಂತಹ ದಿನಗಳಲ್ಲಿ ಒಮ್ಮೆ, ನಮ್ಮ ಮೊದಲ ಮಗು ಹುಟ್ಟಿದ ನಂತರ, ನನ್ನ ಹೆಂಡತಿ ಮಗುವನ್ನು ನೋಡಿಕೊಳ್ಳುವುದನ್ನು ನಿಷೇಧಿಸಿದರು. ಆ ಹೊತ್ತು ವಿಶೇಷವಾಗಿ ನಾನು ಮಹಾಮತ್ಸರದಿಂದ ಕೂಡಿದ್ದೆ. ಯಾಕಂದರೆ ನನ್ನ ಹೆಂಡತಿ ತಾಯಿಗೆ ಸಹಜವಾದ ತಳಮಳದಿಂದ ಕೂಡಿದ್ದಳು? ಬದುಕಿನ ಸಹಜ ಓಘವನ್ನು ಅನವಶ್ಯಕವಾಗಿ ತಡೆಗಟ್ಟಿದಾಗ ಹೀಗಾಗುವುದು ಸಾಮಾನ್ಯ, ಅಲ್ಲದೆ ಅವಳು ತನ್ನ ತಾಯ್ತನದ ಕರ್ತವ್ಯವನ್ನು ಹೇಗೆ ಬಿಟ್ಟಿದ್ದಳು ಅನ್ನುವುದರಿಂದಾಗಿ? ಸಾಕಷ್ಟು ಆರೋಗ್ಯದಿಂದ ಕೂಡಿದ್ದರೂ ವೈದ್ಯರ ಅಮೂಲ್ಯ ಸಲಹೆಯ ಹೊರತಾಗಿಯೂ ಮುಂದಿನ ತನ್ನ ಮಕ್ಕಳ ಹೊಣೆಗಾರಿಕೆ ಯನ್ನವಳು ಹೊರಬಹುದಾದ ಸಾಧ್ಯತೆಯಿಂದಾಗಿ ಅವಳು ಹೆಂಡತಿಯಾಗಿ ನಿರ್ವಹಿಸ ಬೇಕಾದ ತನ್ನ ಕರ್ತವ್ಯದ ಬಗ್ಗೆಯೂ ಸುಲಭವಾಗಿ ಅಸಡ್ಡೆಯನ್ನು ತಾಳಬಹುದು ಎಂಬ ಅಪ್ರಜ್ಞಾಪೂರ್ವಕ ಭಾವನೆ ನನ್ನಲ್ಲಿ ಸರಿಯಾಗಿಯೇ ಮೂಡಿತು.

"ನಿಮಗೆ ವೈದ್ಯರ ಬಗ್ಗೆ ಗೌರವ ಭಾವನೆ ಇದ್ದಂತಿಲ್ಲ," ವೈದ್ಯರ ಪ್ರಸ್ತಾಪ ಬಂದಾಗಲೆಲ್ಲ ಅವನ ಧಾಟಿಯಲ್ಲಿ ವಿಚಿತ್ರವಾದೊಂದು ಕುಟುಕು ಇರುತ್ತಿದ್ದುದನ್ನು ಕಂಡು ನಾನು ಕೇಳಿದೆ.

"ಅದು ಗೌರವ ಅಗೌರವದ ಪ್ರಶ್ನೆಯಲ್ಲ. ಸಾವಿರಾರು ಜನರ ಬದುಕನ್ನು ಹಾಳುಮಾಡಿರುವ, ಈಗಲೂ ಹಾಳುಮಾಡುತ್ತಿರುವ ಅವರು ನನ್ನ ಬದುಕನ್ನೂ ನಾಶಮಾಡಿದರು; ಇದರಿಂದಾಗಿ ಅದರ ಹಿಂದಿನ ಕಾರಣವನ್ನು ಪ್ರಸ್ತಾಪ ಮಾಡದೆ ಹೇಗಿರಲಿ? ವಕೀಲರು ಹಾಗೂ ಇತರರ ಹಾಗೆಯೇ ಅವರಿಗೆ ಹಣದ ಆಸೆ. ನಮ್ಮ ಸಾಂಸಾರಿಕ ಬದುಕಿನಲ್ಲವರು ಮಧ್ಯಪ್ರವೇಶ ಮಾಡದಿದ್ದರೆ, ನಮ್ಮ ಬಳಿ ಬರದಿದ್ದರೆ ಸಾಕು, ನಾನವರಿಗೆ ನನ್ನ ಆಸ್ತಿಯ ಅರ್ಧ ಭಾಗವನ್ನಾದರೂ ಕೊಟ್ಟೇನು, ಅವರ

ಚಾಳಿಯನ್ನರಿತ ಇತರರೂ ನನ್ನ ಹಾಗೆಯೇ ಮಾಡಿಯಾರು. ನನ್ನ ಬಳಿ ಸಾಕ್ಷ್ಯಾಧಾರಗಳೇನೂ ಇಲ್ಲ, ಆದರೂ ಅವರು ಹೆರಿಗೆ ಸಲೀಸಾಗಿ ಆಗಲಾರದು ಎಂಬ ಕಾರಣಕ್ಕಾಗಿ. ಮುಂದೆ ಆ ಹೆಣ್ಣುಮಕ್ಕಳು ಸಾಕಷ್ಟು ಮಕ್ಕಳನ್ನು ತೊಂದರೆಯಿಲ್ಲದೆ ಹೆತ್ತ ಪ್ರಸಂಗಗಳಿದ್ದರೂ - ಗರ್ಭದಲ್ಲಿಯೇ ಮಕ್ಕಳನ್ನು ಕೊಂದಿರುವ ಹಾಗೂ ಯಾವುದೋ ಶಸ್ತ್ರಚಿಕಿತ್ಸೆಯ ನೆವದಿಂದ ತಾಯಿಜೀವವನ್ನೇ ತೆಗೆದಿರುವ ಹತ್ತಾರು ಘಟನೆಗಳನ್ನು ನಾನು ಉದಾಹರಿಸಬಲ್ಲೆ (ಅಂತವು ಅಸಂಖ್ಯಾತ). ಇಂತಹ ಕೊಲೆಗಳ ಬಗ್ಗೆ ಯಾರಿಗೂ ಲಕ್ಷ್ಯವಿಲ್ಲ, ಯಾಕಂದರೆ ಅದನ್ನು ಮಾಡಿರುವುದು ಜನಹಿತಕ್ಕಾಗಿ ಎಂಬ ಭಾವನೆ. ವೈದ್ಯರು ಮಾಡುವ ಅಪರಾಧಗಳಿಗೆ ಕೊನೆಯೇ ಇಲ್ಲ. ಆದರೆ ಅವರು ಜನರಲ್ಲಿ, ಅದರಲ್ಲಿಯೂ ಹೆಂಗಸರ ಮೂಲಕ ಬಿತ್ತುವ ನೈತಿಕ ಭ್ರಷ್ಟಾಚಾರಕ್ಕೆ ಹೋಲಿಸಿದರೆ ಅದು ಏನೇನೂ ಅಲ್ಲ. ಅವರ ಸೂಚನೆಯಂತೆ ನಡೆದುಕೊಂಡರೆ, ಎಲ್ಲೆಡೆಯೂ ಎಲ್ಲದರಲ್ಲಿಯೂ ಇರುವ ಸಾಂಕ್ರಾಮಿಕತೆಯಿಂದಾಗಿ ಜನ ಪ್ರಗತಿಯನ್ನು ಸಾಧಿಸದೆ ವಿಘಟನೆಯ ಕಡೆ ಸಾಗುತ್ತಾರೆ ಎಂಬ ಅಂಶದ ಮೇಲೆ ನಾನು ಹೆಚ್ಚು ಒತ್ತು ಕೊಡುವುದಿಲ್ಲ; ಯಾಕಂದರೆ, ಅವರ ಉಪದೇಶದ ಪ್ರಕಾರ, ನಾವೆಲ್ಲ ಬೇರೆ ಬೇರೆಯಾಗಿರಬೇಕು, ನಮ್ಮ ಬಾಯಿಗಳಿಂದ ಕಾರ್ಬಾನಿಕ್ ಆಟಮೈಸರ್‌ಗಳನ್ನು ತೆಗೆಯಬಾರದು (ಅದೂ ಉಪಯೋಗವಿಲ್ಲವೆಂದು ಈಚೆಗೆ ಅವರೇ ಹೇಳುತ್ತಿದ್ದಾರೆ). ಅದನ್ನೂ ಗಮನಿಸಬೇಕಾದ್ದಿಲ್ಲ. ಘೋರವಾದ ವಿಷ ಅಂದ್ರೆ ಅವರು ಜಗತ್ತನ್ನು, ಅದರಲ್ಲೂ ಹೆಂಗಸರನ್ನು, ನೀತಿಭ್ರಷ್ಟರಾಗಿ ಮಾಡುತ್ತಿರುವುದು. ಇವತ್ತು ಯಾರೂ 'ನೀನು ಸರಿಯಾದ ರೀತೀಲಿ ಬದುಕ್ತಿಲ್ಲ, ಚೆನ್ನಾಗಿ ಬದುಕು, ನಿಮ್ಮ ಬದುಕು ಕೆಟ್ಟದಾಗಿದ್ರೆ, ಅದಕ್ಕೆ ಕಾರಣ ನಿಮ್ಮ ನರಗಳು ಸರಿಯಾಗಿ ಕಾರ್ಯ ನಿರ್ವಹಿಸದೇ ಇರೋದು' ಇತ್ಯಾದಿಯಾಗಿ ಯಾರೂ ಬೇರೆಯೋರಿಗೂ ಹೇಳೋ ಹಾಗಿಲ್ಲ, ತನಗೆ ತಾನೆ ಕೂಡ ಹೇಳಿಕೊಳ್ಳೋ ಹಾಗಿಲ್ಲ. ನೀವು ಅವರ ಹತ್ರ ಹೋಗ್ಬೇಕು, ಅವರು ದುಬಾರಿಯಾದ್ದೊಂದು ಔಷಧ ಬರಕೊಡ್ತಾರೆ, ಅದನ್ನ ನೀವು ತಗೋಬೇಕು. ಇದರಿಂದೇನಾಗತ್ತೆ; ನಿಮ್ಮ ಪರಿಸ್ಥಿತಿ ಮತ್ತಷ್ಟು ಹದಗೆಡತ್ತೆ. ಮತ್ತೆ ವೈದ್ಯರ ಹತ್ರ ಹೋಗೋದು, ಅವರು ಇನ್ನಷ್ಟು ಔಷಧ ಬರಕೊಡೋದು. ಒಳ್ಳೇ ಉಪಾಯ! ಆದರೆ ಅದೂ ನನ್ನ ಮುಖ್ಯವಾದ ವಾದ ಅಲ್ಲ. ನಾನು ಹೇಳ್ಬೇಕೋಂತಿರೋದು ಅಂದ್ರೆ - ನನ್ನ ಹೆಂಡತಿ ಮಗುವನ್ನು ಸೊಗಸಾಗಿ ನೋಡಿಕೊಂಡಳು, ಅವಳ ಬಸಿರು-ಬಾಣಂತನಗಳು ನನ್ನನ್ನ ಮತ್ಸರ ಅನ್ನೋ ವ್ಯಾಧಿಯಿಂದ ಪಾರುಮಾಡಿದ್ದು? ಅನ್ನೋದು. ಅದಕ್ಕಲ್ಲದಿದ್ರೆ ಇವೆಲ್ಲ ಮುಂಚೇನೇ ಆಗಿಬಿಡೋದು. ಅವಳೂ ಮಕ್ಕಳೂ ನನ್ನ ಕಾಪಾಡಿದ್ರು. ಎಂಟು ವರ್ಷಗಳಲ್ಲಿ ಅವಳು ಐದು ಮಕ್ಕಳನ್ನ ಹೆತ್ತಳು, ಎಲ್ಲವನ್ನೂ ನೋಡಿಕೊಂಡಳು, ಆದರೆ ತನ್ನ ತಾನು ನೋಡಿಕೊಳ್ಳಲಿಲ್ಲ."

"ಹಾಗಾದ್ರೆ, ನಿಮ್ಮ ಮಕ್ಕಳೆಲ್ಲ ಎಲ್ಲಿ?" ಅಂತ ಕೇಳಿದೆ ನಾನು.

"ಮಕ್ಕಳಾ?" ಅಂದ ಅವನು ಭಯಗ್ರಸ್ತನ ಹಾಗೆ.

"ದಯವಿಟ್ಟು ಕ್ಷಮಿಸಿ, ಅದನ್ನ ಜ್ಞಾಪಿಸೋದ್ರಿಂದ ನಿಮಗೇ ಹೆಚ್ಚು ನೋವಾಗೋ ಹಾಗೆ ಕಾಣತ್ತೆ."

"ಪರವಾಯಿಲ್ಲ, ಬಿಡಿ. ನನ್ನ ಹೆಂಡತಿ ತಂಗಿ ಅಣ್ಣಂದಿರು ಅವುಗಳನ್ನ ನೋಡ್ಕೋತಿದಾರೆ. ಮಕ್ಕಳು ನನ್ನ ಹತ್ರ ಇರೋಕೆ ಅವರು ಬಿಡಲಿಲ್ಲ. ನನ್ನ ಆಸ್ತೀನೇ ಅವರಿಗೆ ಬಿಟ್ಕೊಟ್ಟೆ, ಅವರು ಮಾತ್ರ ಮಕ್ಕಳನ್ನ ಕೊಡಕ್ಕೆ ಒಪ್ಪಲಿಲ್ಲ. ನಿಮಗೇ ಗೊತ್ತಲ್ಲ, ನಾನೊಂಥರ ಹುಚ್ಚ. ಅವರನ್ನೆಲ್ಲ ಬಿಟ್ಟು ನಾನೀಗ ಹೊರಟುಹೋಗ್ತಿದ್ದೀನಿ. ಅವರನ್ನ ಹೋಗಿ ನೋಡೇನೋ ನೋಡಿದೆ, ಆದ್ರೆ ಬೆಳೆದ ಮೇಲೆ ಅವು ತಮ್ಮ ತಾಯಿತಂದೆಯರ ಹಾಗೆ ಎಲ್ಲಿ ಆಗಿಬಿಡತ್ವೋ ಅನ್ನೋ ಹೆದರಿಕೆ ಅವರಿಗೆ, ಅವು ತಮ್ಮ ಹಾಗಿರಬೇಕು ಅನ್ನೋದು ಅವರ ಆಸೆ. ಮಾಡೋದೇನು? ನನ್ನ ಮೇಲೆ ಅವರಿಗೆ ನಂಬಿಕೆ ಇಲ್ಲ, ಅಲ್ಲದೆ ಅವುಗಳನ್ನ ಬೆಳೆಸೋದಕ್ಕೆ ನನಗೆ ಸಾಧ್ಯವೇ ಅನ್ನೋದು ನಂಗೇ ಗೊತ್ತಿಲ್ಲ. ಪ್ರಾಯಶಃ ಸಾಧ್ಯವಿಲ್ಲ. ಯಾಕಂದ್ರೆ ನಾನೊಬ್ಬ ವ್ಯರ್ಥಜೀವಿ, ಊನಗೊಂಡವನು. ಆದ್ರೆ ನನಗೆ ಒಂದು ಗೊತ್ತಿದೆ, ಹೌದು ಬೇರೆಯೋರಿಗೆ ಗೊತ್ತಿಲ್ಲದಿರೋ ಒಂದು. ನನ್ನ ಮಕ್ಕಳೂ ತಮ್ಮ ಸುತ್ತುಮುತ್ತಲೂ ಇರೋ ಅನಾಗರಿಕರ ಥರವೇ ಬೆಳೀತಿದಾರೆ. ನಾನವರನ್ನ ನೋಡಿದೆ, ಮೂರು ಸಲ. ನಾನು ಅವರಿಗೆ ಏನೂ ಮಾಡಲಾರೆ, ಉಹ್ಞೂ ಏನೂ ಇಲ್ಲ. ಈಗ ನಾನು ದಕ್ಷಿಣದಲ್ಲಿರೋ ನಮ್ಮೂರಿಗೆ ಹೋಗ್ತಾ ಇದ್ದೀನಿ. ಅಲ್ಲೊಂದು ಸಣ್ಣ ಮನೆ ಹಾಗೂ ಒಂದು ತೋಟ ಇದೆ. ನನಗೆ ಗೊತ್ತಿರೋದು ಜನಕ್ಕೆ ಅರ್ಥವಾಗಕ್ಕೆ ಇನ್ನೂ ಬಹಳ ಕಾಲ ಬೇಕು. ಸೂರ್ಯನಲ್ಲಿ ನಕ್ಷತ್ರಗಳಲ್ಲಿ ಕಬ್ಬಿಣ ಮತ್ತಿತರ ಲೋಹಗಳು ಎಷ್ಟಿವೆ ಅನ್ನೋದನ್ನಾದ್ರೂ ತಿಳಿಕೋಬಹುದು, ಆದ್ರೆ ನಮ್ಮ ಪಶುತನವನ್ನು ತಿಳಿದುಕೊಳ್ಳೋದು ಕಷ್ಟ, ತುಂಬ ಕಷ್ಟ. ನೀವಾದ್ರೆ ನನ್ನ ಕತೇನಾದ್ರೂ ಕೇಳ್ತಿದ್ದೀರಿ, ಅದಕ್ಕೆ ನಾನು ಕೃತಜ್ಞ."

## 14

"ನೀವು ನನ್ನ ಮಕ್ಕಳ ಬಗ್ಗೆ ವಿಚಾರಿಸಿದ್ರಿ. ಇಲ್ಲೂ ಹಾಗೇ, ಮಕ್ಕಳ ಬಗ್ಗೆ ಏನೆಲ್ಲ ಭಯಂಕರ ಕತೆಗಳನ್ನ ಕಟ್ತಾರೆ ಜನ. ಮಕ್ಕಳು ಅಂದ್ರೆ ದೇವರು ಕೊಟ್ಟ ವರ ಅಂತಾರೆ, ಆನಂದದ ನೆಲೆ ಅಂತಾರೆ! ಇವೆಲ್ಲ ಒಂದು ಕಾಲದಲ್ಲಿದ್ದದ್ದು, ಈಗ ಖಂಡಿತ ಹಾಗಿಲ್ಲ, ಮಕ್ಕಳು ಅಂದರೆ ಪೀಡೆಗಳು, ಬೇರೇನೂ ಅಲ್ಲ. ಇದು ಅನೇಕ ತಾಯಂದಿರ ಅನುಭವ ಕೂಡ, ಕೆಲವು ಸಲ ತಮಗೇ ಅರಿವಿಲ್ಲದೆ ಹಾಗೆ ಹೇಳ್ತಾರೆ ಕೂಡ. ಆಸ್ತಿವಂತರ ಮನೆಗಳ ತಾಯಂದಿರನ್ನು ಕೇಳಿ, ಅವರಿಗೆಲ್ಲಿ ಕಾಯಿಲೆಯಾಗ್ಬಿಡತ್ತೋ, ಎಲ್ಲಿ ಸತ್ತು ಹೋಗಿಬಿಡ್ತಾರೋ ಅನ್ನೋ ಭಯದಿಂದ ಅವರಿಗೆ ಮಕ್ಕಳೇ ಬೇಡ ಅನ್ನಿಸತ್ತೆ. ಮಕ್ಕಳಾದ್ರೂ ಅವರನ್ನ ಬೆಳೆಸೋಕೆ ಅವರಿಗೆ ಇಷ್ಟವಿರಲ್ಲ, ಯಾಕಂದ್ರೆ ಅವರನ್ನೆಲ್ಲಿ ತಾವು ಹಚ್ಚಿಕೊಂಡುಬಿಡ್ತೇವೋ, ಇದರಿಂದಾಗಿ ಏನೇನು ಅನುಭವಿಸಬೇಕಾಗುತ್ತೋ ಅನ್ನೋ ಭಯ ಅವರಿಗೆ. ಮಕ್ಕಳ ಪುಟ್ಟ ಪುಟ್ಟ ಕೈಕಾಲ್ಗಳು, ಮುದ್ದು ಮುಖ, ಪುಟಾಣಿ ದೇಹ ಇವುಗಳು ಸಂತೋಷವನ್ನೇನೋ ಕೊಡತ್ತೆ, ಆದರೆ ಅವಕ್ಕೆಲ್ಲಿ ಏನಾದ್ರೂ ಆಗಿಬಿಡತ್ತೋ

ಸತ್ತೇ ಹೋಗ್ಬಿಡತ್ತೋ ಅನ್ನೋ ಆತಂಕ ಅವರನ್ನ ಕಾಡತ್ತೆ. ಮಕ್ಕಳಿಂದ ಆಗೋ ಅನುಕೂಲ, ಅನಾನುಕೂಲಗಳನ್ನು ಹೋಲಿಸಿ ನೋಡಿದ್ರೆ, ಅನಾನುಕೂಲವೇ ಹೆಚ್ಚು ಅನ್ನಿಸಿಬಿಡತ್ತೆ. ಇದೆಲ್ಲ ಮಕ್ಕಳ ಬಗ್ಗೆ ತಮಗಿರೋ ಪ್ರೀತಿಯ ಸಂಕೇತ ಅಂತ ಭಾವಿಸಿ ನೇರವಾಗಿಯೂ ಅವರು ಹೀಗೆ ಹೆಮ್ಮೆಯಿಂದ ಹೇಳಿಕೋತಾರೆ. ಈ ರೀತಿಯ ಆಲೋಚನೆಗಳಿಂದ ತಾವು ಪ್ರೀತಿಯನ್ನೇ ಅಲ್ಲಗಳೆತಿದ್ದೀವಿ, ಈ ಮೂಲಕ ತಮ್ಮ ಸ್ವಾರ್ಥ ಮನೋಭಾವವನ್ನ ತೋರಿಸ್ತಿದ್ದೀವಿ ಅನ್ನೋದನ್ನ ಅವರು ಗಮನಿಸೋದೇ ಇಲ್ಲ. ಮಗುವಿನ ಬಗ್ಗೆ ಪ್ರೀತಿಗಿಂತ ಹೆಚ್ಚಾಗಿ ಅವರನ್ನ ಕಾಡೋದು ಅವಕ್ಕೆಲ್ಲಿ ಕಾಯಿಲೆ ಆಗತ್ತೋ, ಎಲ್ಲಿ ಸತ್ತುಹೋಗ್ತವೋ ಅನ್ನೋ ಭಯ. ಹಾಗಾಗಿ ತಾವು ಪ್ರೀತಿಸೋ ಮಗು ಅವರಿಗೆ ಬೇಕೂಂತ ಅನ್ನಿಸೋದಿಲ್ಲ. ತಮ್ಮ ಪ್ರೀತಿಯ ಜೀವಕ್ಕೋಸ್ಕರ ತಮ್ಮನ್ನು ತ್ಯಾಗ ಮಾಡಿಕೊಳ್ಳೋಕೆ ಅವರು ಸಿದ್ಧರಿರೋಲ್ಲ; ಅದರ ಬದಲು ತಮ್ಮ ಹಿತಕ್ಕೋಸ್ಕರ ತಾವು ಪ್ರೀತಿಸೋ ಜೀವವನ್ನ ಅವರು ಬಲಿ ಕೊಡಕ್ಕೆ ಸಿದ್ಧವಾಗ್ತಾರೆ.

"ಇದು ಪ್ರೇಮವಾಗಿರದೆ ಸ್ವಾರ್ಥ ಎಂಬುದು ಸ್ಪಷ್ಟವಾಗಿದೆ. ಆದರೆ ಅವರನ್ನು - ಅದೇ ಹಣವಂತ ಕುಟುಂಬಗಳ ತಾಯಂದಿರನ್ನು? ತಮ್ಮ ಮಕ್ಕಳ ಆರೋಗ್ಯದ ಬಗ್ಗೆ ಒದ್ದಾಡುತ್ತಾರೆಂಬುದನ್ನು ನೆನಪಿಸಿಕೊಂಡರೆ ಅವರ ಸ್ವಾರ್ಥಕ್ಕಾಗಿ ಬೈಯಲು ಮನಸ್ಸು ಬಾರದು. ಇದಕ್ಕೆಲ್ಲ ಕಾರಣರಾದವರು ಅದೇ ಹಣವಂತವರ್ಗದ ವೈದ್ಯರುಗಳು. ಮೂರು ಅಥವಾ ನಾಲ್ಕು ಮಕ್ಕಳಾದಾಗ ಮೊದಮೊದಲ ವರ್ಷಗಳಲ್ಲಿ ನನ್ನ ಹೆಂಡತಿ ತೊಡಗಿಕೊಂಡಿದ್ದ ಬಗೆಯನ್ನು ನೆನೆಸಿಕೊಂಡಾಗ ಈಗಲೂ ನಾನು ಭಯದಿಂದ ತತ್ತರಿಸುವಂತಾಗುತ್ತದೆ. ನಾವು ಆಗ ಬದುಕನ್ನು ಜೀವಿಸಲೇ ಇಲ್ಲ, ಅದರ ಬದಲಿಗೆ ಮುಳುಗುವ ಹಡಗಿನಲ್ಲಿದ್ದವರಂತೆ ನಿರಂತರ ಅಪಾಯ, ಮತ್ತದರಿಂದ ಪಾರಾಗುವ ಹವಣಿಕೆಯಲ್ಲಿಯೇ ಮುಳುಗಿದ್ದೆವು. ನನ್ನನ್ನು ದಮನಿಸಲು ತನ್ನ ಮಕ್ಕಳ ಆರೋಗ್ಯದ ಬಗ್ಗೆ ಚಿಂತಿಸುವವಳಂತೆ ಅವಳು ಉದ್ದೇಶಪೂರ್ವಕವಾಗಿಯೇ ನಟಿಸುತ್ತಿದ್ದಳೇನೋ ಎಂಬ ಅನುಮಾನ ಕೆಲವೇಳೆ ನನ್ನನ್ನು ಕಾಡುತ್ತಿತ್ತು. ಆದರೆ ಎಲ್ಲ ಸರಳವಾಗಿ ಅವಳ ಪರವಾಗಿಯೇ ವರ್ತಿಸಿದ್ದವು; ಇಂತಹ ಸನ್ನಿವೇಶಗಳಲ್ಲಿ ಅವಳು ಮಾಡಿದ್ದು ಆಡಿದ್ದೆಲ್ಲ ನಟನೆಯಾಗಿತ್ತೇನೋ. ಆದರೆ, ಉಫ಼್ಹೂ! ಅವಳೇ ನರಳುತ್ತಿದ್ದಳಲ್ಲ, ತನ್ನ ಮಕ್ಕಳ ಬಗ್ಗೆ ಚಡಪಡಿಸುತ್ತ ನಿರಂತರವಾಗಿ ತನ್ನನ್ನು ತಾನು ಹಿಂಸಿಸಿಕೊಳ್ಳುತ್ತಿದ್ದಳಲ್ಲ. ಇದರಿಂದಾಗಿ ಅವಳಿಗೂ ಹಿಂಸೆ, ನನಗೂ ಹಿಂಸೆ! ಅದನ್ನು ಅನುಭವಿಸುವುದು ಅವಳಿಗೆ ಅಸಾಧ್ಯವಾಗಿತ್ತು. ಹೀಗಾಗುತ್ತಿದ್ದುದು ಇತರ ಪ್ರಾಣಿಗಳಲ್ಲಿರುವ ಸಹಜವಾದ ಮಕ್ಕಳ ಬಗೆಗಿನ ಒಲವು, ಎಲ್ಲ ತಾಯಂದಿರಿಗಿರುವಂತೆ ಮೊಲೆಯೂಡುವುದು, ಮುದ್ದಿಸುವುದು, ಕಾಪಾಡುವುದು ಮುಂತಾದ ಸಹಜ ಪ್ರವೃತ್ತಿಗಳಿದ್ದರೂ, ಪ್ರಾಣಿಗಳಲ್ಲಿರದ ಊಹೆ ಮತ್ತು ಕಾರಣಪ್ರವೃತ್ತಿ ಇರುವುದರಿಂದಲೇ. ತನ್ನ ಪಿಳ್ಳೆಗಳಿಗೇನಾಗುವುದೋ ಎಂಬ ಆತಂಕ ಕೋಳಿಗಿರುವುದಿಲ್ಲ, ಅದಕ್ಕೆ ಬರಬಹುದಾದ ಕಲ್ಪನೆ ಅದಕ್ಕಿರುವುದಿಲ್ಲ, ಕಾಯಿಲೆಗಳಿಂದ ಸಾವಿನಿಂದ ಅವನ್ನು ಕಾಪಾಡಲು ಏನೆಲ್ಲ ಉಪಚಾರ ಮಾಡಬೇಕೆಂದು ಮಾನವರು

ಭಾವಿಸ್ತಾರೋ ಅಂಥ ಭಾವನೆಗಳು ಅದಕ್ಕಿರುವುದಿಲ್ಲ. ಹೀಗಾಗಿ ಕೋಳಿಗೆ ತನ್ನ ಪಿಳ್ಳೆಗಳೆಂದರೆ ಪೀಡೆಗಳಲ್ಲ. ಅದು ತನ್ನ ಪಿಳ್ಳೆಗಳಿಗೆ ಮಾಡಬೇಕಾದ್ದನ್ನಷ್ಟೇ ಸಂತಸದಿಂದ ಮಾಡ್ತವೆ; ಹೀಗಾಗಿ ಪಿಳ್ಳೆಗಳೆಂದರೆ ಕೋಳಿಗೆ ಪ್ರಾಣ! ಪಿಳ್ಳೆಯೊಂದಕ್ಕೆ ರೋಗ ಬಂದರೆ ಅದು ಮಾಡುವುದು ನಿಖರವಾಗಿ ಇಷ್ಟನ್ನೇ? ಕಾವು ಕೊಡುವುದು, ಗುಟುಕು ತಿನ್ನಿಸುವುದು ಅಷ್ಟೆ. ಹೀಗೆ ಮಾಡುವುದರ ಮೂಲಕ ತಾನು ಮಾಡಬೇಕಾದ್ದನ್ನ ಮಾಡ್ತಿದ್ದೇನೆ ಎಂಬ ಅರಿವು ಅದಕ್ಕಿರತ್ತೆ. ಪಿಳ್ಳೆ ಸತ್ತರೆ ಅದೇಕೆ ಸತ್ತುಹೋಯ್ತು ಅಂತಲಾಗಲೀ, ಎಲ್ಲಿಗೆ ಹೋಗಿದೆ ಅಂತಲಾಗಲೀ ಕೇಳ್ಕೊಳ್ಳೋದಿಲ್ಲ. ಸ್ವಲ್ಪ ಹೊತ್ತು ತಹತಹಪಡತ್ತೆ, ಆಮೇಲೆ ಎಲ್ಲ ಮರೆತು ಹಿಂದಿನ ಹಾಗೆಯೇ ಜೀವಿಸಕ್ಕೆ ತೊಡಗತ್ತೆ. ಆದರೆ ನಮ್ಮ ಸತದೃಷ್ಟ ಹೆಣ್ಣುಮಕ್ಕಳು, ನನ್ನ ಹೆಂಡತೀನೂ ಸೇರಿದ ಹಾಗೆ, ಹಾಗಲ್ಲ. ಕಾಯಿಲೆ ಮತ್ತದನ್ನ ವಾಸಿಮಾಡೋದು ಹೇಗೆ ಅನ್ನೋದರ ಹೊರತಾಗಿ, ಮಕ್ಕಳನ್ನ ಬೆಳೆಸೋದು ಹೇಗೆ ಅನ್ನೋದರ ಬಗ್ಗೆ ಪುಸ್ತಕಗಳನ್ನ ಓದೋದು, ತನಗಿಂತ ಹಿರಿಯರಾದ ಅವರಿವರನ್ನ ಕೇಳೋದು ಮಾಡ್ತಾನೇ ಇದ್ದಳು. ಮಗುವಿಗೆ ಹಾಲೂಡಿಸೋದು ಹೀಗೆ, ಹೀಗೆ ಮಾಡ್ಬೇಕು ಅಂತೆಲ್ಲ; ಇದೊಂದು ವಿಷಯದ ಬಗ್ಗೆ ಮಾತ್ರ ಅಲ್ಲ, ಇನ್ನೂ ಏನೇನನ್ನೋ; ಬಟ್ಟೆಬರೆ, ಏನು ಕುಡಿಸಬೇಕು, ಹೇಗೆ ಸ್ನಾನ ಮಾಡಿಸ್ಬೇಕು, ಮಲಗಿಸೋದು, ನಡೆಸೋದು, ಒಳ್ಳೆ ಗಾಳಿ ಇರೋ ಕಡೆ ಕರ್ಕೊಂಡು ಹೋಗೋದು? ಹೀಗೇ. ಇದೆಲ್ಲಕ್ಕೂ ನಾವು, ಅದರಲ್ಲೂ ಅವಳು, ಪ್ರತಿ ವಾರ ಹೊಸ ವಿಷಯ ಕಲೆಹಾಕೋಳು, ಇನ್ನೂ ನಿನ್ನೆಯಿಂದ ಮಾತ್ರವೇ ಪ್ರಪಂಚದಲ್ಲಿ ಮಕ್ಕಳೆ ಹುಟ್ಟಕ್ಕೆ ಶುರುವಾಗಿದೆ ಅನ್ನೋ ಹಾಗೆ. ಯಾವುದಾದರೂ ಮಗುವಿಗೆ ಸರಿಯಾಗಿ ಹಾಲೂಡಿಸದೇ ಇದ್ದರೋ, ಸರಿಯಾಗಿ ಅಥವಾ ಸರಿಯಾದ ಸಮಯದಲ್ಲಿ ಸ್ನಾನ ಮಾಡಿಸದೇ ಇದ್ದರೋ, ಮಗು ಕಾಯಿಲೆ ಬಿದ್ದಾಗಲೋ, ನಮ್ಮ ಕೆಲಸ ಮಾಡದೇ ಇರೋದಕ್ಕೆ ನಮ್ಮನ್ನ ಬೈಕೋತಿದ್ವಿ.

"ಮಕ್ಕಳು ಚೆನ್ನಾಗಿದ್ದಾಗ ಇವೆಲ್ಲ; ಆದರೂ ಆಗಲೂ ಒಂದು ರೀತಿ ಹಿಂಸೆಯೇ. ಆದರೆ ಯಾವುದಾದರೂ ಮಗು ಕಾಯಿಲೆ ಬಿದ್ದರಂತೂ, ಅದು ಉಲ್ಬಣವಾಗ್ತಿತ್ತು, ನರಕವೇ ಸೃಷ್ಟಿಯಾಗಿಬಿಡ್ತಿತ್ತು. ಕಾಯಿಲೆಗಳನ್ನ ವಾಸಿಮಾಡಬಹುದು, ಆ ಕುರಿತು ವಿಜ್ಞಾನ ಮುನ್ನಡೆದಿದೆ, ಜನರು, ವೈದ್ಯರು ಅದರ ಬಗ್ಗೆ ತಿಳಿದವರಿದ್ದಾರೆ ಅಂತೆಲ್ಲ ಭಾವನೆ. ಆ! ಆದರೆ ವೈದ್ಯರಿಗೆಲ್ಲ ವಿಷಯ ತಿಳಿದಿರಲ್ಲ, ಅವರಲ್ಲೂ ತುಂಬ ಬುದ್ಧಿವಂತರಿಗೆ ಮಾತ್ರ ಗೊತ್ತಿರೋದು. ಮಗುವಿಗೆ ಹುಷಾರಿಲ್ಲದಿದ್ದರೆ ಅತ್ಯಂತ ಕುಶಲ ವೈದ್ಯರನ್ನ ಮಾತ್ರ, ಯಾರು ವಾಸಿಮಾಡಬಲ್ಲರೋ, ಅಂಥವರನ್ನ ಮಾತ್ರ ಸಂಪರ್ಕಿಸ್ಬೇಕು, ಆಗ ಮಗು ಬದುಕುತ್ತೆ. ಅಂತಹ ವೈದ್ಯರು ನಿಮಗೆ ಸಿಕ್ಕದಿದ್ದರೆ ಅಥವಾ ಅಂಥ ವೈದ್ಯರು ವಾಸ ಮಾಡೋ ಕಡೆ ನೀವಿಲ್ಲದಿದ್ರೆ ಮಗು ಹೋಯಿತು ಅಂತಲೇ ಲೆಕ್ಕ. ಇದು ನನ್ನ ಹೆಂಡತಿಗೆ ಮಾತ್ರ ಸಂಬಂಧಿಸಿದ ವಿಷಯ ಅಲ್ಲ, ಇದು ಆ ವರ್ಗದ ಎಲ್ಲ ಹೆಂಗಸರ ಪಾಡು, ಅವರಿಗೆ ಎಲ್ಲ ಕಡೆಯಿಂದಲೂ ಕೇಳಿಸೋದು ಒಂದೇ ದನಿ. ಇವಾನ್ ಜಸಿಕಾರ್ಯಿಚ್ ಅವರನ್ನ ಸರಿಯಾದ ಸಮಯಕ್ಕೆ ಕರೆಸೋದಕ್ಕೇ ಸಾಧ್ಯವಾಗದ್ದಕ್ಕಾಗಿ ಕ್ಯಾದರೀನ್

ಸೆಮೆನೋವ್ನಾ ಇಬ್ಬರು ಮಕ್ಕಳನ್ನ ಕಳೆದುಕೊಂಡಳು; ಆದರೆ ಅದೇ ಇವಾನ್ ಜಸಿಕಾರ್ಯಿಚ್ ಮೇರಿ ಇವಾನೋವ್ನಾಳ ಹಿರಿಯ ಮಗಳನ್ನ ಬದುಕಿಸಿದರು, ಪೆಟ್ರೋವ್ ದಂಪತಿಗಳು ವೈದ್ಯರ ಸಲಹೆ ಮೇರೆಗೆ ಮಗುವನ್ನ ಎಲ್ಲೆಲ್ಲಿ ಕರೆದೊಯ್ಯಬೇಕೋ ಅಲ್ಲೆಲ್ಲ ಸಮಯಕ್ಕೆ ಸರಿಯಾಗಿ ಕರೆದುಕೊಂಡು ಹೋಗಿದ್ದರು. ಹೀಗಾಗಿ ಮಗು ಬದುಕುಳೀತು. ಅವರೇನಾದ್ರೂ ಯಾಮಾರಿದ್ದರೆ ಮಗು ಕೈಗೆ ಸಿಕ್ತಿರಲಿಲ್ಲ. ಇನ್ನೊಬ್ಬರು ವೈದ್ಯರ ಸಲಹೆ ಪ್ರಕಾರ ಸೂಕ್ಷ್ಮವಾಗಿದ್ದ ದಕ್ಷಿಣದೇಶಕ್ಕೆ ಕರೆದೊಯ್ದು ಮಗುವನ್ನ ಬದುಕಿಸಿಕೊಂಡರು. ಮನೇಲಿ ಮಗು ಕಾಯಿಲೆ ಬಿದ್ದಿರೋವಾಗ ನನ್ನ ಹೆಂಡತಿ ಹೇಗೆ ತಾನೆ ಶಾಂತವಾಗಿರಕ್ಕಾಗತ್ತೇ? ಅವಳಿಗೋ ತನ್ನ ಮಕ್ಕಳ ಬಗ್ಗೆ ಪ್ರಾಣಿಗಳಿಗಿರೋ ಸಹಜ ಒಲವು, ಇವಾನ್ ಜಸಿಕಾರ್ಯಿಚ್ ಅವರನ್ನ ಸರಿಯಾದ ಸಮಯಕ್ಕೆ ಕಾಣೋದಕ್ಕೆ ಸಾಧ್ಯವಾದರೆ ಮಾತ್ರ ಕಾಯಿಲೆ ವಾಸಿಯಾಗೋದು. ಆದರೆ ಅವರು ಏನು ಸಲಹೆ ಕೊಡ್ತಾರೆ ಅನ್ನೋದನ್ನ ಯಾರೂ ಊಹಿಸಿಕೊಳ್ಳಕ್ಕೆ ಸಾಧ್ಯವಿಲ್ಲ. ಏನು ಹೇಳ್ಬೇಕೂಂತ ಅವರಿಗೂ ಗೊತ್ತಿರತ್ತೋ ಇಲ್ವೋ. ಯಾಕೇಂದ್ರೆ ತನಗೇನು ಗೊತ್ತಿಲ್ಲ, ಯಾವ ಉಪಯೋಗಕ್ಕೂ ತಾನು ಬರಲಾರೆ ಅನ್ನೋದು ಅವರ ಭಾವನೆ; ಆದರೆ ಜನ ತನಗೇನೂ ಗೊತ್ತಿಲ್ಲಾಂತ ಅಂದುಕೊಂಡುಬಿಡ್ತಾರೇನೋ ಅಂತ ಅವರು ಅಲ್ಲಿಂದಿಲ್ಲಿ ಹೋಗ್ತಾ ಇರ್ತಾರೆ. ನೋಡಿ, ಅವಳೇನಾದ್ರೂ ನಿಜವಾಗಿ ಒಂದು ಪ್ರಾಣಿಯೇ ಆಗಿದ್ದಿದ್ರೆ, ಅವಳು ಇಷ್ಟೆಲ್ಲ ಅನುಭವಿಸಬೇಕಾಗಿರಲಿಲ್ಲ ಅಥವಾ ಸಾಮಾನ್ಯ ಮನುಷ್ಯಳಾಗಿದ್ದಿದ್ರೆ ದೇವರಲ್ಲಿ ನಂಬಿಕೆ ಇಟ್ಕೊಂಡು, 'ಕೊಡೋನೂ ದೇವರೆ, ಕಿತ್ಕೊಂಡು ಹೋಗೋನೂ ಅವನೇ. ದೇವರಿಂದ ಯಾರೂ ತಪ್ಪಿಸಿಕೊಳ್ಳಕ್ಕಾಗಲ್ಲ' ಅಂದುಕೊಂಡು ಪ್ರಾರ್ಥನೆ ಮಾಡ್ತಿದ್ದಳು.

"ಹೀಗಾಗಿ ಮಕ್ಕಳ ಜೊತೆಗಿನ ಬದುಕು ನನ್ನ ಹೆಂಡತೀಗೆ, ಅದರಿಂದಾಗಿ ನನಗೂ ಸಂತೋಷದಾಯಕವಾಗದೆ ಒಂದು ರೀತೀಲಿ ತಲ್ಲಣವೇ ಆಯಿತು. ತನ್ನ ಬವಣೇನ ಅವಳು ಹೇಗೆ ತಾನೆ ತಪ್ಪಿಸಿಕೊಳ್ಳಬಹುದು? ಒಂದೇ ಸಮ ಅವಳು ತನ್ನನ್ನ ತಾನು ಹಿಂಸಿಸಿಕೊಳ್ಳತೊಡಗಿದಳು. ಯಾವಾಗಲಾದರೊಮ್ಮೆ ನಾವು ಹೊಟ್ಟೆಕಿಚ್ಚಿನ ಪ್ರದರ್ಶನ ಮಾಡಿ ಆಮೇಲೆ ಸಮಾಧಾನಸ್ಥಿತಿಗೆ ಬಂದ ನಂತರ ಅಥವಾ ಜಗಳದ ನಂತರ, ಇನ್ನಾದರೂ ಕೊಂಚ ಓದಿನಲ್ಲಿ ತೊಡಗಬಹುದು ಅಂತಲೋ, ಗಂಭೀರವಾಗಿ ಯೋಚನೆ ಯಲ್ಲಿ ಮುಳುಗಬಹುದು ಅಂತಲೋ ಅಂದುಕೊಂಡು ಮನಸ್ಸನ್ನು ಹೊಂದಿಸಿಕೊಳ್ಳೋ ಸರಿಯಾಗಿ ವಾಸ್ಯಾಗೆ ಮೈಲಿ ಹುಷಾರಿಲ್ಲ ಅಂತಲೋ, ಮಾಷಾಳಿಗೆ ಆಮಶಂಕೆ ಅಂತಲೋ, ಆಂಡ್ರೂಷಾ ಮೈಮೇಲೆ ದದ್ದುಗಳು ಎದ್ದಿವೆ ಅಂತಲೋ ಗೊತ್ತಾಗಿ ನಮ್ಮ ಸಮಾಧಾನವೆಲ್ಲ ಸಮಾಧಿಯಾಗ್ತಿತ್ತು; ಆ ಮುಂದಿನ ಗಳಿಗೆಗಳು ನರಕವೇ ಸರಿ, ಬದುಕಲ್ಲ. ಮಗುವನ್ನ ಎಲ್ಲಿಗೆ ಕರ್ಕೊಂಡು ಹೋಗ್ಬೇಕು, ಯಾವ ಡಾಕ್ಟ್ರ ಹತ್ತಿರಕ್ಕೆ, ಇದೇ ತಾಕಲಾಟ, ಆಮೇಲೆ ಇದ್ದೇ ಇದ್ಯಲ್ಲ, ಮಗುವಿಗೆ ಎನಿಮ ಕೊಡೋದು, ಮೈತಾಪ ನೋಡೋದು, ಔಷಧಿ ಕುಡಿಸೋದು, ಡಾಕ್ಟ್ರನ್ನ ನೋಡೋದು? ಇದೇ. ನಾನಾಗಲೇ ಹೇಳಿದ ಹಾಗೆ,

ನಮ್ಮ ಸಾಂಸಾರಿಕ ಜೀವನ ಇನ್ನೂ ಒಂದು ಹದಕ್ಕೇ ಬಂದಿರ್ಲಿಲ್ಲ, ಬರೀ ಕಲ್ಪನಾತ್ಮಕವೋ ವಾಸ್ತವವೋ ಆದ ಅಪಾಯಗಳಿಂದ ಹೇಗೆ ಪಾರಾಗೋದು ಅನ್ನೋದೇ ಚಿಂತೆ. ಬಹುತೇಕ ಸಂಸಾರಗಳು ಈಗೀಗ ಇದೇನೇ. ಆದ್ರೆ ನಮ್ಮ ಸಂಸಾರದಲ್ಲಿ ಅದು ಬಿಗಡಾಯಿಸಿತ್ತು. ನನ್ನ ಹೆಂಡತಿಗೋ ಮಕ್ಕಳು ಅಂದ್ರೆ ಪ್ರಾಣ, ಎಲ್ಲವನ್ನೂ ನಂಬೋ ಸ್ವಭಾವ.

"ಹೀಗಾಗಿ ಮಕ್ಕಳು ಇದ್ದಿದ್ರಿಂದ ನಮ್ಮ ಬದುಕು ಹಸನಾಗೋದಿರಲಿ, ವಿಷಮವಾಯ್ತು. ಅಲ್ಲದೆ, ಮಕ್ಕಳ ತಕರಾರು ಬೇರೆ. ನಮಗೆ ಮಕ್ಕಳಾದ ತಕ್ಷಣವೇ ಅವು ನಮ್ಮ ನಡುವಣ ತಿಕ್ಕಾಟಕ್ಕೆ ಕಾರಣವಾದ್ವು, ಅವರು ಬೆಳೀತಾ ಬೆಳೀತಾ ಅದು ಇನ್ನಷ್ಟು ಹೆಚ್ಚಾಯ್ತು. ಅವು ಅಪಸ್ವರಗಳು ಮಾತ್ರವಲ್ಲ, ನಮ್ಮ ನಡುವಣ ಕದನದಲ್ಲಿ ಒಬ್ಬರ ಮೇಲೊಬ್ಬರು ಪ್ರಯೋಗಿಸೋ ಆಯುಧಗಳಾದ್ವು. ನಮ್ಮಿಬ್ಬರಿಗೂ ಒಂದೊಂದು ಇಷ್ಟವಾದ ಆಯುಧ ಹಿಡಕೊಂಡು ಹೋರಾಟಕ್ಕೆ ಇಳೀತಿದ್ವಿ. ನಾನು ನನ್ನ ಹೆಂಡ್ತಿ ಜೊತೆ ಹೋರಾಡ್ತಿದ್ದದ್ದು ವಾಸ್ಯಾ ಜೊತೆ, ನಮ್ಮ ಹಿರೀ ಮಗ; ಅವಳೊ ಲೀಸಾ ಜೊತೆ ಕದನಕ್ಕಿಳೀತಾ ಇದ್ಲು. ಅಷ್ಟು ಮಾತ್ರ ಅಲ್ಲ, ಮಕ್ಕಳು ದೊಡ್ಡವರಾಗ್ತಾ ಅವುಗಳ ಸ್ವಭಾವವೂ ಮೊನಚಾಯಿತು; ನಾವಿಬ್ಬರು ನಮ್ಮ ಸಹಾಯಕ್ಕೆ ಕರೆದುಕೊಳ್ತಾ ಇದ್ದ ಮಕ್ಕಳಲ್ಲೂ ಎರಡು ಬಣಗಳಾದ್ವು. ಆ ಬಡಪಾಯಿಗಳು ಇದರಿಂದಾಗಿ ತುಂಬ ಬವಣೆ ಪಡೋ ಹಾಗಾಯ್ತು. ಯಾಕಂದ್ರೆ ನಮ್ಮಿಬ್ಬರದು ನಿರಂತರ ಕದನ, ಆ ಬಗ್ಗೆ ಯೋಚನೆ ಮಾಡಕ್ಕೂ ಸಮಯ ಇಲ್ಲದೆ ಇರೋ ಅಷ್ಟು. ಮಗಳು ನನ್ನ ಜೊತೆ; ತಾಯೀನ ಹೋಲ್ತಾ ಇದ್ದ ಹಿರೀ ಮಗ ಅವಳಿಗೆ ಅಚ್ಚುಮೆಚ್ಚು, ಹೀಗಾಗಿ ಅವನು ಎಷ್ಟೋ ವೇಳೆ ನನ್ನನ್ನ ದ್ವೇಷಿಸೋ ಹಾಗೆ ಕಾಣಿಸ್ತಿತ್ತು."

## 15

"ಸರಿ, ಹೀಗೆ ನಾವು ಬದುಕಿದ್ವಿ. ನಮ್ಮಿಬ್ಬರ ನಡುವಣ ಸಂಬಂಧ ಬರ್ತಾ ಬರ್ತಾ ಬಿಗಡಾಯಿಸ್ತು. ಕೊನೆಗೆ ಎಂಥ ಹಂತ ತಲುಪಿತೂ ಅಂದ್ರೆ, ಭಿನ್ನಾಭಿಪ್ರಾಯ ನಮ್ಮ ನಡುವಣ ದ್ವೇಷಕ್ಕೆ ಕಾರಣವಾಗದೆ, ದ್ವೇಷವೇ ಭಿನ್ನಾಭಿಪ್ರಾಯಕ್ಕೆ ಕಾರಣ ಅನ್ನೋ ಹಾಗಾಯ್ತು. ಅವಳು ಹೇಳಿದ್ದಕ್ಕೆಲ್ಲ ಹೇಳೋ ಮುಂಚೆಯೇ ನನ್ನದು ನಕಾರ, ಹಾಗೆಯೇ ನಾನು ಅಂದದ್ದಕ್ಕೆ ಅವಳ ಪ್ರತಿಕ್ರಿಯೆ.

"ಮದುವೆಯಾದ ನಾಲ್ಕನೇ ವರ್ಷದಲ್ಲಿ, ಒಬ್ಬರನ್ನೊಬ್ಬರು ಅರ್ಥ ಮಾಡ್ಕೊಳ್ಳೋಕೆ ಸಾಧ್ಯವೇ ಇಲ್ಲ ಅನ್ನೋ ತೀರ್ಮಾನಕ್ಕೆ ಇಬ್ಬರೂ ಬರೋ ಹಾಗಾಯ್ತು. ಹೀಗಾಗಿ ನಮ್ಮಿಬ್ಬರ ಮಧ್ಯದ ಭಿನ್ನಾಭಿಪ್ರಾಯಾನ ಬಗೆಹರಿಸೋ ಪ್ರಯತ್ನವನ್ನೇ ಕೈಬಿಟ್ಟೆವಿ. ಸಣ್ಣ ಪುಟ್ಟ ವಿಷಯಗಳ ಬಗ್ಗೆ ಕೂಡ ನಮ್ಮ ನಮ್ಮ ಅಭಿಪ್ರಾಯಕ್ಕೇ ಸದಾ ನಾವು ಅಂಟಿಕೊಂಡಿರ್ತಿದ್ವಿ, ವಿಶೇಷವಾಗಿ ಮಕ್ಕಳ ವಿಷಯಕ್ಕೂ ಹಾಗೇನೇ. ಈಗ ನೆನಪಿಸಿಕೊಂಡರೆ, ನಾನು ಅಂಟಿಕೊಂಡ ತೀರ್ಮಾನಗಳು ನನಗೆ ಪ್ರಿಯವಾದವು ಅಂತ

ಅನ್ನೋ ಹಾಗಿಲ್ಲ, ಆದ್ರೂ ಅದನ್ನು ಬಿಡ್ತಿರಲಿಲ್ಲ. ಆದರೆ ಅವಳದು ಸದಾ ವಿರುದ್ಧಾಭಿಪ್ರಾಯ; ಹಾಗಾಗಿ ಅವಳ ಅಭಿಪ್ರಾಯಾನ ಒಪ್ಪೋದು ಅಂದ್ರೆ ಅವಳಿಗೆ ಮಣಿದ ಹಾಗೆ ಅಂತ ನನ್ನ ಭಾವನೆ; ಇದಕ್ಕೆ ನಾನು ಸಿದ್ಧನಾಗಿರ್ಲಿಲ್ಲ. ಅವಳೂ ಹಾಗೇನೇ. ನನ್ನ ಬಗ್ಗೆ ಸರಿಯಾಗೇ ನಡೆದುಕೋತಿದ್ದೀನಿ ಅನ್ನೋ ಭಾವನೆ ಅವಳಿಗೆ, ಹಾಗೇನೇ ನಾನು ಅವಳ ಬಗ್ಗೆ ಉದಾರಿಯಾಗಿದ್ದೀನಿ ಅಂತಲೇ ಅಂದುಕೊಂಡಿದ್ದೆ. ಇಬ್ಬರೇ ಇದ್ದಾಗ ನಮ್ಮ ಮಧ್ಯೆ ಮೌನ ತಾಂಡವವಾಡ್ತಿತ್ತು; ಅಕಸ್ಮಾತ್ ಮಾತಿಗಿಳಿದರೆ ಪಶುಗಳು ಒಂದರ ಜೊತೆ ಒಂದು ಕಿತ್ತಾಡತ್ವಲ್ಲ, ಹಾಗೆ. 'ಗಂಟೆ ಎಷ್ಟಾಯ್ತು?' 'ಮಲಗೋ ಹೊತ್ತು' 'ರಾತ್ರಿ ಅಡುಗೆ ಏನು?' 'ಎಲ್ಲಿಗೆ ಹೋಗೋಣ', 'ಪತ್ರಿಕೆಗಳಲ್ಲಿ ಏನು ಸುದ್ದಿ?' 'ಡಾಕ್ಟ್ರಿಗೆ ಹೇಳಿಕಳಿಸು' 'ಮಾಷಾಗೆ ಗಂಟಲು ನೋವು' ಇಂಥ ಸೀಮಿತ ವಿಷಯಗಳ ಆಚೆಗಿನ ವಿಷಯಗಳ ಬಗ್ಗೆ ಮಾತಾಡೋ ಧೈರ್ಯ ಬಂದರೆ ಮುಂದೆ ಅದು ಧಗಧಗ ಉರಿಯೋ ಕೆಂಡವಾಗ್ತಿತ್ತು. ಕಾಫಿ ಬಗ್ಗೆ, ಟೇಬಲ್ ಕ್ಲಾತ್ ವಿಷಯವಾಗಿ, ಇಲಿ ಬೋನು? ಇಂಥ ಕೆಲಸಕ್ಕೆ ಬಾರದ ವಿಷಯಗಳು ಕೂಡ ನಮ್ಮ ನಡುವೆ ವಿರಸಕ್ಕೆ ಕಾರಣವಾಗ್ತಿತ್ತು. ನನಗಂತೂ ಅವಳ ವಿಷಯ ಮೈ ಉರೀತಿತ್ತು. ಕೆಲವು ವೇಳೆ ಅವಳು ಕಪ್ಗೆ ಟೀ ಸುರಿಯೋವಾಗ್ಲೋ, ಕಾಲುಗಳನ್ನಾಡಿಸೋವಾಗ್ಲೋ, ಚಮಚದಲ್ಲಿ ಏನಾದ್ರೂ ತುಂಬಿಕೊಂಡು ತನ್ನ ತುಟಿ ಹತ್ತಿರ ತಂದಾಗ್ಲೋ? ಈ ಸಂದರ್ಭದಲ್ಲೂ, ಅವೆಲ್ಲ ಮಹಾಪರಾಧಗಳೆನೋ ಅನ್ನೋ ಹಾಗೆ, ನನ್ನ ಪಿತ್ತ ನೆತ್ತಿಗೇರ್ತಿತ್ತು. ನನ್ನ ಕೋಪ ನಿಯತವಾದ ರೀತೀಲಿ ಬರ್ತಿತ್ತು, ಅದೂ ನಮ್ಮ ಸಲ್ಲಾಪದ ಹೊತ್ತಿಗೆ ಸರಿಯಾಗಿ ಬರ್ತಿತ್ತು, ಅನ್ನೋದನ್ನ ನಾನು ಗಮನಿಸಿರಲಿಲ್ಲ. ಒಂದಷ್ಟು ಹೊತ್ತು ಸರಸ, ಮಾರನೇ ಕ್ಷಣದಿಂದ ದೀರ್ಘ ಕಾಲ ವಿರಸ! ಪ್ರಬಲವಾದ ಪ್ರೇಮದ ಗಳಿಗೆ, ನಂತರ ಬಲವಾದ ವಿಷಮ ಸನ್ನಿವೇಶ. ಪ್ರೇಮದ ತೀವ್ರತೆ ಕಡಿಮೆ ಇದ್ದಾಗ ಉಂಟಾಗ್ತಿದ್ದಿದ್ದು ಅಲ್ಪ ಕಾಲದ ಅಸಹನೆ. ಪ್ರೀತಿ ದ್ವೇಷ? ಎರಡೂ ಪಾಶವೀ ಭಾವನೆಗಳ ವಿರುದ್ಧ ತೀರಗಳು ಅನ್ನೋದು ಆಗ ನಮಗೆ ಅರ್ಥವಾಗ್ಲಿಲ್ಲ. ನಮ್ಮ ನಮ್ಮ ಸ್ಥಿತೀನ ಅರ್ಥ ಮಾಡ್ಕೊಂಡಿದ್ದಿದ್ರೆ ಹೀಗೇ ಬಾಳನ್ನು ಮುಂದುವರಿಸೋದು ಭಯಂಕರವಾಗ್ತಿತ್ತು. ಆದರೆ ನಮ್ಮಿಬ್ಬರಿಗೂ ಅದರ ಅರಿವಾಗಲಿಲ್ಲ. ತಪ್ಪು ದಾರಿಯನ್ನು ಹಿಡಿದು ಬದುಕಿದರೆ ತನ್ನ ಬದುಕಿನ ಬವಣೆಯ ಬಗ್ಗೆ ಅರಿವು ಮಂಕುಗೊಳ್ಳುತ್ತೆ ಅನ್ನೋದರ ಮೇಲೆ ಮನುಷ್ಯನ ಬಿಡುಗಡೆ ಹಾಗೂ ಶಿಕ್ಷೆ ಆಧರಿಸಿರುತ್ತೆ. ಮನೆಗೆಲಸ, ತನ್ನ ಹಾಗೂ ಮಕ್ಕಳ ಬಟ್ಟೆಗಳನ್ನು ಒಗೆಯುವುದು, ಅವರಿಗೆ ಪಾಠ ಹೇಳಿಕೊಡುವುದು, ಅವರ ಆರೋಗ್ಯ ರಕ್ಷಣೆ ಇವುಗಳ ತೀವ್ರತೆ ಹಾಗೂ ಗಡಿಬಿಡಿಯಲ್ಲಿ ಅವಳು ತನ್ನನ್ನು ತಾನು ಮರೆಯಲು ಪ್ರಯತ್ನಿಸಿದಳು; ನಾನಾದರೋ ನನ್ನವೇ ಜಗತ್ತಿನಲ್ಲಿ ಮಗ್ನನಾಗಿದ್ದೆ: ವೈನ್, ಕಚೇರಿ ಕೆಲಸ, ಈಜು ಹೊಡೆಯುವುದು, ಮತ್ತು ಇಸ್ಪೀಟಾಟ. ನಮಗೆ ಸದಾ ಕೆಲಸಗಳಿರುತ್ತಿದ್ದುವು; ನಮಗೆ ಹೆಚ್ಚು ಕೆಲಸಗಳಿದ್ದಷ್ಟೂ ಒಬ್ಬರಿಗೊಬ್ಬರು ಹೆಚ್ಚು ಅಸಹನೆಯುಳ್ಳವರಾಗಿರುತ್ತೇವೆ ಎಂಬುದರ ಅರಿವು ನಮಗಾಯಿತು. 'ನೀನು ಮುಖ ತಿರುಗಿಸೋದು ಸರಿಯೇ, ಆದರೆ ನಿನ್ನೆ ರಾತ್ರಿ ಪೂರ್ತಿ

ನೀನು ನನಗೆ ಹಿಂಸೆಕೊಟ್ಟೆಯಲ್ಲ' ಅಂತ ನಾನು ಅಂದುಕೊಂಡರೆ, 'ನಿಮಗೇನೋ ಅದು ಸರಿ ಅನ್ನಿಸಬಹುದು, ಆದರೆ ನಾನು ರಾತ್ರಿ ಪೂರ್ತಿ ಮಗುವಿಗಾಗಿ ನಿದ್ದೆಗೆಟ್ಟಿದ್ದೆ' ಎಂದವಳು ಯೋಚಿಸುತ್ತಿದ್ದುದು ಮಾತ್ರವಲ್ಲ, ಬಾಯಿಬಿಟ್ಟು ಹೇಳಿಯೂ ಹೇಳುತ್ತಿದ್ದಳು. ಸಮ್ಮೋಹಿನಿ, ಸನ್ನಿ ಮುಂತಾದವುಗಳ ಬಗ್ಗೆ ಹೊಸ ಸಿದ್ಧಾಂತಗಳು ಮೂರ್ಖತನದವು ಮಾತ್ರವಲ್ಲ ಅಸಹ್ಯವಾದವು ಮತ್ತು ಅಪಾಯಕಾರಿಯಾದವು ಕೂಡ. ನನ್ನ ಹೆಂಡತಿಗೆ ಸನ್ನಿ, ನನ್ನದು ವಿಕೃತ ನಡವಳಿಕೆ ಅಂತ ಖಂಡಿತ ಚಾರ್ಕೋಟ್ ಹೇಳ್ತಿದ್ರು; ಅಷ್ಟೇ ಅಲ್ಲ ಅದನ್ನ ವಾಸಿ ಮಾಡಕ್ಕೂ ಪ್ರಯತ್ನಿಸ್ತಿದ್ರು. ಆದರೆ ವಾಸಿಮಾಡಕ್ಕೆ ಏನಾದ್ರೂ ಇದ್ದರೆ ತಾನೇ!

"ಹೀಗೆ ನಾವು ನಿರಂತರ ಮುಸುಕಿನಲ್ಲಿ ಬದುಕಿದ್ವಿ, ನಮಗೆ ನಮ್ಮ ಸ್ಥಿತಿ ಕಾಣ್ತಿರಲಿಲ್ಲ. ಏನಾಯ್ತೋ ಅದು ಆಗದೇ ಇದ್ದಿದ್ರೆ, ನಾನು ಮುದುಕನಾಗೋವರೆಗೂ ಹಾಗೇ ಬದುಕಿ, ಸಾಯೋ ಹೊತ್ತಲ್ಲಿ ಚೆನ್ನಾಗಿ ಬದುಕಿದೆ ಅಂತ ಯೋಚಿಸ್ತಿದ್ದೆ. ನನಗೆ ನನ್ನ ಬದುಕಿನ ಬವಣೆಯಾಗಲೀ ನನ್ನ ಬದುಕಿನ ಸುತ್ತಲಿದ್ದ ಸುಳ್ಳಾಗಲೀ ಅರ್ಥವಾಗ್ತಿರಲಿಲ್ಲ.

"ಒಬ್ಬರನ್ನೊಬ್ಬರು ದ್ವೇಷಿಸೋ ಇಬ್ಬರು ಅಪರಾಧಿಗಳನ್ನ ಒಂದೇ ಸಂಕೋಲೆ ಯೊಳಗೆ ಬಿಗಿದಿರೋ ಥರ ನಾವಿದ್ವಿ, ಒಬ್ಬರೊಬ್ಬರಿಗೆ ವಿಷ ಊಡ್ತಾ, ಆದರೆ ಅದನ್ನ ತಿಳಿಯಲಾರದೆ. ಮದುವೆಯಾದವರಲ್ಲಿ ನೂರಕ್ಕೆ ತೊಂಬತ್ತೊಂತ್ತರಷ್ಟು ಜನ ಅದೇ ಥರ ನರಕದಲ್ಲಿ ಬಿದ್ದಿರ್ತಾರೆ, ಬೇರೆ ಆಗೋಕೆ ಸಾಧ್ಯವಿಲ್ಲ ಅನ್ನೋದು ಆಗ ನನಗೆ ಗೊತ್ತಾಗಲಿಲ್ಲ. ಒಂದೇ ಥರದ ಅಥವಾ ವಿಭಿನ್ನವಾದ ಬದುಕುಗಳಲ್ಲಿ ಇದು ಮಾತ್ರ ಒಂದೇ ರೀತಿಯಾಗಿರತ್ತಲ್ಲ, ಹೇಗೆ! ಜೊತೆಗಿದ್ದು ಬಾಳೋದು ದುಸ್ತರ ಅಂತ ತಾಯ್ತಂದೆ ಗಳಿಗೆ ಗೊತ್ತಾಗೋ ಹೊತ್ತಿಗೆ ಮಕ್ಕಳ ವಿದ್ಯಾಭ್ಯಾಸಕ್ಕೆ ಪಟ್ಟಣಕ್ಕೆ ಹೋಗ್ಬೇಕಾದ ಪರಿಸ್ಥಿತಿ ಬಂದಿರತ್ತೆ."

ಹೀಗಂದು ಆತ ಮೌನ ವಹಿಸಿದ, ಒಂದೆರಡು ಸಲ ತನಗೆ ವಿಶಿಷ್ಟವಾಗಿದ್ದ ಶಬ್ದ ಹೊರಡಿಸಿದ; ಈಗದು ಅದುಮಿಕೊಂಡ ಬಿಕ್ಕುಗಳಂತೆ ಕೇಳಿಸ್ತು. ಯಾವುದೋ ಸ್ಟೇಷನ್ ಹತ್ತಿರ ಬರ್ತಿತ್ತು.

"ಗಂಟೆ ಎಷ್ಟು?" ಎಂದು ಕೇಳಿದ.

ಗಡಿಯಾರ ನೋಡಿಕೊಂಡೆ; ಎರಡು ಗಂಟೆಯಾಗಿತ್ತು.

"ನಿಮಗೆ ಸುಸ್ತಾಗಿದೆಯಾ?" ಅಂತ ಕೇಳಿದ

"ಉಹ್ಞೂ, ಆದರೆ ನಿಮಗೇ ಸುಸ್ತಾಗಿರ್ಬೇಕು" ಎಂದೆ.

"ನನಗೆ ಉಸಿರು ಬಿಗಿದುಕೋತಾ ಇದೆ. ಸ್ವಲ್ಪ ಅತ್ತಿತ್ತ ಓಡಾಡಿ ಒಂದಷ್ಟು ನೀರು ಕುಡೀಬೇಕು ನಾನು"

ಕ್ಯಾರೇಜು ಉದ್ದಕ್ಕೆ ಒಂದು ರೀತಿ ತಾರಾಡ್ತಾ ನಡೆದಾಡಿದ. ಅವನು ಹೇಳಿಕೊಂಡಿದ್ದರ ಬಗ್ಗೇನೇ ನನ್ನ ಮನಸ್ಸು ಯೋಚನೆ ಮಾಡ್ತಿತ್ತು. ನಾನು ಎಷ್ಟರ ಮಟ್ಟಿಗೆ

ಯೋಚನೇಲಿ ಮುಳುಗಿದ್ದೆ ಅಂದ್ರೆ, ಮತ್ತೆ ಅವನು ಕ್ಯಾರೇಜಿನ ದೂರದ ಬಾಗಿಲ ಮೂಲಕ ಮತ್ತೆ ವಾಪಸಾದದ್ದನ್ನೂ ನಾನು ಗಮನಿಸಲಿಲ್ಲ.

## 16

"ನನ್ನ ಯೋಚನಾಕ್ರಮ ಬದಲಾಗ್ತಿರತ್ತೆ. ಆ ವಿಷಯ ನಾನು ತುಂಬ ಆಲೋಚನೆ ಮಾಡಿದ್ದೀನಿ. ಎಷ್ಟೋ ವಿಷಯಗಳು ನನಗೀಗ ಬೇರೆ ರೀತಿ ಕಾಣೆಸ್ತಿವೆ; ಅದನ್ನೆಲ್ಲ ಹೇಳ್ಕೋಬೇಕು ಅನ್ನಿಸ್ತಿದೆ.

"ಹೀಗೇ ನಮ್ಮ ಬದುಕು ಸಾಗಿತ್ತು. ಒಬ್ಬ ವ್ಯಕ್ತಿ ಬದುಕಿದ್ದಾನೋ ಕೊಳೆತು ಹೋಗಿದಾನೋ ಅನ್ನೋದರ ಸುಳಿವು ಬೇರೆಯೋರಿಗೆ ಗೊತ್ತಾಗದ ಹಾಗೆ ಒಬ್ಬ ನಗರದಲ್ಲಿ ನೂರು ವರ್ಷ ಬದುಕ್ಬಹುದು. ತನ್ನ ಬಗ್ಗೆ ಯೋಚಿಸೋಕೇ ಅವನಿಗೆ ಪುರುಸೊತ್ತಿರಲ್ಲ, ಅಷ್ಟು ಕೆಲಸಕಾರ್ಯ ಅವನಿಗೆ. ವ್ಯವಹಾರಗಳು, ಸಾಮಾಜಿಕ ಸಂಬಂಧಗಳು, ಆರೋಗ್ಯ, ಕಲೆ, ಮಕ್ಕಳ ಆರೋಗ್ಯ, ಅವರ ವಿದ್ಯಾಭ್ಯಾಸ? ಹೀಗೇ. ಈಗ ಯಾರನ್ನೋ ನೋಡಬೇಕು, ಯಾರೋ ಮನೆಗೆ ಬರ್ತಾರೆ, ಬರಮಾಡಿಕೋಬೇಕು, ಅದನ್ನ ನೋಡ್ಬೇಕು, ಯಾವುದೋ ವ್ಯಕ್ತಿಯ ಮಾತುಗಳನ್ನ ಕೇಳ್ಬೇಕು ಇತ್ಯಾದಿ. ಪ್ರತಿ ನಗರದಲ್ಲೂ ಮಿಸ್ ಮಾಡಿಕೋಬಾರದಂಥ ಇಬ್ಬರೋ ಮೂವರೋ ಗಣ್ಯರಿರ್ತಾರೆ. ಇಲ್ಲ ತಾನೇ ಚಿಕಿತ್ಸೆ ಪಡೀಬೇಕು ಅಥವಾ ಯಾರೋ ಕಾಯಿಲೆ ಮಲಗಿದ್ದರೆ ನೋಡಿಕೋಬೇಕು; ಅಲ್ಲದೆ ಮೇಷ್ಟ್ರುಗಳು, ದಾದಿಯರು ಇವರುಗಳ ಜೊತೆ ಮಾತಾಡಬೇಕು. ಇಷ್ಟಾದ್ರೂ ಅವನ ಬದುಕು ಖಾಲಿ ಖಾಲಿ. ಹೀಗೇ ನಗರದಲ್ಲಿ ನಾವಿಬ್ರೂ ಬದುಕಿದ್ವಿ, ಆಗ ಜೊತೇಲಿರೋದ್ರಿಂದ ಆಗೋ ನೋವು ಕೊಂಚ ಕಡಿಮೆ ಇತ್ತು. ಅಲ್ಲದೆ, ಮೊದಮೊದಲಿಗೆ ನಮಗೆ ಉತ್ಸಾಹ ತರೋ ಕಾರ್ಯಗಳಿರ್ತಿದ್ವು. ಹೊಸ ಜಾಗದಲ್ಲಿ ಸಾಮಗ್ರಿಗಳನ್ನು ಜೋಡಿಸಿಡೋದು ಇವೂ ಇರ್ತಿದ್ವು, ಜೊತೆಗೆ ನಗರದಿಂದ ಹಳ್ಳಿಗೆ ಹೋಗೋದು ವಾಪಸ್ಸು ಬರೋದು ಇದು ಬೇರೆ.

"ಹೀಗೆ ನಾವು ಒಂದು ಮಾಗೀ ಕಾಲ ಕಳೆದ್ವಿ. ಆದರೆ ಮಾರನೇ ಮಾಗಿ ಹೊತ್ತಿಗೆ ಯಾರಿಗೂ ಗೊತ್ತಾಗದ ಹಾಗೆ, ಹೊರನೋಟಕ್ಕೆ ಅಮುಖ್ಯ ಅನ್ನಿಸೋ, ಆದರೆ ಮುಂದೆ ಆದದ್ದಕ್ಕೆಲ್ಲ ಕಾರಣವಾಗೋ ಒಂದು ಘಟನೆ ನಡೀತು. ಅವಳಿಗೆ ಮೈಲಿ ಹುಷಾರಿರಲಿಲ್ಲ, ಇನ್ಮುಂದೆ ಮಕ್ಕಳಾಗದ ಹಾಗೆ ನೋಡ್ಕೋಬೇಕು ಅಂತ ವೈದ್ಯರು ಹೇಳಿ, ಬಸುರಾಗದ ಹಾಗೆ ಏನು ಮಾಡ್ಬೇಕು ಅಂತಾನೂ ಹೇಳಿಕೊಟ್ರು. ಅದೋ ನನಗೆ ಅಸಹ್ಯ ಹುಟ್ಟಿಸ್ತಿತ್ತು. ನಾನು ಅದರ ವಿರುದ್ಧ ಪ್ರಬಲವಾಗೇ ಹೋರಾಡಿದೆ, ಆದರೆ ಅವಳು ಮಾತ್ರ ತನ್ನದೇ ದಾರೀಲಿ ನಡೆಯೋ ಒತ್ತಾಯ ಮಾಡಿದ್ಳು, ಅದಕ್ಕೆ ನಾನು ಮಣಿಯಬೇಕಾಯ್ತು. ನಮ್ಮ ಹಂದಿಬಾಳುವೆಯಿಂದ ಮಕ್ಕಳು ಇಲ್ಲವಾಗಿತ್ತು, ಹೀಗಾಗಿ ಬದುಕು ಎಂದಿಗಿಂತ ವಿಷಮಯವಾಯ್ತು.

"ಸಾಕೋದು ಕಷ್ಟ ಆದ್ರೂ, ಒಬ್ಬ ರೈತನಿಗೋ, ಕಾರ್ಮಿಕನಿಗೋ ಮಕ್ಕಳು ಅವಶ್ಯಕ;

ಹೀಗಾಗಿ ಅವರ ದಾಂಪತ್ಯಕ್ಕೆ ಒಂದು ಅರ್ಥ ಇರತ್ತೆ. ಆದ್ರೆ ಈಗಾಗ್ಲೇ ಮಕ್ಕಳಿರೋ ನಮಗೆ ಮತ್ತಷ್ಟು ಮಕ್ಕಳು ಅನವಶ್ಯಕ. ಅವುಗಳಿದ್ರೆ ಹೆಚ್ಚಿನ ನಿಗಾ ವಹಿಸಬೇಕು, ಖರ್ಚು ಬೇರೆ ಹೆಚ್ಚಾಗತ್ತೆ, ಆಸ್ತೀನ ಮತ್ತಷ್ಟು ಪಾಲು ಮಾಡ್ಬೇಕು, ಹೊರೆ ಹೆಚ್ಚತ್ತೆ. ಹೀಗಾಗಿ ನಮ್ಮ ಹಂದಿಬಾಳುವೆಗೆ ಯಾವ ಸಮರ್ಥನೆಯೂ ಇರ್ಲಿಲ್ಲ. ಮಕ್ಕಳಾಗದ ಹಾಗೆ ನಾವು ಕೃತಕ ದಾರಿ ಹಿಡೀಬೇಕು, ಆದ್ರೆ ಅವುಗಳನ್ನ ಪೀಡೆ ಅಂತ ಭಾವಿಸ್ಬೇಕು. ಆದರಿಂದ ಅವರ ಬಗ್ಗೆ ತಾತ್ಸಾರ. ಇದು ಮತ್ತಷ್ಟು ಭಯಂಕರ.

"ನಮಗೆ ಯಾವುದೇ ಸಮರ್ಥನೆಯಿಲ್ಲ. ಆದ್ರೆ ನಾವು ನೈತಿಕವಾಗಿ ಎಷ್ಟು ಪತನಗೊಂಡಿದ್ವಿ ಅಂದ್ರೆ, ನಮ್ಮ ಬದುಕಿಗೆ ಯಾವುದೇ ಸಮರ್ಥನೆಯ ಅವಶ್ಯಕತೆಯೂ ಬೇಡ ಅನ್ನಿಸ್ತು. ಇವತ್ತಿನ ವಿದ್ಯಾವಂತ ಸಮಾಜದಲ್ಲಿ ಬಹು ಮಂದಿ ಇಂಥ ಹಾದರದ ಬದುಕಿಗೇ ತಮ್ಮನ್ನ ತೆತ್ತುಕೊಂಡಿರ್ತಾರೆ. ಅಂತವರಿಗೆ ಒಂದಿಷ್ಟೂ ಸಾಕ್ಷಿಪ್ರಜ್ಞೆ ಅನ್ನೋದು ಇರೋಲ್ಲ. ನಮ್ಮ ಸಮಾಜದಲ್ಲಿ ಆತ್ಮಸಾಕ್ಷಿಯೇ ಇಲ್ದಿರೋದ್ರಿಂದ, ಜನಾಭಿಪ್ರಾಯ ಹಾಗೂ ಅಪರಾಧ ಕಾನೂನುಗಳನ್ನೇ 'ಆತ್ಮಸಾಕ್ಷಿ' ಅಂತ ಕರೆಯದಿದ್ದರೆ, ಯಾವುದೂ ನಮ್ಮಲ್ಲಿ ಧರ್ಮಸೂಕ್ಷ್ಮದ ಭಾವನೆಯನ್ನುಂಟುಮಾಡಲಾರದು. ಈ ವಿಷಯದಲ್ಲಂತೂ, ಇಬ್ಬರಲ್ಲಿ ಯಾರೂ ಉಲ್ಲಂಘನೆ ಮಾಡಿದ ಹಾಗಾಗೋದಿಲ್ಲ, ಜನಾಭಿಪ್ರಾಯದ ಬಗ್ಗೆ ಯಾರೂ ಭಯಪಡಬೇಕಾದ್ದಿಲ್ಲ, ಯಾಕೇಂದ್ರೆ ಎಲ್ಲರು ನಡೆದುಕೊಳ್ಳೋದೂ ಹಾಗೇನೇ: ಮೇರಿ ಪಾವ್ಲೋವ್ನಾ, ಇವಾನ್ ಜಸಿಕಾರ್ಯಿಚ್, ಯಾರೆಲ್ಲರೂ. ದರಿದ್ರರನ್ನಾಗಲೀ, ಸಾಮಾಜಿಕ ಬದುಕಿಗೆ ಎರವಾಗೋ ಸಾಧ್ಯತೆ ಇರುವವರನ್ನಾಗಲೀ ಯಾಕೆ ಹುಟ್ಟಿಸ್ಬೇಕೂಂತ? ಅಥವಾ ಅಪರಾಧ ಕಾನೂನುಗಳ ಹಿನ್ನೆಲೆಯಲ್ಲಿ ಯಾವುದರ ಬಗ್ಗೆಯಾದ್ರೂ ಭಯಪಡೋದಾಗಲೀ, ನಾಚಿಕೆಪಡೋದಾಗಲೀ ಅವಶ್ಯಕವಿಲ್ಲ. ನಾಚಿಕೆಬಿಟ್ಟ ಗಂಡುಬೀರಿಗಳೂ ಸೈನಿಕರ ಹೆಂಡತೀರೂ ತಮ್ಮ ಹಸುಗೂಸುಗಳನ್ನ ಬಾವಿಗೋ ಚರಂಡೀಗೋ ಎಸೀತಾರೆ; ನ್ಯಾಯವಾಗಿ ಅವರನ್ನ ಜೈಲಿಗೆ ಕಳಿಸ್ಬೇಕು, ಆದರೆ ಅವರೆಲ್ಲ ಮಾಡೋದನ್ನ ಸರಿಯಾದ ಸಮಯದಲ್ಲೂ ಯಾರಿಗೂ ಗೊತ್ತಾಗದ ಹಾಗೆಯೂ ಮಾಡ್ತಾರೆ.

"ನಾವು ಹೀಗೆಯೇ ಇನ್ನೂ ಎರಡು ವರ್ಷ ಬದುಕಿದ್ವಿ. ಆ ಹಲಾಲುಕೋರ ವೈದ್ಯರು ಅಳವಡಿಸ್ಕೊಳ್ಳೋ ಸಾಧನ ಪರಿಣಾಮ ಬೀರಕ್ಕೆ ಶುರುಮಾಡ್ತು; ಅವಳು ದೈಹಿಕವಾಗಿ ಮೈಕೈ ತುಂಬಿಕೊಂಡು ನೋಡಕ್ಕೆ ಹಿಂದಿಗಿಂತ ಚೆಲುವಾದಳು, ವಸಂತದ ಕೊನೆಗೆ ಪ್ರಕೃತಿ ಇರತ್ತಲ್ಲ ಹಾಗೆ. ಅವಳಿಗೂ ಇದು ಗೊತ್ತಾಗಿ ತನ್ನ ಸೌಂದರ್ಯದ ಕಡೆಗೇ ಅವಳು ಹೆಚ್ಚು ಗಮನ ಕೊಡಕ್ಕೆ ಶುರುಮಾಡಿದಳು. ಅವಳ ಚೆಲುವು ಉದ್ರೇಕಗೊಳಿಸೋ ಹಾಗಾಯ್ತು, ಅದ್ರಿಂದ ನೋಡಿದೋರ ಮನಸ್ಸುಗಳು ಚಂಚಲವಾಯ್ತು. ಅವಳು ಮಕ್ಕಳನ್ನು ಹೆರದ ಗಟ್ಟಿಮುಟ್ಟಾದ ಹಾಗೂ ಬೆದೆ ತುಂಬಿದ ಮೂವತ್ತರ ಹೆಣ್ಣಾದಳು. ಅವಳ ನೋಟ ಜನರನ್ನ ಅಲ್ಲಾಡಿಸ್ತು. ಗಂಡಸರ ಮುಂದೆ ಸುಳಿದಾಗ ಎಲ್ಲರ ಕಣ್ಣು ಅವಳ ಮೇಲೇ ಬೀಳೋ ಹಾಗಾಯ್ತು. ನೋಡಕ್ಕೆ ಅವಳು ಮಜಬೂತಾಗಿ ಬೆಳೆಸಿರೋ

ಲಗಾಮು ಕಳಚಿದ ತಾಜಾ ಕುದುರೆ ಥರ ಆದಳು. ನೂರಕ್ಕೆ ತೊಂಬತ್ತೊಂಬತ್ತು ಮಂದಿ ಹೆಂಗಸ್ರಿಗೆ ಕಡಿವಾಣವೇ ಇರಲಿಲ್ಲ. ಇದು ನನಗೆ ಗೊತ್ತಾಗಿ ಭಯ ಹುಟ್ಟಿತು."

## 17

ಅವನು ಇದ್ದಕ್ಕಿದ್ದ ಹಾಗೆಯೇ ಮೇಲೆದ್ದು ಕಿಟಕಿ ಹತ್ತಿರ ಹೋಗಿ ನಿಂತ.

"ಕ್ಷಮಿಸಿ" ಎಂದು ಗೊಣಗಿಕೊಂಡು ಕಿಟಕಿ ಕಡೆಯೇ ತನ್ನ ಕಣ್ಣು ನೆಟ್ಟು ಮೂರು ನಿಮಿಷದಷ್ಟು ಹೊತ್ತು ಸುಮ್ಮನೇ ನಿಂತುಕೊಂಡ. ಆನಂತರ ನೀಳವಾದ ಉಸಿರು ಬಿಟ್ಟು ನನ್ನ ಎದುರಿನ ಸೀಟಿಗೆ ವಾಪಸಾದ. ಅವನ ಮುಖಲಕ್ಷಣ ಬದಲಾಗಿತ್ತು, ಕಣ್ಣುಗಳಲ್ಲಿ ವಿಷಾದ ಮಡುಗಟ್ಟಿತ್ತು, ತುಟಿಗಳು ವಿಚಿತ್ರವಾಗಿ ನಡುಗುತ್ತಿದ್ದುವು, ನೋಡೋರ್ಗೆ ನಗ್ತಿರೋ ಹಾಗೆ ಕಾಣಿಸೋ ರೀತೀಲಿ. "ನನಗೆ ದಣಿವೇನೋ ಆಗಿದೆ; ಆದರೆ ಕತೆ ಮುಂದುವರಿಸ್ತೀನಿ. ಇನ್ನೂ ಬೇಕಾದಷ್ಟು ಹೊತ್ತಿದೆ ನಮಗೆ, ಬೆಳಕು ಇನ್ನೂ ಹರಿದಿಲ್ಲ" ಎಂದು ಸಿಗರೇಟೊಂದನ್ನ ಹಚ್ಚಿ ಮುಂದುವರಿಸಿದ: "ಮಕ್ಕಳಾಗೋದು ನಿಂತ ಮೇಲೆ ಅವಳು ದುಂಡುದುಂಡಾದಳು; ಅವಳ ರೋಗ ಅದೇ, ಮಕ್ಕಳ ಬಗ್ಗೆ ಸದಾ ಚಿಂತಿಸೋದು ನಿಧಾನವಾಗಿ ಹೋಯ್ತು. ನಿಜವಾಗಿ ಹೋಯ್ತು ಅನ್ನಕ್ಕಾಗ್ದೇ ಇದ್ರೂ, ಒಂಥರ ಯಾವುದೋ ಅಮಲಿನಿಂದ ಹೊರಬಂದು ಸಾವರಿಸಿಕೊಂಡ ಹಾಗಾದಳು. ತಾನು ಮರೆತುಬಿಟ್ಟಿದ್ದಂಥ ಸುಖಸಂತೋಷ ತುಂಬಿದ ಅದ್ಭುತವಾದ ಜಗತ್ತು ಎದುರಿಗಿರೋ ಥರ ಅವಳಿಗಾಯ್ತು, ಅದರಲ್ಲಿ ತಾನು ಹೇಗೆ ಬದುಕ್ಬೇಕು ಅನ್ನೋದು ಮರೆತುಹೋಗಿದ್ದ ಮರಳಿ ಬಾರದ ಬದುಕು ಅದು ಅನ್ನೋ ಥರ. 'ಇದನ್ನ ನಾನು ಕಳಕೊಳ್ಳಬಾರದು, ಸರಿದು ಹೋದ ಕಾಲ ಮರಳಿ ಬಾರದು' ಅಂತ ಅವಳಿಗನ್ನಿಸಿರ್ಬೇಕು ಅಂತ ಕಾಣತ್ತೆ ಅಥವಾ ಅವಳ ಮನಸ್ಸಲ್ಲಿ ಬೇರೆ ಥರ ಆಲೋಚನೆ ಇತ್ತೋ! ಪ್ರಪಂಚದಲ್ಲಿ ಒಂದು ವಿಷಯ ಮಾತ್ರ ಗಮನಿಸಬೇಕಾದಂಥದ್ದು ಇರೋದು? ಅದು ಅಂದ್ರೆ ಪ್ರೀತಿ ಅನ್ನೋ ವಾತಾವರಣದಲ್ಲಿ ಅವಳು ಬೆಳೆದಿದ್ದವಳು. ಮದುವೆಯಾಗಿ ಅದು ಅವಳಿಗೊಂದಷ್ಟು ಅನುಭವಕ್ಕೆ ಬಂದಿತ್ತು, ಅಂದುಕೊಂಡ ಮಟ್ಟಿಗಲ್ಲದಿದ್ದರೂ. ಅದರಲ್ಲೂ ಎಷ್ಟೋ ಸಲ ನಿರಾಸೆ, ಸಂಕಟ, ಕೊನೆಗೆ ಇಷ್ಟೊಂದು ಮಕ್ಕಳನ್ನ ಹೆರೋ ಅನಿರೀಕ್ಷಿತವಾದ ಈ ನೋವು! ಈ ಪೀಡೆಗಳು ಅವಳನ್ನು ಸುಸ್ತುಮಾಡಿದ್ದು. ಆಮೇಲೆ, ಅನುಕೂಲಕರರಾದ ವೈದ್ಯರುಗಳ ಕೃಪೆಯಿಂದಾಗಿ, ಮಕ್ಕಳನ್ನು ಹೆರೋದ್ರಿಂದ ಪಾರಾಗೋದು ಹೇಗೇಂತ ಅವಳು ತಿಳಕೊಂಡಳು. ಅವಳಿಗಂತೂ ತುಂಬ ಸಂತೋಷವಾಯಿತು, ವೈದ್ಯರು ಹೇಳಿದ್ದನ್ನ ಪಾಲಿಸಿದಳು, ಮತ್ತೆ ಅವಳಿಗೆ ಗೊತ್ತಿದ್ದ ಒಂದೇ ಒಂದು ವಿಷಯದ ಬಗ್ಗೆ ಪ್ರೀತಿ - ಆಸಕ್ತಿ ಮೂಡಿತು. ಆದರೆ ಒಬ್ಬ ಗಂಡನ ಜೊತೆಗಿನ ಪ್ರೀತಿ, ಅದೂ ಹೊಟ್ಟೆಕಿಚ್ಚು ಕೋಪಗಳಿಂದ ಕುದಿಯುವವನ ಜೊತೆ, ಅವಳು ಬಯಸಿದ ವಸ್ತುವಾಗಿರ್ಲಿಲ್ಲ. ಇನ್ನಾವುದೋ ಬಗೆಯ, ಶುಭ್ರವೂ ಹೊಸಬಗೆಯದೂ ಆದ ಪ್ರೀತಿಯ ಬಗ್ಗೆ ಅವಳ ಕನಸುಗಳು ಗರಿಗೆದರಿದುವು ಅಥವಾ ಅವಳ ಮನಸ್ಸಲ್ಲಿ ಹೀಗಾಯ್ತು ಅಂತ ನನಗನ್ನಿಸಿತು.

ಏನೋ ನಿರೀಕ್ಷೆ ಮಾಡುವವಳ ಹಾಗೆ ಸುತ್ತಮುತ್ತಲೂ ನೋಡ ತೊಡಗಿದಳು. ಇದನ್ನು ಗಮನಿಸಿದ ನನಗೆ ಆತಂಕವಾಯಿತು. ನನ್ನ ಜೊತೆ, ಯಥಾಪ್ರಕಾರ ಬೇರೆಯವರ ಮೂಲಕ, ಅಂದರೆ ನನ್ನ ಬಗ್ಗೆ ಅನ್ನಿಸಿದ್ದನ್ನ ಬೇರೆಯವರ ಮೂಲಕ ಹೇಳಿಸೋದು - ಮಾತಾಡುವಾಗ ಪದೇ ಪದೇ ಹೀಗಾಗ್ತಿತ್ತು. ತಾನೇ ಹಿಂದೆ ವ್ಯಕ್ತಪಡಿಸಿದ್ದನ್ನು ಮರೆತು ಅದಕ್ಕೆ ವಿರುದ್ಧವಾದ ರೀತೀಲಿ, ಅರ್ಧ ತಮಾಷೆಯ ಧಾಟಿಯಲ್ಲಿ, ಮಕ್ಕಳ ಆರೈಕೆ ಅನ್ನೋದು ಶುದ್ಧ ಮೋಸ, ಚಿಕ್ಕ ವಯಸ್ಸಿನ ತಾಯಿ ಮಕ್ಕಳ ಯೋಗಕ್ಷೇಮಕ್ಕಾಗಿ ತನ್ನ ಜೀವನ ಮುಡಿಪಾಗಿಡೋದು ವ್ಯರ್ಥ ಅಂತ ಧೈರ್ಯವಾಗಿ ಹೇಳಕ್ಕೆ ಶುರುಮಾಡಿದಳು. ಮಕ್ಕಳ ಕಡೆಗಿನ ಅವಳ ಗಮನ ಕಮ್ಮಿಯೂ ಆಯಿತು, ಅದರಲ್ಲಿ ಹಿಂದಿನ ಶ್ರದ್ಧೆಯೂ ಇರಲಿಲ್ಲ. ತನ್ನ ಬಗ್ಗೆಯೇ ಅವಳ ಗಮನ ಹೆಚ್ಚಾಯಿತು, ತನ್ನ ಅಲಂಕಾರ, ತನ್ನ ಸಂತೋಷ, ತನ್ನ ಬಿನ್ನಾಣ ಇವುಗಳ ಬಗ್ಗೆ. ಇದುವರೆಗೆ ಮೂಲೆಗುಂಪು ಮಾಡಿದ್ದ ಪಿಯಾನೋ ಕಡೆ ಅವಳ ಆಸಕ್ತಿ ಮತ್ತೆ ಹರೀತು. ಮುಂದಿನದಕ್ಕೆಲ್ಲ ಅದೇ ಕಾರಣವೂ ಆಯ್ತು."

ತನ್ನ ದಣಿದ ಕಣ್ಣುಗಳನ್ನವನು ಮತ್ತೆ ಕಿಟಕಿಯ ಕಡೆಗೆ ತಿರುಗಿಸಿದ. ಆದರೆ ಮರುಕ್ಷಣದಲ್ಲಿ ಪ್ರಯತ್ನಪೂರ್ವಕವಾಗಿ ತನ್ನ ಕಥನವನ್ನು ಮುಂದುವರಿಸಿದ.

"ಹ್ಞೂ. ಆ ಮನುಷ್ಯ ಮತ್ತೆ ಕಾಣಿಸಿಕೊಂಡ??" ಎಂದು ಹೇಳಿದವನು ಗೊಂದಲದಲ್ಲಿ ಸಿಲುಕಿದವನಂತೆ ಕಾಣಿಸಿದ; ಮತ್ತೆ ಒಂದೋ ಎರಡೋ ಬಾರಿ ತನ್ನ ವಿಚಿತ್ರ ಸದ್ದನ್ನು ಮಾಡಿದ. ಆ ಮನುಷ್ಯನ ಬಗ್ಗೆ ನೆನಪಿಸಿಕೊಳ್ಳುವುದು ಅವನಿಗೆ ಕಷ್ಟಕರವಾಗಿತ್ತು ಎನ್ನುವುದು ನನಗೆ ಗೊತ್ತಾಯಿತು. ಆದರೆ ಮತ್ತೆ ಪ್ರಯತ್ನಪಟ್ಟು, ತನಗಾಗುತ್ತಿದ್ದ ಕಷ್ಟವನ್ನು ಬದಿಗೊತ್ತಿದವನಂತೆ, ಅವನ ಬಗ್ಗೆ ನಿರ್ಧಾರದಿಂದ ಮಾತನಾಡ ತೊಡಗಿದ.

"ನನ್ನ ದೃಷ್ಟಿಯಲ್ಲಿ ಹಾಗೂ ಅಂದಾಜಿನಲ್ಲಿ ಅವನು ಕೆಲಸಕ್ಕೆ ಬಾರದ ವ್ಯಕ್ತಿ. ನನ್ನ ಬದುಕಿನಲ್ಲವನು ಗಳಿಸಿಕೊಂಡ ಮಹತ್ವದಿಂದಾಗಿ ಈ ಮಾತಾಡುತ್ತಿಲ್ಲ, ಅವನು ನಿಜವಾಗಿಯೂ ಹಾಗೇ ಇದ್ದವನು. ಆದರೇನು, ಅವನು ಹಾಗಿದ್ದ ಅನ್ನುವುದರಿಂದಲೇ ಅವಳೆಷ್ಟು ಬೇಜವಾಬ್ದಾರಿ ಹೆಂಗಸು ಅನ್ನೋದು ಮನದಟ್ಟಾಗುತ್ತೆ. ಅವನಲ್ಲದಿದ್ರೆ, ಮತ್ತೊಬ್ಬ, ಅಷ್ಟೆ ಎಂದು ಮತ್ತೆ ನಿಲ್ಲಿಸಿದ.

"ಹೌದು, ಅವನು ಸಂಗೀತಗಾರ, ಪಿಟೀಲುವಾದಕ; ವೃತ್ತಿಯಿಂದಲ್ಲ, ಹವ್ಯಾಸದಿಂದ, ಜೊತೆಗೆ ಅವನ ಮಟ್ಟವೂ ಅಷ್ಟಕ್ಕಷ್ಟೇ. ಅವನ ತಂದೆ ಒಬ್ಬ ಜಮೀನುದಾರ, ನಮ್ಮ ತಂದೆ ಜಮೀನಿನ ಪಕ್ಕದಲ್ಲೇ ಅವನ ಜಮೀನು. ಅವನೋ ಪಾತಾಳಕ್ಕಿಳಿದಿದ್ದೋನು, ಅವನ ಮಕ್ಕಳು? ಅವನಿಗೆ ಮೂವರು ಗಂಡುಮಕ್ಕಳು ಜೀವನದಲ್ಲಿ ನೆಲೆ ನಿಂತಿದ್ದವರು. ಆದರೆ ಇವನು, ಅವರಲ್ಲೆಲ್ಲ ಕಿರಿಯ ಮಾತ್ರ ಪ್ಯಾರಿಸ್‌ನಲ್ಲಿದ್ದ ಸಾಕು ಅಜ್ಜಿಯ ಆರೈಕೆಯಲ್ಲಿದ್ದೋನು. ಅವನಿಗೆ ಸಂಗೀತದಲ್ಲಿ ಆಸಕ್ತಿ

ಇದ್ದದ್ದರಿಂದ ಕನ್ಸರ್ವೇಟರ್ಗೆ ಕಳಿಸಿದ್ರು; ಹೀಗಾಗಿ ಅವನು ಪಿಟೀಲುವಾದನ ಕಲಿತು ಕಛೇರಿಗಳನ್ನೂ ಕೊಡ್ತಿದ್ದ. ಅವನೊಬ್ಬ" ಅವನ ಬಗ್ಗೆ ಕೆಟ್ಟುದನ್ನು ಏನೋ ಹೇಳಬೇಕೆಂದಿದ್ದವನು ಪೋಜಿಸ್ನಿಶೆವ್ ತಡೆದುಕೊಂಡು ಲಗುಬಗೆಯಿಂದ "ಅವನು ಹೇಗೆ ಬದುಕ್ತಿದ್ದ ಅನ್ನೋದು ನಂಗೆ ಸರಿಯಾಗಿ ಗೊತ್ತಿಲ್ಲ, ಆದರೆ ಆ ವರ್ಷ ರಷ್ಯಕ್ಕೆ ವಾಪಸಾದೋನು ನಮ್ಮ ಮನೇಲಿ ಪ್ರತ್ಯಕ್ಷನಾದ."

"ಒದ್ದೆಯಾದ ಬಾದಾಮಿ ಆಕಾರದ ಕಣ್ಣುಗಳು, ಮುಗುಳ್ನಗುವ ಕೆಂದುಟಿಗಳು, ಕಿರಿದಾದ ಮೀಸೆ, ಇತ್ತೀಚಿನ ಶೈಲಿಯಲ್ಲಿ ಅಲಂಕರಿಸಿಕೊಂಡ ತಲೆಗೂದಲು, ಚೆಲುವಾದ ಆದರೆ ನಿಸ್ತೇಜವಾದ ಮುಖ? ಒಟ್ಟಾರೆ, ಹೆಂಗಸರು ಹೇಳೋ ಹಾಗೆ? ಪರವಾಗಿಲ್ಲ ಅನ್ನೋ ರೂಪು ಅವಂದು. ವಿಕೃತವಾಗಿಲ್ಲದಿದ್ದರೂ ಕೃಶವಾದ ಮೈಕಟ್ಟು, ಹೆಂಗಸರಿಗಿದ್ದ ಹಾಗೆ ಉಬ್ಬಿದ ಪಿರ್ರೆಗಳು. ಪರಿಚಯಕ್ಕಾಗಿ ಹಾತೊರೆಯೋ ಅಂಥವನು, ಆದರೆ ಸೂಕ್ಷ್ಮಗ್ರಾಹಿ, ಕೊಂಚ ಪ್ರತಿರೋಧ ಬಂದರೂ ಶರಣಾಗುವ ಸ್ವಭಾವ, ಆದರೆ ಹೊರನೋಟಕ್ಕೆ ಘನತೆವೆತ್ತಂತಿದ್ದವನು. ಪ್ಯಾರಿಸ್ ಫ್ಯಾಷನ್ನಿನ ಬೂಟು ತೊಟ್ಟು, ಬಣ್ಣದ ಟೈ ಧರಿಸಿದ್ದ, ಜೊತೆಗೆ ಪ್ಯಾರಿಸ್‌ನ ವಿದೇಶೀಯರು ಕಲಿತುಕೊಳ್ಳೊ ಲಕ್ಷಣಗಳೂ ಅವನಲ್ಲಿದ್ವು. ಒಂಥರ ಗತ್ತು, ಏನು ಹೇಳಿದರೂ ಯಾವದರ ಬಗ್ಗೇನೋ ಸೂಚಿಸ್ತಾ, ಅರೆಬರೆ ವಾಕ್ಯದಲ್ಲಿ ಮಾತಾಡೋನು, ಅವನು ಹೇಳೋದೆಲ್ಲ ನಿಮಗೆ ಗೊತ್ತಿರೋ ಹಾಗೆ.

"ಅವನು ಮತ್ತವನ ಸಂಗೀತ ಎಲ್ಲಕ್ಕೂ ಕಾರಣ ಆಯ್ತು. ವಿಚಾರಣೆ ಹೊತ್ತಲ್ಲಿ ಎಲ್ಲವೂ ಹೊಟ್ಟೆಕಿಚ್ಚಿಂದ ಆದದ್ದು ಅಂತ ವಾದಿಸಿದ್ರಲ್ಲ. ಅಂಥದ್ದೇನೂ ಇರ್ಲಿಲ್ಲ ಅಥವಾ ಇದ್ದೂ ಇದ್ದ ಹಾಗಿತ್ತು. ಆದ್ರೆ ಮನೆಯ ಘನತೆ ಉಳಿಸ್ಕೊಳ್ಳೋಕ್ಕೋಸ್ಕರ ಹೆಂಡತೀನ ಕೊಂದವನು ಅಂತ ವಿಚಾರಣೇಲಿ ಹೇಳಿದ್ರು. ಅದಕ್ಕೇ ನನಗೆ ಬಿಡುಗಡೆಯಾಯ್ತು. ನಾನೇನೋ ಎಲ್ಲ ವಿವರಿಸೋದಕ್ಕೆ ಪ್ರಯತ್ನಿಸ್ದೆ, ಆದ್ರೆ ನನ್ನ ಹೆಂಡತಿ ಮರ್ಯಾದೆ ಉಳಿಸೋದಕ್ಕೆ ಹಾಗೆ ಹೇಳ್ತಿದ್ದೀನಿ ಅಂತ ಭಾವಿಸಿದ್ರು.

"ಆ ಸಂಗೀತಗಾರನ ಜೊತೆಗೆ ನನ್ನ ಹೆಂಡತಿ ಸಂಬಂಧ ಎಂಥದು ಅನ್ನೋದು ನಂಗೆ ಮುಖ್ಯವಾಗಿರ್ಲಿಲ್ಲ, ಅವಳಿಗೂ ಅದು ಮುಖ್ಯವಾಗಿರ್ಲಿಲ್ಲ. ಮುಖ್ಯವಾದ್ದು ಅಂದ್ರೆ, ಆಗ್ಲೇ ಹೇಳಿದೆನಲ್ಲ, ನನ್ನ ಹೊಲಸು ಸ್ವಭಾವ. ಎಲ್ಲಕ್ಕೂ ಕಾರಣ ನಮ್ಮಿಬ್ಬರ ನಡುವಣ ಕಂದಕ, ಪರಸ್ಪರ ಹೊಂದಿದ್ದ ದ್ವೇಷ. ಸ್ವಲ್ಪ ಹಿಂದೆ ನಡೆದಿದ್ದ ನಮ್ಮಿಬ್ಬರ ಮಧ್ಯದ ಜಗಳಗಳು ಭಯಂಕರ ರೂಪ ತಾಳಿದ್ವು, ಮತ್ತಷ್ಟು ಗಾಬರಿಗೊಳಿಸೋ ಅಂಥದು ಅಂದ್ರೆ ನಮ್ಮಿಬ್ಬರಲ್ಲಿ ಒಂದ್ಸಲ ತೀವ್ರ ವ್ಯಾಮೋಹ ಮತ್ತೊಂದ್ಸಲ ಆಳವಾದ ದ್ವೇಷ ಉಂಟಾಗ್ತಿದ್ದದ್ದು.

"ಅವನೇನಾದ್ರೂ ಇಲ್ಲದೆ ಇದ್ದಿದ್ರೆ ಇನ್ನಾವನೋ ಒಬ್ಬ ಇರ್ತಿದ್ದ, ಅಷ್ಟೆ. ಅದರಿಂದ ಹೊಟ್ಟೆಕಿಚ್ಚಲ್ಲದಿದ್ರೆ ಇನ್ನೇನಾದ್ರೂ ಉಂಟಾಗ್ತಿತ್ತು. ನನ್ನ ಥರ ಬದುಕೋ ಎಲ್ಲ ಗಂಡಂದಿರೂ ಬೇರೆಯಾಗಿ ಲಂಪಟರಾಗಿ ಬದುಕ್ಬೇಕು, ಇಲ್ಲ ಆತ್ಮಹತ್ಯೆ ಮಾಡ್ಕೋಬೇಕು

ಅಥವಾ ನಾನು ಮಾಡಿದ ಹಾಗೆ ಹೆಂಡತೀನ ಕೊಲ್ಲಬೇಕು. ಇದ್ಯಾವುದನ್ನೂ ಮಾಡದೇ ಇರೋನು ನಿಜವಾಗಿ ಪುಣ್ಯಾತ್ಮ. ಈ ಥರ ಮಾಡಕ್ಕೆ ಮುಂಚೆ, ನಾನೆಷ್ಟೋ ಸಲ ಆತ್ಮಹತ್ಯೆ ಮಾಡಿಕೊಳ್ಳೋ ಆಲೋಚನೇಲಿ ಇದ್ದೆ, ಅವಳು ಎಷ್ಟೋ ಸಲ ವಿಷ ಕುಡಿಯೋಕ್ಕೆ ಪ್ರಯತ್ನಪಟ್ಟಿದ್ಳು."

## 18

"ಇದೆಲ್ಲ ಆಗಕ್ಕೆ ಸ್ವಲ್ಪ ಕಾಲ ಮುಂಚೆ ಇಷ್ಟೆಲ್ಲ ನಡೀತು. ಒಪ್ಪಂದಕ್ಕೆ ಕಟ್ಟುಬಿದ್ದು ನಾವು ಬದುಕ್ತಿದ್ದ ಹಾಗೆ, ಅದನ್ನ ಮುರಿಯೋಕೆ ಕಾರಣ ಇಲ್ದೆ ಇರೋರ ಹಾಗೆ ಇದ್ದೆವು. ಒಮ್ಮೆ, ಯಾವುದೋ ಪ್ರದರ್ಶನದಲ್ಲಿ ಪದಕ ಗಳಿಸಿದ್ದ ನಾಯೊಂದರ ಬಗ್ಗೆ ಮಾತಾಡೋ ಅವಕಾಶ ಬಂತು. 'ಬರೀ ಪದಕ ಅಲ್ಲ, ಅದರ ಬಗ್ಗೆ ಗೌರವಯುತ ಉಲ್ಲೇಖ ಕೂಡ' ಅಂದಳು ನನ್ನ ಹೆಂಡತಿ. ಇದು ಒಂದು ವಿವಾದಕ್ಕೆ ಬೀಜವಾಯ್ತು. ಒಂದು ವಿಷಯದಿಂದ ಮತ್ತೊಂದಕ್ಕೆ ಜಿಗಿಯುತ್ತ ನಾವು ಒಬ್ಬರನ್ನೊಬ್ಬರು ಬೈಯೋಕೆ ಶುರುಮಾಡಿದ್ವಿ. ಯಾವಾಗ್ಲೂ ಆಗ್ತಾ ಇದ್ದದ್ದು ಹಾಗೇನೇ. 'ನೀವು ಹೀಗಂದ್ರಿ' ಅಂತ ಅವಳು; 'ನಾನು ಹಾಗೆ ಹೇಳಲೇ ಇಲ್ಲ' ಅಂತ ನಾನು; 'ಹಾಗಾದ್ರೆ ನಾನು ಸುಳ್ಳು ಹೇಳ್ತೀನಾ?' ಅಂತ ಅವಳು, 'ಇಲ್ಲ, ನಾನೇ ಸುಳ್ಳು ಹೇಳೊನು!' ಅಂತ ನಾನು-ಹೀಗೇ. ಹೀಗೇ ಜಗಳ ಆಡ್ತಾ ಆಡ್ತಾ ಒಂದು ಹಂತದಲ್ಲಿ 'ಇಲ್ಲ, ನಾನು ಬದುಕಿರಬಾರ್ದು, ಇಲ್ಲ ಅವಳಿರಬಾರ್ದು' ಅನ್ನೋ ಮಟ್ಟ ತಲುಪಿಬಿಡತ್ತೆ. ಇದಕ್ಕೇನು ಹೆಚ್ಚು ಕಾಲ ಬೇಕಾಗಲ್ಲ; ಬೆಂಕಿಯ ಹಾಗೆ ಹೆಚ್ಚಾಗ್ತಾ ಎಷ್ಟು ಪ್ರಯತ್ನಪಟ್ಟರೂ ಹತೋಟಿಗೆ ಬಾರದ ಹಾಗೆ ಆಗಿಬಿಡತ್ತೆ, ಮೈಯ್ಯನ್ನೆಲ್ಲ ಬೆಂಕಿ ಆವರಿಸಿಬಿಡತ್ತೆ. ಇದೇ ಅಥವಾ ಇಂಥ ಸ್ಥಿತೀಲಿರೋ ಅವಳು ನೀವು ಹೇಳೋ ಪ್ರತಿ ಮಾತಿಗೂ ತಪ್ಪು ವ್ಯಾಖ್ಯಾನ ಮಾಡ್ತಾ ಹೋಗ್ತಾಳೆ. ಮಾತು ವಿಷಪೂರಿತವಾಗತ್ತೆ. ಬರ್ತಾ ಬರ್ತಾ ಪರಿಸ್ಥಿತಿ ಬಿಗಡಾಯಿಸತ್ತೆ. 'ಬಾಯಿ ಮುಚ್ಚಿಕೋ' ಅಂತ ನಾನು ಅಬ್ಬರಿಸ್ತೀನಿ. ಸರಕ್ಕಂತ ಅವಳು ಹೊರಗಡೆಗೆ ಓಡ್ತಾಳೆ. ನಾನು ಹೇಳೊ ಮಾತನ್ನ ಪೂರ್ತಿ ಕೇಳಿಸ್ಕೊಳ್ಳಲಿ, ನಾನು ಹೇಳೋದು ಸರಿ ಅಂತ ಗೊತ್ತಾಗಲೀ ಅಂತ ಅವಳನ್ನ ತಡೆಯೋ ಪ್ರಯತ್ನದಲ್ಲಿ ಅವಳ ರಟ್ಟೆ ಹಿಡ್ಕೋತೀನಿ. ನಾನು ಅವಳಿಗೆ ಏನೋ ಮಾಡ್ಬಿಟ್ಟೆ ಅನ್ನೋ ಹಾಗೆ, 'ಮಕ್ಕಳೇ, ನಿಮ್ಮಪ್ಪ ನನ್ನ ಹೊಡೀತಿದಾರೆ' ಅಂತ ಕಿರಿಚಿಕೋತಾಳೆ. 'ಸುಳ್ಳು ಬೊಗಳಬೇಡ' ಅಂತ ನಾನು ಕೂಗಿಕೋತೀನಿ. 'ಹೀಗೆ ನೀವು ಮಾಡೋದೇನೂ ಮೊದಲ ಸಲ ಅಲ್ವಲ್ಲ' ಅಂತಲೋ ಇನ್ನೇನೋ ಅವಳ ಕೂಗು. ಮಕ್ಕಳೆಲ್ಲ ಅವಳ ಹತ್ತಿರ ಓಡಿಬರತ್ವೆ. ಅವರನ್ನವಳು ಸಮಾಧಾನ ಮಾಡ್ತಾಳೆ. 'ನಾಟ್ಕ ಮಾಡ್ಬೇಡ' ಅಂತೀನಿ ನಾನು. 'ನಿಮ್ಮ ಕಣ್ಣಿಗೆ ನಾನು ಮಾಡೋದೆಲ್ಲ ನಾಟಕದ ಥರ ಕಾಣತ್ತೆ, ನಾಟಕ ಮಾಡ್ತಿದ್ದಳು ಅಂತ ಯಾರನ್ನಾದರೂ ಕೊಂದುಬಿಡೋ ಪೈಕಿ ನೀವು. ನಿಮ್ಮ ವಿಷಯ ನಂಗೊತ್ತಿಲ್ವಾ? ನಿಮಗೆ ಬೇಕಾದ್ದು ಅದೇ ತಾನೇ?' 'ಥೂ, ಯಾಕಾದ್ರೂ ಬದುಕಿದ್ದೀಯೋ, ನಾಯಿ ಥರ' ಅಂತ ಕೂಗಾಡ್ತೀನಿ. ಆ ಮಾತುಗಳು ಹೊರಬಿದ್ದಾಗ

ನನಗೇ ಹೇಗೆ ಗಾಬರಿಯಾಯ್ತು ಅಂತ ನೆನಪಿದೆ. ಅಂಥ ಭಯಂಕರ ಮಾತುಗಳನ್ನ ನಾನು ಆಡಬಲ್ಲೆ ಅಂತ ನನಗೆ ಗೊತ್ತೇ ಇರ್ಲಿಲ್ಲ. ಹೇಗೋ ನನ್ನ ಬಾಯಿಂದ ಬಂದ್ವಲ್ಲ ಅಂತ ನನಗೇ ಆಶ್ಚರ್ಯ! ಹೀಗೆಲ್ಲ ಕೂಗಾಡಿ ನನ್ನ ಕೋಣೆಗೆ ಹೋಗಿ ಸಿಗರೇಟು ಸೇದ್ತಾ ಕೂತ್ಕೋತೀನಿ. ಪಡಸಾಲೆಗೆ ಹೋದ ಅವಳು ಹೊರಗೆ ಹೋಗೋ ತಯಾರಿ ನಡೆಸೋ ಸದ್ದು ಕಿವಿಗೆ ಬೀಳತ್ತೆ. ಹೊರಗೆ ಬಂದು 'ಎಲ್ಲಿಗೆ ಹಾಳಾಗಿ ಹೋಗ್ತೀ?' ಅಂತ ಕೇಳ್ತೀನಿ. ಅವಳು ಉತ್ತರ ಕೊಡಲ್ಲ. 'ಎಲ್ಲಾದ್ರೂ ಹಾಳಾಗಿ ಹೋಗ್ಲಿ' ಅಂತ ಗೊಣಗಿಕೊಳ್ತ ಮತ್ತೆ ನನ್ನ ಕೋಣೆಗೆ ಹೋಗ್ತೀನಿ. ಅವಳ ಮೇಲೆ ಸೇಡು ತೀರಿಸಿಕೊಳ್ಳೋದು ಹೇಗೆ, ಅವಳಿಂದ ಪಾರಾಗೋದು ಹೇಗೆ ಅಂತ ಸಾವಿರ ಯೋಜನೆಗಳು ಹೊಳೆಯುತ್ವೆ; ಜೊತೆಗೆ ಏನೂ ಆಗಿಲ್ವೇನೋ ಅನ್ನೋ ಹಾಗೆ ಬದುಕೋದು ಹೇಗೆ ಅನ್ನೋ ಯೋಚನೇನೂ ಬರತ್ತೆ. ಯೋಚನೆ ಮಾಡ್ತ ಸಿಗರೇಟು ಸೇದ್ತಾ ಕೂತ್ಕೋತೀನಿ. ಅವಳಿಂದ ದೂರ ಹೋಗಿ ಅಮೆರಿಕದಲ್ಲೋ ಇನ್ನೆಲ್ಲೋ ಅವಿತಿಟ್ಟುಕೋಬೇಕು ಅನ್ನಿಸತ್ತೆ. ಅವಳಿಂದ ಮುಕ್ತನಾಗೋದರ ಬಗ್ಗೆ, ಹಾಗಾದ್ರೆ ಎಷ್ಟು ಚೆನ್ನ ಅಂತ, ಆಮೇಲೆ ಇನ್ನಾವಳಾದ್ರೂ 'ಇಚ್ಛೆಯನರಿಯುವ'ವಳ ಜೊತೆ ಹಾಯಾಗಿರೋ ಬಗ್ಗೆ ಕನಸುಗಳನ್ನ ಕಾಣ್ತೇನಿ. ಸಾಯೋ ಮೂಲಕವೋ ಡೈವೋರ್ಸ್ ಆಗೋದ್ರ ಮೂಲಕವೋ ಅವಳಿಂದ ಬಿಡುಗಡೆಯಾಗೋ ಉಪಾಯದ ಬಗ್ಗೆ ಯೋಚನೆ ಬರತ್ತೆ. ಬರ್ತಾ ಬರ್ತಾ ಏನೋ ಗೊಂದಲದಲ್ಲಿ ಸಿಕ್ಕಿಹಾಕಿಕೊಂಡ ಹಾಗೆ ಅನ್ನಿಸತ್ತೆ, ಬೇಕಾದ್ದರ ಬಗ್ಗೆ ಏನೂ ಹೊಳೆಯೋಲ್ಲ, ಸರಿಯಾದ ಯೋಚನೆಗಳು ಬರ್ತಿಲ್ಲ ಅಂತ ಕಸಿವಿಸಿಯಾಗಿ ಜೋರಾಗಿ ದಮ್ಮು ಎಳೀತೀನಿ.

"ಮನೆಯಲ್ಲಿ ಬದುಕು ಹೇಗೋ ಸಾಗತ್ತೆ. ಆಳು ಬಂದು, 'ಯಜಮಾನಮ್ಮನೋರು ಎಲ್ಲಿ? ಯಾವಾಗ ವಾಪಸು ಬರ್ತಾರೆ' ಅಂತ ಕೇಳ್ತಾಳೆ. ಅಡುಗೆಯೋನು ಬಂದು 'ಟೀ ಬೇಕಾ?' ಅಂತಾನೆ. ಮಕ್ಕಳು, ಅದರಲ್ಲೂ ಲೀಸಾ? ಅವಳಿಗೆ ಈಗಾಗ್ಲೇ ಅರ್ಥವಾಗ್ತಿದೆ? ನನ್ನ ಕಡೆ ಪ್ರಶ್ನಾರ್ಥಕವಾಗಿ ಆಕ್ಷೇಪಣೆಯ ನೋಟ ಬೀರ್ತಾಳೆ. ಮಾತಾಡದೆ ಟೀ ಕುಡೀತೀವಿ. ಆದ್ರೂ ಅವಳಿನ್ನೂ ವಾಪಸು ಬಂದಿಲ್ಲ. ಸಂಜೆಯೂ ಆಗತ್ತೆ, ಇನ್ನೂ ಬರ್ಲಿಲ್ಲ. ನನ್ನಲ್ಲಿ ಇಬ್ಬಗೆಯ ಆಲೋಚನೆಗಳು ಸುಳಿಯುತ್ವೆ. ಎಲ್ಲೋ ಹಾಳಾಗಿ ಹೋಗಿ ನನ್ನ ಹಾಗೂ ಮಕ್ಕಳನ್ನ ಪೀಡಿಸ್ತಾಳಲ್ಲ ಅಂತ ಕೋಪ, ವಾಪಸ್ಸು ಬರದೆ ಏನು ಮಾಡಿಕೊಂಡುಬಿಡ್ತಾಳೋ ಅನ್ನೋ ಭಯ. ಅವಳನ್ನ ಹುಡುಕೋದಕ್ಕೆ ನಾನೇ ಹೊರಡ್ತೀನಿ, ಆದರೆ ಎಲ್ಲೀ ಅಂತ ಹುಡುಕೋದು? ತನ್ನ ಅಕ್ಕನ ಮನೇಗೇನಾದ್ರೂ ಹೋಗಿರಬಹುದಾ? ಆದರೆ ಅಲ್ಲಿಗೆ ಹೋಗಿ ವಿಚಾರಿಸೋದು ಅಂದ್ರೆ ನಾಚಿಕೆಗೇಡು. ಬೇರೆಯೋರಿಗೆ ತೊಂದ್ರೆ ಕೊಡೋದರ ಬದಲು ತನಗೇ ತೊಂದ್ರೆ ಕೊಟ್ಟುಕೊಳ್ಳೋದು ಉತ್ತಮ. ಅವಳು ಕಾಯ್ತಾ ಇದ್ದದ್ದು ಇದಕ್ಕೇಂತ ಕಾಣತ್ತೆ, ಮುಂದಿನ ಸಲ ಇನ್ನೇನಾಗತ್ತೋ. ತನ್ನ ಅಕ್ಕನ ಮನೇಗೆ ಹೋಗದೆ ಏನಾದ್ರೂ ಮಾಡಿಕೊಂಡ್ರೆ ಅಥವಾ ಈಗಾಗ್ಲೇ ಮಾಡಿಕೊಂಡಿದ್ರೆ? ರಾತ್ರಿ ಹತ್ತಾಯ್ತು, ಹನ್ನೊಂದೂ ಆಯ್ತು. ಮಲಗಕ್ಕೆ ಹೋಗಲ್ಲ; ಹಾಸಿಗೆ ಮೇಲೆ ಒಂಟಿಯಾಗಿ ಕೂತು ಕಾಯೋದು ಅಂದ್ರೆ! ಮನಸ್ಸಿಗೆ

ಏನಾದ್ರೂ ಕೆಲಸ ಬೇಕಲ್ಲ, ಓದೋದೋ ಬರೆಯೋದೋ ಮಾಡ್ಬಹುದಾ? ಆದರೆ ಏನೂ ಮಾಡಕ್ಕಾಗಲ್ಲ. ನನ್ನ ಕೋಣೇಲಿ ಒಬ್ಬನೇ ಯೋಚನೆ ಮಾಡ್ತ ಕೂತ್ಕೋತೀನಿ. ಮನಸ್ಸಿಗೆ ಘಾಸಿ, ಕೋಪ, ಏನಾದ್ರೂ ಸದ್ದಾದೀತೆ ಅಂತ ನಿರೀಕ್ಷೆ. ಬೆಳಗಿನ ಜಾವ ಮೂರು ಗಂಟೆ, ನಾಲ್ಕು- ಅವಳು ಇನ್ನೂ ಬಂದಿಲ್ಲ. ಬೆಳಗಿನ ಹೊತ್ತಿಗೆ ಸ್ವಲ್ಪ ನಿದ್ದೆ ಹತ್ತತ್ತೆ, ಎಚ್ಚರವೂ ಆಗತ್ತೆ. ಆದರೂ ಅವಳು ಬಂದಿಲ್ಲ!

"ಆದ್ರೆ ಮನೇಲಿ ಎಲ್ಲವೂ ಯಥಾಪ್ರಕಾರ ಸಾಗತ್ತೆ. ಆದರೆ ಎಲ್ಲರ ಮನಸ್ಸಿನಲ್ಲೂ ತಳಮಳ, ಎಲ್ಲ ನನ್ನ ಕಡೆಯೇ ಪ್ರಶ್ನಾರ್ಥಕವಾಗಿ ನೋಡ್ತಾರೆ, ಎಲ್ಲರಿಗೂ ನನ್ನ ಬಗ್ಗೆ ಏನೋ ಅನುಮಾನ. ನಾನೇ ಎಲ್ಲಕ್ಕೂ ಕಾರಣ ಅಂತ ಅವರ ಭಾವನೆ ಇದ್ದ ಹಾಗಿದೆ. ನನ್ನ ಮನಸ್ಸಿನಲ್ಲಿ ಎಂದಿನ ತುಯ್ದಾಟ ಸಾಗಿದೆ; ಅದೇ ಕೋಪ, ಆತಂಕ.

"ಬೆಳಿಗ್ಗೆ ಹನ್ನೊಂದು ಗಂಟೆ ಹೊತ್ತಿಗೆ ಅವಳ ರಾಯಭಾರಿಯಾಗಿ ಅಕ್ಕ ಬಂದು ಯಥಾಪ್ರಕಾರ ಮಾತಿಗೆ ಶುರು ಮಾಡ್ತಾಳೆ: 'ಅವಳ ಮನಸ್ಸು ಘಾಸಿಗೊಂಡಿದೆ, ಎಲ್ಲ ಯಾತಕ್ಕಾಗಿ?' 'ಏನೂ ಆಗಿಲ್ಲವಲ್ಲ' ಅಂತ ನಾನು ಅವಳ ಸ್ವಭಾವದ ಬಗ್ಗೆ ವಿವರಿಸ್ತೀನಿ. 'ಹೀಗೆ ಎಷ್ಟು ದಿನಾಂತ?' ಅಂತಾಳೆ. 'ಎಲ್ಲ ಅವಳೇ ಮಾಡಿಕೊಳ್ಳೋದು. ನಾನಂತೂ ಮೊದಲ ಹೆಜ್ಜೆ ಇಡಲ್ಲ, ಬೇರೆ ಆಗಬೇಕೂಂತಾದ್ರೆ ಆಗಿಯೇ ಬಿಡಲಿ' ಅಂತೀನಿ.

"ನನ್ನ ಅತ್ತಿಗೆ ವಾಪಸ್ಸು ಹೋಗುತ್ತಾರೆ ಯಾವ ಸಾಧನೆಯೂ ಇಲ್ಲದೆ. ನಾನು ಮೊದಲ ಹೆಜ್ಜೆ ಇಡುವವನಲ್ಲ ಅಂತ ಧೈರ್ಯವಾಗಿ ಹೇಳಿಯೇನೋ ಹೇಳಿದೆ: ಆದ್ರೆ ನನ್ನ ಕೋಣೆಯಿಂದ ಹೊರಬಂದು ಮಕ್ಕಳ ಕರುಣಾಜನಕವೂ ಭಯಭೀತವೂ ಆದ ಸ್ಥಿತಿಯನ್ನು ನೋಡಿದಾಗ ಮೊದಲ ಹೆಜ್ಜೆಯನ್ನಿಡಲು ನಾನು ಸಿದ್ಧನಾದೆ. ಹಾಗೆ ಮಾಡಲೇನೋ ಆಸೆ, ಆದರೆ ಯಾವ ರೀತಿ ಅಂತ ಮಾತ್ರ ಹೊಳೀಲಿಲ್ಲ. ಮತ್ತೆ ಶಥಪಥ ಹಾಕೋದು, ಸಿಗರೇಟು ಸೇದೋದು ನಡೀತು. ಮಧ್ಯಾಹ್ನದ ಊಟದ ಹೊತ್ತು ವೋಡ್ಕಾ ಮತ್ತು ವೈನ್ ಕುಡಿದು ಮನಸ್ಸಿನಾಳದಲ್ಲಿದ್ದ ಬಯಕೆಯನ್ನ ನೆರವೇರಿಸಿಕೊಳ್ಳೋ ಬಯಕೆ ನಂದು, ಆಗ ನನಗೆ ಈ ಯಾವುದೇ ಮೂರ್ಖತನ ತಲೆದೋರಲಿಲ್ಲ, ನನ್ನ ಸ್ಥಾನಮಾನಕ್ಕೆ ಧಕ್ಕೆಯಾಗಲೀ ಆಗಲಿಲ್ಲ.

"ಮೂರು ಗಂಟೆ ಹೊತ್ತಿಗೆ ಅವಳು ಬಂದಳು, ನನ್ನೆದುರು ನಿಂತಾಗ ಅವಳು ಮಾತಾಡಲಿಲ್ಲ. ಇವನ್ನ ನೋಡಿ ಅವಳು ತಗ್ಗಿದಾಳೇಂತ ಅನ್ನಿಸ್ತು. ಹಾಗಾಗಿ ಅವಳು ನನ್ನನ್ನು ಕೆಣಕಿದ್ದಕ್ಕೆ ಬೈದೆ. ಅವಳ ಗಡುಸು ಮುಖವೇನೂ ಬದಲಾಗಲಿಲ್ಲ, ಅದರ ಹತಾಶ ನೋಟವೇನೂ ತಗ್ಗಲಿಲ್ಲ. ತಾನು ಬಂದದ್ದು 'ಏನೋ ಹೇಳಕ್ಕಲ್ಲ, ನಾವಿಬ್ರೂ ಜೊತೇಲಿ ಬಾಳಕ್ಕೆ ಸಾಧ್ಯವಿಲ್ಲದ್ದರಿಂದ ಮಕ್ಕಳನ್ನ ಕರ್ಕೊಂಡು ಹೋಗಕ್ಕೆ ಬಂದೆ' ಅಂದಳು. ತಪ್ಪು ನನ್ನದಲ್ಲ, ಅವಳೇ ನನ್ನ ತಾಳ್ಮೆ ಪರೀಕ್ಷಿಸೋ ಹಾಗೆ ಮಾಡಿದೋಳು ಅಂದೆ. ಅವಳು ಗಡುಸಾಗಿ ನನ್ನಲ್ಲಿ ನೋಟ ನೆಟ್ಟು, 'ಏನೂ ಹೇಳ್ಬೇಡಿ, ನಿಮಗೇ ಪಶ್ಚಾತ್ತಾಪ ಉಂಟಾಗತ್ತೆ' ಅಂತ ಹೇಳಿದಳು. ಈ ನಾಟಕ ಎಲ್ಲ ಬೇಡ ಅಂದೆ: ಅವಳೇನೋ ಕಿರುಚಿ

ಕೋಣೆಯೊಳಕ್ಕೆ ಹೋದಳು, ಅವಳು ಹೇಳಿದ್ದೇನು ಅಂತ ನನಗೆ ಗೊತ್ತಾಗಲಿಲ್ಲ. ಧಡಕ್ಕಂತ ಬಾಗಿಲು ಹಾಕಿದ್ದು ಕೇಳಿಸ್ತು. ಬಾಗಿಲು ತೆಗೆಯೋಗೆ ಪ್ರಯತ್ನಪಟ್ಟೆ, ಕೊಕ್ಕೆ ಹಾಕಿತ್ತು, ಅವಳಿಂದ ಯಾವ ಉತ್ತರವೂ ಬರ್ಲಿಲ್ಲ, ಕೋಪದಿಂದ ಹೊರಗೆ ಹೋದೆ. ಅರ್ಧ ಗಂಟೆ ಆದ್ಮೇಲೆ ಲೀಸಾ ಜೋರಾಗಿ ಅಳ್ತಾ ಬಂದಳು. 'ಯಾಕೆ? ಏನಾಯ್ತು?' ಅಂತ ಕೇಳಿದೆ. 'ಅಮ್ಮ ಮಾತಾಡ್ತಾ ಇಲ್ಲ' ಅಂದಳು. ಅವಳ ಜೊತೆ ಹೋದೆ. ನನ್ನ ಶಕ್ತಿಯೆಲ್ಲ ಬಿಟ್ಟು ಬಾಗಿಲನ್ನ ದೂಡಿದೆ. ಪೂರ್ತಿ ಕೊಕ್ಕೆ ಹಾಕಿಲ್ದೇ ಇದ್ದದ್ದರಿಂದ ಎರಡು ಕದಗಳ ಮಧ್ಯೆ ತೆರೆಕೊಳ್ತು. ಅವಳು ಲಂಗ ಧರಿಸಿ ಚಪ್ಪಲಿ ಮೆಟ್ಟಿಕೊಂಡೇ ವಿಚಿತ್ರವಾಗಿ ಬಿದ್ದುಕೊಂಡಿದ್ದ ಹಾಸಿಗೆ ಹತ್ತಿರ ಹೋದೆ. ಪಕ್ಕದ ಮೇಜಿನ ಮೇಲೆ ಖಾಲಿ ಅಫೀಮು ಬಾಟಲಿತ್ತು. ಅವಳಿಗೆ ಪ್ರಜ್ಞೆ ಬಂತು, ಕಣ್ಣಲ್ಲಿ ನೀರು ತುಂಬಿತು, ಸ್ವಲ್ಪ ಸಮಾಧಾನ ಕಾಣಿಸ್ತು. ಉಹ್ಞೂ, ಅದೇನೂ ಪೂರ್ತಿ ಹೊಂದಾಣಿಕೆ ಅಲ್ಲ; ಯಾಕೇಂದ್ರೆ ಇಬ್ಬರ ಮನಸ್ಸಲ್ಲೂ ದ್ವೇಷ ತುಂಬಿಕೊಂಡೇ ಇತ್ತು, ಜೊತೆಗೆ ಈ ಜಗಳದಿಂದ ಆಗಿದ್ದ ನೋವು, ಕಿರಿಕಿರಿ ಬೇರೆ. ಮುಂದೆಯೂ ಯಥಾಪ್ರಕಾರ ಅಂಥದೇ ಅಥವಾ ಅಷ್ಟೇಕೆ ಇನ್ನೂ ತೀವ್ರವಾದ ಜಗಳಗಳು, ಒಡಂಬಡಿಕೆಗಳು ನಡೆದವು. ವಾರಕ್ಕೊಮ್ಮೆ, ತಿಂಗಳಿಗೊಮ್ಮೆ, ಕೆಲವು ವೇಳೆ ದಿನವೂ. ಒಂದೇ ಥರ. ಒಂದು ಸಲವಂತೂ ಬೇರೆ ದೇಶಕ್ಕೆ ಹೋಗಕ್ಕೆ ನಾನು ಪಾಸ್‌ಪೋರ್ಟ್ ಅನ್ನೂ ಸಿದ್ಧಮಾಡಿಕೊಂಡೆ. ಎರಡು ದಿನ ಕದನವಿರಾಮ ಸ್ಥಿತಿ. ಆದರೆ ಮತ್ತೆ ನಮ್ಮ ನಮ್ಮನಮ್ಮದೇ ವಿವರಣೆಗಳು, ಎಂದಿನ ಹೊಂದಾಣಿಕೆ. ಹೀಗಾಗಿ ನಾನೆಲ್ಲೂ ಹೋಗಲಿಲ್ಲ."

## 19

"ಆ ವ್ಯಕ್ತಿ ಕಾಣಿಸಿಕೊಂಡಾಗ ನಮ್ಮಿಬ್ಬರ ಮಧ್ಯೆ ಇದ್ದ ಪರಿಸ್ಥಿತಿ ಇದು. ಅವನು ಬಂದದ್ದು ಮಾಸ್ಕೋದಿಂದ; ಅವನ ಹೆಸರು ಟ್ರುಕಚೆವ್‌ಸ್ಕಿ ಅಂತ; ಅಲ್ಲಿಂದ ನಮ್ಮನೆಗೇ ನೇರವಾಗಿ ಬಂದ. ಆಗ ಬೆಳಿಗ್ಗೆ, ನಾನೇ ಅವನನ್ನ ಬರಮಾಡಿಕೊಂಡೆ. ನಮ್ಮಿಬ್ಬರ ಮಧ್ಯೆ ಹಿಂದೊಂದು ಸಲ ಪರಿಚಯ ಆಗಿತ್ತು; ಅದಕ್ಕೇ ಈಗ್ಲೂ ಅದೇ ಸಲಿಗೆಯ ದನಿಯಲ್ಲಿ ಮಾತಾಡಿದ, ಆದ್ರೆ ನಾನಂತೂ ಗಂಭೀರವಾಗಿಯೇ ಇದ್ದೆ; ಅವನೂ ಸರಕ್ಕಂತ ಹಾಗೆಯೇ ಆದ. ಮೊದಲ ಸಲ ನೋಡಿದಾಗಿನಿಂದ್ಲೂ ನನಗವನನ್ನ ಕಂಡ್ರೆ ಆಗ್ತಿರಲಿಲ್ಲ. ಆದರೆ ಅದ್ಯಾವುದೋ ವಿಚಿತ್ರವೂ ವಿಪತ್ಕಾರಿಯೂ ಆದ ಶಕ್ತಿ ನನಗವನನ್ನು ದೂರ ಮಾಡಲು ಬಿಡಲಿಲ್ಲ, ಅದರ ಬದಲು ಮನೆಯೊಳಕ್ಕೆ ಬರಮಾಡಿಕೊಳ್ಳೋ ಹಾಗೆ ಮಾಡಿತು. ಅವನ ಜೊತೆ ನಿರ್ವಿಕಾರದಿಂದ ಒಂದೆರಡು ಮಾತಾಡಿದೆ. ನನ್ನ ಹೆಂಡತಿಗೆ ಪರಿಚಯ ಮಾಡಿಕೊಡ್ದೆ ಕಳಿಸೋದಕ್ಕಿಂತ ಸರಳವಾದ್ದು ಇನ್ನೇನಿದ್ದೀತು? ಆದ್ರೆ ಹಾಗಾಗಲಿಲ್ಲ, ಉದ್ದೇಶಪೂರ್ವಕವಾಗಿಯೋ ಏನೋ ಅನ್ನೋ ಹಾಗೆ ಅವನ ಪಿಟೀಲು ನುಡಿಸಾಣಿಕೆ ಬಗ್ಗೆ ಮಾತಾಡತೊಡಗಿ, 'ಈಗ ವಾದನ ನಿಲ್ಲಿಸಿಬಿಟ್ಟ ಹಾಗೆ ಕೇಳಿದೆನಲ್ಲ' ಅಂದೆ. ಅದಕ್ಕೆ ವ್ಯತಿರಿಕ್ತವಾಗಿ ಈಗ ತಾನು ಮೊದಲಿಗಿಂತ ಹೆಚ್ಚು ವಾದನದಲ್ಲಿ ತೊಡಗಿಕೊಂಡಿದ್ದಾಗಿ

ಅವನು ಹೇಳಿದ. ನಾನೂ ಹಿಂದೊಮ್ಮೆ ಪಿಟೀಲು ನುಡಿಸ್ತಾ ಇದ್ದಿದ್ದರ ಬಗ್ಗೆಯೂ ಪ್ರಸ್ತಾಪ ಮಾಡಿದ. 'ನಾನೀಗ ನುಡಿಸೋದನ್ನ ಬಿಟ್ಟುಬಿಟ್ಟಿದ್ದೀನಿ, ಬದಲಾಗಿ ನನ್ನ ಹೆಂಡತಿ ಚೆನ್ನಾಗಿ ನುಡಿಸ್ತಾಳೆ' ಅಂದೆ. ನಾನು ಅವನನ್ನ ಭೇಟಿಯಾದ ಮೊದಲ ದಿನದಿಂದ, ಅಷ್ಟೇಕೆ ಮೊದಲ ಗಂಟೆಯಿಂದಲೇ, ಮುಂದೇನಾಯ್ತೋ ಅದರ ಹಾಗೆಯೇ ಅವನ ಜೊತೆಯ ನನ್ನ ಸಂಬಂಧ ಇತ್ತು. ಏನೋ ಒಂಥರ ಬಿಗಡಾಯಿಸಿದ ಸಂಬಂಥ; ಅವನು ಮತ್ತು ನಾನು ಆಡಿದ ಪ್ರತಿ ಮಾತಿಗೂ ಎಂಥದೋ ಪ್ರಾಮುಖ್ಯ ಕಾಣೋ ಹಾಗಾಯ್ತು.

"ಅವನನ್ನ ನನ್ನ ಹೆಂಡತೀಗೆ ಪರಿಚಯ ಮಾಡಿಸ್ದೆ. ಅವರ ಮಾತುಗಳು ತಕ್ಷಣವೇ ಸಂಗೀತದ ಕಡೆ ವಾಲಿತು. ತನ್ನ ಜೊತೆ ಅವಳೂ ನುಡಿಸಿದ್ರೆ ಚೆನ್ನಾಗಿರತ್ತೆ ಅಂದ. ಇತ್ತೀಚೆಗೆ ನನ್ನ ಹೆಂಡತಿ ತುಂಬ ಲವಲವಿಕೆ, ಸಡಗರ, ಚೆಲುವುಗಳಿಂದ ಕೂಡಿದ್ದಳು. ಮೊದಲ ನೋಟದಲ್ಲೇ ಅವನು ಅವಳ ಮನಸ್ಸನ್ನ ಗೆದ್ದ ಹಾಗಿತ್ತು. ಜೊತೆಗೆ, ತನ್ನ ಪಿಟೀಲು ವಾದನದಲ್ಲಿ ಒಬ್ಬ ಜೊತೆಗಾರ ಸಿಕ್ಕಿದನಲ್ಲ ಅನ್ನೋ ಖುಷಿ ಅವಳಿಗಾಗಿತ್ತು. ಅವಳಿಗೆ ಪಿಟೀಲು ವಾದನ ಎಷ್ಟು ಇಷ್ಟವಾಗಿತ್ತು ಅಂದ್ರೆ, ಕಲಿಯೋದಕ್ಕೇಂತ ಅವಳು ಒಬ್ಬನನ್ನ ನೇಮಕ ಮಾಡಿಕೊಂಡಿದ್ದಳು. ಅವಳ ಮುಖದಲ್ಲಿ ಸಂತೋಷ ಉಕ್ಕಿತು. ಆದ್ರೆ ನನ್ನನ್ನ ನೋಡಿ ನನ್ನ ಮನಸ್ಸಿನ ಭಾವನೆಯನ್ನು ತಿಳಿದೋಳ ಹಾಗೆ ತನ್ನ ಧ್ವನಿ ಬದಲಾಯಿಸಿದಳು. ಹೀಗಾಗಿ ನಮ್ಮಿಬ್ಬರ ಮಧ್ಯೆ ವಂಚನೆಯ ಆಟ ಆರಂಭವಾಯ್ತು. ನನಗೂ ಇಷ್ಟ ಅನ್ನೋ ಹಾಗೆ ಮುಖದ ಮೇಲೆ ಮುಗುಳ್ನಗು ತಂದುಕೊಂಡೆ. ಸುಂದರಿಯರ ಕಡೆ ನೋಡೋ ಎಲ್ಲ ಲಂಪಟರ ಹಾಗೆಯೇ ಅವನು ಅವಳ ಕಡೆ ಕಣ್ಣು ಹಾಯಿಸಿ ಸಂಗೀತದ ಬಗ್ಗೆ ಮಾತ್ರ ತನ್ನ ಆಸಕ್ತಿ ಅನ್ನೋ ಹಾಗೆ ನಟನೆ ಮಾಡಿದ; ಅವನಿಗೆ ಸಂಗೀತದ ಬಗ್ಗೆ ಮಾತಲ್ಲಿ ಈಗ ಆಸಕ್ತಿ ಉಳಿದಿರಲಿಲ್ಲ. ಆದರೆ ಅವಳು ಬೇರೆ ಥರ ಇದ್ದಳು; ನನ್ನ ಹೊಟ್ಟೆಕಿಚ್ಚಿನ ಸುಳ್ಳು ಮುಗುಳ್ನಗೆ ಅವಳಿಗೆ ಪರಿಚಿತವಾದದ್ದಾದ್ರೂ, ಅದನ್ನು ಗಮನಿಸದವಳಂತಿದ್ದ ಅವನ ಕಾಮುಕ ದೃಷ್ಟಿ ಅವಳಲ್ಲಿ ಸಂಭ್ರಮ ತರಿಸಿತ್ತು. ಮೊದಲ ನೋಟದಲ್ಲೇ ಅವಳ ಕಣ್ಣುಗಳಲ್ಲಿ ಕಂಡ ಮಿಂಚಿನಿಂದ ನನಗೆ ಈ ರೀತಿ ಭಾವನೆಯುಂಟಾಯ್ತು, ಇದಕ್ಕೆ ನನ್ನ ಮಾತ್ಸರ್ಯದ ಕಾರಣವೂ ಇದ್ದೀತು. ಅವರಿಬ್ಬರ ನಡುವೆ ವಿದ್ಯುತ್ ಸಂಚಾರವುಂಟಾಗಿ ಒಟ್ಟಿಗೆ ಮತ್ತುಬರಿಸಿದಂತೆನಿಸಿತ್ತು, ಹೀಗಾಗಿ ಇಬ್ಬರ ಮುಖದಲ್ಲೂ ಒಂದೇ ಭಾವ, ಮುಗುಳ್ನಗೆಗಳು ಕಾಣಿಸಿಕೊಂಡವು. ಇಬ್ಬರೂ ನಾಚಿದಂತೆನಿಸಿತು. ಇಬ್ಬರೂ ಮುಗುಳ್ನಗೆಯ ವಿನಿಮಯ ಮಾಡಿಕೊಂಡರು. ಸಂಗೀತದ, ಪ್ಯಾರಿಸ್ ಮುಂತಾದ ಸಣ್ಣ ದೊಡ್ಡ ವಿಷಯಗಳ ಬಗ್ಗೆ ನಾವು ಮಾತಾಡಿದಿವಿ. ಆಮೇಲೆ ಹೊರಡಲು ಅವನು ಎದ್ದು ಮುಗುಳ್ನಗುತ್ತ ನಿಂತ, ತನ್ನ ತೊಡೆಗಳ ನಡುವೆ ಹ್ಯಾಟ್ ಇರುಕಿಸಿಕೊಂಡು ಒಮ್ಮೆ ಅವಳತ್ತ, ಒಮ್ಮೆ ನನ್ನತ್ತ ದೃಷ್ಟಿ ಬೀರಿದ, ನಾವು ಏನು ಮಾಡಬಹುದೆಂಬ ನಿರೀಕ್ಷೆಯಲ್ಲಿ ಅವನಿದ್ದಂತೆ ಕಾಣಿಸಿತು. ಆ ಕ್ಷಣ ನಾನವನನ್ನು ಬರಮಾಡಿಕೊಳ್ಳದೆ ಇದ್ದಿದ್ದರೆ ಮುಂದಿನದೆಲ್ಲ ಆಗುತ್ತಲೇ ಇರಲಿಲ್ಲ ಎಂಬುದೀಗ ಗೊತ್ತಾಗುತ್ತಿದೆ. ಆದರೆ ಅವರಿಬ್ಬರ ಕಡೆ ನೋಡಿ ನನ್ನಲ್ಲಿ ನಾನೇ ಅಂದುಕೊಂಡೆ: 'ನಾನು

ಹೊಟ್ಟೆಕಿಚ್ಚಿನವನು ಅಂತ ಅಂದುಕೋಬೇಡಿ' ಅಂತಲೋ 'ನಿಮ್ಮ ಬಗ್ಗೆ ನನಗೆ ಹೆದರಿಕೆ' ಅಂತಲೋ. ಆದರೆ ಎಂದಾದರೊಂದು ಸಂಜೆ ಪಿಟೀಲಿನೊಡನೆ ಮನೆಗೆ ಬಂದು ಹೆಂಡತಿಯೊಡನೆ ನುಡಿಸಬೇಕೆಂದು ಬಾಯಿಮಾತಿನಲ್ಲಿ ಕೇಳಿಕೊಂಡೆ. ನನ್ನ ಕಡೆ ಅವಳು ಅಚ್ಚರಿಯ ನೋಟ ಬೀರಿ ಲಜ್ಜಿತಳಾದಳು, ಗಾಬರಿಗೊಂಡವಳಂತೆ ತಾನೇನೂ ಒಳ್ಳೆಯ ವಾದಕಿಯಲ್ಲವೆಂದು ಹೇಳಿದಳು. ಅವಳ ಈ ನಟನೆ ನನ್ನಲ್ಲಿ ಮತ್ತಷ್ಟು ಉರಿಯನ್ನುಂಟು ಮಾಡಿತು, ರೊಚ್ಚಿನಿಂದ ಅವನನ್ನು ಬರಬೇಕೆಂದು ಒತ್ತಾಯಿಸಿದೆ. ಒಂದು ಬಗೆಯ ವಿಚಿತ್ರ ಗತ್ತಿನಿಂದ ಹೋಗುವ ಅವನ ತಲೆಯನ್ನು - ಕೊರಳ ಬಣ್ಣಕ್ಕೆ ವಿರುದ್ಧವಾದ ಕಪ್ಪು ಕೂದಲು, ಮಧ್ಯದ ಬೈತಲೆಗಳಿಂದ ಕೂಡಿದ್ದುದು - ಹಿಂದಿನಿಂದ ನೋಡಿದಾಗ ನನ್ನಲ್ಲೊಂದು ವಿಚಿತ್ರ ಅನುಭವವುಂಟಾಯಿತು. ಆ ವ್ಯಕ್ತಿಯ ಇರುವಿಕೆ ನನ್ನಲ್ಲಿ ಕಿರಿಕಿರಿಯುಂಟುಮಾಡಿದ್ದನ್ನು ನಾನು ಮರೆಮಾಚಲಾಗಲಿಲ್ಲ. 'ಅವನನ್ನು ಇನ್ನು ಮುಂದೆ ನೋಡಲಾಗದಂತೆ ಮಾಡುವುದು ನನ್ನನ್ನೇ ಅವಲಂಬಿಸಿದೆ'. ಆದರೆ ಅದು ಅವನ ಬಗ್ಗೆ ನನ್ನಲ್ಲುಂಟಾದ ಭಯವನ್ನೇ ಪ್ರತೀಕಿಸುತ್ತೆ, 'ನನಗೆ ಅವನನ್ನು ಕಂಡರೇಕೆ ಭಯ? ತೀರ ನಾಚಿಕೆಗೇಡು' ಅಂದುಕೊಂಡೆ. ಪಕ್ಕದ ಕೋಣೆಯಲ್ಲಿದ್ದ ನನ್ನ ಹೆಂಡತಿಗೆ ನನ್ನ ಮಾತು ಕೇಳಿಸಿದೆ ಅಂತ ಗೊತ್ತಾಗಿ, ಅವತ್ತು ಸಂಜೆಯೇ ಬಂದು ಪಿಟೀಲು ನುಡಿಸಬೇಕೆಂದು ಅವನನ್ನು ಒತ್ತಾಯ ಮಾಡಿದೆ. ಖಂಡಿತ ಬರ್ತೀನಿ ಅಂತ ಹೇಳಿ ಹೋದ.

"ಸಾಯಂಕಾಲ ಅವನು ತನ್ನ ಪಿಟೀಲಿನ ಜೊತೆ ಬಂದ; ಇಬ್ಬರೂ ನುಡಿಸಿದರು. ಆದರೆ ಸಿದ್ಧತೆಗೇ ಸಾಕಷ್ಟು ಸಮಯ ಹಿಡೀತು. ತಮಗೆ ಬೇಕಾದ ಸಂಗೀತ ಇರಲಿಲ್ಲ, ನನ್ನ ಹೆಂಡತಿಗೆ ಸಿದ್ಧತೆಯಿಲ್ಲದೆ ನುಡಿಸಲು ಸಾಮರ್ಥ್ಯವಿರಲಿಲ್ಲ. ನನಗೋ ಸಂಗೀತವೆಂದರೆ ಪಂಚಪ್ರಾಣ. ಅವರ ನುಡಿಸಾಣಿಕೆಗೆ ನಾನೇ ಸ್ಟ್ಯಾಂಡ್ ಅನ್ನು ಸಿದ್ಧಪಡಿಸಿ ಪುಟಗಳನ್ನು ತಿರುವಿಹಾಕುವ ರೀತಿಯಲ್ಲಿ ಸಹಾಯ ಮಾಡಿದೆ. ಮಾತಿಲ್ಲದ ರಾಗ ಮತ್ತು ಮೊಝಾರ್ಟ್‌ನ ಕೆಲವು ಸೊನಾಟಗಳನ್ನು ಸ್ವಲ್ಪ ಹೊತ್ತು ನುಡಿಸಿದರು. ತುಂಬ ಚೆನ್ನಾಗಿ ನುಡಿಸಿದರು, ಅಮೋಘವಾದ ನುಡಿಸಾಣಿಕೆ ಅದು. ಅಲ್ಲದೆ, ಅವನದ್ದು ತುಂಬ ಉನ್ನತವೂ ಸುಸಂಸ್ಕೃತವೂ ಆದ ಅಭಿರುಚಿ, ಆದರೆ ಅದು ಅವನ ನಡತೆ ಅದಕ್ಕೆ ತಕ್ಕುನಾದುದಲ್ಲ, ಅಷ್ಟೆ.

"ಖಂಡಿತವಾಗಿಯೂ ಅವನು ನನ್ನ ಹೆಂಡತಿಗಿಂತ ಚೆನ್ನಾಗಿ ಪಿಟೀಲು ನುಡಿಸುತ್ತಿದ್ದ. ಅವಳಿಗೆ ಸಹಾಯ ಮಾಡುತ್ತ, ಜೊತೆಗೆ ಅವಳನ್ನು ನವಿರಾಗಿ ಹೊಗಳುತ್ತಲೂ ಇದ್ದ. ಅವನ ನಡವಳಿಕೆ ತುಂಬ ಸುಸಂಸ್ಕೃತವಾಗಿತ್ತು. ನನ್ನ ಹೆಂಡತಿಗೆ ಸಂಗೀತದಲ್ಲಿ ಮಾತ್ರ ಆಸಕ್ತಿಯಿದ್ದಂತೆ ಕಾಣಿಸಿತು; ಅವಳು ಸರಳತೆ ಸಹಜತೆಗಳಿಂದ ಕೂಡಿದ್ದಳು. ನಾನೂ ಸಂಗೀತದಲ್ಲಿ ಆಸಕ್ತಿಯಿರುವವನಂತೆ ನಟಿಸಿದರೂ, ಆ ಸಂಜೆಯಿಡೀ ಮಾತ್ಸರ್ಯ ನನ್ನನ್ನು ಕಾಡಿತು.

"ನನ್ನ ಹೆಂಡತಿಯನ್ನು ಕಂಡ ಮೊದಲ ಕ್ಷಣದಿಂದಲೇ, ತಮ್ಮ ಸ್ಥಾನಮಾನ ಹಾಗೂ ಸಮಾಜಗಳನ್ನು ಮರೆತ ಅವರಿಬ್ಬರಲ್ಲಿನ ಪಾಶವೀ ಪ್ರವೃತ್ತಿ? 'ಆಗಬಹುದಾ?'

'ಖಂಡಿತ' ಮನೋಭಾವ - ನನಗೆ ಗೋಚರಿಸ್ತು. ಮಾಸ್ಕೋ ಮಹಿಳೆಯಾದ ಅವಳು ಅಷ್ಟೊಂದು ಆಕರ್ಷಕವಾಗಿ ಕಾಣಿವುದನ್ನವನು ನಿರೀಕ್ಷಿಸಿರ್ಲಿಲ್ಲ, ಹೀಗಾಗಿ ಅವನಿಗೆ ತುಂಬ ಸಂತಸವಾಗಿತ್ತು. ಅವಳಿಗೆ ಆಸೆಯಿದೆ ಅನ್ನುವುದರ ಬಗ್ಗೆ ಅವನಿಗೆ ಅನುಮಾನವೇ ಇರ್ಲಿಲ್ಲ. ಅವನಿಗಿದ್ದ ಒಂದೇ ಸಂಶಯ ಅಂದ್ರೆ ತಾಳ್ಮೆಗೇಡಿ ಗಂಡ ಇದನ್ನು ಸಹಿಸಿಯಾನೇ ಅನ್ನೋದು. ನಾನೇನಾದ್ರೂ ಪರಿಶುದ್ಧನಾಗಿದ್ದಿದ್ರೆ ಅದು ಅರ್ಥವಾಗ್ತಿರಲಿಲ್ಲ; ಆದ್ರೆ ಬಹುತೇಕ ಗಂಡಸರ ಹಾಗೆ ನಾನೂ ಮದುವೆಗೆ ಮುಂಚೆ ಹೆಂಗಸರನ್ನ ಅದೇ ದೃಷ್ಟಿಯಿಂದ ನೋಡಿದ್ದೋನು, ಹೀಗಾಗಿ ಅವನ ಮನಸ್ಸು ನಂಗೆ ತೆರೆದ ಪುಸ್ತಕದ ಹಾಗೆ ಸ್ಪಷ್ಟವಾಗಿ ಕಾಣಿಸ್ತು. ನನ್ನ ವಿಶೇಷ ಕಿರಿಕಿರಿಗೆ ಕಾರಣ ಅಂದ್ರೆ, ಆಗಾಗ ಇಂದ್ರಿಯದಾಹ ಉಕ್ಕೇರುವ ನಿರಂತರ ಪೀಡೆಯಾಗಿ ನನ್ನನ್ನವಳು ಕಾಣ್ತಾಳೆ ಅನ್ನೋದು. ಆದರೆ ಈ ಮನುಷ್ಯ ಹೊರಗಿನ ನಯಗಾರಿಕೆ, ಹೊಸತನ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ನಿಸ್ಸಂಶಯವಾದ ಸಂಗೀತಜ್ಞಾನ, ನುಡಿಸುವಾಗ ಹತ್ತಿರವಾಗೋದು, ನಡೆದುಕೊಳ್ಳೋ ರೀತಿ ಹಾಗೂ ಪ್ರಭಾವಶಾಲೀ ಸ್ವಭಾವ ಇವುಗಳು-ಅವಳನ್ನ ಗಾಢವಾಗಿ ಆಕರ್ಷಿಸೋದು ಮಾತ್ರವಲ್ಲದೆ ಅವಳನ್ನ ಗೆಲ್ಲೋದರಲ್ಲಿ, ಹಿಂಡಿ ಹಿಪ್ಪೆ ಮಾಡೋದ್ರಲ್ಲಿ, ತನ್ನ ಕಿರುಬೆರಳಿಂದ ಅವಳನ್ನ ಬೇಕಾದ ಹಾಗೆ ಆಡಿಸೋದ್ರಲ್ಲಿ ಅನುಮಾನವೇ ಇರಲಿಲ್ಲ. ಇದೆಲ್ಲ ನನಗೆ ಗೊತ್ತಾಗಿ ಅತೀವ ಸಂಕಟ ಅನುಭವಿಸಿದೆ. ಇಷ್ಟಿದ್ದರೂ ಅಥವಾ ಇದೇ ಕಾರಣಕ್ಕಾಗಿ, ನಾನವನ ಬಗ್ಗೆ ನನ್ನ ಇಚ್ಛೆ ಮೀರಿ ವಿನಯದಿಂದ ಮಾತ್ರವಲ್ಲ ಸ್ನೇಹಪರನಾಗಿಯೂ ಇರೋ ಹಾಗೆ ಆಯ್ತು. ಇದನ್ನೆಲ್ಲ ನಾನು ಅವನಿಗಾಗಿ ಮಾಡಿದೆನೋ, ಇದಕ್ಕೆಲ್ಲ ನಾನು ಬಗ್ಗೋನಲ್ಲ ಅಂತ ತೋರಿಸಿಕೊಳ್ಳೋಕ್ಕೆ ಮಾಡಿದೆನೋ, ನನ್ನ ಹೆಂಡ್ತಿಗಾಗಿ ಮಾಡಿದೆನೋ, ಗೊತ್ತಿಲ್ಲ. ಆದ್ರೆ ಅವನನ್ನ ನೋಡಿದ ಮೊದಲ ಕ್ಷಣದಿಂದ್ಲೇ ಅವನ ಜೊತೆ ನಾನು ಸಹಜವಾಗಿ ನಡೆದುಕೊಳ್ಳಕ್ಕಾಗಲಿಲ್ಲ. ಆಗಿಂದಾಗ್ಲೇ ಅವನನ್ನ ಕೊಂದು ಹಾಕೋ ನನ್ನ ಬಯಕೆಗೆ ಬಲಿಯಾಗಬಾರದೂಂತ ಅವನನ್ನ ಹೊಗಳಿದೆ. ಊಟಕ್ಕೆ ಕೂತಾಗ ದುಬಾರಿ ಮದ್ಯ ಕೊಟ್ಟೆ, ಅವನ ಪಿಟೀಲು ನುಡಿಸಾಣಿಕೆಯಿಂದ ಆನಂದತುಂದಿಲನಾದೆ, ಸ್ನೇಹಪೂರ್ಣ ಮುಗುಳ್ನಗೆಯಿಂದ ಅವನ ಜೊತೆ ಮಾತಾಡಿದೆ, ಮತ್ತೆ ಮುಂದಿನ ಭಾನುವಾರವೂ ಬಂದು ನನ್ನ ಹೆಂಡತಿ ಜತೆ ಪಿಟೀಲು ನುಡಿಸಿ ಊಟ ಮಾಡಿಕೊಂಡು ಹೋಗ್ಬೇಕೂಂತ ಬಲವಂತ ಮಾಡಿದೆ. ಸಂಗೀತ ಪ್ರೇಮಿಗಳಾದ ಕೆಲವು ಗೆಳೆಯರನ್ನೂ ಆಹ್ವಾನಿಸೋದಾಗಿ ಹೇಳಿದೆ."

ತುಂಬ ಕ್ಷೋಭೆಗೊಂಡ ಪೋಝ್ನಿಶೆವ್ ತನ್ನ ಭಂಗಿಯನ್ನ ಬದಲಿಸಿ ತನ್ನ ವಿಚಿತ್ರ ಸದ್ದನ್ನ ಹೊರಸೂಸಿದ.

"ಆ ಮನುಷ್ಯನ ಇರುವಿಕೆ ನನ್ನ ಮೇಲೆ ಎಂಥ ಪರಿಣಾಮ ಮಾಡಿತು ಎಂಬುದನ್ನು ಆಲೋಚಿಸಿದರೆ ಆಶ್ಚರ್ಯವಾಗತ್ತೆ" ಎಂದು ಮತ್ತೆ ತನ್ನ ಕಥನವನ್ನು ಆರಂಭಿಸಿದ, ತುಂಬ ಕಷ್ಟಪಟ್ಟು ತನ್ನೊಳಗಾಗುವ ತಲ್ಲಣವನ್ನು ಅದುಮಿಕೊಳ್ಳುತ್ತ: "ಒಂದೆರಡು ದಿನಗಳ ಬಳಿಕ ಪಕ್ಕದ ಕೋಣೆಯ ಮುಂದೆ ಹಾದುಹೋಗುವಾಗ, ತಲೆಯ ಮೇಲೆ ಕಲ್ಲುಬಿಚಪ್ಪಡಿ

ಬಿದ್ದಂತೆ ಏನೋ ಭಾರವಾದ ಅನುಭವ ನನಗಾಯಿತು. ಹಾಗೆ ಹಾದು ಹೋಗುವಾಗ ನನಗೇಕೋ ಅವನ ನೆನಪಾಯಿತು. ನಾನು ಓದುಕೋಣೆಗೆ ವಾಪಸ್ಸಾದಾಗಲೇ ಕಾರಣ ಹೊಳೆದದ್ದು, ಹಾಗಾಗಿ ಖಾತರಿಪಡಿಸಿಕೊಳ್ಳಲು ಮತ್ತೆ ಪಕ್ಕದ ಕೋಣೆಗೆ ಹೋದೆ. ನಾನೇನೂ ತಪ್ಪು ತಿಳಿದಿರಲಿಲ್ಲ, ಅಲ್ಲಿ ಅವನ ಓವರ್‌ಕೋಟ್ ಇತ್ತು. ಅದೊಂದು ಚಿತ್ತಾರದ ಓವರ್‌ಕೋಟ್. ಅದೇಕೆ ಎಂದು ತಿಳಿಯದಿದ್ದರೂ, ಅವನಿಗೆ ಸಂಬಂಧಿಸಿದ್ದೆಲ್ಲವನ್ನೂ ನಾನು ಸೂಕ್ಷ್ಮವಾಗಿ ಗಮನಿಸಿದೆ. ಅವನು ಅಲ್ಲಿಯೇ ಇದ್ದಾನೆಂದು ನನಗನ್ನಿಸಿತು. ನಾನು ನರ್ತನ ಕೋಣೆಗೆ ಹೋದೆ - ಪಡಸಾಲೆಯ ಮೂಲಕವಲ್ಲ, ನನ್ನ ಮಗಳ ಕೋಣೆಯ ಮೂಲಕ. ಲೀಸಾ ಓದುತ್ತ ಕುಳಿತಿದ್ದರೆ, ನನ್ನ ಕಿರಿಮಗನ ಜೊತೆ ಸುತ್ತುವ ಏನನ್ನೋ ಮಾಡುತ್ತ ದಾದಿ ಇದ್ದಳು. ನರ್ತನ ಕೋಣೆಯ ಬಾಗಿಲು ಮುಚ್ಚಿತ್ತು, ಆದರೆ ಒಳಗಿನಿಂದ ಲಯಬದ್ಧವಾದ ಸ್ವರಗುಂಫನ ಕೇಳಿಬಂತು, ಜೊತೆಗೆ ಅವಳ ಮತ್ತು ಅವನ ಧ್ವನಿಗಳೂ ಕೇಳಿಸಿಕೊಳ್ಳಲು ಪ್ರಯತ್ನಿಸಿದೆ, ಆದರೆ ಸ್ಪಷ್ಟವಾಗಲಿಲ್ಲ.

"ಅವರ ಮಾತುಗಳನ್ನೂ ಪ್ರಾಯಶಃ ಜೊತೆಗೆ ಮುತ್ತುಗಳ ದನಿಗಳನ್ನೂ ಮುಚ್ಚುವ ಪ್ರಯತ್ನದಲ್ಲಿ ಪಿಯಾನೋ ಸದ್ದನ್ನು ಗಾಢಗೊಳಿಸಿದ್ದು ಸ್ಪಷ್ಟವಾಗಿತ್ತು. ಅಯ್ಯೋ ದೇವರೇ! ನನ್ನಲ್ಲೇನಾಗ್ತಿದೆ! ನನ್ನಲ್ಲಿದ್ದ ಪಶುತನವೂ ಭಯದಿಂದ ತಲ್ಲಣಗೊಳ್ಳುವಂತಾಯ್ತು. ನನ್ನ ಹೃದಯ ಹಿಂಡತೊಡಗಿತು, ಆಮೇಲೆ ಅದು ನಿಂತು ಎದೆಬಡಿತ ಸುತ್ತಿಗೆಯ ಏಟಿನಂತೆ ಜೋರಾಯಿತು. ಕೋಪ ಬಂದಾಗ ನನ್ನಲ್ಲಿ ಸಾಮಾನ್ಯವಾಗಿ ಆಗುತ್ತಿದ್ದಂತೆ, ಮುಖ್ಯವಾಗಿ ಉಂಟಾದದ್ದು ನನ್ನದೇ ಬಗೆಗಿನ ಅನುಕಂಪ. 'ಮಕ್ಕಳಿರುವಾಗ, ದಾದಿಯೂ ಮನೇಲಿರೋವಾಗ' ಎಂದು ಅಚ್ಚರಿಯಾಯ್ತು. ನೋಡೋದಕ್ಕೆ ನಾನು ಭಯಂಕರವಾಗಿ ಕಾಣ್ತಿದ್ದಿರಬೇಕು, ಯಾಕೇಂದ್ರೆ ಲೀಸಾ ಕಣ್ಣರಳಿಸಿ ನೋಡ್ತಿದ್ದಳು. 'ಈಗ ನಾನೇನ್ಮಾಡಲಿ?' ಅಂದುಕೊಂಡೆ. 'ಒಳಗೆ ಹೋಗಲೇ?' 'ಆಗಲ್ಲ'. ನಾನೇನ್ಮಾಡಬೇಕೋ ತೋಚಲಿಲ್ಲ. ಆದ್ರೆ ಸುಮ್ಮನೆ ಹೊರಟುಹೋಗಲೂ ಆಗದೆ ನನ್ನ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡೋಳ ಹಾಗೆ ದಾದಿ ನನ್ನ ಕಡೆ ನೋಡಿದಳು. 'ಒಳಕ್ಕೆ ಹೋಗದೆ ಇರಕ್ಕೆ ಸಾಧ್ಯವೇ ಇಲ್ಲ' ಅಂದುಕೊಂಡು ಸರ್ರಂತ ಬಾಗಿಲು ತೆಗೆದೆ. ಅವನು ಪಿಯಾನೋ ಹತ್ತಿರ ಕೂತು ತನ್ನ ದೊಡ್ಡ ಬಿಳಿಯ ಕೈಬೆರಳುಗಳಿಂದ ಸ್ವರಗುಂಫನಗಳನ್ನು ನುಡಿಸ್ತಾ ಇದ್ದ, ಅವಳು ಪಿಯಾನೋದ ತಿರುವಿನ ಹತ್ತಿರ ಬಾಗಿಕೊಂಡು ಸಂಗೀತ ಪುಸ್ತಕವನ್ನು ನೋಡುತ್ತ ನಿಂತಿದ್ದಳು. ಅವಳಿಗೆ ಸದ್ದು ಕೇಳಿಸಿ ನನ್ನ ಕಡೆ ನೋಡಿದಳು. ಅವಳಿಗೆ ಹೆದರಿಕೆಯಾಗಿತ್ತೋ, ಏನೂ ಆಗಿಲ್ಲದ ಹಾಗೆ ನಟಿಸ್ತಿದ್ದಳೋ ಅಥವಾ ಅವಳಿಗೆ ನಿಜಕ್ಕೂ ಭಯವಾಗಿರ್ಲಿಲ್ವೋ, ಅಂತೂ ನಿಂತಲ್ಲೇ ಅವಳ ಮುಖ ಬಣ್ಣಗೆಟ್ಟಿತು, ಅದೂ ತಕ್ಷಣ ಏನಲ್ಲ. 'ನೀವು ಬಂದ್ರಲ್ಲ ತುಂಬ ಸಂತೋಷ. ಭಾನುವಾರ ಯಾವುದನ್ನ ನುಡಿಸಬೇಕು ಅಂತ ನಾವಿನ್ನೂ ನಿರ್ಧರಿಸಿರಲಿಲ್ಲ' ಅಂದಳು; ಅವಳ ಧ್ವನಿ ನಾವಿಬ್ರೇ ಇದ್ದಾಗ ಇರ್ತಿದ್ದ ಹಾಗಿರಲಿಲ್ಲ, ಇದು ಮತ್ತು ಅವಳು ಹೇಳಿದ 'ನಾವು' ಅನ್ನೋ ಬಹುವಚನ ನನ್ನಲ್ಲಿ ಕೋಪವನ್ನುಕ್ಕೇರಿಸಿತು. ನಾನು ಅವನ ಕಡೆ ನೋಡಿ ಮೌನದಿಂದ ತಲೆಯಾಡಿಸಿದೆ.

'ನನ್ನ ಕೈಯನ್ನವನು ಅದುಮಿದ, ಜೊತೆಗೆ ಮುಗುಳ್ನಕ್ಕ, ಅದಂತೂ ವ್ಯಂಗ್ಯ ಪೂರ್ಣವಾಗಿದ್ದುದು ಸ್ಪಷ್ಟವಾಗಿತ್ತು. ಅಲ್ಲದೆ, ಭಾನುವಾರ ಕಲಿಯಲು ತಾನು ಹೊಸ ಸಂಗೀತಪಾಠವನ್ನು ತಂದಿರುವುದಾಗಿಯೂ, ಆದರೆ ಯಾವುದನ್ನು ನುಡಿಸಬೇಕೆಂಬ - ಶಾಸ್ತ್ರೀಯವ್ರೋ, ಅಂದರೆ ಹೆಚ್ಚು ಕಷ್ಟಕರವಾದ ಬಿಥೋವನ್ನ ಸೊನಾಟವನ್ನೋ ಅಥವಾ ಒಂದೆರಡು ಲಘುಕೀರ್ತನೆಗಳನ್ನೋ - ಎಂಬ ಬಗ್ಗೆ ಬಗ್ಗೆ ತಮ್ಮಿಬ್ಬರದು ಭಿನ್ನ ಅಭಿಪ್ರಾಯವೆಂದೂ ಹೇಳಿದ. ಅವನ ಮಾತುಗಳೆಷ್ಟು ಸರಳವೂ ಸಹಜವೂ ಆಗಿತ್ತೆಂದರೆ ಅದರಲ್ಲಿ ಯಾವುದೇ ಆಕ್ಷೇಪಾರ್ಹವಾದುದೂ ಕಾಣಿಸುತ್ತಿರಲಿಲ್ಲ. ಆದರೂ ಅವನು ಹೇಳಿದ್ದೆಲ್ಲ ಸುಳ್ಳು, ಅವರಿಬ್ಬರಲ್ಲಿ ಆಗಿದ್ದ ಮಾತು ಎಂದರೆ ನನ್ನನ್ನು ಹೇಗೆ ವಂಚಿಸಬೇಕೆಂಬ ಬಗ್ಗೆ ಅನ್ನಿಸಿತು.

"ನನ್ನಂತಹ ಹೊಟ್ಟೆಕಿಚ್ಚಿನವನಿಗೆ (ಜಗತ್ತಿನಲ್ಲಿ ಎಲ್ಲರೂ ಮತ್ಸರಗ್ರಸ್ತರೇ) ಉಂಟಾಗುವ ಅತ್ಯಂತ ಖೇದಕರವೂ ಅಪಾಯಕಾರಿಯೂ ಪರಿಸ್ಥಿತಿಯೆಂದರೆ ಗಂಡು ಹೆಣ್ಣುಗಳಿಗೆ ತೀರ ಆಪ್ತವಾಗಲು ಅವಕಾಶವೀಯುವ ಕೆಲವು ಸಾಮಾಜಿಕ ಸಂಪ್ರದಾಯಗಳು. ನರ್ತನಕೂಟಗಳಿಗೆ ಹೋಗುವುದಕ್ಕೋ, ವೈದ್ಯರು ತಮ್ಮ ಹೆಂಗಸು ರೋಗಿಗಳ ಜೊತೆ ಏಕಾಂತವಾಗಿರುವುದಕ್ಕೋ, ಕಲೆ ಅದರಲ್ಲೂ ಸಂಗೀತದಲ್ಲಿ ಆಸಕ್ತರಾದವರು ಜೊತೆಗಿರುವದಕ್ಕೋ ಅಡ್ಡಿ ಮಾಡಿದರೆ ನೀವು ನಗೆಪಾಟಲಿಗೀಡಾಗುತ್ತೀರಿ. ಶ್ರೇಷ್ಠ ಕಲೆಯಾದ ಸಂಗೀತದಲ್ಲಿ ಇಬ್ಬರೂ ಹತ್ತಿರದಲ್ಲಿರ ಬೇಕಾದುದು ಅನಿವಾರ್ಯ, ಅದರಲ್ಲಿ ಆಕ್ಷೇಪಾರ್ಹವಾದ್ದೇನೂ ಇಲ್ಲ, ಒಬ್ಬ ಮುಠ್ಠಾಳ ಗಂಡ ಮಾತ್ರ ಅದರಲ್ಲಿ ಹುಳುಕನ್ನು ಕಾಣುತ್ತಾನೆ. ಆದರೆ ಅಂಥದರಲ್ಲಿಯೇ ಹೆಚ್ಚು ಪಾಲು ವಿವಾಹೇತರ ಸಂಬಂಧಗಳು ಕುದುರುವುದು ಎಂಬುದನ್ನು ಎಲ್ಲರೂ ಬಲ್ಲರು. ನಾನು ತೋರಿಸಿಕೊಂಡ ಗೊಂದಲದಿಂದ ಅವರಿಬ್ಬರಲ್ಲೂ ಗೊಂದವುಂಟಾಗಲು ಕಾರಣನಾದೆ; ಬಹಳ ಹೊತ್ತು ನಾನು ಮಾತಾಡಲಾಗಲಿಲ್ಲ. ಭರ್ತಿ ನೀರಿರೋ ಸೀಸೆಯನ್ನು ತಲೆಕೆಳಗೆ ಮಾಡಿದರೂ ನೀರು ಕೆಳಕ್ಕೆ ಬೀಳದಿರೋ ಹಾಗೆ ಆಯಿತು; ಅವನನ್ನು ಬೈದು ಅಟ್ಟಬೇಕೆಂದು ಬಯಸಿದ್ದೆ, ಆದರೂ ಅವನನ್ನು ನಯವಾಗಿ ಕಾಣಬೇಕೆಂದು ಅನ್ನಿಸಿತು. ಅವರು ಮಾಡಿದ್ದಕ್ಕೆಲ್ಲ ನನ್ನ ಒಪ್ಪಿಗೆಯಿದೆಯೆಂಬ ರೀತಿಯಲ್ಲಿ ನಾನು ನಡೆದುಕೊಂಡೆ. ಇದು ವಿಚಿತ್ರವಾದ ವರ್ತನೆ. ಅವನ ಅಭಿರುಚಿ ನನಗೆ ಮೆಚ್ಚಿಗೆಯಾಯ್ತೆಂದು ಹೇಳಿದೆ, ಅವನನ್ನು ಅನುಸರಿಸಬೇಕೆಂದು ಅವಳಿಗೂ ಹೇಳಿದೆ. ನಾನು ಇದ್ದಕ್ಕಿದ್ದಂತೆ ಕೋಣೆಗೆ ಹೋದದ್ದರಿಂದ ಉಂಟಾಗಿದ್ದ ಗಲಿಬಿಲಿ ಗಾಬರಿಗಳು ಪೂರ್ತಿ ಹೋಗಲು ಬೇಕಾಗುವಷ್ಟು ಕಾಲವೂ ಅವನಿದ್ದು ಆನಂತರ ಹೋದ. ಹೋಗುವಾಗ ಮಾರನೆಯ ದಿನ ಏನು ಅಭ್ಯಾಸ ಮಾಡಬೇಕೆಂದು ತೀರ್ಮಾನವಾಗಿದೆಯೆಂದು ಹೇಳಿದ. ಅವರಿಗೆ ಆಸಕ್ತಿದಾಯಕ ವಾದ್ದಾವುದೂ ಎಂಬುದರೊಡನೆ ಹೋಲಿಸಿದರೆ ನಾಳಿನ ಅಭ್ಯಾಸದ ವಿಷಯ ಗೌಣ ಅನ್ನಿಸಿತು.

"ಕೋಣೆಯಿಂದ ಹೋಗುವಾಗ ಅವನಲ್ಲಿ ವಿಶೇಷ ವಿನಯ ಕಾಣಿಸ್ತು. (ಇಡೀ

ಕುಟುಂಬದ ಶಾಂತಿ, ಸಂತೋಷಗಳನ್ನು ಹಾಳು ಮಾಡಲು ಬಂದ ವ್ಯಕ್ತಿಯು ಹೋಗುವಾಗ ಜೊತೆಗಿರದೆ ಇನ್ನೇನು ಮಾಡುವುದು?) ನಾನು ಅವನ ಬಿಳಿಪು ಕೈಯನ್ನು ತುಂಬ ನವಿರಾಗಿ ಅದುಮಿದೆ."

## 20

"ಅವಳ ಜೊತೆ ನಾನು ಇಡೀ ದಿನ ಮಾತಾಡಲಿಲ್ಲ, ಮಾತಾಡಲಾಗಲಿಲ್ಲ. ಅವಳು ಹತ್ತಿರವಿದ್ದಾಗ ಎಂಥ ದ್ವೇಷ ಮೂಡುತ್ತಿತ್ತೆಂದರೆ ನನ್ನ ಬಗ್ಗೆ ನನಗೇ ಭಯವುಂಟಾಗುತ್ತಿತ್ತು. ಮಕ್ಕಳ ಜೊತೆ ರಾತ್ರಿ ಊಟ ಮಾಡುವಾಗ, ನಾನು ಯಾವಾಗ ಹೊರಗೆ ಹೋಗುವೆನೆಂದು ಕೇಳಿದಳು. ಝೆಮ್ಸ್ಟ್‌ವ್ನ ಜಿಲ್ಲಾ ಸಭೆಗಳಿಗೆ ನಾನು ಮುಂದಿನ ವಾರ ಹೋಗಬೇಕಾಗಿತ್ತು. ಯಾವ ತಾರೀಕು ಹೋಗುತ್ತೇನೆಂದು ಹೇಳಿದೆ. ಪ್ರಯಾಣಕ್ಕೆ ಏನೂ ಬೇಡವೇ ಎಂದವಳು ಕೇಳಿದಳು. ನಾನು ಮಾತಾಡಲಿಲ್ಲ, ಸುಮ್ಮನೆ ಕುಳಿತೆ, ಊಟದ ಬಳಿಕ ಮೌನವಾಗಿಯೇ ನನ್ನ ಕೋಣೆಗೆ ಹೋದೆ. ಆನಂತರ ಅವಳು ನನ್ನ ಕೋಣೆಗೆ ಬರುವುದನ್ನೇ ನಿಲ್ಲಿಸಿದ್ದಳು, ಅದರಲ್ಲೂ ಹಗಲು ಹೊತ್ತು. ಕೋಪ ತುಂಬಿಕೊಂಡು ಕೋಣೆಗೆ ಬಂದು ಬಿದ್ದುಕೊಂಡೆ. ಕ್ಷಣಾರ್ಧದಲ್ಲೇ ಅವಳ ಪರಿಚಿತ ಹೆಜ್ಜೆ ಸಪ್ಪಳ ಕೇಳಿಸಿತು. ನನ್ನ ಮನಸ್ಸಿನಲ್ಲಾಗ ಭಯಂಕರವಾದ ಪೈಶಾಚಿಕ ಯೋಚನೆಯೊಂದು ಮೂಡಿತು. ತಾನು ಮಾಡಿದ ಪಾಪವನ್ನವಳು ಉರಯನ ಹೆಂಡತಿಯಂತೆ ಮುಚ್ಚಿಡಲು ಪ್ರಯತ್ನಿಸಿದ್ದಳು, ಅದಕ್ಕಾಗಿಯೇ ಅವಳು ಅಂತ ಅಪಕಾಲದಲ್ಲಿ ನನ್ನ ಕೋಣೆಗೆ ಬಂದಿದ್ದಳು. ಅವಳ ಹೆಜ್ಜೆ ಸಪ್ಪಳ ಹತ್ತಿರವಾದಂತೆ 'ನನಗೋಸ್ಕರವಾಗಿಯೇ ಅವಳು ಬರುತ್ತಿರಬಹುದೇ?' ಎಂಬ ಆಲೋಚನೆ ಬಂತು. 'ಅವಳು ಇಲ್ಲಿಗೇ ಬರುತ್ತಿದ್ದರೆ ನನ್ನ ಅನುಮಾನ ನಿಜ' ಅನ್ನಿಸಿ ನನ್ನನ್ನು ಅವಳ ಬಗೆಗಿನ ದ್ವೇಷ ಆವರಿಸ್ತು. ಹೆಜ್ಜೆ ಹೆಚ್ಚು ಹತ್ತಿರವಾಗುತ್ತಿದ್ದವು. ಅವಳು ನರ್ತನಕೋಣೆಯ ಕಡೆ ಹೋಗದಿರಲು ಸಾಧ್ಯವೇ? ಉಹ್ಞೂ, ಬಾಗಿಲು ಕಿರುಗುಟ್ಟಿತು, ನೋಡಿದರೆ ಅವಳ ನೀಳ ಸುಂದರ ದೇಹ ಕಾಣಿಸ್ತು, ತನ್ನ ಅಳುಕಿನ ಬೇಡಿಕೆಯನ್ನು ಮರೆಮಾಚಲು ಪ್ರಯತ್ನಿಸುತ್ತಿದ್ದ ನೋಟ ಅವಳ ಕಣ್ಣಲ್ಲಿತ್ತು. ಆದರೆ ನನಗೆ ಅದು ತಿಳಿದದ್ದಲ್ಲದೆ ಅರ್ಥವೂ ಆಯ್ತು. ನನ್ನ ಉಸಿರುಕಟ್ಟಿದಂತಾದ್ದರಿಂದ ಸ್ವಲ್ಪ ಹೊತ್ತು ಉಸಿರು ಬಿಗಿಹಿಡಿದುಕೊಂಡಿದ್ದೆ; ಅವಳ ಕಡೆಯೇ ನೋಡುತ್ತ ಕೇಸ್‌ನಿಂದ ಸಿಗರೇಟ್ ತೆಗೆದು ಸೇದತೊಡಗಿದೆ.

'ಇದೇನು ಹೀಗೆ ಮಾಡ್ತೀರಿ, ನಿಮ್ಮ ಜೊತೆ ಕೂತುಕೊಳ್ಳೋಕೇಂತ ಬಂದ್ರೆ ಸಿಗರೇಟು ಹತ್ತಿಸಿದ್ರಿ?' ಎನ್ನುತ್ತಲೇ ಅವಳು ನನ್ನ ಪಕ್ಕ ಇದ್ದ ಸೋಫಾದಲ್ಲಿ ಕೂತು ನನ್ನೆಡೆಗೆ ಬಾಗಿದಳು. ಅವಳ ಸ್ಪರ್ಶವಾದೀತೆಂದು ನಾನು ಹಿಂದೆ ಸರಿದೆ.

'ಭಾನುವಾರ ನಾನು ಪಿಟೀಲು ನುಡಿಸೋದು ನಿಮಗೆ ಇಷ್ಟವಿಲ್ಲದಿರೋ ಹಾಗಿದೆ?' ಎಂದಳು.

'ನನಗ್ಯಾಕೆ ಇಷ್ಟವಿಲ್ಲ?' ಎಂದೆ.

'ನನಗೇನು ಗೊತ್ತಾಗೋಲ್ವಾ?'

'ಗೊತ್ತಾಗಿದ್ದಕ್ಕೆ ಅಭಿನಂದನೆಗಳು. ಆದರೆ ನನಗೆ ಕಾಣಿಸೋದು ನಿನ್ನ ವಯ್ಯಾರ. ನಿಂಗೆ ಕೀಳಾದದ್ದರಲ್ಲೇ ಆಸಕ್ತಿ, ಆದ್ರೆ ನಂಗೆ ಅದರಿಂದ ಮೈಯುರಿಯತ್ತೆ!'

'ಗಮಾರನ ಹಾಗೆ ಬೈಯೋಕೆ ಶುರುಮಾಡಿದ್ರೆ ನಾನು ಹೊರಟುಹೋಗ್ತೀನಿ'

'ಹಾಗೇ ಮಾಡು, ಆದ್ರೆ ನಿಂಗೆ ಮನೆಯ ಗೌರವ ಮುಖ್ಯವಾಗದಿದ್ರೆ ನಂಗೆ ನಿನ್ನ ಬಗ್ಗೆ ಗೌರವ ಇರಲ್ಲ, ನಂಗೆ ಮನೆತನದ ಮರ್ಯಾದೆ ಮುಖ್ಯ'.

'ಅಯ್ಯೋ ಇದೇನು? ಏನಾಯ್ತು?'

'ಹೊರಟುಹೋಗು, ದಯವಿಟ್ಟು'

"ನಾನು ಹೇಳಿದ್ದೇನು ಅನ್ನೋದು ಅವಳಿಗೆ ನಿಜವಾಗಿಯೂ ಅರ್ಥವಾಗಲಿಲ್ಲವೋ ಅಥವಾ ಅರ್ಥವಾಗದ ಹಾಗೆ ನಟಿಸಿದ್ದಳೋ ನನಗೆ ಗೊತ್ತಾಗಲಿಲ್ಲ. ಅವಳಿಗೆ ಮಾತ್ರ ಚುರುಕ್ ಅಂದು ಕೋಪ ಮಾಡಿಕೊಂಡಳು. ಹೊರಗೆ ಹೋಗದೆ ಅಲ್ಲೇ ಸುಮ್ಮನೆ ನಿಂತುಕೊಂಡಳು. 'ನಿಮ್ಮನ್ನ ತಾಳಿಕೊಳ್ಳೋದೇ ಕಷ್ಟ. ದೇವತೆ ಕೂಡ ಸಹಿಸಿ ಕೊಳ್ಳಲಾರದಂಥ ವ್ಯಕ್ತಿತ್ವ ನಿಮ್ಮದು' ಎಂದು ಎಂದಿನಂತೆ ಎಷ್ಟು ಸಾಧ್ಯವೋ ಅಷ್ಟು ಮೊನಚಾಗಿ ಕುಟುಕಿದಳು; ಅವಳ ಅಕ್ಕನ ಜೊತೆ ನಾನು ನಡಕೊಂಡ ವಿಷಯ ಪ್ರಸ್ತಾಪ ಮಾಡಿದಳು; ಆ ವಿಷಯ ಎತ್ತಿದರೆ ನಾನು ಘಾಸಿಗೊಳ್ತೀನಿ ಅನ್ನೋದು ಅವಳಿಗೆ ಗೊತ್ತು, ಅದಕ್ಕೇ ಆ ಗಾಯದ ಮೇಲೇ ಬರೆ ಎಳೆದಳು. 'ಅದಾದ ಮೇಲೆ ನಿಮ್ಮ ಯಾವ ನಡವಳಿಕೇನೂ ನಂಗೆ ಆಶ್ಚರ್ಯಕರವಾಗಿ ಕಾಣಲ್ಲ' ಅಂದಳು.

'ಹೌದು, ಚುಚ್ಚು, ಅವಮಾನ ಮಾಡು, ಮುಖಕ್ಕೆ ಮಸಿ ಬಳಿ, ಆಮೇಲೆ ನನ್ನ ಮೇಲೇ ಗೂಬೆ ಕೂರಿಸು' ಅಂತ ಮನಸ್ಸಲ್ಲೇ ಅಂದುಕೊಂಡೆ. ಆ ಕ್ಷಣ ನನ್ನನ್ನ ಎಂಥ ಕೋಪ ಆವರಿಸ್ತು ಅಂದ್ರೆ ಹಾಗೆ ಹಿಂದೆಂದೂ ಆಗಿರಲಿಲ್ಲ. ಮೊದಲನೇ ಸಲ ಅದಕ್ಕೆ ಹೊರರೂಪ ಕೊಡಕ್ಕೆ ಆಶಿಸ್ದೆ. ಧಿಗ್ಗನೆದ್ದು ಅವಳ ಹತ್ರ ಹೋದೆ. ಆದರೆ ಏಳೊ ಕ್ಷಣದಲ್ಲಿ ಪ್ರಜ್ಞೆ ಮರಳಿ, 'ಇದಕ್ಕೆ ಹೊರರೂಪ ಕೊಡೋದು ಸರಿಯೇ' ಅಂತ ಯೋಚಿಸ್ದೆ. ಆದ್ರೆ ಅದು ಸರಿ ಅನ್ನಿಸ್ತು, ಅವಳು ಹೆದರ್ಬೇಕು, ಹೀಗಾಗಿ ಕೋಪಾನ ಹತೋಟೀಲಿ ಇಟ್ಕೊಳ್ಳೋ ಬದಲು ಅದಕ್ಕೆ ತುಪ್ಪ ಸುರಿದು ಮತ್ತಷ್ಟು ಉರಿಯೋ ಹಾಗೆ ಮಾಡಿದೆ. 'ತೊಲಗಿ ಹೋಗು. ಇಲ್ದೆ ಇದ್ರೆ ಕೊಂದುಹಾಕ್ತೀನಿ' ಅಂತ ಕಿರುಚಿ ಅವಳ ರಟ್ಟೆ ಹಿಡಿದುಕೊಂಡೆ. ಹೀಗನ್ನೋವಾಗ ಕೋಪ ಹೆಚ್ಚಿತು. ನಾನು ಭಯಂಕರವಾಗಿ ಕಾಣ್ತಿರಬೇಕು, ಅವಳು ಹೆದರಿದಳು, ಹೊರಗೆ ಹೋಗೋದಕ್ಕೂ ಅವಳಲ್ಲಿ ಶಕ್ತಿ ಇದ್ದ ಹಾಗಿರ್ಲಿಲ್ಲ. ಹೀಗಾಗಿ, 'ವಾಸ್ಯಾ, ಏನಿದು? ಏನಾಗಿದೆ ನಿಮಗೆ?' ಅಂದಳು.

'ತೊಲಗು' ಅಂತ ಮತ್ತಷ್ಟು ಜೋರಾಗಿ ಗರ್ಜಿಸ್ದೆ. 'ನಿನ್ನನ್ನ ನೋಡಿದ್ರೆ ನನ್ನ ಮೈ ಉರಿಯುತ್ತೆ. ಅದಕ್ಕೆ ನಂಗೆ ನಾನೇ ಕಾರಣ ಕೊಟ್ಕೋಬೇಕಾದ್ದಿಲ್ಲ'.

"ಕೋಪದ ಕೈಗೆ ನನ್ನನ್ನ ನಾನು ಕೊಟ್ಕೊಂಡ ಮೇಲೆ ಅದರಲ್ಲೇ ಏನೋ ಖುಷಿ ಅನ್ನಿಸಿ, ಮತ್ತಷ್ಟು ಕೋಪದ ತುತ್ತ ತುದಿಯನ್ನ ತೋರಿಸಬೇಕು ಅನ್ನೋ ಬಯಕೆ ಬಲವಾಯ್ತು. ಅವಳನ್ನು ಚಚ್ಚಿ ಹಾಕಬೇಕು, ಕೊಂದುಬಿಡ್ಬೇಕು ಅನ್ನಿಸ್ತು. ಆದ್ರೆ ಇದು ಸಾಧ್ಯವಿರಲಿಲ್ಲ; ಅದಕ್ಕೇ ಮೇಜಿನ ಮೇಲಿದ್ದ ಒಂದು ಪೇಪರ್-ವೈಟ್ ತಗೊಂಡು 'ತೊ.. ಲ .. ಗು' ಅನ್ನುತ್ತ ಅದನ್ನ ಅವಳ ಹತ್ರ ನೆಲಕ್ಕೆ ಅಪ್ಪಳಿಸಿದೆ. ಅವಳ ಪಕ್ಕದಲ್ಲಿ ಸರಿಯಾಗಿ ಬೀಳೊ ಹಾಗೆ ಗುರಿ ಇಟ್ಟಿದ್ದೆ. ಆಮೇಲೆ ಅವಳು ಕೋಣೆಯಿಂದ ಹೊರಗೆ ಹೊರಟಳು, ಆದ್ರೆ ಬಾಗಿಲಲ್ಲಿ ನಿಂತಳು, ತಕ್ಷಣ ಅವಳು ನೋಡ್ತಾ ಇರೋ ಹಾಗೇನೇ (ಅವಳಿಗೆ ತೀಳೀಲಿ ಅಂತಲೇ ಹಾಗೆ ಮಾಡಿದೆ) ಮೇಜಿನ ಮೇಲಿದ್ದ ಕ್ಯಾಂಡಲ್ ಸ್ಟಿಕ್, ಇಂಕ್ ಸ್ಟ್ಯಾಂಡ್, ಇನ್ನೂ ಏನೇನು ಕೈಗೆ ಸಿಕ್ಕಿತೋ ಎಲ್ಲವನ್ನೂ ನೆಲದ ಮೇಲೆ ಎಸೆದೆ. ಹಾಗೆ ಎಸೀತ 'ಹೋಗು! ಹೊರಟು ಹೋಗು!' ಅಂತ ಕಿರುಚಿದೆ. ಅವಳು ಹೊರಟು ಹೋದಳು, ಮಾಡ್ತಾ ಇದ್ದದ್ದನ್ನೆಲ್ಲ ನಾನು ನಿಲ್ಲಿಸ್ದೆ.

"ಒಂದು ಗಂಟೆ ಆದಮೇಲೆ ನಮ್ಮ ಮನೆ ಆಳು ಬಂದು ನನ್ನ ಹೆಂಡತಿ ಸನ್ನಿ ಹಿಡಿದವಳ ಹಾಗೆ ಆಡ್ತಿದಾಳೆ ಅಂದಳು. ಅವಳಿದ್ದ ಕಡೆ ಹೋದೆ, ಅವಳು ಬಿಕ್ಕಿದಳು, ನಕ್ಕಳು, ಆದ್ರೆ ಮಾತು ಹೊರಡಲಿಲ್ಲ, ಅವಳ ದೇಹ ಪೂರ್ತಿ ನುಲಿಯುತ್ತಿತ್ತು. ಅವಳೇನೂ ನಟನೆ ಮಾಡ್ತಿರ್ಲಿಲ್ಲ, ನಿಜವಾಗ್ಲೂ ಅವಳಿಗೆ ಏನೋ ಆಗಿತ್ತು. ಬೆಳಿಗ್ಗೆ ಹೊತ್ತಿಗೆ ಅವಳ ಅಬ್ಬರ ಕಡಿಮೆ ಆಗಿತ್ತು, ಪ್ರೀತಿ ಅಂತ ಭಾವಿಸಿದ್ದರ ನೆರಳಲ್ಲಿ ನಮ್ಮಿಬ್ಬರ ನಡುವೆ ಶಾಂತಿ ಸ್ಥಾಪನೆ ಆಯ್ತು. ನಂಗೆ ಟ್ರುಖಚೆವ್‌ಸ್ಕಿ ಮೇಲೆ ಹೊಟ್ಟೆಕಿಚ್ಚು ಅಂತ ಒಪ್ಪಿಕೊಂಡೆ. ಅವಳ ಮುಖದಲ್ಲಿ ಗೊಂದಲವೇನೂ ಇರ್ಲಿಲ್ಲ, ಆದ್ರೆ ತುಂಬ ಸಹಜವಾಗಿ ನಕ್ಕಳು. ಅಂತಹವನ ಬಗ್ಗೆ ಅವಳಿಗೆ ವ್ಯಾಮೋಹ ಉಂಟಾಗುವ ಸಾಧ್ಯತೆ ವಿಚಿತ್ರ ಅನ್ನಿಸ್ತು.

" 'ಅವರ ಸಂಗೀತದ ಬಗ್ಗೆ ಸಂತೋಷಪಡೋದರ ಬದಲು ಒಬ್ಬ ಸಭ್ಯ ಹೆಂಗಸಿಗೆ ಬೇರೇನು ಭಾವನೆ ಬರೋದಕ್ಕೆ ಸಾಧ್ಯ? ನಿಮಗೆ ಬೇಕಾದ್ರೆ, ನಾನು ಅವರನ್ನಿನ್ನೆಂದೂ ನೋಡೋದಿಲ್ಲ ... ಅಷ್ಟೊಂದು ಜನರನ್ನ ಕರೆದಿದ್ರೂ, ಭಾನುವಾರ ಕೂಡ ನೋಡಲ್ಲ. ನನಗೆ ಮೈ ಹುಷಾರಿಲ್ಲ ಅಂತ ಅವರಿಗೆ ಬರೆದು ತಿಳಿಸಿಬಿಡಿ, ಅಲ್ಲೀಗೆ ಎಲ್ಲ ಮುಗಿದುಹೋಗತ್ತೆ! ಆತ ಅಪಾಯಕಾರಿ ವ್ಯಕ್ತಿ ಅಂತ ಯಾರಾದ್ರೂ ಭಾವಿಸೋದಿರಲಿ, ಅವರೇ ಹಾಗೆ ಯೋಚಿಸೋದು ತುಂಬ ನೋವು ತರೋ ವಿಷಯ. ನನ್ನ ಬಗ್ಗೆ ಯಾರಾದ್ರೂ ಹಾಗೆ ಯೋಚಿಸಿದರೆ ನನಗಂತೂ ಹೆಮ್ಮೆಯೇ!'

"ಅವಳು ಖಂಡಿತ ಸುಳ್ಳಾಡ್ತಿರಲಿಲ್ಲ, ತಾನು ಆಡ್ತಾ ಇದ್ದ ಮಾತಿನಲ್ಲಿ ಅವಳಿಗೆ ನಂಬಿಕೆ ಇತ್ತು; ಆ ಮಾತುಗಳ ಮೂಲಕ ತನ್ನಲ್ಲಿ ಅವನ ಬಗ್ಗೆ ತಿರಸ್ಕಾರ ತುಂಬಿಕೊಳ್ಳಕ್ಕೆ ಪ್ರಯತ್ನಪಟ್ಟು ಅವನಿಂದ ತನ್ನನ್ನು ರಕ್ಷಿಸಿಕೊಳ್ಳಕ್ಕೆ ಬಯಸಿದಳು. ಆದರೆ ಹಾಗೆ ಮಾಡೋದು ಅವಳಿಗೆ ಸಾಧ್ಯವಾಗಲಿಲ್ಲ. ಎಲ್ಲ ಅವಳ ವಿರುದ್ಧವಾಗೇ ಇದ್ದುವು, ಅದರಲ್ಲೂ ಸಂಗೀತ. ಆ ಭಾನುವಾರ ಅತಿಥಿಗಳು ಬಂದ್ರು, ಅವರಿಬ್ಬರೂ ಒಟ್ಟಿಗೇ ಪಿಟೀಲು ನುಡಿಸಿದರು. ಈ ಪ್ರಸಂಗ ಈ ರೀತಿ ಮುಗೀತು."

# 21

"ನನ್ನಲ್ಲಿ ಒಣಜಂಬ ತುಂಬಿತ್ತು ಅಂತ ಪ್ರತ್ಯೇಕವಾಗಿ ಹೇಳ್ಬೇಕಾಗಿಲ್ಲ; ಒಂದಷ್ಟು ಜಂಬ ಇಲ್ದಿದ್ರೆ ನಾವು ಬದುಕಿರೋದಕ್ಕೆ ಅರ್ಥವೇ ಇರಲ್ಲ. ಆದ್ದರಿಂದಲೇ ಆ ಭಾನುವಾರ ನಾನು ಔತಣಕ್ಕೆ ಮತ್ತು ಸಂಗೀತಕೂಟಕ್ಕೆ ಮುತುವರ್ಜಿಯಿಂದ ಏರ್ಪಾಟು ಮಾಡಿದೆ. ನಾನೇ ಖುದ್ದಾಗಿ ಸಾಮಾನುಗಳನ್ನೆಲ್ಲ ತಂದೆ ಹಾಗೂ ಅತಿಥಿಗಳನ್ನು ಆಹ್ವಾನಿಸಿದೆ.

"ಸಂಜೆ ಸುಮಾರು ಆರು ಗಂಟೆ ಹೊತ್ತಿಗೆ ಜನರು ಬರತೊಡಗಿದರು. ಅವನು ಸಂಜೆಯ ಉಡುಪಿನಲ್ಲಿದ್ದ, ಅವನ ಬೆರಳುಗಳಲ್ಲಿದ್ದ ವಜ್ರದ ಹರಳುಗಳು ಅವನ ಅಭಿರುಚಿಗೆ ಸಾಕ್ಷಿಯಾಗಿದ್ವು. ಅವನ ನಡವಳಿಕೆ ಸಹಜವಾಗಿತ್ತು, ಮುಕ್ತವಾಗಿತ್ತು. ಕೇಳಿದ್ದಕ್ಕೆಲ್ಲ ತಟಕ್ಕಂತ ಒಪ್ಪಿಗೆಯ ಮುಗುಳ್ನಗೆ ಸಮೇತ ಉತ್ತರ ಕೊಡ್ತಿದ್ದ. ನೀವು ಮಾಡ್ತಿರೋದೆಲ್ಲ ನಿರೀಕ್ಷಿತವಾದದ್ದೇ ಅನ್ನೋ ಭಾವನೆ ಅವನ ವಿಶಿಷ್ಟವಾದ ನೋಟದಲ್ಲಿತ್ತು. ಅವನಲ್ಲಿ ಅಷ್ಟು ಒಳ್ಳೆದಲ್ಲದ ಅಭಿರುಚಿಯನ್ನು ಕಂಡಾಗಲೆಲ್ಲ ನನಗಂತೂ ಖುಷಿ ಅನ್ನಿಸ್ತು. ಅದಕ್ಕೆ ಕಾರಣ ಅದರಲ್ಲಿ ನನ್ನ ಹೆಂಡತಿಯ ಮಟ್ಟಕ್ಕಿಂತ ತುಂಬ ಕೆಳ ಹಂತದವನು ಅಂತ ಅನ್ನಿಸಿ ನನಗೆ ಕೊಂಚ ಸಮಾಧಾನ ಅನ್ನಿಸ್ತಿತ್ತು; ಅವನ ಮಟ್ಟಕ್ಕೆ ತಾನು ಇಳೀಲಾರೆ ಅಂತ ನನ್ನ ಹೆಂಡತಿ ಹೇಳಿದ್ದಳಲ್ಲ. ಮೊದಲನೇದಾಗಿ, ನಾನು ಯೋಚನೆಯ ಆಘಾತಕ್ಕೆ ಸಿಕ್ಕು ಘಾಸಿಗೊಂಡಿದ್ದೆ, ಎರಡನೇದು ಅಂದ್ರೆ ನನ್ನ ಹೆಂಡತಿ ಮಾತುಗಳನ್ನ ನಾನು ನಂಬಬೇಕೂಂತ ಅನ್ನಿಸ್ತಿತ್ತು, ನಂಬಿದೆ ಕೂಡ. ನನ್ನಲ್ಲಿ ಹೊಟ್ಟೆಕಿಚ್ಚು ಇಲ್ಲದಿದ್ರೂ, ಸಂಜೆಯ ಮೊದಲ ಭಾಗದಲ್ಲೂ ಊಟದ ಹೊತ್ತಲ್ಲೂ ಅವರಿಬ್ಬರ ಜೊತೆ ನಾನು ಸಹಜವಾಗಿ ನಡಕೊಳ್ಳಲಾಗಲಿಲ್ಲ. ಸಂಗೀತ ಶುರುವಾಗೋದಕ್ಕೆ ಮುಂಚೆ ನಾನು ಅವರ ಓಡಾಟದ ಮೇಲೆ ಕಣ್ಣಿಟ್ಟಿದ್ದೆ.

"ಎಲ್ಲ ಔತಣಕೂಟದ ಥರವೇ ಇದೂ ನೀರಸವಾಗಿತ್ತು, ಕೃತಕವಾಗಿತ್ತು. ನನಗಂತೂ ಅದರ ವಿವರಗಳೆಲ್ಲ ಕಣ್ಣಿಗೆ ಕಟ್ಟಿದ ಹಾಗಿದೆ: ಅವನು ತನ್ನ ಪಿಟೀಲು ತಂದದ್ದು, ಅದರ ಪೆಟ್ಟಿಗೆ ಬೀಗ ತೆಗೆದದ್ದು, ಯಾರೋ ಹೆಂಗಸು ಹಾಕಿದ್ದ ಕಸೂತಿ ಇದ್ದ ಅದರ ಮೇಲಿನ ಹೊದಿಕೆ ಕಳಚಿದ್ದು, ಪಿಟೀಲನ್ನ ಹೊರಗೆ ತೆಗೆದದ್ದು, ಅದನ್ನು ಶ್ರುತಿ ಮಾಡಿದ್ದು, ನನ್ನ ಹೆಂಡತಿ ಪಿಯಾನೋ ಮುಂದೆ ನಿರಾಸಕ್ತಿಯಿಂದೆಂಬಂತೆ? ಆ ಮೂಲಕ ತನ್ನ ಸಾಮರ್ಥ್ಯದ ಬಗೆಗಿನ ಅಳುಕನ್ನು ಮುಚ್ಚಿಕೊಳ್ಳೋ ಪ್ರಯತ್ನದಲ್ಲಿ - ಕೂತದ್ದು, ಪಿಯಾನೋ 'ಆ' ಎಂದು ಸದ್ದಿನಿಂದ ಆರಂಭಗೊಂಡದ್ದು, ಪಿಟೀಲು ತಂತಿಯನ್ನು ಬೆರಳಿಂದ ಮೀಟಿ ಪರೀಕ್ಷಿಸಿದ್ದು, ಕಚೇರಿ ಮುಂದುವರಿದದ್ದು - ಎಲ್ಲ. ಅವರು ಹೇಗೆ ಒಬ್ಬರನ್ನೊಬ್ಬರು ನೋಡ್ತಾ ಕೂತುಕೊಳ್ತಿದ್ದ ಶ್ರೋತೃಗಳ ಕಡೆ ನೋಡ್ತಾ ತಮ್ಮಲ್ಲೇ ಮಾತಾಡಿಕೊಂಡು ಆರಂಭಿಸಿದ್ದು ಕೂಡ ನೆನಪಲ್ಲಿದೆ. ಮೊದಲ ಪಲುಕುಗಳನ್ನು ನುಡಿಸ್ತಾ ಅವನ ಮುಖ ಗಂಭೀರವಾಯ್ತು, ಆನಂತರ ಸಹಾನುಭೂತಿಪರವಾಯ್ತು, ಅವನು ಸ್ವರಗಳನ್ನು ತದೇಕವಾಗಿ ಆಲಿಸ್ತಾ ನವಿರಾಗಿ ತಂತಿಗಳ ಮೇಲೆ ಬೆರಳುಗಳನ್ನಾಡಿಸ್ತಿದ್ದ.

ಅವನ ಸ್ವರಕ್ಕೆ ಪಿಯಾನೋ ಮರುದನಿ ಕೊಡ್ತಿತ್ತು. ಹೀಗೆ ಕಛೇರಿ ಶುರುವಾಯ್ತು. ... "

ಪೋಜ್ನಿಶೆವ್ ಸ್ವಲ್ಪ ಹೊತ್ತು ತನ್ನ ಕಥನವನ್ನು ನಿಲ್ಲಿಸಿ ಅನೇಕ ಸಲ ಒಂದಾದ ಮೇಲೊಂದರಂತೆ ತನ್ನ ಎಂದಿನ ವಿಚಿತ್ರ ಶಬ್ದ ಮಾಡಿದ. ಮಾತಾಡಕ್ಕೆ ಪ್ರಯತ್ನಿಸಿ, ಉಸಿರುಬಿಟ್ಟು ನಿಲ್ಲಿಸಿದ. ಕೊಂಚ ಹೊತ್ತಿನ ಬಳಿಕ ಮತ್ತೆ ಶುರು ಮಾಡಿದ.

"ಅವರು ಬಿಥೋವನ್‌ನ ಕ್ರೂಸರ್ ಸೊನಾಟ ನುಡಿಸಿದ್ರು. ಮೊದಲ ದ್ರುತಗತಿಯ ಆರಂಭ ನಿಮಗೆ ಗೊತ್ತಾ? ಹೌದಲ್ಲವಾ? ಹ್ಞೂ! ಅದಂತೂ ಭಯಂಕರವಾದ್ದು, ಅದೇ ಸೊನಾಟ, ಅದರಲ್ಲೂ ಆ ಭಾಗ. ಒಟ್ಟಾರೆ ಸಂಗೀತವೇ ಭಯಾನಕವಾದ್ದು! ಅದ್ಯಾಕೋ ನಂಗೆ ಗೊತ್ತಿಲ್ಲ. ಏನು ಸಂಗೀತ ಅದು? ಅದೇನು ಮಾಡತ್ತೆ? ಸಂಗೀತ ಆತ್ಮೋದ್ಧಾರಕ ಅಂತಾರೆ. ಅವಿವೇಕ. ಅದು ನಿಜವಲ್ಲ! ಅದು ಪರಿಣಾಮ ಬೀರತ್ತೆ, ಆದ್ರೆ ಭಯಂಕರ ಪರಿಣಾಮ. ನಾನು ಹೇಳ್ತಿರೋದು ನನ್ನ ಬಗ್ಗೆ, ಉನ್ನತ ಸಂಗೀತದ ಬಗ್ಗೆ ಅಲ್ಲ. ಅದಕ್ಕೆ ಒಳ್ಳೆ ಪರಿಣಾಮ ಬೀರೋ ಶಕ್ತೀನೂ ಇಲ್ಲ, ದುಷ್ಪರಿಣಾಮ ಬೀರೋ ಸಾಮರ್ಥ್ಯವೂ ಇಲ್ಲ. ಆದರೆ ಅದರಿಂದಾಗೋದು ಮನಃಕ್ಷೋಭೆ. ಅದನ್ನ ನಾನು ಹೇಗೆ ಸಹಿಸಿಕೊಳ್ಳಲಿ? ಸಂಗೀತ ನನ್ನನ್ನು ನಾನು ಮರೆಯೋ ಹಾಗೆ ಮಾಡತ್ತೆ, ಪ್ರಾಣ ಅದು; ಅದು ನನ್ನದಲ್ಲದ ಯಾವುದೋ ವಲಯಕ್ಕೆ ಕೊಂಡೊಯ್ಯತ್ತೆ. ಸಂಗೀತದ ಪ್ರಭಾವದಲ್ಲಿ ನನ್ನದಲ್ಲದ ಅನುಭವಗಳನ್ನು ಪಡೀತೀನಿ, ನನಗೆ ಅರ್ಥವಾಗದ್ದನ್ನ ಅರ್ಥಮಾಡ್ಕೊತೀನಿ, ನಾನು ಮಾಡಲಾಗದ್ದನ್ನ ಮಾಡ್ತೀನಿ. ಸಂಗೀತ ಆಕಳಿಕೆಯ ಹಾಗೆ, ನಗುವಿನ ಹಾಗೆ ಕಾರ್ಯ ಮಾಡತ್ತೆ ಅನ್ನಬಹುದು. ನನಗೆ ನಿದ್ದೆ ಇಲ್ದಿದ್ರೂ ಯಾರಾದ್ರೂ ಆಕಳಿಸ್ತಿದ್ರೆ ನಂಗೂ ಆಕಳಿಕೆ ಬರತ್ತೆ; ನಗು ಬರಿಸೋ ಅಂಥದು ಮುಂದೇನೂ ಇಲ್ದಿದ್ರೂ ನಗುವವರನ್ನ ಕಂಡರೆ ನಂಗೂ ನಗು ಬರತ್ತೆ.

"ಸಂಗೀತ ನನ್ನನ್ನ ತಕ್ಷಣವೇ ನೇರವಾಗಿ ಅದನ್ನು ರೂಪಿಸಿದೋನ ಮನೋಭೂಮಿಕೆಗೆ ಕೊಂಡೊಯ್ದುಬಿಡತ್ತೆ. ಅವನ ಮನಸ್ಸಿನ ಜೊತೆ ನನ್ನ ಮನಸ್ಸು ಸೇರಿಹೋಗತ್ತೆ, ಅವನ ಜೊತೇಲೇ ಒಂದು ಸ್ಥಿತಿಯಿಂದ ಮತ್ತೊಂದಕ್ಕೆ ಸಾಗ್ತೀನಿ. ಇದ್ಯಾಕೆ ಹೀಗಾಗತ್ತೆ ನಂಗೆ ಗೊತ್ತಿಲ್ಲ. ಉದಾಹರಣೆಗೆ, ಕ್ರೂಸರ್ ಸೊನಾಟ ರಚಿಸಿದೋನಿಗೆ? ಬಿಥೋವನ್? ತಾನೇಕೆ ಆ ಸ್ಥಿತೀಲಿದ್ದ ಅನ್ನೋದು ಗೊತ್ತಿರತ್ತೆ. ಆ ಸ್ಥಿತಿಯೇ ಅವನನ್ನ ಯಾವುದೋ ಕಾರ್ಯಕ್ಕೆ ಪ್ರೇರೇಪಿಸಿರತ್ತೆ, ಅಂದ್ರೆ ಆ ಸ್ಥಿತಿ ಅವನಮಟ್ಟಿಗೆ ಅರ್ಥಪೂರ್ಣ, ಆದ್ರೆ ನಂಗೆ ಅಂಥದು ಯಾವುದೂ ಇಲ್ಲ. ಅದಕ್ಕೇ ನಾನು ಹೇಳೋದು ಸಂಗೀತ ಮನಸ್ಸನ್ನ ಕಲಕತ್ತೆ ಅಂತ, ಆದ್ರೆ ಅದು ಯಾವುದೇ ನಿರ್ಣಯಕ್ಕೆ ಮುಟ್ಟಿಸೋದಿಲ್ಲ. ಸೈನ್ಯದಳ ಸಂಗೀತ ನುಡಿಸಿದಾಗ ಸೈನಿಕರೆಲ್ಲ ಅದಕ್ಕನುಗುಣವಾಗಿ ಹೆಜ್ಜೆ ಹಾಕ್ತಾರೆ, ಹೀಗಾಗಿ ಸಂಗೀತ ತನ್ನ ಉದ್ದೇಶ ನೆರವೇರಿಸುತ್ತೆ. ಒಂದು ನೃತ್ಯದ ಸಂಗೀತ ಅಂದ್ಕೊಳ್ಳಿ, ನರ್ತಕ್ರು ಕುಣಿತಾರೆ, ಸಂಗೀತದ ಉದ್ದೇಶ ಆಗ಼್ೂ ನೆರವೇರಿರತ್ತೆ. ಪ್ರಾರ್ಥನೆಯಲ್ಲಿ ಮೇಳಸಂಗೀತ ನಡೆಯುತ್ತೆ, ಆಗಲೂ ಸಂಗೀತ ತನ್ನ ಗುರಿ ತಲುಪಿರತ್ತೆ. ಮಿಕ್ಕ ಕಡೆ ಬರೀ ಕಲಕುವಿಕೆ, ಆ ಕಲಕುವಿಕೆಯಿಂದ ಏನಾಗಬೇಕೋ ಅದು ಮಾತ್ರ ನೆರವೇರಲ್ಲ. ಅದಕ್ಕೇ ಸಂಗೀತ

ಕೆಲವೊಮ್ಮೆ ಭಯಂಕರವಾಗೋದು, ಚೈನದಲ್ಲಿ ಸಂಗೀತ ಸರ್ಕಾರದ ವ್ಯವಹಾರ. ಅದು ಹಾಗೇ ಇರ್ಬೇಕು. ಯಾರೋ ಇನ್ಯಾರನ್ನೋ ಸಂಮೋಹಿನಿಗೆ ಒಳಪಡಿಸಿ ತನಗೆ ಬೇಕಾದ್ದನ್ನ ಸಾಧಿಸೋದಕ್ಕೆ ಹೇಗೆ ಅವಕಾಶ ಕೊಡೋದು? ಅದೂ ಇಂಥ ಸಂಮೋಹಿನಿಕಾರ ನೀತಿಗೆಟ್ಟವನಾಗಿದ್ರೆ, ಗತಿಯೇನು?

"ಕೆಟ್ಟ ಬಳಕೆ ಮಾಡಿಕೊಳ್ಳೋನ ಕೈಲಿ ಅದು ಭಯಂಕರ ಸಾಧನ. ಕ್ರೂಸರ್ ಸೊನಾಟವನ್ನೇ ಉದಾಹರಣೆಯಾಗಿ ತಗೊಳ್ಳಿ. ಲೋನೆಕ್ ಇರೋ ಉಡುಪು ಧರಿಸಿದ ಹೆಂಗಸರಿರೋ ಡ್ರಾಯಿಂಗ್ ರೂಮಿನಲ್ಲಿ ಅದರ ಮೊದಲ ದ್ರುತಗತಿಯನ್ನ ಹೇಗೆ ನುಡಿಸೋದು? ಅದರ ನುಡಿಸಾಣಿಕೆ ಕೇಳೋದು, ಒಂದಷ್ಟು ಚಪ್ಪಾಳೆ ತಟ್ಟೋದು, ಆಮೇಲೆ ಐಸ್‌ಕ್ರೀಂ ತಿಂತಾ ಯಾವುದೋ ಪುಕಾರಿನ ಬಗ್ಗೆ ಮಾತಾಡೋದು! ಇಂಥದನ್ನೆಲ್ಲ ನುಡಿಸಬೇಕಾದ್ದು ಕೆಲವೇ ಪ್ರಮುಖ ಸಂದರ್ಭಗಳಲ್ಲಿ, ಅದೂ ಅಂಥ ಸಂಗೀತವನ್ನು ಆಸ್ವಾದಿಸೋರು ಇರೋವಾಗ. ಆಗ ನುಡಿಸಿ ಅದು ಎಂಥ ಪರಿಣಾಮ ಮಾಡತ್ತೆ ಅಂತ ನೋಡಿ! ಇಲ್ಲದಿದ್ರೆ ಸಂದರ್ಭ ಹಾಗೂ ಸ್ಥಳಗಳಿಗೆ ಹೊಂದದಿರೋ ಭಾವಗಳು ಹೊಮ್ಮೋ ಕಡೆ ನುಡಿಸೋದು ತರವಲ್ಲ, ಅದರಿಂದ ಕೆಡುಕೇ ಹೆಚ್ಚು. ಅದೇನೇ ಇರಲಿ, ಆ ನುಡಿಸಾಣಿಕೆ ನನ್ನ ಮೇಲೆ ಅದ್ಭುತ ಪರಿಣಾಮ ಉಂಟುಮಾಡ್ತು. ಅದುವರೆಗೂ ನನಗೆ ಗೊತ್ತೇ ಇಲ್ದಿದ್ದ ಯಾವುದೋ ಹೊಸ ಭಾವನೆಗಳು, ಹೊಸ ಸಾಧ್ಯತೆಗಳು ಅನಾವರಣಗೊಂಡವು. 'ಅದು ಇರ್ಬೇಕಾದ್ದೇ ಹೀಗೆ, ನಾನು ಯೋಚಿಸ್ತಿದ್ದ ಹಾಗಲ್ಲ, ಹೀಗೆ' ಅಂತ ಯಾವುದೋ ನನ್ನೊಳಗಿನ ಏನೋ ಹೇಳಿದ ಹಾಗೆ ಆಯ್ತು. ಆದ್ರೆ ನನ್ನೊಳಗೆ ಹಾಗೆ ಎಚ್ಚೆತ್ತಿದ್ದ ಹೊಸದು ಯಾವುದು ಅನ್ನೋದು ಮಾತ್ರ ವಿವರಣೆಗೆ ನಿಲುಕದ್ದು, ಆದರೆ ಅದರ ಅರಿವು ನನ್ನಲ್ಲಿ ಆನಂದವನ್ನ ತುಂಬಿತ್ತು. ಅಲ್ಲಿ ಸೇರಿದ್ದ ಜನರೆಲ್ಲ, ಅವನು ಮತ್ತು ನನ್ನ ಹೆಂಡತಿ ಸೇರಿ ಹೊಸ ಬೆಳಕಿನಲ್ಲಿದ್ದ ಹಾಗೆ ಕಾಣಿಸಿದ್ರು.

"ಆ ದ್ರುತಗತಿಯ ನಂತರ ಸುಂದರವಾದ್ರೂ ಸಾಧಾರಣವೂ ಹೊಸತನವಿಲ್ಲದ್ದೂ ವಿವಿಧ ಬಗೆಯ ಮಿತವಿಳಂಬಗತಿಯನ್ನು ನುಡಿಸಿದರು, ಆದರೆ ಕೊನೆ ಮಾತ್ರ ತುಂಬ ಪೇಲವ. ಆಮೇಲೆ, ಸೇರಿದ್ದೋರ ಒತ್ತಾಯದ ಮೇರೆಗೆ ಅರ್ನ್ಸ್ಟರ್ ಎಲಿಜಿ ಹಾಗೂ ಒಂದೆರಡು ಕಿರುರಚನೆಗಳನ್ನು ನುಡಿಸಿದರು. ಎಲ್ಲವೂ ಚೆನ್ನಾಗೇನೋ ಇದ್ವು, ಆದರೆ ಅವು ಯಾವುವೂ ಮೊದಲನೇ ನುಡಿಸಾಣಿಕೆ ಮಾಡಿತ್ತಲ್ಲ, ಆ ಪರಿಣಾಮದ ನೂರನೇ ಒಂದು ಭಾಗವನ್ನೂ ಮಾಡಲಿಲ್ಲ. ಮುಂದಿನ ಎಲ್ಲಕ್ಕೂ ಮೊದಲನೇ ನುಡಿಸಾಣಿಕೆ ಹಿನ್ನೆಲೆ ಒದಗಿಸಿತ್ತು.

"ಆ ಇಡೀ ಸಂಜೆ ನಾನು ಉಲ್ಲಾಸದಿಂದ ಕೂಡಿದ್ದೆ, ಲವಲವಿಕೆಯಿಂದಿದ್ದೆ. ನನ್ನ ಹೆಂಡತಿಯಂತೂ ಆ ಸಂಜೆ ಇದ್ದ ಹಾಗೆ ಹಿಂದೆಂದೂ ಇರಲಿಲ್ಲ. ಕಣ್ಣಿನ ಹೊಳಪು, ನುಡಿಸುವಾಗಿನ ಅವಳ ಗಂಭೀರವೂ ಮಹತ್ತರವೂ ಆದ ಮುಖಭಾವ, ಮುಗಿದ ಮೇಲೆ ಮನಕರಗಿಸೋ ಬಳಲಿಕೆ ಹಾಗೂ ಕ್ಷೀಣವೂ ವಿಷಾದಕರವೂ ಆದರೆ ಸಂತಸ ಸೂಸುತ್ತಿದ್ದ ಮುಗುಳ್ನಗೆ - ಇವೆಲ್ಲ ತುಂಬಿಕೊಂಡಿದ್ದವು. ಅವೆಲ್ಲ ಅವಳಲ್ಲಿ ಕಾಣಿಸ್ತಿದ್ವು, ಆದರೆ

ನಾನದಕ್ಕೆ ಬೇರೇನೂ ಅರ್ಥ ಕಲ್ಪಿಸಿರಲಿಲ್ಲ, ನನ್ನ ಮೇಲೆ ಏನು ಪರಿಣಾಮ ಆಗಿತ್ತೋ ಅದೇ ಅವಳ ಮೇಲೂ ಆಗಿತ್ತು ಅಂತ ಅನ್ನಿಸ್ತಿತ್ತು. ಆ ಸಂಜೆ ತೃಪ್ತಿ ತಂದಿತ್ತು, ಅತಿಥಿಗಳೆಲ್ಲ ಮರಳಿ ಹೋದರು.

"ಎರಡು ದಿನಗಳ ನಂತರ ನಾನು ಝೆಮ್‌ಸ್ಪೆವೋ ಮೀಟಿಂಗ್‌ಗಳಿಗೆ ಹೋಗ್ತೀನಿ ಅಂತ ಗೊತ್ತಿದ್ದರಿಂದ, ಹೊರಡೋವಾಗ ಟ್ರುಖಚೆವ್‌ಸ್ಕಿ ಅಂದಿನ ಕಛೇರಿಯ ಸಂಗೀತ ತಾನು ಮತ್ತೆ ಮಾಸ್ಕೋಗೆ ಬಂದಾಗ ಮರುಕಳಿಸಲಿ ಅಂತ ಹಾರೈಸಿದ. ಹಾಗಾಗಿ ನಾನಿಲ್ಲದೇ ಇರೋವಾಗ ಅವನು ನಮ್ಮ ಮನೆಗೆ ಬರೋ ಸಾಧ್ಯತೆ ಇಲ್ಲ ಅಂತ ಭಾವಿಸಿದೆ. ಇದರಿಂದ ನನಗೆ ಹಾಯೆನ್ನಿಸಿತು. ಅವನು ಊರು ಬಿಡೋ ಮುಂಚೆ ನಾನು ವಾಪಸ್ಸು ಬರೋಕೆ ಆಗದಿರೋದರಿಂದ ಮತ್ತೆ ನಾವಿಬ್ರೂ ಸದ್ಯದಲ್ಲಿ ಭೇಟಿಯಾಗಲ್ಲ ಅಂದುಕೊಂಡೆ. ಮೊದಲ ಬಾರಿಗೆ ನಾನು ನಿಜವಾದ ಸಂತೋಷದಿಂದ ಅವನ ಕೈಯನ್ನದುಮಿದೆ, ಸಂಗೀತದಿಂದ ಉಂಟುಮಾಡಿದ ಆನಂದಕ್ಕಾಗಿ ಅವನಿಗೆ ಕೃತಜ್ಞತೆ ಅರ್ಪಿಸಿದೆ. ಅದೇ ರೀತಿ ಅವನು ನನ್ನ ಹೆಂಡತಿಗೂ ವಿದಾಯ ಹೇಳಿದ. ಅವರಿಬ್ಬರೂ ಬೀಳ್ಕೊಟ್ಟ ರೀತಿ ತುಂಬ ಸಹಜವಾಗಿತ್ತು, ಸಮಂಜಸವಾಗಿತ್ತು. ಎಲ್ಲವೂ ಅಮೋಘವಾಗಿ ಸಾಗಿತ್ತು. ನಮ್ಮ ಆ ಸಂಜೆಯ ಪಾರ್ಟಿಯಿಂದ ನನ್ನ ಹಾಗೂ ನನ್ನ ಹೆಂಡತಿ ಇಬ್ರ ಮನಸ್ಸೂ ತುಂಬಿತ್ತು."

## 22

"ಎರಡು ದಿನಗಳ ನಂತರ ನಾನು ಮೀಟಿಂಗುಗಳಿಗೆಂದು ಹೆಂಡತಿಯನ್ನು ಬಿಟ್ಟು ಹೊರಟೆ; ಆಗ ನನ್ನ ಮನಸ್ಸು ಪ್ರಶಾಂತವಾಗಿತ್ತು. ನಾನು ಹೋದ ಕಡೆ ಮಾಡುವುದಕ್ಕೆ ದಂಡಿಯಾದ ಕೆಲಸ ಇತ್ತು, ಅಲ್ಲಿನದು ಒಂದು ಬಗೆಯ ವಿಶೇಷ ಜೀವನರೀತಿ, ಅದರದ್ದು ತನ್ನದೇ ಆದ ಒಂಥರ ವಿಶಿಷ್ಟ ಜಗತ್ತು. ಸಭೆಗಳಲ್ಲಿ ಎರಡು ದಿನಗಳು ಹತ್ತು ಗಂಟೆಗಳ ಅಧಿವೇಶನದಲ್ಲಿ ಭಾಗವಹಿಸ್ದೆ. ಎರಡನೇ ದಿನ ನನ್ನ ಹೆಂಡತಿಯಿಂದ ಕಾಗದವೊಂದು ಬಂತು; ಅದನ್ನಾಗಲೇ ಅಲ್ಲೇ ಓದಿದೆ. ಅವಳು ಬರೆದಿದ್ದುದು ಮಕ್ಕಳ ಬಗ್ಗೆ, ಮಾವನ ಬಗ್ಗೆ, ದಾದಿಯ ಬಗ್ಗೆ, ತಾನು ಕೊಂಡ ವಸ್ತುಗಳ ಬಗ್ಗೆ; ಮಿಕ್ಕ ಅನೇಕ ವಿಷಯಗಳ ಜೊತೆಗೆ ಅವಳ ಉಲ್ಲೇಖಿಸಿದ್ದದ್ದು, ಬಹಳ ಸಹಜ ಸಂಗತಿಯೆಂಬಂತೆ, ಟ್ರುಖಚೆವ್‌ಸ್ಕಿ ಮನೆಗೆ ಬಂದದ್ದರ ಬಗ್ಗೆ, ಮಾತುಕೊಟ್ಟಿದ್ದಂತೆ ಕೆಲವು ಸಂಗೀತ ತುಣುಕುಗಳನ್ನು ಅವನು ತಂದಿದ್ದುದರ ಬಗ್ಗೆ. ಮತ್ತೆ ಜೊತೆಯಲ್ಲಿ ಕಚೇರಿ ನಡೆಸುವ ಬಗ್ಗೆ ವಿಚಾರಿಸಿದನಂತೆ, ಆದರೆ ಇವಳೇ ಅದಕ್ಕೆ ಒಪ್ಪಲಿಲ್ಲವಂತೆ. ಅವನು ಹೊಸ ಸಂಗೀತದ ತುಣುಕುಗಳ ಬಗ್ಗೆ ಹೇಳಿದ್ದು ನನಗಂತೂ ನೆನಪಿರಲಿಲ್ಲ, ಅವನು ಹೋದದ್ದು ಒಳ್ಳೇದೇ ಆಯ್ತು ಅಂತ ಭಾವಿಸಿದ್ದೆ, ಆದ್ದರಿಂದ ಅವನು ಮತ್ತೆ ಬಂದಿದ್ದ ವಿಷಯ ನನ್ನ ಮನಸ್ಸಿನಲ್ಲಿ ಕಹಿಯನ್ನುಂಟುಮಾಡ್ತು. ಆದ್ರೆ ನಾನು ಕೆಲಸದಲ್ಲಿ ಎಷ್ಟು ಮುಳುಗಿಬಿಟ್ಟಿದ್ದೆ ಅಂದ್ರೆ, ಆ ಬಗ್ಗೆ ಯೋಚ್ನೆ ಮಾಡಕ್ಕೂ ಪುರುಸೊತ್ತಿರಲಿಲ್ಲ. ಉಳಿದುಕೊಂಡಿದ್ದ ಕೋಣೆಗೆ ಮತ್ತೆ ಬಂದಾಗಲೇ ಪತ್ರವನ್ನು ನಾನು

ಇನ್ನೊಮ್ಮೆ ಓದುವುದಕ್ಕಾದದ್ದು.

"ನಾನಿಲ್ಲದಾಗ ಟ್ರುಖಚೆವ್‌ಸ್ಕಿ ನಮ್ಮ ಮನೆಗೆ ಬಂದ ವಿಚಾರವಲ್ಲದೆ, ಇಡೀ ಕಾಗದದ ಧಾಟಿಯೇ ಅಸಹಜ ಅನ್ನಿಸ್ತು. ಹೊಟ್ಟೆಕಿಚ್ಚಿನ ಹುಚ್ಚುನಾಯಿ ತನ್ನ ಗೂಡಲ್ಲೇ ಒದರಾಡಕ್ಕೆ ತೊಡಗಿತು, ಕಣ್ಣಿ ಕಿತ್ತುಕೊಂಡು ಹೊರಗೆ ಓಡಕ್ಕೆ ಬಯಸಿತು. ನನಗೋ ಆ ನಾಯನ್ನ ಕಂಡ್ರೆ ಭಯ, ಹೀಗಾಗಿ ಅದನ್ನ ಬಿಗಿಯಾಗಿ ಕಟ್ಟಿಹಾಕಿದೆ. ಹೊಟ್ಟೆಕಿಚ್ಚು ಅನ್ನೋದು ಎಂತಹ ಅಸಹನೀಯ ಭಾವನೆ ಅಂದುಕೊಂಡೆ. ಅವಳು ಬರೆದಿರೋ ರೀತಿಗಿಂತ ಸಹಜ ಅನ್ನೋದು ಬೇರೆ ಇದ್ದೀತೇ ಅಂದುಕೊಂಡೆ.

"ಹಾಸಿಗೆ ಮೇಲೆ ಉರುಳಿಕೊಂಡು ಮಾರನೇ ದಿನದ ನನ್ನ ಕೆಲಸಗಳ ಬಗ್ಗೆ ಯೋಚನೆ ಮಾಡಕ್ಕೆ ತೊಡಗಿದೆ. ಆ ಮೀಟಿಂಗುಗಳ ಕಾರಣ, ಹೊಸ ಜಾಗದಲ್ಲಿ ನಿದ್ದೆ ಬರದೇ ಇರೋದು - ಹೀಗಾಗಿ ನಿದ್ದೆ ಹತ್ತೋದೇ ಕಷ್ಟವಾಗಿತ್ತು. ಆದ್ರೆ ಈ ಸಲ ಬಹಳ ಬೇಗ ನಿದ್ದೆ ಬಂತು. ಕೆಲವು ಸಲ ಆಗೋ ಹಾಗೆ, ಏನೋ ಒಂಥರ ಶಾಕ್ ಆದ ಹಾಗೆ ಆಗಿ ಧಿಗ್ಗನೆದ್ದು ಕೂತೆ. ಎದ್ದಾಗ ಅವಳ ಯೋಚನೆ ಶುರುವಾಯ್ತು, ಅವಳ ಮೇಲಿನ ನನ್ನ ವ್ಯಾಮೋಹ ಮರುಕಳಿಸ್ತು, ಟ್ರುಖಚೆವ್‌ಸ್ಕಿ ವಿಚಾರ ನೆನಪಿಗೆ ಬಂತು, ಅವರ ನಡುವೆ ನಡೆದಿರಬಹುದಾದ್ದರ ಬಗ್ಗೆ ಯೋಚನೆ ಬಂತು. ಆಗ ನನ್ನೆದೆಯನ್ನು ಭಯ-ಕೋಪಗಳು ಹಿಂಡತೊಡಗಿದವು. ಆದರೆ ನನ್ನದು ಎಂಥ ಅವಿವೇಕ ಅಂತ ಸಮಾಧಾನ ಮಾಡಿಕೊಂಡೆ. ಅವರಿಬ್ಬರ ಮಧ್ಯೆ ಏನಾದ್ರೂ ಆಗಿದೆ ಅಂತ ಅಂದುಕೊಳ್ಳಕ್ಕೆ ಕಾರಣವೇ ಇಲ್ಲ, ಅವರಿಬ್ಬರ ಮಧ್ಯೆ ಏನೂ ಆಗಿಲ್ಲ ಅಂದುಕೊಂಡೆ. ಅದ್ಹೇಗೆ ಅವಳನ್ನ ಹಾಗೆ ಕೀಳಾಗಿ ನೋಡೋದು, ಈ ರೀತಿ ನಾನು ಭಯಪಡೋದು? ಅವನೊಬ್ಬ ಬಾಡಿಗೆ ಪಿಟೀಲುದಾರ, ಕೆಲಸಕ್ಕೆ ಬಾರದ ವ್ಯಕ್ತಿ, ನನ್ನ ಹೆಂಡತಿಯೋ ಮರ್ಯಾದಸ್ಥ ಹೆಂಗಸು, ಒಬ್ಬ ಗೌರವಸ್ಥ ತಾಯಿ... ತಲೆಬುಡವಿಲ್ಲದ ಯೋಚನೆ ಅನ್ನಿಸ್ತು. ಹೀಗೆ ಒಂದು ಕಡೆ ಅನ್ನಿಸಿದ್ರೆ, ಇನ್ನೊಂದು ಕಡೆ, ಹೀಗಾಗದೆ ಇನ್ನೇನು ತಾನೇ ಆದೀತು ಅಂತಲೂ ಅನ್ನಿಸ್ತು. ನಾನು ಅವಳನ್ನ ಮದುವೆಯಾದ ಕಾರಣ, ಅವಳ ಜೊತೆ ನಾನು ಬಾಳ್ತಾ ಇರೋ ರೀತಿ, ಅವಳಿಂದ ನಾನು ನಿರೀಕ್ಷೆ ಮಾಡೋದು, ನಾನು ಮಾತ್ರ ಅವಳಿಂದ ಬಯಸೋ ಅಂಥದು, ಅದನ್ನ ಈ ಸಂಗೀತಗಾರನೂ ಬಯಸೋದು ಯಾಕಾಗಬಾರದು? ಅವನಿನ್ನೂ ಮದುವೆಯಾಗದಿರೋನು, ಆರೋಗ್ಯವಂತ, ದಷ್ಟಪುಷ್ಟವಾಗಿರೋನು, ಯಾವುದೇ ಇತಿಮಿತಿ ಇಲ್ಲದೆ ಇರೋದರ ಜೊತೆಗೆ ಎದುರಾದ ಸಂತೋಷಗಳನ್ನೆಲ್ಲ ಅನುಭವಿಸೋನು. ಅವರಿಬ್ಬರ ಮಧ್ಯೆ ಸಂಗೀತ ಕೊಂಡಿಯಾಗಿದೆ, ಅತ್ಯಂತ ಗಾಢವಾದ ಲಾಂಪಟ್ಯ ಇದೆ. ಅವನಿಗೆ ನಿಗ್ರಹ ಏಕಿರತ್ತೆ? ಅವಳು? ಅವಳೆಂಥವಳು? ಅವಳಿನ್ನೂ ನಿಗೂಢವೇ ಸರಿ. ಅವಳ ಬಗ್ಗೆ ನಂಗೇನೂ ಗೊತ್ತಿಲ್ಲ, ಅವಳೊಂದು ಮೃಗ ಅಂತ ಮಾತ್ರ ಗೊತ್ತು. ಮೃಗಕ್ಕೆ ಎಂತ ನಿಗ್ರಹ!

"ಆಗ ನನ್ನ ಮನಸ್ಸಿನ ಮುಂದೆ ಬಂದದ್ದು ಅವತ್ತು ಕ್ರೂಸರ್ ಸೊನಾಟ ನಡೆದ ಸಂಜೆ; ಆಗಿನ ಅವರಿಬ್ಬರ ಮುಖಗಳು ನೆನಪಾದವು. ಅವರು ನುಡಿಸಿದ್ದು ಕೆಲವು ತೀವ್ರ

ರಾಗಭಾವದ ತುಣುಕುಗಳನ್ನು. ಅಶ್ಲೀಲದ ಗೆರೆ ಹತ್ತಿರ ಬಂದಿದ್ದ ಅಂತಹ ರಾಗಭಾವ ಯಾರಿಂದ ಶುರುವಾಯ್ತು, ನನಗೆ ನೆನಪಾಗಲಿಲ್ಲ. ಅವರ ಮುಖಗಳು ನೆನಪಿಗೆ ಬಂದಾಗ, ಅವರನ್ನು ಬಿಟ್ಟು ಬಂದು ಎಂಥ ಕೆಲಸಮಾಡಿಬಿಟ್ಟೆ ಅನ್ನಿಸ್ತು. ಆ ಸಂಜೆಯೇ ಅವರಿಬ್ಬರ ಮಧ್ಯೆ ಎಲ್ಲವೂ ನಡೆದುಹೋಗಿದೆ. ಅವರ ಮಧ್ಯೆ ಯಾವುದೇ ಗೆರೆಗಳಿಲ್ಲ ಅನ್ನೋದು ಅವತ್ತೆ ಸ್ಪಷ್ಟವಾಗಿತ್ತಲ್ಲ; ಎಲ್ಲ ಮುಗಿದ ಮೇಲೆ ಅವರಿಬ್ಬರೂ, ಅದರಲ್ಲೂ ಅವಳು, ನಾಚಿಕೊಂಡ ರೀತಿ! ಅವಳ ಕ್ಷೀಣವೂ ಕರುಣಾಜನಕವೂ ಉತ್ಕಂಠಿತವೂ ಆದ ಮುಗುಳ್ನಗೆ, ನಾನು ಪಿಯಾನೋ ಹತ್ತಿರ ಹೋದಾಗ ಅವಳು ತನ್ನ ನಾಚಿದ ಮುಖದ ಬೆವರು ಒರೆಸಿಕೊಂಡದ್ದು ? ಈಗ ನೆನಪಿಗೆ ಬರ್ತಿದೆ. ಆಗಲೇ ಅವರು ಒಬ್ಬರನ್ನೊಬ್ಬರು ನೋಡೋದನ್ನ ಕಣ್ತಪ್ಪಿಸಿದ್ದು; ಊಟಕ್ಕೆ ಕೂತು ಅವನು ಅವಳ ಲೋಟಕ್ಕೆ ನೀರು ಸುರಿಯೋವಾಗ ಅವರಿಬ್ಬರ ಕಣ್ಣುಗಳು ಕಲೆತು ನಗು ತುಳುಕಿದ್ದು. ಅದೆಲ್ಲ ನೆನಪಿಗೆ ಬಂದು ದಿಗಿಲಾಯಿತು. 'ಎಲ್ಲ ಮುಗೀತು' ಅಂತ ಒಂದು ಧ್ವನಿ ಹೇಳಿದರೆ, ಇನ್ನೊಂದು ಅದಕ್ಕೆ ವ್ಯತಿರಿಕ್ತವಾದ ಏನನ್ನೋ ಸೂಚಿಸ್ತು. 'ನಿನಗೆ ಏನೋ ಆಗಿದೆ, ಅದು ಹಾಗಾಗಿರಲು ಸಾಧ್ಯವಿಲ್ಲ' ಎಂದಿತು ಆ ಇನ್ನೊಂದು ದನಿ. ಕತ್ತಲಲ್ಲಿ ಮಲಗಿದ್ದ ನನಗೆ ಮುಜುಗರವೆನಿಸಿ ದೀಪ ಹಚ್ಚಿದೆ, ಆದರೆ ಅದರ ಬೆಳಕಲ್ಲಿ ಆ ಕಿರುಕೋಣೆಯ ಗೋಡೆಯ ಹಳದಿ ಬಣ್ಣ ಭಯಂಕರ ಎನಿಸಿತು. ನಾನೊಂದು ಸಿಗರೇಟು ಹಚ್ಚಿದೆ ಮತ್ತು ಯೋಚಿಸುತ್ತ ಯೋಚಿಸುತ್ತ ವೈರುಧ್ಯಗಳ ನಿರಂತರ ಸುಳಿಯಲ್ಲಿ ಸಿಕ್ಕಿದವನು ಮಾಡುವಂತೆ, ಒಂದಾದ ಮೇಲೊಂದರಂತೆ ಸಿಗರೇಟು ಹಚ್ಚಿ, ಅದರಿಂದ ಹೊಮ್ಮುವ ಹೊಗೆ ನನ್ನ ಸುತ್ತ ಆವರಿಸಿ ಆ ವೈರುಧ್ಯಗಳು ಕಾಣದಂತಾಗಲೆಂಬಂತೆ ಸೇದುತ್ತ ಹೋದೆ.

"ಆ ರಾತ್ರಿಯಿಡೀ ನನಗೆ ನಿದ್ದೆಯೇ ಹತ್ತಲಿಲ್ಲ. ಹೀಗಾಗಿ, ಅಂತಹ ಅಲ್ಲೋಲ ಕಲ್ಲೋಲ ಸ್ಥಿತಿಯಲ್ಲಿ ಹೆಚ್ಚು ಕಾಲ ಇರಲಾರನೆಂದು ನಿರ್ಧರಿಸಿ ಬೆಳಗಿನ ಐದು ಗಂಟೆಗೆ ಮೇಲೆದ್ದು ಅಲ್ಲಿನ ಕೆಲಸಗಾರನನ್ನು ಎಬ್ಬಿಸಿ ಕುದುರೆಗಳನ್ನು ಸಿದ್ಧಪಡಿಸಲು ಹೇಳಿದೆ. ಯಾವುದೋ ತುರ್ತು ಕಾರ್ಯಕ್ಕಾಗಿ ನನಗೆ ಮಾಸ್ಕೋದಿಂದ ಕರೆ ಬಂದಿದೆಯೆಂದೂ, ನನ್ನ ಬದಲು ಮತ್ತೊಬ್ಬ ಸದಸ್ಯರು ನನ್ನ ಸ್ಥಳವನ್ನು ತುಂಬಲಿ ಎಂದೂ ತಿಳಿಸಿ ಒಂದು ಟಿಪ್ಪಣಿ ಬರೆದು ಕೌನ್ಸಿಲ್‌ಗೆ ಕಳಿಸಿದೆ. ಎಂಟು ಗಂಟೆಯ ಹೊತ್ತಿಗೆ ಗಾಡಿಯಲ್ಲಿ ಕೂತು ಹೊರಟೆ."

## 23

ಗಾಡಿಯ ಕಂಡಕ್ಟರ್ ಗಾಡಿಗೆ ಬಂದು ಮೇಣದ ಬತ್ತಿ ಪೂರ್ತಿ ಉರಿದಿದ್ದುದನ್ನು ಗಮನಿಸಿ ಅದನ್ನು ನಂದಿಸಿದ, ಹೊಸತೊಂದನ್ನು ಅದರ ಬದಲು ಇಡಲಿಲ್ಲ. ಹಗಲು ಮೇಲೇರುತ್ತಿತ್ತು. ಕಂಡಕ್ಟರ್ ಗಾಡಿಯಲ್ಲಿ ಇರುವವರೆಗೂ ಪೋಝ್ನಿಶೆವ್ ನೀಳವಾದ ಉಸಿರು ಬಿಡುತ್ತಲೇ ಇದ್ದ, ಕಂಡಕ್ಟರ್ ಹೋದ ಬಳಿಕವೇ ಅವನು ಮತ್ತೆ ತನ್ನ ಕತೆಯನ್ನು ಮುಂದುವರಿಸಿದ್ದು; ಅರೆಗತ್ತಲಿನ ಆ ಬೋಗಿಯ ತುಯ್ದಾಟದಲ್ಲಿ ಕಿಟಕಿಗಳ ಕಟಕಟ ಸದ್ದು

ಮತ್ತು ಕ್ಲರ್ಕ್‌ನ ಗೊರಕೆಯ ಸದ್ದುಗಳು ಮಾತ್ರ ಕೇಳಿಸುತ್ತಿದ್ದವು. ಬೆಳಗಿನ ಜಾವದ ಮಬ್ಬಿನಲ್ಲಿ ನನಗೆ ಪೋಝ್ನಿಶೆವ್‌ನ ಮುಖ ಸರಿಯಾಗಿ ಕಾಣಿಸುತ್ತಿರಲಿಲ್ಲ, ಆದರೆ ಏರುತ್ತಲೇ ಇದ್ದ ಉದ್ವೇಗ ಹಾಗೂ ಯಾತನೆಯಿಂದ ಕೂಡಿದ ಅವನ ಮಾತು ಮಾತ್ರ ಕೇಳಿಸುತ್ತಿತ್ತು.

"ಇಪ್ಪತ್ತನಾಲು" ಮೈಲಿಗಳಷ್ಟು ದೂರ ರಸ್ತೆಯಲ್ಲೂ, ಎಂಟು ಗಂಟೆ ರೈಲಿನಲ್ಲೂ ನಾನು ಪ್ರಯಾಣಿಸಬೇಕಾಗಿತ್ತು. ಗಾಡಿಯ ಪಯಣ ಅಮೋಘವಾಗಿತ್ತು. ಆಗ ಮಾಗಿಯ ಕಾವಳ ತುಂಬಿದ ದಿನಗಳು, ಬಿಸಿಲು ತುಂಬಿ ಕಾಂತಿಯುಕ್ತವಾದ ಹಗಲುಗಳು. ಓಡಾಡುವ ಗಾಡಿಗಳ ಚಕ್ರದ ದಟ್ಟ ಮುದ್ರೆ ಸ್ಪಷ್ಟವಾಗಿ ಮೂಡುವಂತಹ ರಸ್ತೆ. ಪ್ರಯಾಣ ಸುಗಮವಾಗಿದ್ದು, ಬೆಳಕು ಹಿತಕರವಾಗಿತ್ತು, ಗಾಳಿ ಆಹ್ಲಾದಕಾರಿಯಾಗಿತ್ತು. ಟ್ಯಾರಂಟಾಸ್ ಗಾಡಿಯ ಪಯಣ ಸುಖದಾಯಕವಾಗಿತ್ತು. ಬೆಳಕು ಹರಿಯುತ್ತ ಬಂದಂತೆ ಮೇಲೆ ಮನಸ್ಸು ಹಗುರ ಅನ್ನಿಸಿತ್ತು. ದಾರಿಯಲ್ಲಿನ ದಾರಿಹೋಕರು, ಮನೆ-ಹೊಲಗಳತ್ತ ದೃಷ್ಟಿ ಬೀರ್ತಾ ನಾನು ಎಲ್ಲಿಗೆ ಹೊರಟಿದ್ದೀನಿ ಅನ್ನೋದೇ ಮರೆತುಹೋಗಿತ್ತು. ಸುಮ್ಮನೆ ಹೋಗುತ್ತಿದ್ದೀನೇನೋ, ವಾಪಸ್ಸು ಹೋಗಕ್ಕೆ ಕಾರಣವಾದದ್ದೇನೂ ನಡೆದೇ ಇಲ್ಲವೇನೋ ಅಂತಲೂ ಕೆಲವು ಸಲ ಅನ್ನಿಸಿದ್ದುಂಟು. ಅಂತಹ ಅಸ್ಪಷ್ಟತೆಯಿಂದಲೂ ಏನೋ ಒಂದು ಬಗೆಯ ವಿಚಿತ್ರ ಖುಷಿ! ನಾನು ಎಲ್ಲಿಗೆ ಹೋಗ್ತಿದ್ದೀನಿ ಅಂತ ನೆನಪಿಗೆ ಬಂದ ಮೇಲೆ, 'ಅಂಥ ಸಮಯ ಬಂದಾಗ ನೋಡೋಣ; ಅದರ ಬಗ್ಗೆ ಈಗೇಕೆ ಯೋಚಿಸಬೇಕು' ಅಂದುಕೊಂಡೆ. ಅರ್ಧ ದಾರಿ ಬಂದ ಮೇಲೆ ಒಂದು ಘಟನೆ ಸಂಭವಿಸ್ತು; ಇದರಿಂದಾಗಿ ನಾನಲ್ಲೇ ಉಳೀಬೇಕಾಯ್ತು, ಜೊತೆಗೆ ನನ್ನ ಮನಸ್ಸು ಬೇರೆಲ್ಲೋ ತಿರುಗಿತು. ನಮ್ಮ ಟ್ಯಾರಂಟಾಸ್ ಕೆಟ್ಟು ನಿಂತು ಅದನ್ನ ರಿಪೇರಿ ಮಾಡಬೇಕಾಯ್ತು. ಗಾಡಿ ಹೀಗೆ ಕೆಟ್ಟಿದ್ರಿಂದ ಆದ ಮುಖ್ಯ ಪರಿಣಾಮ ಅಂದ್ರೆ ನಾನು ಮಾಸ್ಕೋನ ರಾತ್ರಿ ಏಳಕ್ಕೆ ತಲುಪೋ ಬದಲು ತಡವಾಗಿ ಅಂದ್ರೆ ಮಧ್ಯರಾತ್ರಿ ತಲುಪೋ ಹಾಗಾಯ್ತು. ಯಾಕೇಂದ್ರೆ ನನಗೆ ಎಕ್ಸ್‌ಪ್ರೆಸ್ ತಪ್ಪಿ ಸಾಮಾನ್ಯ ಟ್ರೈನು ಹಿಡಿಯೋ ಹಾಗಾಗಿತ್ತು. ದಾರಿಯುದ್ದಕ್ಕೂ ರಿಪೇರಿ ಮಾಡ್ತಿದ್ದ ಗಾಡಿಯೋನ ಜೊತೆ ಮಾತು, ಅದು ಸರಿಹೋದದ್ದು, ಹೋಟಲಲ್ಲಿ ಟೀ ಕುಡಿದದ್ದು, ಹೋಟಲಿನೋನ ಜೊತೆಯ ಮಾತು ಇವುಗಳಿಂದ ನನ್ನ ಮನಸ್ಸು ಬೇರೆ ಕಡೆ ತಿರುಗಿತ್ತು. ಎಲ್ಲ ಸರಿಯಾಗಿ ಮತ್ತೆ ಹೊರಡೋ ಹೊತ್ತಿಗೆ ಸಾಯಂಕಾಲವೇ ಆಯಿತು. ರಾತ್ರಿಯ ಹೊತ್ತಿನದು ಹಗಲಿನದಕ್ಕಿಂತ ಮತ್ತಷ್ಟು ಹಿತಕರವಾದ ಪ್ರಯಾಣ. ಅಮಾವಾಸ್ಯೆ ರಾತ್ರಿ, ಕೊಂಚ ಕಾವಳ, ಒಳ್ಳೆ ರಸ್ತೆ, ಗಟ್ಟಿಮುಟ್ಟಾದ ಕುದುರೆಗಳು, ತಮಾಷೆಯಾದ ಚಾಲಕ-ಇವೆಲ್ಲ ಪ್ರಯಾಣವನ್ನು ಸಂತೋಷದಾಯಕವಾಗಿ ಮಾಡಿದ್ವು. ಮುಂದೆ ನಾನು ಏನನ್ನ ಎದುರಿಸಬೇಕಾಗುತ್ತೆ ಅನ್ನೋದು ಹಿಂದೆ ಸರಿದದ್ದರಿಂದಲೋ ಅಥವಾ ಅದರ ಕಲ್ಪನೆಯಿಂದಲೇ? ನನ್ನ ಬದುಕಿನ ಸಂತೋಷವನ್ನೆಲ್ಲ ಕಳೆದುಕೊಳ್ಳಬೇಕಾಗತ್ತೆ ಅಂತಲೇ - ನನಗಾಗ ಹೆಚ್ಚು ಸಂತೋಷ ಉಂಟಾಗಿತ್ತೋ ಕಾಣೆ. ಆದರೆ ಆ ಪ್ರಶಾಂತತೆ, ನನ್ನ ಭಾವನೆಗಳನ್ನು ಅದುಮಿಕೊಳ್ಳೋ ಸಾಮರ್ಥ್ಯ ಇವೆಲ್ಲ ನನ್ನ ಗಾಡಿ ಪ್ರಯಾಣದಿಂದ

ಕೊನೆಯಾದ್ದು. ನಾನು ಟ್ರೈನ್ ಹತ್ತಿದ ಕೂಡಲೇ ಸಂಪೂರ್ಣವಾಗಿ ಬೇರೆಯಾದ್ದೇ ಸಂಭವಿಸಿತು. ಎಂಟು ಗಂಟೆಗಳ ಆ ಪ್ರಯಾಣ ಭಯಾನಕವಾಯ್ತು, ಬದುಕಿರೋವರೆಗೂ ನಾನದನ್ನ ಮರೆಯಲಾರೆ. ನನ್ನ ಸೀಟಲ್ಲಿ ಕೂತು ಆಗಲೇ ಮನೆಗೆ ಬಂದುದನ್ನು ಸ್ಪಷ್ಟವಾಗಿ ಕಲ್ಪಿಸಿಕೊಂಡದ್ದರಿಂದಲೋ ಅಥವಾ ಜನರ ಮೇಲೆ ರೈಲು ಪ್ರಯಾಣ ಒಂಥರ ರೋಚಕ ಅನುಭವವನ್ನುಂಟುಮಾಡುತ್ತೆ ಅನ್ನೋ ಕಾರಣದಿಂದಲೋ, ಏನಾದರಾಗಲಿ, ನಾನು ಕೂತ ಕ್ಷಣದಿಂದಲೇ ನನಗೆ ಕಲ್ಪನೆಯನ್ನು ತಡೆಯುವುದಕ್ಕಾಗಲಿಲ್ಲ, ಅತ್ಯಂತ ಸ್ಪಷ್ಟವಾಗಿ ಕಣ್ಣೆದುರು ನಿಂತಂತೆ ಚಿತ್ರಗಳು ಮೂಡಿಬಂದು ನನ್ನಲ್ಲಿನ ಹೊಟ್ಟೆಕಿಚ್ಚನ್ನು ಉರಿಸಿತು; ನನ್ನ ಗೈರುಹಾಜರಿಯಲ್ಲಿ ನಡೆದಿರಬಹುದಾದ ಚಿತ್ರಗಳನ್ನು, ನನಗೆ ನನ್ನ ಹೆಂಡತಿ ಮೋಸ ಮಾಡುವುದನ್ನು ಮನಸ್ಸು ಕಲ್ಪಿಸತೊಡಗಿತು. ನಾನು ಉದ್ವೇಗದಿಂದ, ಕೋಪದಿಂದ, ನನಗಾದ ಅವಮಾನದಿಂದಾದ ವಿಚಿತ್ರ ಅಮಲಿನಿಂದ ಉರಿದೆದ್ದೆ, ಮನಸ್ಸಿನ ಮುಂದೆ ಆ ಚಿತ್ರಗಳು ಮೂಡಿಬಂದಾಗ ನಾನವುಗಳಿಂದ ನನ್ನ ಕಣ್ಣುಗಳನ್ನು ಕೀಳಲಾರದೆ ಹೋದೆ, ಮುಖ ತಿರುಗಿಸಿಕೊಳ್ಳಲಾರದೆ ಹೋದೆ, ಅಂಥವುಗಳನ್ನು ಚಿತ್ರಿಸಿಕೊಳ್ಳುವುದನ್ನು ನಿಲ್ಲಿಸಲಾರದಾದೆ.

"ಇಷ್ಟೇ ಅಲ್ಲ, ಆ ಕಲ್ಪನೆಯ ಚಿತ್ರಗಳನ್ನು ನೋಡಿದಂತೆಲ್ಲ ಅವೆಲ್ಲ ವಾಸ್ತವವೆಂಬ ಭಾವನೆ ಬಲಿಯುತ್ತ ಹೋಯಿತು. ನನ್ನ ಕಣ್ಣ ಮುಂದೆ ನಿಂತ ಆ ಸ್ಪಷ್ಟ ಚಿತ್ರಗಳೆಲ್ಲ ಅದಕ್ಕೆ ಆಧಾರಗಳೆಂಬ ಅನಿಸಿಕೆ ಗಟ್ಟಿಯಾಯಿತು. ನನ್ನ ಸಂಕಲ್ಪಶಕ್ತಿಗೆ ವಿರುದ್ಧವಾದ ಪಿಶಾಚಿಯೊಂದು ನನ್ನ ಮನಸ್ಸಿನಲ್ಲಿ ಮಹಾ ಭಯಾನಕವಾದ ಆಲೋಚನೆಗಳನ್ನು ಹುಟ್ಟುಹಾಕುತ್ತಿದ್ದ ಹಾಗಿತ್ತು. ಟ್ರುಖಚೆವ್‌ಸ್ಕಿಯ ತಮ್ಮನ ಜೊತೆ ನಾನು ಹಿಂದೊಮ್ಮೆ ಆಡಿದ್ದ ಮಾತುಕತೆಗಳೆಲ್ಲ ನನ್ನ ಆಲೋಚನೆಯಲ್ಲಿ ಅನುರಣನೆಗೊಂಡು ಒಂದು ಬಗೆಯ ರೋಮಾಂಚನವುಂಟಾಯಿತು, ಅದು ನನ್ನ ಹೆಂಡತಿ ಮತ್ತು ಟ್ರುಖಚೆವ್‌ಸ್ಕಿಗೆ ಅನ್ವಯಿಸುವಂತಾಯಿತು.

"ಅದು ನಡೆದದ್ದು ಬಹು ಹಿಂದೆ, ಆದರೆ ತಕ್ಷಣ ನೆನಪಿಗೆ ಬಂತು. ಅವನೇನಾದರೂ ಹೊಲಸು ಮನೆಗಳಿಗೆ ಹೋಗುವ ಅಭ್ಯಾಸವಿಟ್ಟುಕೊಂಡಿದ್ದಾನೆಯೇ ಅನ್ನೋ ನನ್ನೊಂದು ಪ್ರಶ್ನೆಗೆ ಉತ್ತರವಾಗಿ ಟ್ರುಖಚೆವ್‌ಸ್ಕಿಯ ತಮ್ಮ ರೋಗಗಳು ಬರಬಹುದಾದ ಮನೆಗಳಿಗೆ ಬುದ್ಧಿವಂತ ಹೋಗುವುದಿಲ್ಲ, ಯಾಕಂದ್ರೆ ಅವನಿಗೆ ಒಳ್ಳೆ ಹೆಂಗಸರೇ ಸಿಕ್ತಾರಲ್ಲ ಅಂದಿದ್ದುದು ಜ್ಞಾಪಕಕ್ಕೆ ಬಂತು. ಈಗವನ ಅಣ್ಣ ಒಳ್ಳೆ ಹೆಂಗಸನ್ನೇ ಪಡೆದಿದ್ದಾನೆ! 'ಅವಳು ನವಯೌವನೆಯೇನೂ ಅಲ್ಲ, ಒಂದು ಹಲ್ಲು ಬೇರೆ ಉದುರಿದೆ, ಸ್ವಲ್ಪ ಡುಮ್ಮಿಯಾಗಿದಾಳೆ, ಆದರೇನು ಸಿಕ್ಕದ್ದನ್ನು ಬಳಸಿಕೊಳ್ಳಬೇಕು ತಾನೇ!' ಅಂತ ಅವನ ಭಾವನೆಯಾಗಿರ್ಬೇಕು ಅನ್ನಿಸ್ತು. 'ಅವಳನ್ನ ತನ್ನ ಪ್ರೇಯಸಿಯಾಗಿ ಒಪ್ಪಿಕೊಳ್ಳೋದು ಅಂದ್ರೆ ಅವನ ಮಟ್ಟಕ್ಕೆ ಸ್ವಲ್ಪ ಕಮ್ಮೀನೇ ಅಂತ ಹೇಳಬಹುದು!' ಅಂದುಕೊಂಡೆ. 'ಯಾರಿಗೂ ಗೊತ್ತಾಗಲ್ಲ' 'ಉಹ್ಞೂ, ಸಾಧ್ಯವಿಲ್ಲ!' ಅನ್ನೋ ಯೋಚನೆಗಳು ಬಂದು ನಡುಗಿದೆ. 'ಅಂಥದ್ದೇನೂ ಆಗಿಲ್ಲ ... ಹಾಗೆಲ್ಲ ಕಲ್ಪಿಸಿಕೊಳ್ಳಕ್ಕೆ ಆಧಾರಗಳೇ ಇಲ್ಲ. ಅವನ

ಬಗ್ಗೆ ನನಗೆ ಹೊಟ್ಟೆಕಿಚ್ಚು ಉಂಟಾಗೋದು ಅನ್ನೋದೇ ತನ್ನ ಬಗ್ಗೆ ನಂಬಿಕೆ ಇಲ್ಲ ಅನ್ನೋದು ಗೊತ್ತಾಗತ್ತೆ ಅನ್ನೋ ಅವಳ ಮಾತು ನೆನಪಿಗೆ ಬಂತು. ಅವಳು ಸುಳ್ಳು ಹೇಳ್ತಿದಾಳೆ, ಯಾವಾಗ್ಲೂ ಸುಳ್ಳು ಹೇಳಿಕೊಂಡೇ ಬಂದಿದಾಳೆ'. ನನಗೆ ಕೌತುಕವಾಗಿ ಮತ್ತೆ ಎಲ್ಲವೂ ಹೊಸದಾಗಿ ಮನಸ್ಸಿನ ಮುಂದೆ ಅರಳುವುದಕ್ಕೆ ತೊಡಗಿದವು... ನಾನು ಪ್ರಯಾಣ ಮಾಡ್ತ ಇದ್ದ ಗಾಡಿಯಲ್ಲಿ ಇನ್ನಿಬ್ಬರು ಮಾತ್ರ ಇದ್ದರು; ಒಬ್ಬ ಮುದುಕಿ ಮತ್ತವಳ ಗಂಡ. ಅವರೂ ಮಿತಭಾಷಿಗಳೂ, ಅಲ್ಲದೆ ಸ್ವಲ್ಪ ಹೊತ್ತಲ್ಲೇ ಅವರೂ ಇಳಿದುಹೋದರು. ನಾನೊಬ್ಬನೇ ಆದೆ. ನಾನೊಂದು ಪಂಜರದ ಪ್ರಾಣಿ ಅನ್ನಿಸಿತು. ಕಿಟಕಿಯ ಬಳಿ ದಿಗ್ಗನೆ ಹೋಗಿ ನಿಲ್ಲೋದು, ರೈಲು ಇನ್ನಷ್ಟು ವೇಗವಾಗಿ ಹೋಗಲಿ ಅನ್ನೋ ಹಾಗೆ ಶತಪಥ ಹಾಕೋದು, ಆದರೇನು ಆ ಗಾಡಿ ತನ್ನೆಲ್ಲ ಸೀಟುಗಳು ಕಿಟಕಿಗಳನ್ನು ಹೊತ್ತು ಯಥಾಪ್ರಕಾರದ ವೇಗದಲ್ಲೇ ಮುಂದೆ ಸಾಗ್ತಿತ್ತು .. ..'

ಪೋಝ್ನಿಶೆವ್ ಧಿಗ್ಗನೆ ಮೇಲೆದ್ದ, ಒಂದೆರಡು ಹೆಜ್ಜೆಗಳನ್ನಿಟ್ಟು ಮತ್ತೆ ಕೂತುಕೊಂಡ.

'ನನಗೆ ರೈಲ್ವೆ ಕ್ಯಾರೇಜುಗಳೆಂದರೆ ಭಯ, ಮೈಯನ್ನೆಲ್ಲ ದಿಗಿಲು ಆವರಿಸುತ್ತೆ. ಅಬ್ಬಾ, ಎಷ್ಟು ಭಯಂಕರಾಂತ!' ಅಂತ ಅಂದುಕೊಂಡೆ. ಆದ್ದರಿಂದ ಬೇರೇನನ್ನಾದ್ರೂ ಯೋಚನೆ ಮಾಡ್ತೀನಿ, ನಾನು ಟೀ ಕುಡಿದ್ನಲ್ಲ, ಆ ಹೋಟೆಲಿನವನ ಬಗ್ಗೆ ಯೋಚನೆ ಮಾಡಿದರೆ! ತಕ್ಷಣ ನೀಳವಾದ ಗಡ್ಡ ಬಿಟ್ಟುಕೊಂಡಿದ್ದ ಆ ಹೋಟೆಲಿನವನು ಜೊತೆಗಿದ್ದ ಮತ್ತವನ ಮೊಮ್ಮಗ ಮನಸ್ಸಿನ ಮುಂದೆ ಬಂದ. ಆ ಹುಡುಗ ನಮ್ಮ ವಾಸ್ಯಾನ ವಯಸ್ಸಿನೋನು! ತನ್ನ ತಾಯಿಯನ್ನ ಆ ಸಂಗೀತಗಾರ ಮುದ್ದಿಸೋದು ಕಣ್ಣಿಗೆ ಬೀಳತ್ತೆ; ಆಗ ಆ ಬಡಪಾಯಿ ಮನಸ್ಸಿನಲ್ಲಿ ಏನೇನಾಗ್ಬಹುದು! ಆದರೆ ಅವಳಿಗೆ ಆ ಬಗ್ಗೆ ಯೋಚನೇನೆ ಇರಲ್ಲ. ಅವಳಿಗೆ ತನ್ನ ಪ್ರಣಯವೇ ಮುಖ್ಯ, ಮತ್ತೆ ನನ್ನ ಮನಸ್ಸಲ್ಲಿ ಅದೇ ಆಲೋಚನೆಗಳು. 'ಉಹ್ಞೂ. ಈಗ ಡಿಸ್ಟ್ರಿಕ್ಟ್ ಆಸ್ಪತ್ರೆ ಇನ್‌ಸ್ಪೆಕ್ಷನ್ ಬಗ್ಗೆ ಯೋಚನೆ ಮಾಡ್ತೀನಿ. ಅದೇ ಜಿಲ್ಲಾ ಡಾಕ್ಟರ್ ಬಗ್ಗೆ ದೂರು ಕೊಟ್ಟನಲ್ಲ, ಆ ಹುಡುಗನ ಬಗ್ಗೆ. ಆ ವೈದ್ಯನಿಗೆ ಟ್ರುಖಚೆವ್‌ಸ್ಕಿಗಿರೋ ರೀತಿದೆ ಮೀಸೆ. ಎಂಥ ದುಷ್ಟ ಅವನು... ತಾನು ಮಾಸ್ಕೋದಿಂದ ಹೋಗ್ತೀನಿ ಅಂತ ಹೇಳಿ ಅವರಿಬ್ಬರೂ ಸೇರಿ ನಂಗೆ ಮೋಸ ಮಾಡಿದ್ರು.' ಮತ್ತೆ ಎಲ್ಲ ಹೊಸದಾಗಿ ಶುರುವಾಗತ್ತೆ. ನಾನು ಯಾವುದರ ಬಗ್ಗೆ ಯೋಚನೆ ಮಾಡಕ್ಕೆ ತೊಡಗಿದರೂ ಅದೇ ವಿಷಯಕ್ಕೆ ಬಂದು ಸೇರಿಕೊಳ್ಳತ್ತೆ. ನನಗೆ ತೀರ ಆತಂಕವಾಯ್ತು. ನನ್ನ ಸಂಕಟದ ಮುಖ್ಯ ಕಾರಣ ಅಂದ್ರೆ ನನ್ನ ಮುಗ್ಧತೆ, ನನ್ನ ಸಂಶಯ, ನನ್ನೊಳಗಿನ ವೈರುಧ್ಯಗಳು; ಅವಳನ್ನು ನಾನು ದ್ವೇಷಿಸಬೇಕೇ ಪ್ರೀತಿಸಬೇಕೆ ಅನ್ನೋ ದ್ವಂದ್ವ. ನನ್ನ ಸಂಕಟ ವಿಚಿತ್ರವಾದ್ದು. ನನಗಾದ ಅವಮಾನ ಹಾಗೂ ಅವನ ಗೆಲುವು ನನ್ನ ಮನಸ್ಸಲ್ಲಿ ಕೊರೀತಿದ್ದವು, ಅವಳ ಬಗ್ಗೆ ಆಳವಾದ ದ್ವೇಷ ಉಂಟಾಯ್ತು. 'ಅವಳನ್ನ ಹಾಗೇ ಬಿಡಬಾರ್ದು, ಅವಳಿಗೆ ಒಂದಷ್ಟು ನೋವು ಉಂಟಾಗಬೇಕು, ಕೊನೇ ಪಕ್ಷ, ನಾನೆಂಥ ಸಂಕಟ ಅನುಭವಿಸಿದೆ ಅನ್ನೋದರ ಅರಿವು ಅವಳಿಗಾಗಬೇಕು' ಅಂದುಕೊಂಡೆ. ಮನಸ್ಸನ್ನು ಬೇರೆ ಕಡೆ ತಿರುಗಿಸೋದಕ್ಕೋಸ್ಕರ ಪ್ರತಿಯೊಂದು ಸ್ಟೇಷನ್ನಿನಲ್ಲೂ ಇಳೀತಿದ್ದೆ.

ಒಂದು ಕಡೆ ಕೆಲವರು ವೋಡ್ಕಾ ಕುಡೀತಿದ್ದರು; ನನ್ನ ಪಕ್ಕದಲ್ಲೇ ಒಬ್ಬ ಯೆಹೂದಿ ಕೂಡ ಕುಡೀತಿದ್ದ. ಅವನು ಮಾತಿಗೆ ಶುರುಮಾಡಿದ, ಕ್ಯಾರೇಜಿನಲ್ಲಿ ನಾನೊಬ್ಬನೇ ಇರೋದು ಬೇಡಾಂತ ಅವನ ಕೊಳಕು ಮೂರನೇ ದರ್ಜೆ ಡಬ್ಬಿಗೆ ಹೋಗಿ ಕೂತೆ; ಅಲ್ಲೋ ಹೊಗೆ ಸುತ್ತಿಕೊಂಡಿತ್ತು, ಸೂರ್ಯಕಾಂತಿ ಬೀಜಗಳ ವಾಸನೆ ತುಂಬಿಕೊಂಡಿತ್ತು. ಅವನ ಪಕ್ಕದಲ್ಲೇ ಕೂತುಕೊಂಡೆ. ಅವನು ಮಹಾ ಹರಟೆಗಾರ, ಎಷ್ಟೋ ಕತೆಗಳನ್ನ ಹೇಳಿದ. ಅವನ್ನೆಲ್ಲ ಕೇಳ್ತಾ ಕೂತೆ, ಆದರೆ ಅವನ ಮಾತಿಗೆ ಗಮನ ಕೊಡೋದಕ್ಕೇ ಆಗಲಿಲ್ಲ; ಯಾಕಂದ್ರೆ ನಾನು ನನ್ನ ಯೋಚನೆಗಳಲ್ಲೇ ಮುಳುಗಿದ್ದೆ. ಇದನ್ನ ಗಮನಿಸಿ ಅವನು ತನ್ನ ಮಾತನ್ನ ಕೇಳೋದಕ್ಕೆ ಹೇಳಿದ. ಆಗ ನಾನು ಮೇಲೆದ್ದು ನನ್ನ ಗಾಡಿಗೆ ವಾಪಸಾದೆ. 'ನಾನು ಅಂದುಕೊಂಡದ್ದೆಲ್ಲ ನಿಜವಾ ಅಂತ ಪರಿಶೀಲಿಸಬೇಕು, ನನ್ನ ಸಂಕಟಕ್ಕೆ ನಿಜವಾಗ್ಲೂ ಕಾರಣ ಇದ್ಯಾ ಪತ್ತೆಹಚ್ಚಬೇಕು' ಅಂದುಕೊಂಡೆ. ನನ್ನ ಸೀಟಲ್ಲಿ ಕೂತು ಎಲ್ಲದರ ಬಗ್ಗೆಯೂ ನಿರ್ವಿಕಾರವಾಗಿ ಯೋಚನೆ ಮಾಡಕ್ಕೆ ನಿರ್ಧರಿಸಿದೆ. ಆದರೆ ನಿರ್ವಿಕಾರ ವಾಗಿರೋದರ ಬದಲು ಹಿಂದಿನ ಥರವೇ ಶುರುವಾಯ್ತು. ಯೋಚನೆ ಬದಲು ಚಿತ್ರಗಳು, ಕಲ್ಪನೆಗಳು. 'ಈ ರೀತಿ ನಾನೆಷ್ಟು ಸಲ ನೋವು ಅನುಭವಿಸಿದೆ! ಆದರೆ ಎಲ್ಲವೂ ಏನೂ ಇಲ್ಲದೆ ಕೊನೆಯಾದುವು. ಪ್ರಾಯಶಃ ಈಗಲೂ ಹಾಗೇ ಆಗತ್ತೆ, ಹಾಗೇ ಆಗೋದು. ಮನೆಗೆ ಹೋದರೆ ಅವಳು ಸ್ವಸ್ಥವಾಗಿ ಮಲಗಿರ್ತಾಳೆ; ನಾನು ಹೋದ ಕೂಡಲೇ ಏಳ್ತಾಳೆ, ನನ್ನ ನೋಡಿ ಮುಖ ಅರಳಿಸ್ತಾಳೆ, ಅವಳನ್ನ ನೋಡಿ ಯಥಾಪ್ರಕಾರ ಏನೂ ನಡೆದಿಲ್ಲ ಅಂತ ನನಗನ್ನಿಸತ್ತೆ, ನನ್ನದು ತಲೆಬುಡವಿಲ್ಲದ ಕಲ್ಪನೆ ಅಂತ ಗೊತ್ತಾಗತ್ತೆ. ಹಾಗಾದ್ರೆ ಎಷ್ಟು ಚೆನ್ನ! ಉಹ್ಲೂ, ಹಿಂದೆ ಆದ ಹಾಗೆ ಈ ಸಲವೂ ಆಗಲ್ಲ' ಅಂತ ನನ್ನೊಳಗಿನ ಯಾವುದೋ ದನಿ ಹೇಳಿದ ಹಾಗಾಯ್ತು. ಆದರೆ ಅಲ್ಲೇ ಶಿಕ್ಷೆ ಅಡಕವಾಗಿತ್ತು! ನನಗೆ ಅವಳ ದೇಹದ ಮೇಲೆ ಸಂಪೂರ್ಣ ಅಧಿಕಾರ ಇದೆ, ಅದು ನನ್ನದೇ ಅಂತ ಪರಿಗಣಿಸಿದ್ದೆ, ಆದರೆ ಅದನ್ನ ನಾನು ನನ್ನ ಹತೋಟೀಲಿ ಇಟ್ಟುಕೊಳ್ಳೋಕೆ ಸಾಧ್ಯವಿಲ್ಲ ಅಂತಲೂ ಅನ್ನಿಸಿತ್ತು. ಯಾಕಂದ್ರೆ ಅವಳ ದೇಹ ನನ್ನದಲ್ಲ, ಅವಳದ್ದು; ಅದನ್ನ ಹೇಗೆ ಬೇಕಾದ್ರೂ ಅವಳು ಬಳಸಿಕೋಬಹುದು, ಅದಕ್ಕೇ ಅವಳು ನನ್ನ ಇಚ್ಛೆಗೆ ವಿರುದ್ಧವಾಗಿ ಅದನ್ನ ಬಳಸಿಕೊಳ್ಳೋಕೆ ಹೊರಟಿದಾಳೆ ಅನ್ನಿಸಿತು. ಅವನಿಗಾಗಲೀ ಅವಳಿಗಾಗಲೀ ನಾನೇನೂ ಮಾಡೋ ಹಾಗಿರ್ಲಿಲ್ಲ. ಸ್ಟೂಯರ್ಡ್ ವ್ಯಾಂಕಾ ನೇಣುಗಂಬದ ಮುಂದೆ ನಿಂತುಕೊಂಡು ಹಾಡು ಹೇಳ್ತಾ ಸಿಹಿಯಾದ ತುಟಿಗಳ ಮೇಲೆ ಮುತ್ತಿಡೋ ಹಾಗೆ ಅವನೂ ಮಾಡಬಹುದು. ಗೆಲುವು ಅವನದೇ. ಅದನ್ನಿನ್ನೂ ಮಾಡದೇ ಅವಳೇನಾದ್ರೂ ಹಾಗೆ ಮಾಡೋ ಆಸೆ ಇಟ್ಕೊಂಡಿದ್ರೆ? ಅವಳು ಹಾಗೇ ಮಾಡೋಳೇ ಅನ್ನೋದು ನನ್ನ ಅನಿಸಿಕೆ? ಆಗ ಪರಿಸ್ಥಿತಿ ಇನ್ನೂ ಕೆಡತ್ತೆ. ಅವಳದನ್ನ ಈಗಾಗ್ಲೇ ಮಾಡಿ ನಂಗೆ ಗೊತ್ತಾಗೋದೇ ಒಳ್ಳೇದು, ಯಾಕಂದ್ರೆ ಆಗ ಈ ಕಲ್ಪನೆಗಳಿಗೆಲ್ಲ ಒಂದು ಕೊನೆ ಬೀಳತ್ತೆ. ನನಗೇನು ಇಷ್ಟಾಂತ ನಾನು ಹೇಳಕ್ಕೆ ಆಗಲ್ಲ. ಅವಳಿಗೆ ಇಷ್ಟವಾದ್ದನ್ನ ಇಷ್ಟಪಡಬಾರದು ಅನ್ನೋದು ನನ್ನ ಆಸೆ. ಇದಂತೂ ಮಹಾ ಹುಚ್ಚು."

## 24

"ಕೊನೆಯದಕ್ಕೆ ಹಿಂದಿನ ನಿಲ್ದಾಣದಲ್ಲಿ, ಕಂಡಕ್ಟರ್ ಟಿಕೆಟ್‌ಗಳನ್ನು ಸಂಗ್ರಹಿಸ ಬೇಕಾಗಿರುವಾಗ, ನಾನು ಸಾಮಾನುಗಳನ್ನು ಒಟ್ಟುಗೂಡಿಸಿಕೊಂಡು ಬ್ರೇಕ್-ಪ್ಲಾಟ್ ಫಾರಂಗೆ ಹೋದೆ; ನನ್ನ ಮನಸ್ಸಿನಲ್ಲಿದ್ದ ಕ್ಷೋಭೆ ಈಗ ಮತ್ತಷ್ಟು ಹೆಚ್ಚಾಯ್ತು. ನನಗೆ ಚಳಿ ಅನ್ನಿಸ್ತು, ನನ್ನೊಳಗೆ ನಡುಕ ಹುಟ್ಟಿತು, ಹಲ್ಲುಗಳು ಕಟಕಟ ಎಂದುವು. ನಾನು ಸ್ಟೇಷನ್‌ನಿಂದ ಸಹಜವಾಗಿ ಹೊರಬಿದ್ದು ಜನಸಂದಣಿಯಲ್ಲಿ ಒಂದಾದೆ; ಒಂದು ಗಾಡಿ ಹಿಡಿದು, ದಾರಿಹೋಕರು, ರಾತ್ರಿ ಕಾವಲುಗಾರರು, ಬೀದಿ ದೀಪಗಳು ಒಮ್ಮೆ ಹಿಂದೆ ಒಮ್ಮೆ ಮುಂದೆ ಉಂಟುಮಾಡಿದ್ದ ನನ್ನ ಗಾಡಿಯ ನೆರಳುಗಳನ್ನು ಗಮನಿಸುತ್ತ, ಬೇರೇನನ್ನೂ ಯೋಚಿಸದೆ ಮನೆಯತ್ತ ಹೊರಟೆ. ಅರ್ಧ ಮೈಲಿಯಷ್ಟು ದೂರ ಹೋಗಿರಬಹುದು, ನನಗೆ ಕಾಲುನಡುಕ ಉಂಟಾಗಿ, ನಾನು ರೈಲಿನಲ್ಲಿ ಉಲ್ಲನ್ ಕಾಲುಚೀಲವನ್ನು ತೆಗೆದು ಒಳಗಿರಿಸಿಕೊಂಡದ್ದು ನೆನಪಾಯ್ತು. 'ಚೀಲ ಎಲ್ಲಿ ಹೋಯ್ತು? ಹ್ಞೂ ಇಲ್ಲಿದೆ' 'ನನ್ನ ಟ್ರಂಕ್, ಎಲ್ಲಿ?' ಅಂದುಕೊಂಡೆ. ಆಗ ನನಗೆ ಗೊತ್ತಾಯಿತು, ನನ್ನ ಲಗೇಜುಗಳ ಬಗ್ಗೆ ಪೂರ್ತಿ ಮರೆತುಬಿಟ್ಟಿದ್ದೆ. ಆದರೆ ನನ್ನ ಹತ್ತಿರ ಲಗೇಜು ಟಿಕೆಟ್ ಇದ್ದದ್ದು ನೆನಪಿಗೆ ಬಂದು, ಅದಕ್ಕಾಗಿ ಮತ್ತೆ ವಾಪಸು ಸ್ಟೇಷನ್‌ಗೆ ಹೋಗದೆ ಮುಂದೆ ಸಾಗಿದೆ.

"ನಾನೆಷ್ಟು ಪ್ರಯತ್ನಪಟ್ಟರೂ ಆಗಿನ ನನ್ನ ಮನಃಸ್ಥಿತಿ ಎಂಥದಾಗಿತ್ತು ಅನ್ನೋದು ನೆನಪಿಗೆ ಬರವೊಲ್ಲದು. ನಾನೇನು ಯೋಚ್ನೆ ಮಾಡ್ತಿದ್ದೆ? ನನಗೇನು ಬೇಕಾಗಿತ್ತು? ನನಗೆ ಒಂದೂ ಗೊತ್ತಿಲ್ಲ. ನನಗೆ ನೆನಪಿಗೆ ಬರೋದೊಂದ್ರೆ ಏನೋ ಒಂದು ಭಯಂಕರವಾದ ನನ್ನ ಬದುಕಿನ ಬಹು ಮುಖ್ಯ ಘಟನೆ ಇಷ್ಟರಲ್ಲೇ ಸಂಭವಿಸಲಿದೆ ಅನ್ನೋದು. ಅದು ಆಗತ್ತೆ ಅನ್ನೋ ನನ್ನ ಭಾವನೆಯಿಂದಾಗಿ ಆಗಲಿತ್ತೋ ಅಥವಾ ಏನಾಗತ್ತೆ ಅನ್ನೋದರ ಭವಿಷ್ಯಜ್ಞಾನ ನನಗಿತ್ತೋ ಗೊತ್ತಿಲ್ಲ ಅಥವಾ ಆಗಬೇಕಾದ್ದು ಆಗಿಹೋದ ಮೇಲೆ ಕವಿಯಬಹುದಾದ ಮಬ್ಬು ಆಗೋದಕ್ಕೆ ಮುಂಚೆಯೇ ಸುತ್ತುವರಿದಿತ್ತೋ ಗೊತ್ತಿಲ್ಲ. ಮನೆಯ ಮುಂಭಾಗದ ಪೋರ್ಚ್‌ವರೆಗೂ ಗಾಡಿಯಲ್ಲಿ ಹೋದೆ. ಆಗ ಮಧ್ಯರಾತ್ರಿ ದಾಟಿತ್ತು. ಪೋರ್ಚ್ ಮುಂದೆ ಕೆಲವು ಮಂದಿ ಗಾಡಿಯವರು ಬಾಡಿಗೆಗಾಗಿ ಕಾಯ್ತಾ ನಿಂತಿದ್ದರು; ಯಾಕೇಂದ್ರೆ ಮನೆ ಒಳಗೆ ಬೆಳಕು ಉರೀತಿದ್ದದ್ದು ಕಿಟಕಿಗಳ ಮೂಲಕ ಕಾಣ್ತಿತ್ತು. ದೀಪ ನಮ್ಮ ಮನೇಲಿ, ನರ್ತನ ಕೋಣೇಲಿ ಮತ್ತು ಪಡಸಾಲೇಲಿತ್ತು. ಅಷ್ಟು ಹೊತ್ತಾಗಿದ್ರೂ ನಮ್ಮ ಮನೇಲಿ ದೀಪ ಇನ್ನೂ ಯಾಕೆ ಉರೀತಿದೆ ಅಂದುಕೊಂಡು ಮಹಡಿ ಹತ್ತಿ ಏನೋ ಆಗಬಾರದ್ದು ಆಗ್ತಿರತ್ತೆ ಅಂದುಕೊಂಡೇ ಒಳಗೆ ಹೋಗಿ ಕಾಲ್ಬೆಲ್ ಒತ್ತಿದೆ. ಒಬ್ಬ ಸಭ್ಯ, ನಮ್ರ ಆದರೆ ಮೂರ್ಖ ಆಳು ಎಗೋರ್ ಅನ್ನೋನು ಬಾಗಿಲು ತೆಗೆದ. ಮನೆ ಒಳಗೆ ನನ್ನ ಕಣ್ಣಿಗೆ ಬಿದ್ದ ಮೊದಲನೆ ವಸ್ತು ಅಂದರೆ ಒಬ್ಬ ಗಂಡಸಿನ ಉಡುಪು, ಹೊರಗೆ ಹಾಕ್ಕೊಳ್ಳೋ ಕೋಟುಗಳು ಸ್ಟ್ಯಾಂಡ್ ಮೇಲಿದ್ದದ್ದು. ನನಗೆ ಆಶ್ಚರ್ಯ ಆಗ್ಬೇಕಾಗಿತ್ತು, ಆದರೆ ಆಗಲಿಲ್ಲ. 'ಸರಿಯಾಯ್ತಲ್ಲ!' ಅಂದುಕೊಂಡೆ. ನಾನಂದುಕೊಂಡ ಹಾಗೇ ಆಗಿತ್ತಲ್ಲ. ಬಂದಿರೋರು ಯಾರು ಅಂತ ಎಗೋರ್‌ನ

ಕೇಳಿದೆ. ಟ್ರುಖಚೆವ್‌ಸ್ಕಿ ಅಂದ. 'ಇನ್ನು ಯಾರ್ಯಾರಿದಾರೆ?' ಅಂದೆ. 'ಬೇರೆ ಯಾರೂ ಇಲ್ಲ' ಅಂದ. ಅವರನ್ನ ಬಿಟ್ಟರೆ ಮತ್ತಾರೂ ಇಲ್ಲ ಅಂತ ನನ್ನ ಮನಸ್ಸಿಗೆ ಸಮಾಧಾನವಾಗಲಿ ಅನ್ನೋ ಧ್ವನೀಲಿ ಅವನು ಹೇಳಿದ ಹಾಗಿತ್ತು. 'ಹಾಗೇ ಆಗಿದೆ, ಹಾಗೇ ಆಗಿದೆ' ಅಂತ ಅಂದುಕೊಂಡೆ. 'ಮಕ್ಕಳೂ?' ಅಂತ ಕೇಳಿದೆ. 'ಅವರು ನಿದ್ದೆ ಹೋಗಿ ಬಹಳ ಹೊತ್ತಾಯ್ತು, ಸ್ವಾಮಿ' ಅಂದ.

"ನನ್ನ ಉಸಿರು ಕಟ್ಟಿಕೊಂಡ ಹಾಗಾಯ್ತು, ನನ್ನ ಹಲ್ಲುಗಳನ್ನು ಕಡಿಯೋ ಹಾಗಾಯ್ತು. 'ಹಾಗಾದ್ರೆ ಅದು ಬರೀ ನನ್ನ ಕಲ್ಪನೆಯಲ್ಲ. ಏನೋ ಆಗಬಾರದ್ದು ಆಗತ್ತೆ ಅಂದುಕೊಂಡೆ, ಆದರೆ ಎಲ್ಲ ಸರಿಹೋದ ಹಾಗಿತ್ತು, ಆದರೆ ಬೇರೆ ರೀತಿಯೇ ಆಯ್ತು. ಈಗ ಆಗಿರೋದು ನಾನಂದುಕೊಂಡ ಹಾಗೆಯೇ; ನನ್ನದು ಕಲ್ಪನೆಯಲ್ಲ, ವಾಸ್ತವ .. ..!'

"ಅಳುವ ಹಾಗಾಯ್ತು, ಆದರೆ ನನ್ನೊಳಗಿನ ಪಿಶಾಚಿ 'ಅಳು, ಭಾವುಕನಾಗು, ಅಷ್ಟುಹೊತ್ತಿಗೆ ಅವರು ತಪ್ಪಿಸ್ಕೋತಾರೆ. ನಿನಗೆ ಯಾವ ಆಧಾರವೂ ಸಿಕ್ಕಲ್ಲ, ಜೀವಮಾನಪೂರ್ತಿ ಅನುಮಾನಪಡ್ತಲೇ ಇರು!' ಅಂದ ಹಾಗಾಯ್ತು. ನನ್ನ ಸ್ವಾನುಕಂಪ ತಕ್ಷಣ ಕಣ್ಮರೆಯಾಯ್ತು, ನನ್ನಲ್ಲಿ ಯಾವುದೋ ವಿಚಿತ್ರ ಆನಂದ ತುಂಬಿಕೊಂಡಿತು. ನನ್ನೆಲ್ಲ ಸಂಕಟಗಳೂ ಪರಿಹಾರ ಆಗತ್ವೆ, ಈಗ್ಲೇ ಅವಳಿಗೆ ತಕ್ಕ ಶಾಸ್ತಿ ಮಾಡ್ಬೇಕು, ನನ್ನ ಕೋಪ ತೋರಿಸ್ಬೇಕು ಅಂದುಕೊಂಡೆ. ತೋರಿಸಿಯೂಕೊಂಡೆ; ನಾನೊಂದು ಮೃಗವಾದೆ, ಕ್ರೂರಿಯಾದೆ, ವಂಚನೆಯ ಪಶುವಾದೆ.

"ಪಡಸಾಲೆಯ ಕಡೆಗೆ ಹೋಗಲು ಹಿಂದಿರುಗಿದ ಎಗೋರ್‌ನನ್ನು ಕುರಿತು, 'ಬೇಡ! ಇಗೋ ನನ್ನ ಲಗೇಜು ಟಿಕೆಟ್‌ಗಳು, ಬೇಗ ಒಂದು ಗಾಡಿ ತಗೊಂಡು ಹೋಗಿ ಅವುಗಳನ್ನ ತಗೊಂಡು ಬಾ, ಹ್ಞೂ, ಹೊರಡು!' ಎಂದು ಕಳಿಸಿದೆ. ತನ್ನ ಓವರ್ ಕೋಟ್ ತರಲೆಂದು ಅವನು ಹೋದ. ಅವರಿಗೆ ಸೂಚನೆಯಾಗಬಹುದೂಂತ ಭಯಪಟ್ಟು ಅವನ ಜೊತೆ ನಾನು ಅವನ ಕೋಣೆಯವರೆಗೂ ಹೋಗಿ ಅವನು ಓವರ್ ಕೋಟ್ ಧರಿಸುವವರೆಗೂ ನಿಂತೆ. ಪಡಸಾಲೆಯಿಂದ ಅದರಾಚೆಗಿನ ಕೋಣೆಯಲ್ಲಿ ಆಗುತ್ತಿದ್ದ ಶಬ್ದವನ್ನು ಕೇಳಬಹುದಾಗಿತ್ತು, ಮನುಷ್ಯರ ಧ್ವನಿ, ಊಟದ ಪ್ಲೇಟುಗಳ ಹಾಗೂ ಚಾಕುಗಳ ಸದ್ದು ಇತ್ಯಾದಿ. ಅವರೆಲ್ಲ ಊಟ ಮಾಡ್ತಿದ್ದರು, ಆದರೆ ನಾನು ಬೆಲ್ ಮಾಡಿದ್ದು ಯಾರ ಗಮನಕ್ಕೂ ಬಂದಿರಲಿಲ್ಲ. 'ಅವರು ಯಾರೂ ಹೊರಗೆ ಬರ್ದಿದ್ದರೆ ಸಾಕು' ಅಂದುಕೊಂಡೆ. ಎಗೋರ್ ತನ್ನ ಓವರ್ ಕೋಟ್ ಧರಿಸಿ ಹೊರಗೆ ನಡೆದ. ಅವನು ಹೋದ ಮೇಲೆ ತಲೆಬಾಗಿಲು ಹಾಕಿದೆ, ನನಗೆ ಒಬ್ಬನೇ ಇದ್ದದ್ದು ಗೊತ್ತಾಗಿ ತಕ್ಷಣ ಕಾರ್ಯಶೀಲನಾಗಬೇಕೂಂತ ಅಂದುಕೊಂಡೆ. ಹೇಗೆ ಕಾರ್ಯಶೀಲನಾಗೋದು ಅಂತ ನನಗೂ ಗೊತ್ತಿರಲಿಲ್ಲ. ನನಗೆ ಅನ್ನಿಸ್ತಿದ್ದದ್ದು ಒಂದೇ: ಎಲ್ಲ ಮುಗಿದುಹೋಗಿದೆ, ಅವಳು ಅಪರಾಧಿ ಅನ್ನೋದರಲ್ಲಿ ಅನುಮಾನವೇ ಇಲ್ಲ, ಹಾಗಾಗಿ ಅವಳಿಗೆ ಈ ಕ್ಷಣವೇ ತಕ್ಕ ಶಾಸ್ತಿ ಮಾಡಬೇಕು, ಅವಳ ಜೊತೆಗಿನ ನನ್ನ ಸಂಬಂಧಕ್ಕೆ ಕೊನೆ ಹಾಕ್ಬೇಕು. ಅನ್ನೋದು.

"ಹಿಂದಾಗಿದ್ದರೆ 'ಅದ್ಯಾವುದೂ ನಿಜವಲ್ಲ, ನಾನೇ ತಪ್ಪು ತಿಳಿದುಕೊಂಡಿರ್ಬೇಕು' ಅಂತ ಅಂದುಕೋತಿದ್ದೆ. 'ಆದರೆ ಈಗ ಹಾಗನ್ನಿಸ್ತಿರಲಿಲ್ಲ. ಸಂದೇಹಕ್ಕೆ ಆಸ್ಪದವಿಲ್ಲದ ಹಾಗೆ ಎಲ್ಲ ತೀರ್ಮಾನ ಆಗಿದೆ. ನನಗೆ ತಿಳಿಯದ ಹಾಗೆ ಅವಳು ರಾತ್ರಿಯೆಲ್ಲ ಅವನ ಜೊತೆಗಿದ್ದಳು! ಅವಳೇನು ಯಾವುದಕ್ಕೂ ಹೇಸೋಳಲ್ಲ. ಅಷ್ಟೇಕೆ, ಅವಳು ಉದ್ದೇಶಪೂರ್ವಕವಾಗಿಯೇ ದಾರ್ಷ್ಟ್ಯ ತೋರಿಸ್ತಿದಾಳೆ, ಅದು ಮುಗ್ಧತೆ ಅಂತಲೂ ನಟಿಸ್ತಾಳೆ. ಎಲ್ಲ ಸ್ಫಟಿಕ ಸ್ಪಷ್ಟ, ಅನುಮಾನವೇ ಇಲ್ಲ.' ನನಗಿದ್ದದ್ದು ಒಂದೇ ಭಯ, ಅವರೆಲ್ಲಿ ಬೇರೆಯಾಗ್ತಾರೋ, ಹೊಸ ಸುಳ್ಳನ್ನ ಸೃಷ್ಟಿ ಮಾಡ್ತಾರೋ, ಇದರಿಂದ ಪುರಾವೆ ಎಲ್ಲಿ ತಪ್ಪಿ ಹೋಗಿ ಅಪರಾಧ ಸಾಬೀತು ಮಾಡಕ್ಕೆ ನಂಗೆ ಸಾಧ್ಯವಾಗ್ದೇ ಹೋಗತ್ತೋ ಅನ್ನೋದು. ಹೀಗಾಗಿ ಅವರಿಬ್ಬರನ್ನೂ ಒಟ್ಟಿಗೇ ಹಿಡೀಬೇಕು ಅಂತ ಕಳ್ಳ ಹೆಜ್ಜೆ ಇಟ್ಕೊಂಡು ಅವರಿದ್ದ ನರ್ತನಕೋಣೆಗೆ ಹೋದೆ, ಪಡಸಾಲೆ ಮೂಲಕ ಅಲ್ಲ, ಬೇರೆ ಕಡೆಯಿಂದ.

"ಮೊದಲಲ್ಲಿ ಹುಡುಗರು ಮಲಗಿದ್ದರು, ಆಮೇಲೆ ಮಲಗಿದ್ದ ದಾದಿ ಅಲುಗಾಡಿ ಎಚ್ಚರಗೊಳ್ಳುವ ಹಾಗೆ ಕಾಣಿಸಿದಳು, ಎಲ್ಲ ಗೊತ್ತಾದ ಮೇಲೆ ಅವಳು ಏನು ಅಂದುಕೋತಾಳೊ ಅಂತ ಯೋಚಿಸಿದೆ; ನನ್ನ ಬಗ್ಗೆ ನನಗೆ ಎಂಥ ಕರುಣೆ ಉಕ್ಕಿ ಬಂತು ಅಂದ್ರೆ ನನಗೆ ಕಣ್ಣೀರು ತಡೆಯಕ್ಕಾಗಲಿಲ್ಲ. ಮಕ್ಕಳು ಎಚ್ಚರಗೊಳ್ಳದ ಹಾಗೆ ಸರಸರ ಅಂತ ಕಳ್ಳ ಹೆಜ್ಜೆಗಳಲ್ಲಿ ಹೋಗಿ ನನ್ನ ಕೋಣೆ ಸೇರಿದೆ; ಸೋಫ ಮೇಲೆ ಬಿಕ್ಕುತ್ತ ಬಿದ್ದುಕೊಂಡೆ.

" 'ನನ್ನಂಥ ಪ್ರಾಮಾಣಿಕ ವ್ಯಕ್ತಿ, ನನ್ನ ತಾಯ್ತಂದೆಯರ ಸಭ್ಯ ಪುತ್ರ, ಮದುವೆಯಾಗಿ ಜೀವನವೆಲ್ಲ ಹಾಯಾಗಿರಬೇಕೂಂತ ಕನಸು ಕಂಡೋನು, ಅವಳಿಗೆ ಎಂದೂ ದ್ರೋಹ ಬಗೆಯದ ನಾನು ... ಈಗ! ಐದು ಮಕ್ಕಳಿವೆ, ಅವಳು ಒಬ್ಬ ಸಂಗೀತಗಾರನನ್ನ, ಅವನ ಕೆಂಪು ತುಟಿಗಳಿಗೆ ಮರುಳಾಗಿ, ತಬ್ಬಿಕೊಳ್ತಾಳೆ ಅಂದ್ರೆ! ಅವಳು ಮನುಷ್ಯಳೇ ಅಲ್ಲ, ಒಂದು ನಾಯಿ, ಕಜ್ಜಿ ನಾಯಿ! ಮಕ್ಕಳ ಮೇಲೆ ಅಪಾರ ಪ್ರೀತಿ ಇರೋಳ ಹಾಗೆ ನಟಿಸ್ತಿದ್ದವಳು, ಪಕ್ಕದ ಕೋಣೇಲೇ ಅವರು ಮಲಗಿರೋವಾಗ! ನನಗೆ ಹಾಗೆ ಬರೆದಿದ್ದವಳು! ಅವನ ಕೊರಳಿಗೆ ಜೋತುಬೀಳೋದು ಅಂದ್ರೆ! ಯಾರಿಗೆ ಗೊತ್ತು ಅವಳು ವ್ಯವಹಾರಾನ ಹಿಂದೆಯೂ ಆಳಿನ ಜೊತೆ ಇಟ್ಕೊಂಡಿದ್ದಳೇನೋ, ನನ್ನವು ಅಂತ ಭಾವಿಸಿರೋ ಮಕ್ಕಳು ಅವನಿಗೆ ಹುಟ್ಟಿದವೋ ಏನೋ!. ನಾಳೆ ನಾನು ಬಂದಿದ್ದಿದ್ರೆ ಅವಳು ಅಲಂಕಾರ ಮಾಡಿಕೊಂಡು, ಸೊಂಟ ಬಳುಕಿಸ್ತಾ ವಯ್ಯಾರದಿಂದ ಬಂದಿರ್ತಿದ್ದಳು, ನನ್ನ ಹೊಟ್ಟೆಕಿಚ್ಚೆಲ್ಲ ನನ್ನ ಎದೆಯಲ್ಲೇ ಚುಚ್ಚುತ ಕೂತಿರ್ತಿತ್ತು. ದಾದಿಗೆ ಏನನ್ನಿಸಬಹುದು? ... ಎಗೋರ್! ಬಡಪಾಯಿ ಲೀಸಾ! ಅವಳಿಗೆ ಈಗಾಗ್ಲೆ ಒಂದಷ್ಟು ಅರ್ಥವಾಗತ್ತೆ, ಇವಳ ದಾಷ್ಟೀಕವೋ, ಸುಳ್ಳುಗಳೋ! ಅವಳ ಲಾಂಪಟ್ಯದ ರೀತಿ ನಂಗೆ ಗೊತ್ತಿಲ್ಲವಾ?' ಅಂದುಕೊಂಡೆ.

"ಮೇಲೇಳಲು ಪ್ರಯತ್ನಿಸಿದೆ, ಆದರೆ ಆಗಲಿಲ್ಲ. ನನ್ನ ಕಾಲುಗಳ ಮೇಲೆ ನಿಂತುಕೊಳ್ಳಲಾರದಷ್ಟು ಜೋರಾಗಿ ಎದೆ ಬಡಿಯುತ್ತಿತ್ತು. 'ನನಗೆ ಪಾರ್ಶ್ವವಾಯು ಆಗಿ

ಸಾಯ್ತೀನಿ, ಅವಳೇ ನನ್ನ ಕೊಂದಹಾಗಾಗತ್ತೆ. ಅವಳಿಗೆ ಬೇಕಾದ್ದೂ ಅದೇ ತಾನೇ! ಕೊಲ್ಲೋದು ಅವಳಿಗೇನು ಮಹಾ ಅಂತ! ಇಲ್ಲ, ಇದರಿಂದ ಅವಳಿಗೆ ಅನುಕೂಲವೇ ಆಗತ್ತೆ, ಅವಳಿಗೆ ಅಂಥ ಸಂತೋಷ ಆಗಕ್ಕೆ ನಾನು ಬಿಡಲ್ಲ. ಇಲ್ಲಿ ನಾನು ಕೂತಿರೋದು, ಅಲ್ಲಿ ಅವರು ತಿಂದು ಕುಡಿದು ಚಕ್ಕಂದ ಆಡೋದು!... ಅವಳಿನ್ನೂ ನವಯೌವನೆಯಾಗದಿದ್ರೂ ಅವನು ಅವಳನ್ನೇನೂ ಕಡೆಗಣಿಸಿಲ್ಲ. ಕೊಂಚ ವಯಸ್ಸಾಗಿದ್ರೂ ನೋಡೋದಕ್ಕಿನ್ನೂ ಲಕ್ಷಣವಾಗೇ ಇದಾಳೆ, ಎಲ್ಲಕ್ಕಿಂತ ಮೇಲಾಗಿ ಅವಳಿಂದಾಗಿ ಅವನ ಆರೋಗ್ಯಕ್ಕೇನೂ ಬಾಧಕವಿಲ್ಲವಲ್ಲ. ಅವತ್ತೇ ನಾನು ಅವಳ ಕತ್ತನ್ನ ಯಾಕೆ ಹಿಚುಕಹಾಕಲಿಲ್ಲ?' ಇದೆಲ್ಲ ನನ್ನೊಳಗಿನ ಸ್ವಗತ. ಹೋದ ವಾರ, ನನ್ನ ರೂಮಿಂದ ಅವಳನ್ನ ಅಟ್ಟಿ ಕೈಗೆ ಸಿಕ್ಕಿದ್ದನ್ನೆಲ್ಲ ಎಸೆದಿದ್ದದ್ದು ನೆನಪಿಗೆ ಬಂತು. ಆಗ ನಾನಿದ್ದ ಸ್ಥಿತಿ ನನಗಿನ್ನೂ ಚೆನ್ನಾಗಿ ನೆನಪಿದೆ; ಬರೀ ಜ್ಞಾಪಕಕ್ಕೆ ಬಂದದ್ದಲ್ಲ, ಆಗ ಅನುಭವಿಸಿದ್ದನ್ನ ಹೊಸೆದುಹಾಕಬೇಕು ಅನ್ನಿಸ್ತು ಕೂಡ. ಕಾರ್ಯಶೀಲವಾಗಕ್ಕೆ ನಾನು ಇಷ್ಟಪಟ್ಟದ್ದು, ಆದರೆ ಹಾಗೆ ನಡೆದುಕೊಳ್ಳೊದಕ್ಕೆ ಬೇಕಾದ್ದು ಹೊಳೆಯದೆ ಹೋಗಿದ್ದು ನೆನಪಿಗೆ ಬಂತು. ನಾನು ಎಂಥ ಮನಃಸ್ಥಿತಿಗೆ ಬಂದಿದ್ದೆ ಅಂದ್ರೆ, ಅಂಥದರಲ್ಲಿ ಮನುಷ್ಯನಾಗಲೀ ಪ್ರಾಣಿಯಾಗಲೀ ಅಪಾಯಕಾರಿಯಾದ ದೈಹಿಕ ಉದ್ವೇಗದಲ್ಲಿ ಪಡೆಯೋ ಹಾಗೆ ಕಾರ್ಯದ ನಿಖರತೆ ಮತ್ತು ಸಂಕಲ್ಪಶಕ್ತಿಗಳನ್ನು ಹೊಂದಿ ಒಂದು ಕ್ಷಣವನ್ನೂ ವ್ಯರ್ಥ ಮಾಡದೆ ಒಂದೇ ಗುರಿಯನ್ನು ಹೊಂದೋ ಹಾಗಾಯ್ತು.

"ನಾನು ಮಾಡಿದ ಮೊದಲ ಕೆಲಸ ಅಂದ್ರೆ ನನ್ನ ಬೂಟುಗಳನ್ನು ಕಳಚಿಟ್ಟೆ, ಸಾಕ್ಸ್‌ನಲ್ಲಿ ಸೋಫಾ ಕಡೆ ಹೋದೆ. ಅಲ್ಲೇ ಗೋಡೆ ಮೇಲೆ ಗನ್‌ಗಳು ಕಠಾರಿಗಳು ತೂಗಾಡ್ತಿದ್ದವು. ಹಿಂದೆಂದೂ ಬಳಕೆಯಾಗದಿದ್ದ ಒಂದು ಅಂಕುಡೊಂಕಾಗಿದ್ದು ಹರಿತವಾಗಿದ್ದ ಡಮಾಸ್ಕಸ್ ಕಠಾರಿ ತಗೊಂಡೆ. ಅದನ್ನ ಒರೆಯಿಂದ ಹೊರಕ್ಕೆಳೆದೆ. ಆ ಒರೆ ಸೋಫಾ ಹಿಂದೆ ಬಿತ್ತು ಅಂತ ನೆನಪು. ಆಗ ನನ್ನ ಮನಸ್ಸಲ್ಲಿ ಬಂದ ಯೋಚನೆ ಅಂದ್ರೆ 'ಆಮೇಲೆ ಅದನ್ನು ತಗೊಂಡರಾಯ್ತು, ಇಲ್ಲದಿದ್ದರೆ ಎಲ್ಲಾನೂ ತಪ್ಪಿಹೋಗತ್ತೆ' ಅನ್ನೋದು. ಆಮೇಲೆ, ಇನ್ನೂ ಮೈಮೈಲಿದ್ದ ನನ್ನ ಓವರ್ ಕೋಟ್ ತೆಗೆದುಹಾಕಿದೆ. ಮೆಲ್ಲನೆ ಹೆಜ್ಜೆ ಇಡ್ತಾ ಅಲ್ಲಿಗೆ ಹೊರಟೆ.

## 25

"ಕಳ್ಳಹೆಜ್ಜೆಯಲ್ಲಿ ಹೋಗಿ ಇದ್ದಕ್ಕಿದ್ದಂತೆ ಬಾಗಿಲನ್ನು ತೆಗೆದೆ. ಅವರ ಮುಖದ ಮೇಲಿನ ಪರಿಣಾಮ ಈಗಲೂ ಚೆನ್ನಾಗಿ ನೆನಪಿದೆ. ಅದು ನನಗೆ ನೆನಪಿರಲು ಕಾರಣ ಅದರಿಂದ ನನಗಾದ ಯಾತನಾಮಯ ಸಂತೋಷ; ಅವರ ಮುಖಗಳ ಮೇಲೆ ಭಯ ಮಡುಗಟ್ಟಿ ನಿಂತಿತ್ತು. ನನಗೆ ಬೇಕಾಗಿದ್ದುದೂ ಅದೇ. ನನ್ನನ್ನು ಕಂಡ ತಕ್ಷಣ ಅವರಿಬ್ಬರ ಮುಖಗಳ ಮೇಲೆ ಆವರಿಸಿದ ಹತಾಶಗೊಂಡ ಭಯದ ನೆರಳನ್ನು ನಾನು ಮರೆಯಲಾರೆ. ಅವನು ಮೇಜಿನ ಮೇಲೆ ಕೂತಿದ್ದಂತೆ ನೆನಪು, ಆದರೆ ನನ್ನ ಕಂಡ ಅಥವಾ ಮಾತನ್ನು

ಕೇಳಿದ ಕ್ಷಣ ಅವನು ಧುಡುಮ್ಮನೆ ಕೆಳಗಿಳಿದು ಕಪ್ಬೋರ್ಡ್ ಕಡೆ ಬೆನ್ನು ಮಾಡಿ ನಿಂತ. ಅವನ ಮುಖದಲ್ಲಿ ಮೂಡಿದ್ದುದು ನಿಸ್ಸಂಶಯವಾಗಿ ಭಯವೇ. ಅವಳ ಮುಖದ ಮೇಲೂ ಭಯ ನೆಲಸಿತ್ತು, ಆದರೆ ಅದಲ್ಲದೆ ಮತ್ತೇನೋ ಭಾವನೆಯೂ ಇತ್ತು. ಅದರಲ್ಲಿ ಭಯ ಮಾತ್ರವೇ ಇದ್ದಿದ್ದರೆ ನಡೆದದ್ದು ನಡೆಯದೆಯೇ ಇರುತ್ತಿತ್ತೇನೋ. ಆದರೆ ಅವಳ ಮುಖದಲ್ಲಿದ್ದುದು ಪ್ರೇಮಿಗಳ ಕೂಟಕ್ಕೆ ಭಂಗ ಬಂದರೆ ಉಂಟಾಗುವ ಖೇದ ಮತ್ತು ಇರಿಸುಮುರಿಸು ಅಥವಾ ನನಗೆ ಹಾಗೆ ತೋರಿತು. ತಮ್ಮ ಆಗಿನ ನಲಿವಿಗೆ ಯಾವ ಭಂಗವೂ ಉಂಟಾಗಬಾರದೆಂಬ ಆಸೆ ಅವಳ ಮುಖದ ಮೇಲಿತ್ತು. ಈ ಭಾವಗಳು ಅವರ ಮುಖದಲ್ಲಿದ್ದುದು ಒಂದೇ ಕ್ಷಣ. ಅವನ ಮುಖದ ಮೇಲಿನ ಭಯವು ಕ್ಷಣಾರ್ಧದಲ್ಲಿ ಪ್ರಶ್ನೆಯಾಗಿ ಮಾರ್ಪಟ್ಟಿತು, ಅವನು ಸುಳ್ಳು ಹೇಳಬಹುದು ಅಥವಾ ಇಲ್ಲ. ಸುಳ್ಳು ಹೇಳುವವನಾಗಿದ್ದರೆ ತಕ್ಷಣವೇ ಆರಂಭಿಸುತ್ತಿದ್ದ; ಇಲ್ಲದಿದ್ದರೆ ಇನ್ನೇನೋ ನಡೆಯುತ್ತಿತ್ತು. ಆದರೆ ಅದಾವುವು? ... ಅವನು ಅವಳೆಡೆಗೆ ಪ್ರಶ್ನಾರ್ಥಕ ಮುಖ ಮಾಡಿದ. ಅವನ ಕಡೆ ನೋಡಿದ ಅವಳ ಮುಖದಲ್ಲಿದ್ದ ಖೇದ ಮತ್ತು ಇರಿಸುಮುರಿಸುಗಳು ಬದಲಾಗಿ ಅವನಲ್ಲಿ ಬೇಡುವ ಭಾವ ಬಲಿಯಿತು.

"ಒಂದು ಕ್ಷಣ ನಾನು ಬಾಗಿಲವಾಡದ ಬಳಿ ನಿಂತಿದ್ದೆ, ಕಠಾರಿ ಹಿಡಿದಿದ್ದ ಕೈಯನ್ನು ಬೆನ್ನ ಹಿಂದೆ ಅಡಗಿಸಿಕೊಂಡು. ಅವನೊಮ್ಮೆ ಮುಗುಳ್ನಕ್ಕ, ಆನಂತರ ನಿರ್ಲಕ್ಷ್ಯ ದನಿಯಲ್ಲಿ 'ನಾವು ಸಂಗೀತಾಭ್ಯಾಸ ಮಾಡ್ತಿದ್ದಿವಿ' ಅಂದ. 'ಎಂಥ ಆಶ್ಚರ್ಯ!' ಅಂದಳು ಅವಳು ಅವನ ಧಾಟಿಯಲ್ಲಿಯೇ. ಅವರಿಬ್ಬರು ಇನ್ನೂ ತಮ್ಮ ಮಾತನ್ನು ಮುಗಿಸಿರಲಿಲ್ಲ, ಒಂದು ವಾರದ ಹಿಂದೆ ನನ್ನನ್ನಾವರಿಸಿದ್ದ ಕೋಪ ಮತ್ತೆ ನನ್ನನ್ನು ಹಿಡಿದುಕೊಂಡಿತು. ಮತ್ತೆ ನನ್ನ ಮನಸ್ಸಲ್ಲಿ ಬಲಿತದ್ದು ನಾಶಮಾಡಿಬಿಡಬೇಕೆಂಬ ಬಯಕೆ, ಹಿಂಸಾರಭಸಮತಿ, ಕೋಪೋದ್ರೇಕ? ನಾನದಕ್ಕೆ ಒಳಗಾದೆ. ಅವರಿಬ್ಬರೂ ತಮ್ಮ ಮಾತುಗಳನ್ನಿನ್ನೂ ಮುಗಿಸಿರಲಿಲ್ಲ, ಅವನು ಭಯಪಟ್ಟಿದ್ದ ಮತ್ತೊಂದೇನೋ ನಡೆದು ಅವರ ಮಾತನ್ನೆಲ್ಲ ಆಹುತಿ ತೆಗೆದುಕೊಂಡಿತು. ನಾನು ನಡೆಸಬೇಕೆಂದಿದ್ದುದಕ್ಕೆ ಅಡ್ಡಿ ಬಾರದಂತೆ ಎಚ್ಚರಿಕೆಯಿಂದ ಕಠಾರಿಯ ಕೈಯನ್ನಿನ್ನೂ ಅಡಗಿಸಿಕೊಂಡಿದ್ದ ನಾನು ಅವಳ ಬಳಿ ಧಾವಿಸಿ ಅವಳ ಎದೆಯಡಿ ತಿವಿದೆ. ಮೊದಲಿನಿಂದಲೂ ಆ ಜಾಗ ನನ್ನ ಗುರಿಯಾಗಿತ್ತು. ನಾನು ಅವಳೆಡೆಗೆ ಧಾವಿಸಿದ ರೀತಿಯನ್ನು ಗಮನಿಸಿದ ಅವನು? ಅದನ್ನು ನಾನವನಿಂದ ನಿರೀಕ್ಷಿಸಿರಲಿಲ್ಲ? ನನ್ನ ಕೈಯನ್ನು ಹಿಡಿದುಕೊಂಡು 'ಏನು ಮಾಡ್ತಾ ಇದ್ದೀರಿ ನೀವು! ... ಯಾರಾದ್ರೂ ಬನ್ನಿ ಕಾಪಾಡಿ' ಎಂದೂ ಜೋರಾಗಿ ಕೂಗಿದ.

ಅವನಿಂದ ಕೈಯನ್ನು ಬಿಡಿಸಿಕೊಂಡ ನಾನು ಅವನೆಡೆಗೆ ಮೌನದಿಂದ ಮುನ್ನುಗ್ಗಿದೆ. ಅವನ ಕಣ್ಣುಗಳು ನನ್ನವನ್ನು ಎದುರಿಸಿದವು, ತಕ್ಷಣವೇ ಅವನ ಮುಖವೆಲ್ಲ ಕಾಗದದ ಹಾಳೆಯಂತೆ ಬಿಳಿಚಿಕೊಂಡಿತು. ಅವನ ಕಣ್ಣುಗಳು ವಿಚಿತ್ರವಾಗಿ ಹೊಳೆದವು. ಆನಂತರ, ಮತ್ತೆ ಅನಿರೀಕ್ಷಿತವಾಗಿ, ಪಿಯಾನೋ ಕೆಳಗಿನಿಂದ ನುಸುಳಿಕೊಂಡು ಬಾಗಿಲ ಮೂಲಕ ತಪ್ಪಿಸಿಕೊಂಡ. ಅವನ ಹಿಂದೆಯೇ ನಾನೂ ಧಾವಿಸುವವನಿದ್ದೆ, ಆದರೆ ನನ್ನ ಎಡಗೈ

ಮೇಲೆ ಬಲವಾದ ಭಾರ ಬಿತ್ತು. ಅದು ಅವಳ ಕೈ. ಅದರಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದೆ, ಆದರೆ ಅವಳು ಮತ್ತಷ್ಟು ಬಿಗಿಗೊಳಿಸಿ ನನ್ನನ್ನು ಮುಂದಕ್ಕೆ ಬಿಡಲಿಲ್ಲ. ಈ ಅನಿರೀಕ್ಷಿತ ಅಡ್ಡಿ, ಅವಳ ಕೈಯ ಹಿಡಿತ ಮತ್ತವಳ ಹೇಸಿಕೆಯನ್ನುಂಟುಮಾಡುವ ಸ್ಪರ್ಶಗಳು ನನ್ನನ್ನು ಮತ್ತಷ್ಟು ಕೆರಳಿಸಿದುವು. ನಾನು ಹುಚ್ಚಾಗಿದ್ದಂತೆ, ಭಯಂಕರವಾಗಿ ಕಾಣುವಾಸೆ ಆವರಿಸಿದಂತೆ ಅನ್ನಿಸಿ ನನಗೆ ಖುಷಿ ಉಂಟಾಯ್ತು. ಬಲವನ್ನೆಲ್ಲ ಬಿಟ್ಟು ನನ್ನ ಎಡಗೈಯನ್ನು ಬೀಸಿದೆ, ನನ್ನ ಮುಷ್ಟಿ ನೇರವಾಗಿ ಅವಳ ಮುಖವನ್ನು ಗುದ್ದಿತು. ನೋವಿನಿಂದ ನರಳುತ್ತ ಅವಳು ನನ್ನ ಕೈಬಿಟ್ಟಳು. ಅವನನ್ನು ಬೆನ್ನಟ್ಟಬೇಕೆಂದು ಬಯಸಿದ್ದೆ, ಆದರೆ ಬರಿ ಕಾಲುಚೀಲ ಧರಿಸಿ ನನ್ನ ಹೆಂಡತಿಯ ಪ್ರೇಮಿಯ ಹಿಂದೆ ಓಡುವುದು ಹಾಸ್ಯಾಸ್ಪದವಾಗಿ ಕಂಡಿತು. ನಾನು ಹಾಸ್ಯಾಸ್ಪದವಾಗಬಾರದು, ರುದ್ರನಾಗಬೇಕು ಅನ್ನಿಸಿತು. ಭಯಾನಕ ಹುಚ್ಚಿನಲ್ಲಿದ್ದರೂ ನನ್ನ ಕೃತ್ಯ ಬೇರೆಯವರ ಮೇಲೆ ಏನು ಪರಿಣಾಮ ಬೀರೀತು ಎಂಬ ಬಗ್ಗೆ ಎಚ್ಚರದಿಂದಲೇ ಇತ್ತು, ನನ್ನ ನಡವಳಿಕೆಯನ್ನು ಒಂದಷ್ಟು ದಿಗ್ದರ್ಶಿಸುತ್ತಿದ್ದದ್ದೂ ಅದೇ. ನಾನವಳ ಕಡೆ ತಿರುಗಿದೆ. ಅವಳೋ ಸೋಫಾ ಮೇಲೆ ಬಿದ್ದುಕೊಂಡು, ತನ್ನ ಯಾತನೆಯ ಕಣ್ಣುಗಳನ್ನು ಕೈಗಳಿಂದ ಮುಚ್ಚಿಕೊಂಡಿದ್ದವಳು. ನನ್ನೆಡೆಗೆ ನೋಡಿದಳು. ಅವಳ ಕಣ್ಣುಗಳಲ್ಲಿ ಶತ್ರುವಿನ ಬಗೆಗಿನ ಭಯ ಮತ್ತು ದ್ವೇಷಗಳು ಒಡಮೂಡಿದ್ದವು, ತನ್ನನ್ನು ಹಿಡಿದ ಬೋನನ್ನು ಮೇಲೆತ್ತಿದವನ ಕಡೆ ಅದರಲ್ಲಿದ್ದ ಇಲಿ ನೋಡುವ ಭಾವದಿಂದ. ನನಗೆ ಅವಳ ಮುಖದಲ್ಲಿ ನನ್ನ ಬಗೆಗಿನ ಭಯ ಮತ್ತು ದ್ವೇಷಗಳೇ ಕಾಣಿಸುತ್ತಿತ್ತು. ಮತ್ತೊಬ್ಬನ ಬಗ್ಗೆ ಒಲವು ತುಂಬಿಕೊಳ್ಳುವ ಕಣ್ಣುಗಳಲ್ಲಿ ನನ್ನ ಬಗ್ಗೆ ಭಯ ಮತ್ತು ದ್ವೇಷಗಳು! ಅವಳು ಮಾತಾಡದಿದ್ದರೆ ಆಗಲೂ ನಾನು ಹತೋಟಿ ಸಾಧಿಸಿಕೊಂಡು ಮುಂದಿನದಕ್ಕೆ ಅವಕಾಶ ಕೊಡದಿರಬಹುದಾಗಿತ್ತು, ಆದರೆ ಇದ್ದಕ್ಕಿದ್ದಂತೆ ಅವಳು ಮಾತಿಗೆ ತೊಡಗಿ, ನಾನು ಕಠಾರಿ ಹಿಡಿದ ಕೈಯನ್ನು ಹಿಡಿದುಕೊಳ್ಳುವ ಸಾಹಸ ಮಾಡಿದಳು: 'ಎಚ್ಚರಗೊಳ್ಳಿ, ಏನು ಮಾಡ್ತಿದ್ದೀರಿ ನೀವು? ಏನೂ ಆಗಿಲ್ಲ, ಪ್ರಮಾಣ ಮಾಡಿ ಹೇಳ್ತೀನಿ, ಎಂಥದೂ ನಡೆದಿಲ್ಲ.' ಆಗಲೂ ಮುಂದುವರಿಯೋದಕ್ಕೆ ಹಿಂದುಮುಂದು ನೋಡ್ತಿದ್ದೆನೇನೋ, ಆದರೆ ಅವಳ ಕೊನೆಯ ನುಡಿಗಳು? ಅದಕ್ಕೆ ವ್ಯತಿರಿಕ್ತವಾಗಿ? ಎಲ್ಲ ನಡೆದುಹೋಗಿದೆ? ಅನ್ನೋ ಅರ್ಥವನ್ನ ಆರೋಪಿಸುವಂತೆ ನನ್ನ ಪ್ರಚೋದಿಸಿದವು. ಅದಕ್ಕೆ ತಕ್ಕ ಉತ್ತರ ಕೊಡಬೇಕೆಂದುಕೊಂಡುಕೊಂಡೆ. ಆ ಉತ್ತರ ಆಗಿನ ನನ್ನ ಮನಃಸ್ಥಿತಿಗೆ ಅನುಗುಣವಾಗಿತ್ತು. ಕೋಪಕ್ಕೂ ತನ್ನದೇ ಆದ ನಿಯಮ ಗಳಿವೆಯಲ್ಲ!

'ಸುಳ್ಳು ಬೊಗಳಬೇಡ, ನಾಯಿ!' ಎಂದು ಅರಚಿ, ಅವಳ ತೋಳನ್ನು ಬಿಗಿಯಾಗಿ ಹಿಡಿದುಕೊಂಡೆ, ಆದರೆ ಅವಳು ತಿರುಚಿಕೊಂಡು ಹಿಡಿತದಿಂದ ಬಿಡಿಸಿಕೊಂಡಳು. ಆಗಲೂ ಕೈಯಲ್ಲಿದ್ದ ಕಠಾರಿಯನ್ನು ಬಿಟ್ಟುಕೊಡದೆ ಅವಳ ಕತ್ತನ್ನು ಎಡಗೈಯಿಂದ ಹಿಡಿದುಕೊಂಡು ಹಿಂದಕ್ಕೆ ದಬ್ಬಿ ಹಿಸುಕತೊಡಗಿದೆ. ಎಂಥ ಗಡಸು ಕತ್ತು ಅದು! ... ತನ್ನೆರಡು ಕೈಗಳಿಂದ ನನ್ನ ಕೈಯನ್ನು ಹಿಡಿದುಕೊಂಡು ಕತ್ತನ್ನು ಬಿಡಿಸಿಕೊಳ್ಳಲು

ಪ್ರಯತ್ನಪಟ್ಟಳು. ನಾನೂ ಅದಕ್ಕಾಗಿಯೇ ಕಾಯ್ತಾ ಇದ್ದೇನೋ ಅನ್ನೋ ಹಾಗೆ ಬಲವನ್ನೆಲ್ಲ ಬಿಟ್ಟು ಅವಳ ಪಕ್ಕೆಗಳಲ್ಲಿ ಕಠಾರಿಯಿಂದ ಚುಚ್ಚಿದೆ.

"ಕೋಪಾವೇಶದಲ್ಲಿ ತಾನೇನು ಮಾಡಿದೆ ಅನ್ನೋದು ಜ್ಞಾಪಕ ಇಲ್ಲ ಅನ್ನೋರ ಮಾತು ಸುಳ್ಳು, ಬುರುಡೆ. ನಾನೇನು ಮಾಡಿದೆ ಅನ್ನೋದೆಲ್ಲ ನಂಗೆ ಜ್ಞಾಪಕ ಇತ್ತು, ಒಂದು ಕ್ಷಣವೂ ನಾನು ಮೈಮರೆಯಲಿಲ್ಲ. ನನ್ನ ಕೋಪೋದ್ರೇಕ ಹೆಚ್ಚಿದಷ್ಟೂ ನನ್ನ ಪ್ರಜ್ಞೆ ಹೆಚ್ಚಿಚ್ಚು ಸ್ಪಷ್ಟವಾಯಿತು. ಹೀಗಾಗಿ ನನಗೆಲ್ಲ ನೆನಪಿನಲ್ಲಿದೆ. ಅಷ್ಟೇ ಅಲ್ಲ ನಾನು ಕೃತ್ಯ ಎಸಗೋ ಮುಂಚಿನ ಕ್ಷಣವೇ ನನಗೆಲ್ಲ ಸ್ಪಷ್ಟವಾಗ್ತಿತ್ತು, ಹೀಗಾಗಿ ನನ್ನಲ್ಲಿ ಪಶ್ಚಾತ್ತಾಪ ಹುಟ್ಟಿ ಯಾವಾಗಬೇಕಾದ್ರೂ ಮಾಡೋದನ್ನು ನಿಲ್ಲಿಸಬಹುದಾಗಿತ್ತು. ಪಕ್ಕೆಗಳ ಕೆಳಗೆ ತಿವೀತಿದ್ದೀನಿ ಅದು ಒಳಗೆ ಹೋಗತ್ತೆ ಅನ್ನೋದು ನಂಗೆ ಅರಿವಿತ್ತು. ನಾನು ಹಾಗೆ ಮಾಡೋವಾಗ ನಾನೊಂದು ಘೋರಕೃತ್ಯ ಮಾಡ್ತಿದ್ದೀನಿ ಅದರ ಪರಿಣಾಮಗಳೇನು ಅಂತ ಹಿಂದೆಂದಿಗಿಂತಲೂ ಚೆನ್ನಾಗಿ ನಂಗೆ ಗೊತ್ತಿತ್ತು. ಆದರೆ ಅದೆಲ್ಲ ಮಿಂಚಿನಂಥ ಹೊಳಹುಗಳು, ಅದರ ಮರುಕ್ಷಣವೇ ಕಾರ್ಯ ನಡೀತಿತ್ತು. ನನ್ನ ಕೃತ್ಯದ ಪರಿ ನಂಗೆ ಸ್ಫುಟವಾಗಿ ಅರಿವಿತ್ತು. ಅವಳ ಒಳಕವಚ ಅಡ್ಡಿಪಡಿಸ್ತಿದ್ದದ್ದು ನನ್ನ ಅರಿವಿಗೆ ಬಂದದ್ದು, ಆಮೇಲೆ ಮೃದುವಾದ ಕಡೆ ತಿವಿದದ್ದು ಈಗಲೂ ನೆನಪಿದೆ, ಕಠಾರಿಯನ್ನವಳು ಹಿಡಿದುಕೊಂಡಳು, ಕೈ ಗಾಯವಾಗಿ ಬಿಗಿಯಾಗಿ ಹಿಡಿದುಕೊಳ್ಳಲಾಗಲಿಲ್ಲ.

"ಎಲ್ಲ ಆದ ತುಂಬ ಕಾಲವಾದ ಮೇಲೆ, ಸೆರೆಮನೇಲಿ ನನ್ನ ನೈತಿಕಪ್ರಜ್ಞೆ ಎಚ್ಚರಗೊಂಡಾದ ಬಳಿಕ, ಆ ಕ್ಷಣದ ಬಗ್ಗೆ ನೆನಪಿಸಿಕೊಂಡೆ, ಆಲೋಚಿಸಿದೆ. ಕೃತ್ಯ ಎಸಗೋದಕ್ಕೆ ಒಂದು ಕ್ಷಣ, ಒಂದೇ ಒಂದು ಕ್ಷಣ ಮುಂಚೆ ನಾನು ಅಸಹಾಯಕ ಹೆಣ್ಣೊಬ್ಬಳನ್ನ, ನನ್ನ ಹೆಂಡತಿಯನ್ನೇ ಕೊಲೆ ಮಾಡ್ತಿದ್ದೀನಿ, ಮಾಡಿಬಿಟ್ಟೆ ಅನ್ನೋದರ ಘೋರ ಅರಿವು ನಂಗಿತ್ತು! ಆ ಅರಿವಿನ ಭಯಂಕರತೆ ಅರಿವಾಗಿ ತಿವಿದ ತಕ್ಷಣವೇ ಅದನ್ನ ಹೊರತೆಗೆದು, ಮಾಡಿದ್ದನ್ನ ನಿಲ್ಲಿಸೋ ಹಾಗಾದದ್ದು ಮಬ್ಬುಮಬ್ಬಾಗಿ ನೆನಪಿದೆ. ಏನಾಗತ್ತೆ, ಏನು ಪರಿಹಾರ ಮಾಡ್ಬಹುದು ಅಂತ ಆಲೋಚಿಸ್ತಾ ಒಂದರ್ಧ ಕ್ಷಣ ನಿಶ್ಚಲನಾಗಿ ನಿಂತೆ.

"ಧಿಗ್ಗನೆ ಮೇಲೆದ್ದ ಅವಳು, 'ನರ್ಸ್, ಅವರು ನನ್ನ ಕೊಂದುಬಿಟ್ಟರು!' ಅಂತ ಕಿರುಚಿದಳು. ಗಲಾಟೆ ಕೇಳಿದ ನರ್ಸ್ ಬಂದು ಬಾಗಿಲ ಬಳಿ ನಿಂತಳು. ನಾನೂ ನೋಡ್ತಾ, ಆದದ್ದರ ಬಗ್ಗೆ ನಂಬಿಕೆ ಬರದೆ ನಿಂತಿದ್ದೆ. ಆದರೆ ಅವಳ ಒಳಕವಚದ ಕೆಳಗಿನಿಂದ ರಕ್ತ ಚಿಮ್ಮಿ ಬಂತು. ಆಗಲೇ ನಂಗೆ ಅರಿವಾದ್ದು ಆಗಿರೋದನ್ನ ತಪ್ಪಿಸೋಕ್ಕೆ ಆಗಲ್ಲ ಅಂತ. ನಾನೇನು ಮಾಡಬೇಕೂಂತಿದ್ದೆನೋ ಅದನ್ನ ಮಾಡಿಯಾಗಿದೆ, ಇನ್ನೇನೂ ಮಾಡ್ಬೇಕಾಗಿಲ್ಲ ಅಂತ ನಿರ್ಧರಿಸಿದೆ. ಅವಳು ಕೆಳಗೆ ಕುಸಿದು, ನರ್ಸ್ 'ಅಯ್ಯೋ ದೇವರೇ!' ಅಂತ ಕೂಗಿ ಅವಳ ಹತ್ತಿರ ಧಾವಿಸೋವರೆಗೂ ಕಾದೆ, ಆಮೇಲಷ್ಟೇ ನಾನು ಕೈಯಲ್ಲಿದ್ದ ಕಠಾರಿಯನ್ನ ಎಸೆದು ರೂಮಿನಿಂದ ಹೊರಬಿದ್ದದ್ದು.

" 'ನಾನು ಉದ್ವೇಗಕ್ಕೊಳಗಾಗಬಾರ್ದು, ನಾನು ಮಾಡಿದ್ದೇನು ಅಂತ ಗೊತ್ತಿರಬೇಕು' ಅಂದುಕೊಂಡೆ, ಅವಳ ಕಡೆ ಅಥವಾ ನರ್ಸ್ ಕಡೆ ನೋಡದೆ. ನರ್ಸ್

ಗೋಳಾಡ್ತಿದ್ದಳು, ಕೆಲಸದವಳನ್ನ ಕರೀತಿದ್ದಳು. ನಾನು ಹೋಗಿ ಕೆಲಸದೋಳನ್ನ ಕಳಿಸಿ ನನ್ನ ಓದುಕೋಣೆಗೆ ಹೋದೆ. 'ಈಗೇನು ಮಾಡಲಿ ನಾನು?' ಅಂದುಕೊಂಡೆ, ತಕ್ಷಣ ಮಾಡಬೇಕಾದ್ದೇನು ಅಂತ ಹೊಳೀತು. ಓದುಕೋಣೆಯಲ್ಲಿ ನೇರವಾಗಿ ಗೋಡೆ ಕಡೆ ಹೋಗಿ ಒಂದು ರಿವಾಲ್ವರ್ ತಗೊಂಡು ಪರೀಕ್ಷೆ ಮಾಡ್ದೆ? ಅದು ಲೋಡ್ ಆಗಿತ್ತು? ಅದನ್ನ ಮೇಜಿನ ಮೇಲಿಟ್ಟೆ. ಆಮೇಲೆ ಸೋಫಾ ಹಿಂದೆ ಬಿದ್ದಿದ್ದ ಕಠಾರಿ ಒರೆಯನ್ನು ತೆಗೆದುಕೊಂಡು ಅಲ್ಲೇ ಕೂತುಕೊಂಡೆ.

"ಹೀಗೇ ಸುಮ್ಮನೆ ತುಂಬ ಹೊತ್ತು ಕೂತಿದ್ದೆ, ನನ್ನ ಮನಸ್ಸಿಗೆ ಬೇರೇನೂ ತೋಚ್ತಾನೇ ಇರಲಿಲ್ಲ. ಹೊರಗಡೆ ಗಡಿಬಿಡಿಯ ಸದ್ದಾದದ್ದು ಕೇಳಿಸಿತು. ಯಾರೋ ಧಾವಿಸಿ ಬಂದದ್ದು, ಮತ್ತಿನ್ನೇನೋ ಆದ ಸದ್ದು ಕೇಳಿಸ್ತು. ಎಗೋರ್ ಕೈಲಿ ನನ್ನ ಬೆತ್ತದ ಪೆಟ್ಟಿಗೆ ಹಿಡಿದುಕೊಂಡು ಬಂದ ಸದ್ದು ಕೇಳಿಸ್ತು, ಅವನು ಒಳಗೆ ಬಂದದ್ದನ್ನೂ ನೋಡಿದೆ. ಯಾರಿಗಾದ್ರೂ ಅದು ಬೇಕಾಗಿತ್ತೇನೋ ಅನ್ನೋ ಹಾಗೆ!

" 'ಏನಾಯ್ತು ಅಂತ ಕೇಳಿದ್ಯಾ ನೀನು?' ಅಂತ ವಿಚಾರಿಸಿದೆ. 'ಯಾರ್ಹತ್ರಾನಾದ್ರೂ ಪೊಲೀಸ್‌ಗೆ ಈ ವಿಷಯ ತಿಳಿಸಕ್ಕೆ ಹೇಳು' ಅಂತಲೂ ಸೂಚನೆ ಕೊಟ್ಟೆ. ಅವನೇನೂ ಹೇಳಲಿಲ್ಲ. ಸುಮ್ಮನೆ ಹೊರಟು ಹೋದ. ನಾನು ಮೇಲೆದ್ದು ಬಾಗಿಲನ್ನು ಭದ್ರಪಡಿಸಿ, ಸಿಗರೇಟು-ಬೆಂಕಿಕಡ್ಡಿಗಳನ್ನು ಹೊರತೆಗೆದು ಹೊಗೆ ಸೇದತೊಡಗಿದೆ. ನಾನಿನ್ನೂ ಒಂದು ಸಿಗರೇಟು ಸೇದಿ ಮುಗಿಸುವ ಹೊತ್ತಿಗೆ ನಿದ್ದೆ ನನ್ನನ್ನಾವರಿಸಿತು. ಒಂದೆರಡು ಗಂಟೆಗಳ ಕಾಲ ನಿದ್ದೆ ಮಾಡಿರ್ಬೇಕು, ನಾನು ಮತ್ತು ಅವಳು ಆತ್ಮೀಯರಾಗಿದ್ದಂತೆ, ಜಗಳವಾಡಿದರೂ ಮತ್ತೆ ಒಂದಾಗ್ತಿದ್ದ ಹಾಗೆ, ನಮ್ಮಿಬ್ಬರ ನಡುವೆ ವಿರಸ ಇದ್ರೂ ಹೊಂದಿಕೊಂಡಿದ್ದಂತೆ ಕನಸು ಬಿದ್ದದ್ದು ನೆನಪಿಗೆ ಬರತ್ತೆ. ಯಾರೋ ಬಾಗಿಲು ಬಡಿದ ಸದ್ದಾಗಿ ನನಗೆ ಎಚ್ಚರವಾಯ್ತು. 'ಪೊಲೀಸ್ನೋರೇ ಇರ್ಬೇಕು' ಅಂದುಕೊಂಡೆ. ಮೇಲೆದ್ದೆ, 'ನಾನು ಕೊಲೆ ಮಾಡಿರ್ಬೇಕು, ಅವಳನ್ನೇ ಅಂತ ಕಾಣತ್ತೆ. ಏನಾದ ಹಾಗಾಯ್ತು' ಅನ್ನಿಸ್ತು. ಮತ್ತೆ ಬಾಗಿಲು ಬಡಿದ ಸದ್ದು. ನಾನು ಪ್ರತಿಕ್ರಿಯೆ ತೋರಿಸಲಿಲ್ಲ, ಆದರೆ ಮನಸ್ಸು 'ಅದು' ನಡೀತೋ ಇಲ್ಲವೋ ಅನ್ನೋದರ ಬಗ್ಗೆ ಒಂದು ನಿರ್ಧಾರಕ್ಕೆ ಬರಲು ತವಕಿಸುತ್ತಿದ್ದೆ. ಅದು ನಡೆದಿತ್ತು! 'ನಿಜ, ಅವಳ ಒಳ ಉಡುಪು ಅಡ್ಡಿಯಾಗಿದ್ದದ್ದು, ಆಮೇಲೆ ನಾನು ಬೇರೆಡೆ ತಿವಿದದ್ದು ನೆನಪಿಗೆ ಬಂದು ಮೈಯ್ಯಲ್ಲೆಲ್ಲ ಚಳುಕು ಸುಳಿದಾಡಿತು. 'ಹೌದು, ನಡೆದಿದೆ. ನಿಜ, ನನ್ನ ಬಗ್ಗೆ ಈಗ ನಿರ್ವಿಕಾರವಾಗಿರ್ಬೇಕು' ಅಂದುಕೊಂಡೆ. ನಾನು ಹೀಗೆ ಯೋಚಿಸಿದ್ದು ಆತ್ಮಹತ್ಯೆ ಮಾಡಿಕೊಳ್ಳಬಾರ್ದು ಅನ್ನೋದಕ್ಕೆ. ಆದ್ರೂ ಮೇಲೆದ್ದವನು ಕೈಲಿ ರಿವಾಲ್ವರ್ ತಗೊಂಡೆ. ವಿಚಿತ್ರ! ಎಷ್ಟೋ ಸಲ ನಾನು ಆತ್ಮಹತ್ಯೆಯ ಅಂಚಿಗೆ ಬಂದಿದ್ದದ್ದು, ಅವತ್ತು ಕೂಡ ರೈಲಿನಲ್ಲಿ ಅದು ಸುಲಭವಾಗಿ ಕಂಡದ್ದು, ಅವಳನ್ನು ಅದು ಹೇಗೆ ತಲ್ಲಣಗೊಳಿಸತ್ತೆ ಅನ್ನಿಸಿದ್ದು ಎಲ್ಲ ನೆನಪಿಗೆ ಬಂತು; ಆದರೆ ಈಗ ನಂಗೆ ಆತ್ಮಹತ್ಯೆ ಮಾಡಿಕೊಳ್ಳೋದಿರ್ಲಿ, ಅದರ ಯೋಚನೆ ಕೂಡ ಅಸಾಧ್ಯವಾಗಿತ್ತು. 'ನಾನೇಕೆ ಕೊಂದುಕೋಬೇಕು?' ಅಂತ ಪ್ರಶ್ನಿಸಿಕೊಂಡೆ, ಆದರೆ ಅದಕ್ಕೆ ಉತ್ತರವಿರಲಿಲ್ಲ. ಈಗ

ಬಾಗಿಲ ಬಡಿತ ಇನ್ನಷ್ಟು ಜೋರಾಯ್ತು. 'ಯಾರು ಹೀಗೆ ಬಾಗಿಲು ಬಡೀತಿರೋರು ಅನ್ನೋದನ್ನ ಮೊದಲು ನೋಡಬೇಕು. ಮಿಕ್ಕನಾದ್ದಕ್ಕೆ ಇನ್ನೂ ಸಮಯ ಇದೆ' ಅಂದುಕೊಂಡೆ. ರಿವಾಲ್ವರ್ ಕೆಳಗಿಟ್ಟು ಅದರ ಮೇಲೆ ಒಂದು ಕಾಗದದ ಹಾಳೆಯನ್ನ ಮುಚ್ಚಿದೆ. ಬಾಗಿಲ ಬಳಿ ಹೋಗಿ ಚಿಲಕ ತೆಗೆದೆ. ಎದುರುಗಿದ್ದವಳು ನನ್ನ ಹೆಂಡತಿಯ ಅಕ್ಕ, ಮೂರ್ಖ ವಿಧವೆ. 'ವಾಸ್ಯಾ ಏನಾಯ್ತು?' ಅಂದಳು; ಸದಾ ಸಿದ್ಧವಾಗಿದ್ದ ನೀರು ಕಣ್ಣಿಂದ ಉದುರಲು ಶುರುವಾಯ್ತು.

" 'ಏನು ಬೇಕು?' ಅಂತ ಒರಟಾಗಿ ಕೇಳಿದೆ. ಅವಳ ಬಗ್ಗೆ ಒರಟಾಗಿರಬಾರದು, ಅದಕ್ಕೆ ಕಾರಣವೇ ಇಲ್ಲ ಅನ್ನೋದು ನಂಗೆ ಗೊತ್ತಿತ್ತು. ಆದರೇನು, ಬೇರೆ ಧಾಟೀಲಿ ಮಾತಾಡೋಕೆ ಆಗಲಿಲ್ಲ. 'ವಾಸ್ಯಾ ಅವಳು ಸಾಯ್ತಿದಾಳೆ! ಇವಾನ್ ಜಕಾರ್ಯಿಚ್ ಹಾಗೆ ಹೇಳಿದರು.' ಇವಾನ್ ಜಕಾರ್ಯಿಚ್ ಅವಳ ಡಾಕ್ಟರು.

" 'ಅವರು ಇಲ್ಲಿದಾರೇನು' ಅಂತ ವಿಚಾರಿಸಿದೆ. ಅವಳ ಬಗ್ಗೆ ನನ್ನಲ್ಲಿದ್ದ ದ್ವೇಷ ಮತ್ತೆ ಭುಗಿಲೆದ್ದಿತು. 'ಏನಾಯ್ತೀಗ?' ಅಂತ ಕೇಳಿದೆ.

'ವಾಸ್ಯಾ, ಅವಳ ಹತ್ತಿರ ಹೋಗಿ, ಅಯ್ಯೋ ಎಷ್ಟು ಭೀಕರವಾಗಿದೆ!' ಅಂದಳು.

"ಹೋಗಬೇಕೇ ಅಂತ ಕೇಳಿಕೊಂಡೆ, ಹೋಗ್ಬೇಕು ಅಂತ ತಕ್ಷಣವೇ ನಿರ್ಧರಿಸಿದೆ. ಗಂಡನೇ ಹೆಂಡತೀನ ಕೊಂದ ಸಂದರ್ಭದಲ್ಲಿ ಪ್ರಾಯಶಃ ಹೀಗಾಗತ್ತೆ, ಅವನು ಅವಳ ಹತ್ರ ಹೋಗಬೇಕು. 'ಆಗಿರೋದು ಅದೇ ಆದ್ರೆ ಅವಳ ಹತ್ರ ಹೋಗ್ಬೇಕು' ಅಂದುಕೊಂಡೆ. ಅವಶ್ಯಕ ಅನ್ನಿಸಿದರೆ ಅದೂ ಸಾಧ್ಯವಾಗ್ಬೇಕು' ಅಂತಲೂ ಅಂದುಕೊಂಡೆ, ನನ್ನ ಆತ್ಮಹತ್ಯೆಗೆ ಸಂಬಂಧಿಸಿದ ಹಾಗೆ. ಅವಳನ್ನ ನೋಡಕ್ಕೆ ಹೋದೆ. ಈಗ ಬೈಗುಳ, ಮೂತಿ ತಿವಿತ ಎಲ್ಲ ಎದುರಿಸಬೇಕಾಗಬಹುದು, ಆದ್ರೆ ಯಾವುದಕ್ಕೂ ಬಗ್ಗಬಾರದು ಅನ್ನಿಸಿತು. 'ಸ್ವಲ್ಪ ಇರಿ. ಬೂಟುಗಳನ್ನು ಧರಿಸದೇ ಬರೋದು ಹೇಗೆ, ಹೋಗ್ಲಿ ಚಪ್ಪಲೀನಾದ್ರೂ ಹಾಕ್ಕೋತೀನಿ' ಅಂತ ಅವಳ ಅಕ್ಕನಿಗೆ ಹೇಳಿದೆ.

## 26

"ಅದ್ಭುತ ಅಂದರೆ, ನಾನು ನನ್ನ ಓದುಕೋಣೆಯಿಂದ ಹೊರಟು ಮನೆಯ ಪರಿಚಿತವಾದ ಇತರ ಭಾಗಗಳ ಮೂಲಕ ಹೋಗುತ್ತಿರುವಾಗ ಏನೂ ಆಗಿಲ್ಲವೆಂಬ ಭರವಸೆ ನನ್ನಲ್ಲಿ ಮತ್ತೆ ಚಿಗುರಿತು. ಆದರೆ ಡಾಕ್ಟರರ ಅಯೋಡೋಫಾರ್ಮ್ ಮತ್ತು ಕಾರ್ಬಾಲಿಕ್‌ಗಳ ಕಿಮಟು ವಾಸನೆ ಮೂಗಿಗೆ ಬಡಿದು ನನಗೆ ಗಾಬರಿ ಹುಟ್ಟಿಸಿತು. ಹೋಗುವಾಗ ಪುಟಾಣಿ ಲೀಸಾ ಕಣ್ಣಿಗೆ ಬಿದ್ದಳು. ನನ್ನೆಡೆಗೆ ಅವಳು ಭಯಗ್ರಸ್ತ ಕಣ್ಣುಗಳಿಂದ ನೋಡಿದಳು. ಎಲ್ಲ ಐದು ಮಂದಿ ಮಕ್ಕಳು ಅಲ್ಲಿ ಒಟ್ಟು ಸೇರಿ ನನ್ನ ಕಡೆ ಗಾಬರಿಯಿಂದ ನೋಡುತ್ತಿದ್ದಾರೇನೋ ಅನ್ನಿಸ್ತು. ಬಾಗಿಲ ಬಳಿ ಹೋದೆ, ಕೆಲಸದಾಕೆ ಒಳಗಿನಿಂದ ಚಿಲಕ ತೆಗೆದು ತಾನು ಹೊರಗೆ ಹೋದಳು. ನನ್ನ ಕಣ್ಣಿಗೆ ಮೊದಲು ಬಿದ್ದದ್ದು

ಅಂದರೆ ಕುರ್ಚಿಯ ಮೇಲೆ ಎಸೆದಿದ್ದ ರಕ್ತದಿಂದ ಕಡುಗೆಂಪಾದ ತಿಳಿ ಬಣ್ಣದ ಬಟ್ಟೆಗಳು. ಅವಳು ಜೋಡಿ ಹಾಸಿಗೆಯ ಮೇಲೆ ಒಂದೆಡೆ ಮಂಡಿಗಳನ್ನು ಮಡಿಸಿ ಮೇಲಕ್ಕಿಟ್ಟುಕೊಂಡು ಮಲಗಿದ್ದಳು (ನಾನು ಮಲಗುವ ಕಡೆ, ಯಾಕಂದರೆ ಅಲ್ಲಿಂದ ಸುಲಭವಾಗಿ ಕೆಳಗಿಳಿಯಬಹುದಾಗಿತ್ತು). ದಿಂಬುಗಳ ಮೇಲೆ ತಲೆಯಾನಿಸಿ ಇಳಿಜಾರಾಗಿ ಮಲಗಿದ್ದಳು, ಅವಳ ಡ್ರೆಸಿಂಗ್ ಜಾಕೆಟ್ ಅನ್ನು ಸಡಿಲಿಸಲಾಗಿತ್ತು. ಗಾಯದ ಮೇಲೆ ಏನನ್ನೋ ಮುಚ್ಚಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ನನ್ನ ಕಣ್ಣನ್ನು ಸೆಳೆದದ್ದೆಂದರೆ ಗೀಚುಗಾಯಗೊಂಡು ಊದಿದ್ದ ಮುಖ, ಹಸಿರುಗಟ್ಟಿದ್ದ ಮೂಗು ಮತ್ತು ಕಣ್ಣುಗಳ ಕೆಳಭಾಗ. ನನ್ನನ್ನು ತಡೆಯಲು ಅವಳು ಪ್ರಯತ್ನಪಟ್ಟಾಗ ನಾನು ಗುದ್ದಿದ್ದೆನಲ್ಲ, ಅದರ ಫಲ ಅದು. ಅವಳ ಮುಖದಲ್ಲಿ ಚೆಲುವಿನ ಲವಲೇಶವೂ ಇರಲಿಲ್ಲ, ಅದರ ಬದಲು ಎಂಥದೋ ಅನಾಕರ್ಷಣೆ ಕಾಣಿಸಿತು. ನಾನು ಹೊಸಿಲಲ್ಲೇ ನಿಂತೆ. 'ಹತ್ತಿರ ಹೋಗಿ' ಅಂದರು ಅವಳ ಅಕ್ಕ. ಅವಳು ತನ್ನ ತಪ್ಪು ಒಪ್ಪಿಕೋತಾಳೆ ಅಂದುಕೊಂಡೆ. 'ನಾನವಳನ್ನ ಕ್ಷಮಿಸಿಬಿಡಲೇ? ಅದೇ ಸರಿ, ಅವಳು ಸಾಯೋ ಸ್ಥಿತೀಲಿದಾಳೆ, ಕ್ಷಮಿಸಬಹುದು' ಅಂದುಕೊಂಡೆ, ಉದಾರತೆಯನ್ನು ಮೆರೆಯುವವನ ಹಾಗೆ. ಅವಳ ಸನಿಹ ಹೋದೆ. ಬಹು ಕಷ್ಟದಿಂದ ತನ್ನ ಕಣ್ಣುಗಳನ್ನು ನನ್ನೆಡೆಗೆ ತಿರುಗಿಸಿದಳು. ಅವುಗಳಲ್ಲಿ ಒಂದು ಕಪ್ಪಗಿತ್ತು. ಬಹು ಪ್ರಯಾಸದಿಂದ ತೊದಲು ನುಡಿಯಾಡಿದಳು: 'ನೀವಂದುಕೊಂಡಂತೆ, ಕೊಂದೇಬಿಟ್ಟಿರಲ್ಲ .. ..' ಅಂದಳು. ಆ ನೋವಿನಲ್ಲೂ, ಸಾವಿನ ಹೊಸಿಲಲ್ಲೂ ಅವಳ ಮುಖದ ಮೇಲೆ ನನಗೆ ತೀರ ಪರಿಚಿತವಾಗಿದ್ದ ನನ್ನ ಬಗೆಗಿನ ಗಾಢ ದ್ವೇಷದ ಭಾವನೆ ಮಡುಗಟ್ಟಿತ್ತು. ಅವಳು ಮುಂದುವರಿದೆಂದಳು: 'ನಿಮ್ಮ ಹತ್ತಿರ ಮಕ್ಕಳನ್ನ ಬಿಟ್ಟಿರಲಾರೆ. ಅವಳು ಕರೆದುಕೊಂಡು ಹೋಗ್ತಾಳೆ' ಅಂತ ತನ್ನ ಅಕ್ಕನ ಕಡೆ ಕಣ್ಣು ಹೊರಳಿಸಿದಳು. ನನಗೆ ಆಗ ಬಹು ಮುಖ್ಯವಾಗಿ ಕಂಡದ್ದು ತನ್ನ ಮಾತಿನಡಿಯಲ್ಲಿ ಅವಳು ಹುದುಗಿಸಿದ್ದ ಅಪರಾಧ ಮತ್ತು ದ್ರೋಹಗಳು.

" 'ನೀವೇನು ದೊಡ್ಡ ಕೆಲಸ ಮಾಡಿದ್ದೀರಿ ನೋಡಿ' ಅಂದಳು ಬಾಗಿಲ ಕಡೆ ನೋಡಿ ಬಿಕ್ಕುತ್ತ. ಬಾಗಿಲುವಾಡದ ಬಳಿ ಅವಳ ಅಕ್ಕ ಇದ್ದರು, ಜೊತೆಯಲ್ಲಿ ಮಕ್ಕಳು. 'ಹ್ಞೂ, ನೋಡಿ, ಏನು ಮಾಡಿಬಿಟ್ಟಿರಿ.' ನಾನು ಮಕ್ಕಳ ಕಡೆ ನೋಡಿದೆ, ಆಮೇಲೆ ಅವಳ ಗಾಯಗೊಂಡು ವಿಕಾರವಾದ ಮುಖದತ್ತ. ಮೊಟ್ಟ ಮೊದಲ ಬಾರಿಗೆ ನನ್ನನ್ನೇ ಮರೆತಿದ್ದೆ, ನನ್ನ ಹಕ್ಕುಗಳನ್ನ, ನನ್ನ ಹೆಮ್ಮೆಯನ್ನ ಮರೆತೆ. ಮೊದಲ ಬಾರಿಗೆ ಅವಳಲ್ಲಿ ಒಂದು ಮಾನವ ಜೀವಿಯನ್ನು ಕಂಡೆ. ಅದೆಲ್ಲ ನನ್ನನ್ನ, ನನ್ನ ಹೊಟ್ಟೆಕಿಚ್ಚನ್ನ ಕ್ಷುಲ್ಲಕಗೊಳಿಸಿತ್ತು, ನಾನು ಮಾಡಿದ ಕೃತ್ಯವೇ ಮುಖ್ಯವಾಗಿ ಕಾಣಿಸಿತು. ಅವಳ ಕೈಗಳ ಮೇಲೆ ಮುಖವಿಟ್ಟು, 'ನನ್ನ ಕ್ಷಮಿಸು' ಅಂತ ಹೇಳಬೇಕನ್ನಿಸಿತು; ಆದರೆ ಬಾಯಿಂದ ಮಾತೇ ಹೊರಡಲಿಲ್ಲ.

"ತನ್ನ ಕಣ್ಣುಗಳನ್ನು ಮುಚ್ಚಿಕೊಂಡು ಮೌನವಾದಳು; ಹೆಚ್ಚು ಮಾತಾಡುವ ತ್ರಾಣವೇ ಅವಳಲ್ಲಿರಲಿಲ್ಲ. ಆನಂತರ ಅವಳ ವಿಕಾರಗೊಂಡ ಮುಖ ನಡುಗಿತು, ಗಂಟಿಕ್ಕಿಕೊಂಡಿತು. ನನ್ನನ್ನು ದುರ್ಬಲತೆಯಿಂದ ನೂಕಿದಳು.

'ಅದೆಲ್ಲ ಯಾಕಾಯಿತು?'

'ದಯವಿಟ್ಟು, ನನ್ನ ಕ್ಷಮಿಸು' ಅಂದೆ.

'ಕ್ಷಮಿಸೋದಾ? ಎಂಥ ಅವಿವೇಕ! ... ಸಾಯೋದಕ್ಕಲ್ಲ! ...' ಎಂದು ಕೂಗಿದಳು, ಮೇಲೇಳಲು ಪ್ರಯತ್ನಿಸುತ್ತ, ಆಗಲೂ ಅವಳ ಹೊಳೆಯೋ ಕಣ್ಣುಗಳು ನನ್ನ ಕಡೆ ತಿವೀತಿದ್ದವು. 'ಕೊನೆಗೂ ನೀವಂದುಕೊಂಡ ಹಾಗೇ ಮಾಡಿಬಿಟ್ಟರಿ! ... ನಿಮ್ಮನ್ನ ಕಂಡ್ರೆ ನಂಗಾಗಲ್ಲ, ಆ ಆ ಆ ... ' ಅಂದಳು. ಒಂದು ರೀತಿಯ ಸನ್ನಿ ಅವಳಿಗೆ, ಯಾವುದರಿಂದಲೋ ಹೆದರಿಕೊಂಡಿದ್ದಳು. 'ಶೂಟ್ ಮಾಡಿ, ನಾನೇನೂ ಹೆದರಲ್ಲ! .. ನನ್ನನ್ನಲ್ಲ, ಎಲ್ರನ್ನೂ ಕೊಂದುಬಿಡಿ! ... ಅವರು ಹೋದರು, ಹೊರಟುಹೋದರು ... '

"ಆನಂತರ ಆ ಸನ್ನಿ ಮುಂದುವರಿಯಿತು. ಯಾರನ್ನೂ ಗುರುತಿಸುವ ಸ್ಥಿತಿಯಲ್ಲಿರಲಿಲ್ಲ ಅವಳು. ಆದಿನ ಮಧ್ಯಾಹ್ನದ ಹೊತ್ತಿಗೆ ಕೊನೆಯುಸಿರೆಳೆದಳು. ಎಲ್ಲ ಸೇರಿ ನನ್ನನ್ನು ಪೊಲೀಸರಿಗೆ ಒಪ್ಪಿಸಿದರು, ಆಮೇಲೆ ಜೈಲುಪಾಲಾದೆ. ಅಲ್ಲಿ ನಾನು ವಿಚಾರಣೆ ಎದುರಿಸುತ್ತ ಹನ್ನೊಂದು ತಿಂಗಳು ಕಳೆದೆ. ಆ ಅವಧಿಯಲ್ಲಿ ನನ್ನನ್ನು ನಾನು ಪರೀಕ್ಷೆಗೊಳಪಡಿಸಿದೆ, ನನ್ನ ಹಿಂದಿನದನ್ನು ಸಮೀಕ್ಷಿಸಿದೆ, ಆ ಬಗ್ಗೆ ಅರಿತುಕೊಂಡೆ. ನನಗೆ ಅರ್ಥವಾಗತೊಡಗಿದ್ದು ಮೂರನೆಯ ದಿನದಿಂದ, ಮೂರನೆಯ ದಿನ ನನ್ನನ್ನು ಅಲ್ಲಿಗೆ ಕರೆದೊಯ್ದರು ... "

ಮುಂದುವರಿಸುತ್ತಲೇ ಇದ್ದ, ಆದರೆ ತನ್ನ ಅಳುವನ್ನು ತಡೆಯಲಾರದಾಗಿ ಮಾತು ನಿಲ್ಲಿಸಿದ. ಮತ್ತೆ ಚೇತರಿಸಿಕೊಂಡು ಮಾತನ್ನು ಲಗುಬಗೆಯಿಂದ ಮುಂದುವರಿಸಿದ: "ಶವಪೆಟ್ಟಿಗೆಯಲ್ಲಿ ಅವಳನ್ನು ಕಂಡಾಗಲೇ ನನಗೆ ಅರ್ಥವಾಗತೊಡಗಿದ್ದು" ಎಂದು ಬಿಕ್ಕಿದ, ಆದರೆ ತಕ್ಷಣವೇ ಮುಂದುವರಿಸಿದ: "ಸತ್ತ ಅವಳ ಮುಖವನ್ನು ಕಂಡಾಗಲೇ ನಾನು ಮಾಡಿದ್ದ ಕೃತ್ಯ ನನಗೆ ಅರಿವಾದದ್ದು. ನಾನು ಅವಳನ್ನು ಕೊಂದಿದ್ದುದು ಅರಿವಾಯಿತು; ಬದುಕುತ್ತಿದ್ದ, ಚಲಿಸುತ್ತಿದ್ದ, ಪ್ರೀತಿ ತೋರಿಸುತ್ತಿದ್ದ ಅವಳು ನಿಶ್ಚೇಷ್ಟಿತಳಾಗಿದ್ದುದು, ತಣ್ಣಗಾಗಿದ್ದುದು ನನ್ನಿಂದಾಗಿಯೇ, ಆದುದನ್ನು ಯಾವುದರಿಂದಲೂ ಯಾವುದೇ ಕಾಲಕ್ಕೂ ಸರಿಪಡಿಸಲಸಾಧ್ಯ ಎಂಬ ಅರಿವು ಮೂಡಿ? .. ಹಾ ಹಾ ಹಾ" ಎಂದು ಅನೇಕ ಬಾರಿ ಕಿರುಚಿ ಸುಮ್ಮಗಾದ.

ಸಾಕಷ್ಟು ಹೊತ್ತು ನಾವು ಸುಮ್ಮನೇ ಕುಳಿತಿದ್ವಿ. ಅವನಿನ್ನೂ ಬಿಕ್ಕುತ್ತಲೇ ಇದ್ದ, ನಡುಗುತ್ತ ನನ್ನ ಎದುರುಗಡೆಯೇ ಕುಳಿತಿದ್ದ, ಆದರೆ ಮಾತನ್ನು ನಿಲ್ಲಿಸಿದ್ದ. ಅವನ ಮುಖ ಮುದುರಿಕೊಂಡು ನೀಳವಾದ ಹಾಗಿತ್ತು, ಅದರುದ್ದಕ್ಕೂ ಬಾಯಿ ಚಾಚಿಕೊಂಡಂತಿತ್ತು.

ಇದ್ದಕ್ಕಿದ್ದ ಹಾಗೆಯೇ ಮತ್ತೆ ಮಾತಿಗೆ ತೊಡಗಿದ: "ಹ್ಞೂ, ನನಗೆ ಈಗ ಗೊತ್ತಿರುವುದು ಹಿಂದೆಯೇ ಗೊತ್ತಾಗಿದ್ದಿದ್ದರೆ, ಎಲ್ಲ ಬದಲಾಗಿರುತ್ತಿತ್ತು. ಅವಳನ್ನು ಮದುವೆಯಾಗೋಕೆ ನನಗೆ ಪ್ರೇರಣೆಯೇ ಇರ್ತಾ ಇರ್ಲಿಲ್ಲ ... ನಾನು ಅವಳನ್ನ ಮದುವೆ ಆಗಬಾರ್ದಿತ್ತು."

ಮತ್ತಷ್ಟು ಹೊತ್ತು ನಾವು ಮೌನದಿಂದ ಕೂತಿದ್ವಿ.

"ನನ್ನ ಕ್ಷಮಿಸಿ" ಎಂದು ಹೇಳಿದ ಅವನು ನನ್ನಿಂದ ಮುಖ ತಿರುಗಿಸಿಕೊಂಡು ತನ್ನ ಸೀಟಿನ ಮೇಲೆ ಕಾಲು ಚಾಚಿಕೊಂಡು ಮಲಗಿ ಮುಖವನ್ನು ಬಟ್ಟೆಯೊಂದರಿಂದ ಮುಚ್ಚಿಕೊಂಡ. ನಾನು ಇಳಿಯಬೇಕಾಗಿದ್ದ ಸ್ಟೇಷನ್ನಲ್ಲಿ (ಆಗ ಬೆಳಗಿನ ಎಂಟು ಗಂಟೆ ಸುಮಾರು) ಗುಡ್ ಬೈ ಹೇಳಲು ಅವನ ಬಳಿ ಹೋದೆ. ಅವನಿಗೆ ನಿಜವಾಗ್ಲೂ ನಿದ್ದೆ ಹತ್ತಿತ್ತೋ ಅಥವಾ ನಿದ್ದೆ ಬಂದವನ ಹಾಗೆ ನಟಿಸ್ತಿದ್ದನೋ ತಿಳಿಯೆ, ಆದರೆ ಅವನಂತೂ ಮಿಸುಕಾಡಲಿಲ್ಲ. ಅವನನ್ನು ಮುಟ್ಟಿ ನೋಡಿದೆ. ಆಗವನು ತನ್ನ ಮುಖದ ಮೇಲಿನ ಬಟ್ಟೆಯನ್ನು ಸರಿಸಿದ; ಅವನು ನಿದ್ದೆ ಮಾಡ್ತಿರಲಿಲ್ಲ ಅನ್ನುವುದು ತಿಳಿಯಿತು.

'ಗುಡ್ ಬೈ' ಎಂದು ಹೇಳಿ ನನ್ನ ಕೈ ಚಾಚಿದೆ. ಅವನು ತನ್ನ ಕೈ ನೀಡಿ ನಸುವೇ ಮುಗುಳ್ನಕ್ಕ, ಆದರೆ ಅದು 'ಅತ್ತಾರ ಅತ್ತುಬಿಡು, ನಕ್ಕ್ಯಾಕ ಮರಸತೀ ದುಕ್ಕ' ಅನ್ನುವಂತಿತ್ತು. ಅದನ್ನ ನೋಡಿ ನನಗೂ ಅಳುಬರುವಂತಾಯ್ತು.

"ದಯವಿಟ್ಟು ಕ್ಷಮಿಸಿ ..." ಎಂದ. ಅವು ತನ್ನ ಕತೆಯನ್ನು ಹೇಳಿ ಮುಗಿಸಿದಾಗಲೂ ಅವನು ಉಸುರಿದ್ದ ಶಬ್ದಗಳು. (1889)

# ಯಜಮಾನ-ಆಳು

ಅದು ನಡೆದದ್ದು ಎಪ್ಪತ್ತರ ದಶಕದ ಒಂದು ಚಳಿಗಾಲದಲ್ಲಿ, ಸಂತ ನಿಕೋಲಾಸ್ ಹಬ್ಬದ ಮಾರನೇ ದಿನ. ಅಂದು ಪ್ಯಾರಿಷ್‌ನಲ್ಲೊಂದು ಔತಣಕೂಟವಿತ್ತು, ಸೆಕೆಂಡ್ ಗಿಲ್ಡ್ ವ್ಯಾಪಾರಿಯಾದ ಇನ್‌ಕೀಪರ್ ವಾಸಿಲಿ ಆಂಡ್ರೆವಿಚ್ ಬ್ರೆಖ್ಯುನೊವ್, ಚರ್ಚ್ ಹಿರಿಯನಾಗಿದ್ದುದರಿಂದ ಚರ್ಚ್‌ಗೆ ಹೋಗಬೇಕಾಗಿತ್ತು. ಜೊತೆಗೆ ಮನೆಯಲ್ಲಿಯೂ ಬಂಧುಗಳು ಹಾಗೂ ಗೆಳೆಯರಿಗೆ ಆತಿಥ್ಯ ನೀಡಬೇಕಾಗಿತ್ತು.

ಅತಿಥಿಗಳಲ್ಲಿ ಕೊನೆಯವನು ಹೋಗುವವರೆಗೂ ಕಾದಿದ್ದು, ತಕ್ಷಣವೇ ಅವನು ತಾನು ದೀರ್ಘಕಾಲದಿಂದ ತೋಪೊಂದನ್ನು ಖರೀದಿಸಲು ವ್ಯವಹಾರ ನಡೆಸುತ್ತಿದ್ದ ನೆರೆಯ ಮಾಲೀಕನ ಬಳಿ ಧಾವಿಸಲು ಸಿದ್ಧತೆ ಮಾಡಿಕೊಳ್ಳತೊಡಗಿದ. ಈಗವನು ಹೋಗುವ ತರಾತುರಿಯಲ್ಲಿದ್ದ, ಯಾಕೆಂದರೆ ಪಟ್ಟಣದ ಹಣವಂತರು ಈ ಲಾಭದಾಯಕ ವ್ಯವಹಾರ ಕುದುರಲು ತಾವೇ ಕೊಳ್ಳಲು ಮುಂದಾಗಿ ಅಡ್ಡಿಮಾಡಿಯಾರೆಂಬುದು ಅವನ ಆತಂಕ.

ಆ ತೋಪಿಗಾಗಿ ಯುವಕ ಮಾಲೀಕ ಹತ್ತು ಸಾವಿರ ರೂಬಲ್‌ಗಳ ಬೆಲೆಯನ್ನು ಹೇಳುತ್ತಿದ್ದ; ವಾಸಿಲಿ ಬ್ರೆಖ್ಯುನೊವ್ ಅದಕ್ಕೆ ಏಳು ಸಾವಿರ ಕೊಡುವುದಾಗಿ ಚೌಕಸಿ ಮಾಡುತ್ತಿದ್ದ. ಏಳು ಸಾವಿರ ಅದರ ವಾಸ್ತವ ಬೆಲೆಯ ಮೂರನೇ ಒಂದು ಭಾಗದಷ್ಟು ಮಾತ್ರ. ತನ್ನ ಬೆಲೆಗೇ ವಾಸಿಲಿ ಬ್ರೆಖ್ಯುನೊವ್ ಕೊಳ್ಳಲು ಸಿದ್ಧನಾಗಿದ್ದಿರಬಹುದು; ಅದು ತನ್ನ ಪ್ರದೇಶಕ್ಕೆ ಸಮೀಪವಾಗಿತ್ತು, ಜೊತೆಗೆ ತನ್ನ ಹಳ್ಳಿಯವರಾರೂ ಆ ಪ್ರದೇಶದ ಭೂಮಿಯ ಬೆಲೆಯನ್ನು ಏರಿಸಬಾರದೆಂಬ ಬಗ್ಗೆ ದೀರ್ಘಕಾಲೀನ ಒಪ್ಪಂದವೂ ಆಗಿತ್ತು. ಆದರೆ ಗೊರ್ಯಾಚ್ಕಿನ್ ತೋಪಿಗೆ ಪಟ್ಟಣದ ಕೆಲವು ಮರದ ದಿಮ್ಮಿ ವ್ಯಾಪಾರಿಗಳು ಹೆಚ್ಚು ಬೆಲೆ ಕೊಡಲು ಸಿದ್ಧರಾಗುತ್ತಿದ್ದಾರೆಂಬ ವಿಷಯ ಅವನಿಗೆ ಈಚೆಗೆ ತಿಳಿದಿತ್ತು. ಹೀಗಾಗಿ ತಕ್ಷಣವೇ ಹೋಗಿ ವ್ಯಾಪಾರವನ್ನು ಕುದುರಿಸಿಬಿಡಬೇಕೆಂದು ಅವನು

ನಿರ್ಧರಿಸಿದ್ದ. ಆದ್ದರಿಂದಲೇ ಔತಣ ಮುಗಿದ ತಕ್ಷಣವೇ ತನ್ನ ಕಬ್ಬಿಣದ ಪೆಟ್ಟಿಗೆಯಿಂದ ಏಳುನೂರು ರೂಬಲ್‌ಗಳನ್ನು ತೆಗೆದುಕೊಂಡು ಅದರೊಡನೆ ತನ್ನ ವಶದಲ್ಲಿದ್ದ ಚರ್ಚ್‌ಗೆ ಸೇರಿದ ಎರಡು ಸಾವಿರದ ಮುನ್ನೂರು ರೂಬಲ್‌ಗಳನ್ನು ಸೇರಿಸಿ ಮೂರು ಸಾವಿರ ರೂಬಲ್‌ಗಳನ್ನು ಹೊಂದಿಸಿಕೊಂಡು ಸಿದ್ಧನಾದ. ಎಚ್ಚರಿಕೆಯಿಂದ ನೋಟುಗಳನ್ನು ಎಣಿಸಿಕೊಂಡು ಅದನ್ನು ತನ್ನ ಜೇಬಿನ ಪುಸ್ತಕದಲ್ಲಿರಿಸಿಕೊಂಡು ತರಾತುರಿಯಿಂದ ಹೊರಟ.

ಆವತ್ತು ಕುಡಿದಿರದ ನಿಕಿಟ ಎಂಬ ವಾಸಿಲಿ ಆಂಡ್ರೆವಿಚ್‌ನ ಒಬ್ಬನೇ ಆಳು ಕುದುರೆಯನ್ನು ಜಾರುಬಂಡಿಗೆ ಹೂಡಿ ಸಿದ್ಧಪಡಿಸಲು ಹೊರಟ. ಕುಡಿತದ ಅಭ್ಯಾಸವಿದ್ದ ನಿಕಿಟ ಅವತ್ತು ಕುಡಿಯದಿದ್ದುದಕ್ಕೆ ಕಾರಣ ತನ್ನ ಕೋಟು ಹಾಗೂ ಲೆದರ್ ಬೂಟುಗಳನ್ನೂ ಮಾರಿ, ಹಬ್ಬದ ಹಿಂದಿನ ದಿನ ಕುಡಿದು, ಇನ್ನು ಮುಂದೆ ಕುಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದವನು ಎರಡು ತಿಂಗಳ ಕಾಲ ಅದನ್ನು ಪಾಲಿಸಿ, ಹಬ್ಬದ ಎರಡು ದಿನಗಳೂ ಹೋದ ಕಡೆಯಲ್ಲೆಲ್ಲ ಕುಡಿದಿದ್ದ ವೋಡ್ಕಾ ಈಗಲೂ ತನ್ನನ್ನು ಸೆಳೆಯುತ್ತಿದ್ದರೂ ತನ್ನ ವ್ರತಭಂಗ ಮಾಡಿರಲಿಲ್ಲ.

ನಿಕಿಟ ಸುಮಾರು ಐವತ್ತು ವರ್ಷ ವಯಸ್ಸಿನ ಪಕ್ಕದ ಹಳ್ಳಿಯೊಂದರ ಒಬ್ಬ ರೈತ; ಅವನು ಅಲ್ಲಿ ಇತರ ರೈತರಿಂದ 'ಯಜಮಾನ' ಅನ್ನಿಸಿಕೊಂಡಿರಲಿಲ್ಲ, ಯಾಕೆಂದರೆ ಅವನು ಸಂಸಾರದ ಹೊರೆ ಹೊತ್ತವನಾಗಿರದೆ ಬಹುತೇಕ ಮನೆಯಿಂದ ಹೊರಗೆ ಕೂಲಿಯಾಗಿ ಕಾಲ ಕಳೆಯುತ್ತಿದ್ದವನು. ಅವನ ಶ್ರಮದುಡಿಮೆ, ಕುಶಲತೆ ಮತ್ತು ಕೆಲಸದಲ್ಲಿನ ಸಾಮರ್ಥ್ಯಗಳಿಗಾಗಿ, ಅದಕ್ಕಿಂತ ಹೆಚ್ಚಾಗಿ ಅವನ ನಯವಂತ ನಡತೆ ಮತ್ತು ಪ್ರಸನ್ನತೆಗಳಿಗಾಗಿ ಎಲ್ಲರೂ ಅವನಿಗೆ ಗೌರವ ನೀಡುತ್ತಿದ್ದರು. ಅವನು ಯಾವತ್ತೂ ಎಲ್ಲಿಯೂ ದೀರ್ಘಕಾಲ ನೆಲೆಸಿದವನಲ್ಲ; ಇದಕ್ಕೆ ಕಾರಣ ಅವನು ವರ್ಷಕ್ಕೆರಡು ಬಾರಿಯೋ, ಅಥವಾ ಇನ್ನೂ ಹೆಚ್ಚು ಬಾರಿಯೋ, ಕುಡಿತದಲ್ಲಿ ಓಲಾಡುತ್ತಿದ್ದ; ತನ್ನ ಬಟ್ಟೆಬರೆಗಳನ್ನೆಲ್ಲ ಅದಕ್ಕಾಗಿ ಮಾರಿಬಿಡುತ್ತಿದ್ದ; ಅಷ್ಟೇ ಅಲ್ಲದೆ ಆಗ ಅವನು ಉಗ್ರನೂ ಜಗಳಗಂಟನೂ ಆಗಿಬಿಡುತ್ತಿದ್ದ. ವಾಸಿಲಿ ಆಂಡ್ರೆವಿಚ್ ಅವನನ್ನು ಎಷ್ಟೋ ಸಲ ಅಟ್ಟಿಬಿಟ್ಟಿದ್ದ, ಆದರೆ ಆನಂತರ ಪುನಃ ಕೆಲಸಕ್ಕೆ ತೆಗೆದುಕೊಂಡಿದ್ದ; ಅದಕ್ಕೆ ಕಾರಣ ಅವನ ಪ್ರಾಮಾಣಿಕತೆ, ಪ್ರಾಣಿಗಳ ಬಗೆಗಿನ ದಯಾವಂತಿಕೆ, ಎಲ್ಲಕ್ಕಿಂತ ವಿಶೇಷವಾಗಿ ಅವನು ಅಗ್ಗದ ಕೂಲಿಯಾಗಿದ್ದುದು. ಅವನು ನಿಜವಾಗಿ ಬೆಲೆಬಾಳುತ್ತಿದ್ದ ಎಂಬತ್ತು ರೂಬಲ್‌ಗಳನ್ನು ವರ್ಷಕ್ಕೆ ವಾಸಿಲಿ ಆಂಡ್ರೆವಿಚ್ ಎಂದೂ ಕೊಟ್ಟವನಲ್ಲ, ಕೊಡುತ್ತಿದ್ದುದು ನಲವತ್ತು ರೂಬಲ್‌ಗಳಷ್ಟು ಮಾತ್ರ, ಅದೂ ಆಗಷ್ಟು ಈಗಷ್ಟು ಎಂಬಂತೆ, ಅದೂ ಚಿಲ್ಲರೆಯ ರೀತಿಯಲ್ಲಿ, ಅದನ್ನೂ ಕೊಡುತ್ತಿದ್ದುದು ನಗದಿನ ರೂಪದಲ್ಲಾಗಿರದೆ ತನ್ನದೇ ಅಂಗಡಿಯ ವಸ್ತುಗಳನ್ನು, ದುಬಾರಿ ಬೆಲೆಗೆ.

ನಿಕಿಟನ ಹೆಂಡತಿ ಮಾರ್ತಾ ಒಂದು ಕಾಲದಲ್ಲಿ ಸುಂದರಿ ಹಾಗೂ ಗಟ್ಟಿಗಿತ್ತಿ ಎನಿಸಿಕೊಂಡಿದ್ದವಳು, ತನ್ನ ಮಗ ಮತ್ತು ಇಬ್ಬರು ಹೆಣ್ಣುಮಕ್ಕಳೊಡನೆ ಹೇಗೋ ಸಂಸಾರ

ನಿಭಾಯಿಸುತ್ತಿದ್ದಳು; ನಿಕಿಟನನ್ನು ಮನೆಯಲ್ಲಿಯೇ ಇರುವಂತೆ ಎಂದೂ ಬಲವಂತ ಮಾಡಿದವಳಲ್ಲ. ಅದಕ್ಕೆ ಮೊದಲ ಕಾರಣವೆಂದರೆ, ತನ್ನ ಮನೆಯಲ್ಲಿ ಬೀಡುಬಿಟ್ಟಿದ್ದ ನೆರೆಯ ಹಳ್ಳಿಯ ರೈತನಾದ ಒಬ್ಬ ಚಿಲ್ಲರೆ ಸಾರಾಯಿ ಮಾರಾಟಗಾರನ ಜೊತೆಯಲ್ಲಿ ಈಗ್ಗೆ ಇಪ್ಪತ್ತು ವರ್ಷಗಳಿಂದ ವಾಸಿಸುತ್ತಿದ್ದುದು; ಎರಡನೆಯದಾಗಿ, ಕುಡಿದಿಲ್ಲದಾಗ ತನ್ನ ಗಂಡನನ್ನವಳು ಹೇಗೋ ಒಲಿಸಿಕೊಳ್ಳುತ್ತಿದ್ದವಳು, ಕುಡಿದಾಗ ಮಾತ್ರ ಬೆಂಕಿಯನ್ನು ಕಂಡ ಹಾಗೆ ಹೆದರಿ ದೂರ ಉಳಿಯುತ್ತಿದ್ದಳು. ಪ್ರಾಯಶಃ ಕುಡಿಯದಿದ್ದಾಗಿನ ತನ್ನ ವಿನೀತತೆಯನ್ನು ಸರಿದೂಗಿಸಲೋ ಎಂಬಂತೆ ಮನೆಯಲ್ಲಿದ್ದಾಗ ಒಮ್ಮೆ ಕುಡಿದಿದ್ದ ನಿಕಿಟ ಅವಳ ಪೆಟ್ಟಿಗೆಯ ಬೀಗ ಒಡೆದು ಅವಳ ಅತ್ಯುತ್ತಮ ಬಟ್ಟೆಗಳನ್ನೆಲ್ಲ ತೆಗೆದುಕೊಂಡು, ಒಂದು ಕೊಡಲಿಯನ್ನು ಕೈಯಲ್ಲಿ ಹಿಡಿದು, ಅವಳ ಉಡುಗೆತೊಡುಗೆಗಳನ್ನೆಲ್ಲ ಚೂರುಚೂರಾಗಿ ತುಂಡರಿಸಿದ್ದ. ನಿಕಿಟ ತಾನು ಸಂಪಾದಿಸುತ್ತಿದ್ದ ಕೂಲಿಯನ್ನೆಲ್ಲ ಹೆಂಡತಿಗೇ ಕೊಡುತ್ತಿದ್ದ, ಹಾಗೆ ಮಾಡಲು ಅವನ ತಕರಾರೇನೂ ಇರಲಿಲ್ಲ. ಹೀಗಾಗಿ, ರಜೆಗೆ ಎರಡು ದಿನ ಮುಂಚೆ, ವಾಸಿಲಿ ಆಂಡ್ರೆವಿಚ್‌ನನ್ನು ಕಾಣಲು ಎರಡು ಬಾರಿ ಹೋಗಿ ಅವನಿಂದ ಗೋಧಿಹಿಟ್ಟು, ಟೀ, ಸಕ್ಕರೆ ಮತ್ತು ಒಂದಷ್ಟು ವೋಡ್ಕಾ ಇವಕ್ಕೆಲ್ಲ ಮೂರು ರೂಬಲ್ ಬೆಲೆ, ಐದು ರೂಬಲ್ ನಗದನ್ನು ಪಡೆದು, ಈ ಉಪಕಾರಕ್ಕಾಗಿ-ಕನಿಷ್ಠವೆಂದರೂ ಅವನು ನಿಕಿಟನಿಗೆ ಇಪ್ಪತ್ತು ರೂಬಲ್‌ಗಳನ್ನು ನೀಡಬೇಕಾಗಿತ್ತು - ಅವನಿಗೆ ವಂದನೆ ಹೇಳಿ ಬಂದಿದ್ದಳು.

"ನಿನ್ನ ಜೊತೆ ನಾನು ಯಾವ ರೀತಿ ಒಪ್ಪಂದ ಮಾಡಿಕೊಂಡಿರೋದು?" ವಾಸಿಲಿ ಆಂಡ್ರೆವಿಚ್ ನಿಕಿಟನನ್ನು ಪ್ರಶ್ನಿಸಿದ. "ನಿನಗೆ ಏನಾದರೂ ಬೇಕಾದ್ರೆ ತಗೊಂಡು ಹೋಗು; ಅದರ ಬದಲು ತಕ್ಕ ಹಾಗೆ ಕೆಲಸ ಮಾಡು. ಬೇರೆಯೋರ ಥರ ಅದಕ್ಕಾಗಿ ನೀನು ಕಾದುಕೊಂಡಿರೋ ಹಾಗೆ ಮಾಡಲ್ಲ, ದಂಡ ಅಂತ ಕೂಲಿಯಲ್ಲಿ ಉತ್ತಾರ ಹಾಕಿಕೊಳ್ಳಲ್ಲ. ನಮ್ಮ ವ್ಯವಹಾರ ನೇರವಾದ್ದು. ನೀನು ನಂಗೆ ಕೆಲಸ ಮಾಡಿಕೊಡ್ತೀಯಾ, ನಾನು ನಿನ್ನನ್ನ ಕಡೆಗಣಿಸಲ್ಲ."

ಈ ಮಾತುಗಳನ್ನಾಡುವಾಗ ತಾನು ನಿಕಿಟನ ಹಿತರಕ್ಷಕ ಎಂಬ ಭಾವನೆಯನ್ನೇ ವಾಸಿಲಿ ಆಂಡ್ರೆವಿಚ್ ತಾಳಿರುತ್ತಿದ್ದುದು. ನಿಕಿಟ ಮಾತ್ರವಲ್ಲ, ಅವನನ್ನು ಹಣಕ್ಕಾಗಿ ಅವಲಂಬಿಸಿದ್ದವರೆಲ್ಲರ ಹಿತರಕ್ಷಕನೇ ಹೊರತು ಅವರನ್ನು ತಾನು ಕಡೆಗಣಿಸುವವನಲ್ಲ ಎಂಬ ಭಾವನೆ ಬರುವಂತೆ ಅವನು ನಂಬಿಸುತ್ತಿದ್ದ.

"ಹೌದು, ವಾಸಿಲಿ ಆಂಡ್ರೆವಿಚ್ ಯಜಮಾನರೇ, ನನಗೆ ಅರ್ಥವಾಗತ್ತೆ. ನನ್ನ ತಂದೆ ಕೆಲಸ ಆಗಿದ್ರೆ ಎಷ್ಟು ಮುತುವರ್ಜಿ ವಹಿಸಿ ಕೆಲಸ ಮಾಡ್ತಿದ್ದೆನೋ ಅಷ್ಟೇ ಕಷ್ಟಪಟ್ಟು ನಿಮ್ಮ ಕೆಲಸ ಮಾಡಿಕೊಂಡ್ತಿರ್ತಿನಿ. ನಿಮ್ಮ ಸ್ವಭಾವ ನಂಗೆ ಚೆನ್ನಾಗಿ ಗೊತ್ತು!" ಎಂದು ನಿಕಿಟ ಹೇಳುತ್ತಿದ್ದ. ವಾಸಿಲಿ ಆಂಡ್ರೆವಿಚ್ ತನ್ನನ್ನು ವಂಚಿಸುತ್ತಿದ್ದಾನೆ ಎಂಬುದು ಅವನಿಗೆ ಚೆನ್ನಾಗೇ ಗೊತ್ತಿತ್ತು, ಆದರೆ ತನಗೆ ಬರಬೇಕಾದ್ದನ್ನೆಲ್ಲ ಚುಕ್ತಾ ಮಾಡಿಬಿಡಬೇಕೆಂದು ಹಟ ಹಿಡಿಯುವುದಾಗಲೀ, ತನ್ನ ದೃಷ್ಟಿಕೋನವನ್ನು ವಿವರಿಸಿ ಹೇಳುವುದಾಗಲೀ

ಉಪಯೋಗಕ್ಕೆ ಬಾರದೆಂದು ಅವನಿಗೆ ಮನವರಿಕೆಯಾಗಿತ್ತು; ಹೋಗಲು ಬೇರೆಲ್ಲೂ ಜಾಗವಿಲ್ಲದ್ದರಿಂದಾಗಿ ತನಗೆ ಸಿಕ್ಕಿದಷ್ಟಕ್ಕೇ ಅವನು ತೃಪ್ತಿಪಟ್ಟುಕೊಳ್ಳಬೇಕಾಗಿತ್ತು.

ಕುದುರೆಯನ್ನು ಗಾಡಿಗೆ ಹೂಡಲು ಯಜಮಾನರು ಹೇಳಿದ್ದರಿಂದ, ಅವನೀಗ ಎಂದಿನ ಕುಶಾಲುತನ ಹಾಗೂ ಇಷ್ಟದಿಂದಲೇ ಶೆಡ್ ಕಡೆ ದಡದಡ ಸರಾಗವಾದ ಹೆಜ್ಜೆ ಇಡುತ್ತ ಹೋದ. ಮೊಳೆಗೆ ನೇತು ಹಾಕಿದ್ದ ಭಾರವಾದ ಚರ್ಮದ ಕಡಿವಾಣಗಳನ್ನು ತೆಗೆದುಕೊಂಡು, ಅದರ ಸರಪಳಿಯನ್ನು ಸಳಸಳ ಸದ್ದುಮಾಡುತ್ತ ಬಾಗಿಲು ಮುಚ್ಚಿದ್ದ ಕುದುರೆ ಲಾಯದ ಬಳಿ ಹೋಗಿ ಅಲ್ಲಿ ನಿಂತಿದ್ದ ಕುದುರೆಗೆ ಜೋಡಿಸಿದ.

"ಏನು ಒಂಟಿತನಾನಾ? ಒಂಟಿತನಾನಾ, ಮಂಕು ಮುಂಡೇದೇ?" ಎಂದು ತನ್ನನ್ನು ಕಂಡು ನವಿರಾಗಿ ಕೆನೆದ ಸಾಧು ಸ್ವಭಾವದ ಮಧ್ಯಮ ಎತ್ತರದ, ಜೋತುಬಿದ್ದಂತಿದ್ದ ಬಾಲದ ಪಟ್ಟಿಯನ್ನು ಹೊತ್ತು ಶೆಡ್‌ನಲ್ಲಿ ಒಂಟಿಯಾಗಿ ನಿಂತಿದ್ದ ಠಾಕಣಕ್ಕೆ ಉತ್ತರ ಕೊಡುವವನಂತೆ ನುಡಿದ. "ಈಗ, ಇನ್ನೂ ಸಾಕಷ್ಟು ಸಮಯ ಇದೆ. ಸ್ವಲ್ಪ ನೀರು ಕುಡಿಸಬೇಕು ನಿಂಗೆ" ಎಂದು ತನ್ನ ಮಾತುಗಳನ್ನು ಅರ್ಥಮಾಡಿಕೊಳ್ಳಬಲ್ಲ ಯಾರಿಗೋ ಹೇಳುವವನಂತೆ ಮಾತಾಡುತ್ತ, ದಷ್ಟಪುಷ್ಟವಾಗಿ ಬೆಳೆದಿದ್ದ ಠಾಕಣದ ಬೆನ್ನ ಮೇಲೆಲ್ಲ ತುಂಬಿಕೊಂಡಿದ್ದ ದೂಳನ್ನು ತನ್ನ ಕೋಟಿನ ಚುಂಗಿನಿಂದಲೇ ಕೊಡವುತ್ತ; ಅದರ ಚೆಲುವಾದ ತಲೆಯ ಕಡೆ ಕಡಿವಾಣವನ್ನು ಇರಿಸಿ, ಅದರ ಕಿವಿಗಳನ್ನೂ ಕೂದಲನ್ನೂ ನೇರಗೊಳಿಸಿ, ಕಟ್ಟಿದ್ದ ಗೂಟದಿಂದ ಬಿಡಿಸಿ ನೀರಿದ್ದ ಕಡೆ ಕುದುರೆಯನ್ನು ಕರೆದೊಯ್ದ.

ಎಲ್ಲ ಕಡೆ ಲದ್ದಿ ತುಂಬಿದ್ದ ಲಾಯದಿಂದ ಹೊರಬಂದ 'ಮುಖೋರ್ಟಿ' ತಿರುಗಿ ತನ್ನ ಹಿಂಗಾಲುಗಳನ್ನು ಮೇಲೆತ್ತಿ ಒದೆಯುವಂತೆ ತೋರಿಸಿ ತನ್ನ ಜೊತೆಗೆ ಕುಕ್ಕುಲು ಓಟದಿಂದ ಸಾಗುತ್ತ ನೀರಿನೆಡೆ ಕರೆದೊಯ್ಯುತ್ತಿದ್ದ ನಿಕಿಟನನ್ನು ಹಿಂಬಾಲಿಸಿತು.

ಮೇಲೆತ್ತಿದ ಹಿಂಗಾಲುಗಳು ತನ್ನ ಕುರಿಚರ್ಮದ ತುಪ್ಪುಳುಗಂಬಳಿಯನ್ನು ಮುಟ್ಟಿದರೂ ಅದು ಒದೆಯದೆಂದು ಖಾತ್ರಿಯಿದ್ದ ನಿಕಿಟ ಮುಖೋರ್ಟಿಯ ಕೌಶಲವನ್ನು ಮೆಚ್ಚುತ್ತ, "ನೋಡಿದ್ಯಾ, ಈ ಹಡಬೇನ!" ಎಂದು ಅದನ್ನು ಗದರಿಸಿದ.

ತಣ್ಣೀರನ್ನು ಕುಡಿದ ಕುದುರೆ ನಿಟ್ಟುಸಿರು ಬಿಟ್ಟು ಒದ್ದೆಯಾಗಿದ್ದ ತನ್ನ ನೀಳ ಗಡಸು ತುಟಿಗಳನ್ನು ಆ ಈ ಕಡೆ ಆಡಿಸಿದಾಗ, ಅದರ ಹೆಗಲ ಕೂದಲಿಂದ ಸಣ್ಣ ಹನಿಗಳು ತೊಟ್ಟಿಯಲ್ಲಿ ಉದುರಿದವು; ಆಮೇಲೆ ಏನೋ ಯೋಚಿಸುತ್ತಿರುವಂತೆ ನೇರವಾಗಿ ನಿಂತು, ಕೊನೆಗೆ ಜೋರಾಗಿ ಕೆನೆಯಿತು.

"ನಿಂಗೆ ಇನ್ನು ಹೆಚ್ಚು ಬೇಡವಾದ್ರೆ ಬಿಟ್ಬಿಡು; ಆದ್ರೆ ಆಮೇಲೆ ಮಾತ್ರ ಕೇಳೋ ಹಾಗಿಲ್ಲ" ಎಂದ ನಿಕಿಟ ಗಂಭೀರವಾದ ದನಿಯಿಂದ, ಹಾಗೆಯೇ ತನ್ನ ನಡವಳಿಕೆಯನ್ನು ಮುಖೋರ್ಟಿಗೆ ಸಂಪೂರ್ಣವಾಗಿ ವಿವರಿಸಿದ. ಆನಂತರ ಕಡಿವಾಣದಲ್ಲೇ ಸುತ್ತಣ ಅಂಗಳದಲ್ಲೆಲ್ಲ ಓಡಾಡುವ ಬಯಕೆಯ ಹುಡುಗಾಟದ ಕಿರುವರೆಯದ ಕುದುರೆಯನ್ನು ಶೆಡ್ ಕಡೆ ಕರೆದೊಯ್ದ. ಅಂಗಳದಲ್ಲಿ ಒಬ್ಬ ಅಪರಿಚಿತ ವ್ಯಕ್ತಿಯನ್ನು ಬಿಟ್ಟರೆ ಯಾರೂ

ಇರಲಿಲ್ಲ. ಆ ವ್ಯಕ್ತಿ ಎಂದರೆ ಅಡುಗೆಯಾಳಿನ ಗಂಡ, ಬಿಡುವಿನ ವೇಳೆ ಕಳೆಯಲು ಇಲ್ಲಿಗೆ ಬಂದಿದ್ದ.

"ದೊಡ್ಡದೋ ಚಿಕ್ಕದೋ, ಯಾವ ಜಾರುಬಂಡಿಗೆ ಕುದುರೆಯನ್ನು ಹೂಡಬೇಕು ಹೋಗಿ ಕೇಳಿಕೊಂಡು ಬಾರಣ್ಣ!"

ಅಡುಗೆಯಾಳಿನ ಗಂಡ ಕಬ್ಬಿಣದ ಬುನಾದಿ ಹಾಗೂ ಕಬ್ಬಿಣದ್ದೇ ಚಾವಣಿಯ ಮನೆಯೊಳಕ್ಕೆ ಹೋಗಿ, ಬೇಗನೇ ವಾಪಸಾಗಿ ಚಿಕ್ಕ ಗಾಡಿ ಸಿದ್ಧಪಡಿಸಬೇಕಂತೆ ಎಂದು ಹೇಳಿದ. ಆ ಹೊತ್ತಿಗೆ ನಿಕಿಟ ಕೊರಳ ಪಟ್ಟಿ ಹಾಗೂ ಹೊಟ್ಟೆಪಟ್ಟಿಯನ್ನು ಮುಖಮೋರ್ಟಿಗೆ ತೊಡಿಸಿ, ಕೈಯಲ್ಲಿ ಕುದುರೆಯನ್ನು ಹಿಡಿದು ಶೆಡ್‌ನಲ್ಲಿದ್ದ ಜಾರುಬಂಡಿ ಗಾಡಿಗಳ ಬಳಿಗೆ ಒಯ್ಯುತ್ತಿದ್ದ.

"ಸರಿ, ಹಾಗಾದ್ರೆ ಚಿಕ್ಕದಂತಾ?" ಎಂದು ನಿಕಿಟ ಆ ಜಾಣ ಕುದುರೆಯ ಬೆನ್ನು ಚಪ್ಪರಿಸಿ - ಉದ್ದಕ್ಕೂ ಅದು ಅವನನ್ನು ಕಚ್ಚುವಂತೆ ನಟಿಸುತ್ತಿತ್ತು-ಅಡಿಗೆಯಾಳಿನ ಗಂಡನ ಜೊತೆ ಸೇರಿ ಅದನ್ನು ಮೂಕಿಗೆ ಹೂಡಲು ಕರೆದೊಯ್ದ. ಲಗಾಮುಗಳನ್ನು ಸರಿಪಡಿಸಿದರೆ ಇನ್ನೇನು ಎಲ್ಲ ಸಿದ್ಧತೆಯೂ ಮುಗಿದಾಯಿತು ಎನ್ನುವಷ್ಟರಲ್ಲಿ, ಒಂದಷ್ಟು ಒಣಹುಲ್ಲು ತರಲು ಲಾಯಕ್ಕೂ ಹಾಸುಗಂಬಳಿಯನ್ನು ತರಲು ಶೆಡ್‌ಗೂ ನಿಕಿಟ ಆ ಇನ್ನೊಬ್ಬನನ್ನು ಕಳಿಸಿದ.

"ಈಗ ಎಲ್ಲ ಸಿದ್ಧವಾದ ಹಾಗಾಯ್ತು! ಏಯ್, ಮೂಗರಳಿಸಿ ನಿಂತುಕೋಬೇಡ!" ಎನ್ನುತ್ತ ನಿಕಿಟ, ಅಡುಗೆಯಾಳಿನ ಗಂಡ ತಂದಿದ್ದ ಒಕ್ಕಿದ ಓಟ್ಸ್‌ನ ಒಣ ಹುಲ್ಲನ್ನು ಗಾಡಿಯೊಳಕ್ಕೆ ಕೂರಿದ. "ಈಗ ಗೋಣಿಬಟ್ಟೆಗಳನ್ನು ಹೀಗೆ ಹರವಿ ಅದರ ಮೇಲೆ ಹಾಸುಗಂಬಳಿಯನ್ನು ಹಾಸಬಹುದು. ಸರಿ, ಈಗ ಕೂತ್ಕೊಳ್ಳಕ್ಕೆ ಆರಾಮವಾಗತ್ತೆ" ಎಂದು ಬಾಯಲ್ಲಿ ಮಾತಾಡಿಕೊಳ್ಳುತ್ತ ಅದಕ್ಕನುಗುಣವಾದ ಕ್ರಿಯೆಯನ್ನು ಕೈಗಳಿಂದ ಮಾಡುತ್ತ ಹಾಸುಗಂಬಳಿಯನ್ನು ಹಾಸಿದ.

"ಥ್ಯಾಂಕ್ ಯೂ ಗೆಳೆಯ, ಇಬ್ಬರಿದ್ದರೆ ಕೆಲಸವೆಲ್ಲ ಸಲೀಸಾಗಿ ಸಾಗತ್ತೆ" ಎಂದ ಅಡುಗೆಯಾಳಿನ ಕಡೆ ತಿರುಗಿ. ಚರ್ಮದ ಲಗಾಮುಗಳನ್ನು ಒಟ್ಟಿಗೆ ಹಿತ್ತಾಳೆಯ ಉಂಗುರಕ್ಕೆ ಸೇರಿಸಿ, ನಿಕಿಟ ಚಾಲಕನ ಜಾಗದಲ್ಲಿ ಕೂತು ತಾಳ್ಮೆಗೆಡುತ್ತಿದ್ದ ಕುದುರೆಯನ್ನು ಗಟ್ಟಿಯಾದ ಲದ್ದಿ ಎಲ್ಲೆಡೆ ಬಿದ್ದಿದ್ದ ಅಂಗಳದಿಂದ ಗೇಟಿನ ಕಡೆಗೆ ಚಲಾಯಿಸಿದ.

"ನಿಕಿಟ ಮಾಮ, ಓ ಮಾಮ, ಮಾಮ" ಎಂದು ಜೋರುದನಿಯೊಂದು ಕೂಗಿತು; ಕಪ್ಪು ಕುರಿಚರ್ಮದ ತುಪ್ಪಳುಗಂಬಳಿ, ಹಗುರವಾದ ಬೂಟುಗಳು ಹಾಗೂ ಬೆಚ್ಚಗಿನ ಟೋಪಿಯನ್ನು ಧರಿಸಿದ್ದ ಏಳು ವರ್ಷದ ಹುಡುಗನೊಬ್ಬ ಮನೆಯೊಳಗಿನಿಂದ ಅಂಗಳದ ಕಡೆಗೆ ರಭಸದಿಂದ ಓಡಿಬಂದ. "ನನ್ನೂ ಜೊತೇಲಿ ಕರ್ಕೊಂಡು ಹೋಗು, ಮಾಮ!" ಎಂದು ತನ್ನ ಕೋಟನ್ನು ಭದ್ರಗೊಳಿಸಿಕೊಳ್ಳುತ್ತ ಓಡಿಬಂದ ಆ ಹುಡುಗ ಅಳಲು ತೊಡಗಿದ.

"ಆಗಲಿ, ಬಾ. ಪುಟ್ಟ" ಎಂದು ನಿಕಿಟ ಗಾಡಿಯನ್ನು ನಿಲ್ಲಿಸಿ, ಯಜಮಾನರ ಬಿಳಿಚಿಕೊಂಡಿದ್ದ ಸಣಕಲು ಮಗನನ್ನು ಮೇಲಕ್ಕೆತ್ತಿ ಕೂರಿಸಿಕೊಂಡ; ಹುಡುಗನ ಮುಖ ಬೆಳಗಿತು, ಆಮೇಲೆ ಗಾಡಿ ಮನೆಯ ಮುಂದಿನ ರಸ್ತೆಯಲ್ಲಿ ಇಳಿಸಲೆಂದು ಕರೆದೊಯ್ದ.

ಆಗಲೇ ಎರಡೂವರೆ ಗಂಟೆಯಾಗಿತ್ತು, ಗಾಳಿ ಜೋರಾಗಿ ಬೀಸುತ್ತ, ಬಿಸಿಲಿಲ್ಲದೆ ಮಂಕಾಗಿ ಚಳಿಯಿಂದ ಕೂಡಿ, ಇಪ್ಪತ್ತು ಡಿಗ್ರಿ ಫಾರನ್‌ಹೈಟ್‌ಗಿಂತ ತಂಪಾದ ಕಾವಳ ತುಂಬಿದ್ದ ದಿನ ಅದು. ಕೆಳಮಟ್ಟದಲ್ಲೇ ತೇಲುತ್ತಿದ್ದ ಕಪ್ಪು ಮೋಡ ಅರ್ಧ ಆಕಾಶವನ್ನು ಮುಸುಕಿತ್ತು. ಮನೆಯಂಗಳಲ್ಲಿ ನಿಶ್ಶಬ್ದತೆ ಆವರಿಸಿತ್ತು, ಆದರೆ ಬೀದಿಯಲ್ಲಿ ಮಾತ್ರ ಗಾಳಿ ಸಶಬ್ದವಾಗಿ ಬೀಸುತ್ತಿತ್ತು. ಪಕ್ಕದ ಶೆಡ್‌ನಿಂದ ಹಿಮವು ಜಾರಿ ಈ ಕಡೆ ಸರಿದು ಬಂದು ಬಚ್ಚಲುಮನೆಯ ಮೂಲೆಯಲ್ಲಿ ಸುತ್ತುತ್ತಿತ್ತು.

ನಿಕಿಟ ಗಾಡಿಯನ್ನು ಇನ್ನೂ ಅಂಗಳದಿಂದ ಚಲಾಯಿಸಿ ತಂದು ಮನೆಯ ಕಡೆ ಕುದುರೆಯ ಮೂತಿಯನ್ನು ಪೂರ್ತಿ ತಿರುಗಿಸಿರಲಿಲ್ಲ, ಅಷ್ಟರಲ್ಲಿ ವಾಸಿಲಿ ಆಂಡ್ರೆವಿಚ್ ಮನೆಯ ಮುಂದಣ ಎತ್ತರದ ಮುಖಮಂಟಪದಿಂದ ಹೊರಬರುತ್ತಿದ್ದುದು ಕಾಣಿಸಿತು. ಅವನು ಕುರಿಚರ್ಮದ ತುಪ್ಪುಳಗಂಬಳಿ ಧರಿಸಿ, ಅದರ ಮೇಲೆ ಸೊಂಟಕ್ಕೆ ಬಟ್ಟೆಯೊಂದನ್ನು ಬಿಗಿದುಕೊಂಡು ಬಾಯಲ್ಲಿ ಸಿಗರೇಟು ಕಚ್ಚಿಕೊಂಡು ಹೊರಗೆ ನೆಲದ ಮೇಲೆ ಬಿದ್ದಿದ್ದ ಗಟ್ಟಿ ಹಿಮದ ಮೇಲೆ ಕಾಲೂರಿದಾಗ ತಳದ ಹಿಮ ಕರಕರಗುಟ್ಟುತ್ತಿರುವಂತೆಯೇ ನಡೆದು ಬಂದವನು, ಕೊನೆಯ ದಮ್ಮು ಎಳೆದು ಸಿಗರೇಟನ್ನು ಕೆಳಗೆಸೆದು ಅದನ್ನು ಕಾಲಿನಿಂದ ಉಜ್ಜಿ, ತನ್ನ ಮೀಸೆಯ ಹಿಂದಿನಿಂದ ಹೊಗೆಯನ್ನು ಹೊರಬಿಡುತ್ತ ದಷ್ಟಪುಷ್ಟವಾಗಿದ್ದ ಕುದುರೆಯ ಕಡೆ ನೋಟವೊಂದನ್ನು ಬೀರಿ, ಮೀಸೆಯೊಂದನ್ನು ಹೊರತುಪಡಿಸಿ ನುಣ್ಣಗೆ ಮುಖಕ್ಷೌರ ಮಾಡಿಕೊಂಡಿದ್ದ ತನ್ನ ಕೆಂಚು ಮುಖದ ಎರಡೂ ಬದಿಗಳಲ್ಲಿನ ಕುರಿಚರ್ಮದ ತುಪ್ಪುಳುಗಂಬಳಿಯ ಕಾಲರನ್ನು, ತನ್ನ ಉಸಿರಾಟದಿಂದಾಗಿ ತೇವಗೊಳ್ಳದಿರುವಂತೆ, ಬಿಗಿಗೊಳಿಸಿಕೊಳ್ಳುತ್ತ ಬಂದ.

"ನೋಡಿದ್ಯಾ? ಈ ತುಂಟ ಮರಿ ಆಗಲೇ ಬಂದು ಕೂತ್ಬಿಟ್ಟಿದೆ!" ಎಂದವನು ತನ್ನ ಪುಟ್ಟ ಮಗ ಜಾರುಬಂಡಿಯಲ್ಲಿ ಕೂತಿರುವುದನ್ನು ಕಂಡು ಅಚ್ಚರಿ ವ್ಯಕ್ತಪಡಿಸಿದ. ತನ್ನ ಸಂದರ್ಶಕರ ಜೊತೆ ಕುಡಿದಿದ್ದ ವೋಡ್ಕಾದಿಂದಾಗಿ ವಾಸಿಲಿ ಆಂಡ್ರೆವಿಚ್ ಅಮಲೇರಿದ್ದ; ಹೀಗಾಗಿ ತನ್ನ ಸ್ಥಿತಿಯ ಬಗ್ಗೆ ತಾನು ಮಾಡುತ್ತಿದ್ದ ಎಲ್ಲದರ ಬಗ್ಗೆ ಎಂದಿಗಿಂತ ಹೆಚ್ಚು ಆನಂದಿತನಾದ. ಯಾವಾಗಲೂ ತನ್ನ ಉತ್ತರಾಧಿಕಾರಿ ಎಂಬಂತೆ ಕಾಣುತ್ತಿದ್ದ ಮಗನನ್ನು ಕಂಡು ಅವನಿಗೆ ಮಹಾ ತೃಪ್ತಿ ಎನಿಸಿತು. ಅವನ ಕಡೆ ನೋಡಿದ ತನ್ನ ಕಣ್ಣುಗಳನ್ನವನ ಮೇಲೆ ಕೀಲಿಸಿ, ಹಲ್ಲುಗಳನ್ನು ಕಿರಿಯುತ್ತ.

ಕೃಶವೂ ಪೇಲವವೂ ಆದ ಮೈಯಿನ ಬಸಿರಿ ಹೆಂಗಸಾದ ಅವನ ಹೆಂಡತಿ ಕಣ್ಣುಗಳ ಹೊರತು ಮುಖದ ಮಿಕ್ಕ ಭಾಗ ಕಾಣದಂತೆ ತನ್ನ ತಲೆ ಮತ್ತು ಭುಜಗಳನ್ನು ಶಾಲಿನಿಂದ ಮುಚ್ಚಿಕೊಂಡು ಗಂಡನು ಹೊರಡುವುದನ್ನು ನೋಡುತ್ತ ಪಜಾರದಲ್ಲಿ ನಿಂತುಕೊಂಡಿದ್ದಳು.

ಬಾಗಿಲ ಹೊರಗೆ ಬಂದು ಅಂಜಿಕೆಯಿಂದಲೇ, "ನೀವು ನಿಕಿಟನನ್ನು ಜೊತೆಗೆ ಕರೆದುಕೊಂಡು ಹೋಗಲೇಬೇಕು" ಎಂದಳು. ವಾಸಿಲಿ ಆಂಡ್ರೆವಿಚ್ ಉತ್ತರಿಸಲಿಲ್ಲ. ಅವಳ ಮಾತುಗಳು ಅವನಲ್ಲಿ ಕಿರಿಕಿರಿಯುಂಟುಮಾಡಿದ್ದು ಮುಖ ಸಿಂಡರಿಸಿಕೊಂಡು ಉಗುಳಿದ್ದರಿಂದಾಗಿ ಸ್ಪಷ್ಟವಾಗಿತ್ತು.

"ನಿಮ್ಮ ಹತ್ರ ಹಣ ಇದೆ; ಹವಾಗುಣ ಕೆಟ್ಟರೆ ಏನು ಗತಿ! ಅವನನ್ನು ಖಂಡಿತ ಜೊತೆಗೆ ಕರೆದೊಯ್ಯಲೇಬೇಕು" ಎಂದು ಅದೇ ನಮ್ರ ದನಿಯಿಂದ.

"ಯಾಕೆ, ನಂಗೇನು ರಸ್ತೆ ಗೊತ್ತಿಲ್ವಾ? ಅದಕ್ಕೆ ಮಾರ್ಗದರ್ಶಕ ಬೇರೆ ಬೇಕಾ?" ಎಂದ ವಾಸಿಲಿ ಆಂಡ್ರೆವಿಚ್ ಕೌತುಕದಿಂದ. ಮಾತಾಡುವಾಗ ಪ್ರತಿಯೊಂದು ಶಬ್ದವನ್ನೂ ಬಿಡಿಸಿ ಬಿಡಿಸಿ ತನ್ನ ತುಟಿಗಳನ್ನು ಅಸಹಜವಾಗಿ ಒತ್ತಿ ನುಡಿದ; ಕೊಳ್ಳುವವರೋ ಮಾರುವವರೋ ಇದ್ದರೆ ಅವರ ಜೊತೆ ಅವನು ಹಾಗೇ ಮಾತನಾಡುತ್ತಿದ್ದುದು.

"ಏನಾದ್ರೂ ಆಗಲಿ. ಅವನನ್ನ ಜೊತೇಲಿ ಕರ್ಕೊಂಡು ಹೋಗಿ, ದೇವರಮೇಲೆ ಆಣೆ" ಎಂದು ಹೆಂಡತಿ ತನ್ನ ತಲೆಯ ಸುತ್ತ ಶಾಲನ್ನು ಇನ್ನಷ್ಟು ಬಿಗಿಯಾಗಿ ಸುತ್ತಿಕೊಳ್ಳುತ್ತ ಮತ್ತೆ ಹೇಳಿದಳು.

"ಒಳ್ಳೇ ಜಿಗಣೆ ಥರ ಅಂಟಿಕೋತಾಳಲ್ಲ!.... ಅವನನ್ನ ಎಲ್ಲಿಗೆ ಕರ್ಕೊಂಡು ಹೋಗ್ಬೇಕೂಂತ?"

"ನಾನು ನಿಮ್ಮ ಜೊತೆ ಬರಕ್ಕೆ ಸಿದ್ಧವಾಗೀದೀನಿ, ಯಜಮಾನರೇ. ಆದ್ರೆ ನಾನು ಹೊರಗೆ ಹೋಗಿರೋವಾಗ ಯಾರಾದ್ರೂ ಕುದುರೆಗಳಿಗೆ ಮೇವು ನೀರು ಹಾಕ್ಬೇಕು, ಅಷ್ಟೆ" ಎಂದ ನಿಕಿಟ ಹರ್ಷವದನನಾಗಿ, ಯಜಮಾನರ ಅನುಮತಿಗಾಗಿ ಕಾಯುತ್ತ.

"ಆ ಕೆಲ್ಸ ನಾನು ಮಾಡಿಸ್ತೀನಿ ನಿಕಿಟ. ಸೈಮನ್‌ಗೆ ಹೇಳ್ತೀನಿ" ಎಂದಳು ಯಜಮಾನಿತಿ.

"ಸರಿ, ಯಜಮಾನ್ರೇ, ನಾನು ನಿಮ್ಮ ಜೊತೆ ಬರಲಾ?" ಎಂದು ಕೇಳಿದ ನಿಕಿಟ, ಯಜಮಾನರ ಉತ್ತರಕ್ಕಾಗಿ ಎದುರು ನೋಡುತ್ತ.

"ನಾನು ಯಜಮಾನಿತಿ ಮಾತು ಕೇಳಲೇಬೇಕೂಂತ ಕಾಣತ್ತೆ. ಜೊತೆಗೆ ಬರೋದಾದ್ರೆ, ಸ್ವಲ್ಪ ಬೆಚ್ಚಗಿನ ಬಟ್ಟೆ ತೊಟ್ಟು ಬಾ" ಎಂದ ವಾಸಿಲಿ ಆಂಡ್ರೆವಿಚ್, ನಿಕಿಟ ತೊಟ್ಟಿದ್ದ ಕುರಿಚರ್ಮದ ಗಿಡ್ಡ ಕೋಟ್ ಕಡೆ ಕಣ್ಣು ಹಾಯಿಸುತ್ತ; ಕಂಕುಳ ಹತ್ತಿರ ಹಾಗೂ ಬೆನ್ನ ಬಳಿ ಅದು ಹರಿದುಹೋಗಿತ್ತು, ಜೊತೆಗೆ ಜಿಡ್ಡುಜಿಡ್ಡು, ಯದ್ವಾತದ್ವ ಆಕಾರ ತಾಳಿತ್ತು. ಅದರ ಅಂಚುಗಳೆಲ್ಲ ಜೂಲುಜೂಲಾಗಿದ್ದು, ಅವನ ಬದುಕಿನಲ್ಲಿ ಅನೇಕ ಮಳೆಗಾಲಗಳನ್ನು ಕಳೆದಿತ್ತು.

"ಓಯ್, ಅಣ್ಣ, ಇಲ್ಲಿ ಬಾ, ಸ್ವಲ್ಪ ಕುದುರೇನ ಹಿಡಕೊಂಡಿರು" ಎಂದು ಇನ್ನೂ ಅಂಗಳದಲ್ಲೇ ನಿಂತಿದ್ದ ಅಡುಗೆಯಾಳಿನ ಗಂಡನ ಕಡೆ ತಿರುಗಿ ಕೂಗಿದ.

"ಉಹ್ಞೂ, ನಾನೇ ಹಿಡಕೋತೀನಿ, ನಾನೇ ಹಿಡಕೋತೀನಿ" ಎಂದು ಹುಡುಗ

ಒರಲಿ, ಚಳಿಯಿಂದ ಕೆಂಪಾಗಿದ್ದ ತನ್ನ ಕೈಗಳನ್ನು ಜೇಬುಗಳಿಂದ ಹೊರತೆಗೆದು ಚಾಚಿ ಲಗಾಮುಗಳನ್ನು ಹಿಡಿದುಕೊಂಡ.

"ಬಟ್ಟೆ ಬದಲಿಸಿ ಬರಕ್ಕೆ ಜಾಸ್ತಿ ಹೊತ್ತು ತಗೋಬೇಡ. ಚಟುವಟಿಕೆಯಿಂದ ಬಾ" ಎಂದ ವಾಸಿಲಿ ಆಂಡ್ರೆವಿಚ್ ನಿಕಿಟನ ಕಡೆ ನೋಡಿ ನಗುತ್ತ.

"ಒಂದೇ ಕ್ಷಣ, ಯಜಮಾನ್ರೇ" ಎಂದು ಉತ್ತರಿಸಿದ ನಿಕಿಟ ಚೂಪು ಮೂತಿಯ ಬೂಟುಗಳೊಳಗೆ ಬಾಗಿದ್ದ ತನ್ನ ಕಾಲ್ಬೆರಳುಗಳಿಂದ ಕೂಡಿದ ಕಾಲುಗಳನ್ನು ತಿರುಗಿಸಿ ಓಡಿದ. ಅಂಗಳವನ್ನು ಲಗುಬಗೆಯಿಂದ ದಾಟಿ ಕೆಲಸಗಾರನ ಮನೆಯೊಳಕ್ಕೆ ನಡೆದ.

"ಅರಿನಿಷ್ಕಾ! ಅಗ್ಗಿಷ್ಟಿಕೆ ಹತ್ರ ಇರೋ ನನ್ನ ಕೋಟನ್ನ ಕೊಡು. ಯಜಮಾನ್ರ ಜೊತೆ ನಾನೂ ಹೋಗ್ತೀನಿ" ಎನ್ನುತ್ತ ಗುಡಿಸಲೊಳಕ್ಕೆ ಓಡಿ ಹೋಗಿ, ಮೊಳೆಗೆ ನೇತುಹಾಕಿದ್ದ ನಡುಪಟ್ಟಿಯನ್ನು ತೆಗೆದುಕೊಂಡ.

ಊಟದ ನಂತರ ಸ್ವಲ್ಪ ಹೊತ್ತು ನಿದ್ದೆ ಹೊಡೆದಿದ್ದ ಕೆಲಸಗಾರನ ಅಡುಗೆಯವಳು ತನ್ನ ಗಂಡನಿಗಾಗಿ ಟೀ ಮಾಡಲು ಡಬರಿಯನ್ನು ಸಿದ್ಧಪಡಿಸುತ್ತಿದ್ದವಳು ನಿಕಿಟನ ಕಡೆ ಹಸನ್ಮುಖದಿಂದ ತಿರುಗಿ, ಅವನ ತರಾತುರಿ ತನಗೂ ಅಂಟಿಕೊಂಡಿತೋ ಎಂಬಂತೆ ಸರಸರ ಓಡಾಡಿ, ಅಗ್ಗಿಷ್ಟಿಕೆಯ ಬಳಿ ಆರಹಾಕಿದ್ದ ದಯನೀಯವಾಗಿ ಛಿದ್ರವಾಗಿದ್ದ ಅವನ ಬಟ್ಟೆಗಳನ್ನು ತೆಗೆದುಕೊಂಡು, ಕೊಡವಿ ಸುಕ್ಕುಗಳನ್ನು ನೇರ್ಪಡಿಸುತ್ತ ಬಂದಳು.

"ನೀನು ಗಂಡನ ಜೊತೆ ಒಂದಷ್ಟು ಹಾಯಾಗಿ ಕಾಲ ಕಳೀಬಹುದು ಈಗ" ಎಂದ ನಿಕಿಟ, ಎಂದಿನಂತೆ ತನ್ನೊಡನೆ ಒಂಟಿಯಾಗಿದ್ದ ಯಾರಿಗಾದರೂ ಮೆಲುದನಿಯಿಂದ ಹೇಳುತ್ತಿದ್ದ ಮಾತುಗಳನ್ನಾಡಿದ.

ಆಮೇಲೆ, ನಿಕಿಟ ತನ್ನ ಸೊಂಟದ ಸುತ್ತ ನಡುಪಟ್ಟಿಯನ್ನು ಸುತ್ತಲು ಉಸಿರು ಬಿಗಿಹಿಡಿದು, ಒಳಸೇರಿದ್ದ ಹೊಟ್ಟೆಯನ್ನು ಮತ್ತಷ್ಟು ಒಳಕ್ಕೆಳೆದುಕೊಂಡು, ತನ್ನ ಕುರಿಚರ್ಮದ ತುಪ್ಪುಳುಗಂಬಳಿಯ ಸುತ್ತ ಆದಷ್ಟೂ ಬಿಗಿಯಾಗಿ ಸುತ್ತಿಕೊಂಡ.

"ಈಗ ಸರಿಹೋಯ್ತು" ಎಂದ ತನಗೆ ತಾನೇ, ಪಟ್ಟಿಯ ತುದಿಗಳನ್ನು ಗಂಟುಹಾಕುತ್ತ, ಅಡುಗೆಯಾಳಿನ ಕಡೆ ತಿರುಗದೆ, "ಈಗ ಬಿಚ್ಚಿಹೋಗಲ್ಲ!" ಎಂದುಕೊಂಡ. ತನ್ನ ತೋಳುಗಳನ್ನು ಸಲೀಸಾಗಿ ಆಡಿಸಲು ಅನುಕೂಲವಾಗುವಂತೆ ಮೇಲೆ ಕೆಳಗೆ ಮಾಡುತ್ತ, ತುಪ್ಪುಳಗಂಬಳಿಯ ಮೇಲೆ ಕೋಟ್ ಧರಿಸಿ, ಬೆನ್ನ ಕಡೆ ಎಳೆದುಕೊಂಡು ತೋಳುಗಳನ್ನು ಸಲೀಸುಗೊಳಿಸಿಕೊಂಡು, ಕಂಕುಳುಗಳಲ್ಲಿ ಕೈಯಾಡಿಸಿ, ಗೂಡಿನಿಂದ ಚರ್ಮದ ಗವಸುಗಳನ್ನು ಹೊರತೆಗೆದು ಹಾಕಿಕೊಂಡು, "ಈಗೆಲ್ಲ ಸಿದ್ಧವಾದ ಹಾಗಾಯ್ತು!" ಎಂದುಕೊಂಡ.

"ಕಾಲುಗಳ ಸುತ್ತ ಸುತ್ತಿಕೋಬೇಕು, ನಿಕಿಟ, ನಿನ್ನ ಬೂಟುಗಳು ಅಧ್ವಾನವಾಗಿವೆ."

ವಿಷಯ ಅರ್ಥವಾದವನಂತೆ ನಿಕಿಟ ನಿಂತ.

"ಹೌದು, ಹಾಗೆ ಮಾಡ್ಬೇಕು... ಆದ್ರೆ ಇಷ್ಟೇ ಸಾಕು, ದೂರ ಏನಿಲ್ಲ!"

ಅಂದುಕೊಳ್ಳುತ್ತ ಅಂಗಳದ ಕಡೆ ಓಡಿದ.

"ಥಂಡಿ ಆಗಲ್ವಾ, ನಿಕಿಟ" ಎಂದಳು ಯಜಮಾನಿತಿ ಜಾರುಬಂಡಿ ಹತ್ತಿರ ಬಂದು.

"ಥಂಡೀನಾ? ಏನಿಲ್ಲ, ಬೆಚ್ಚಗೇ ಇದೆ" ಎಂದ ನಿಕಿಟ, ತನ್ನ ಕಾಲುಗಳನ್ನು ಮುಚ್ಚುವಂತೆ ಜಾರುಬಂಡಿಯ ಮುಂಭಾಗಕ್ಕೆ ಒಂದಷ್ಟು ಹುಲ್ಲನ್ನು ನೂಕುತ್ತ. ಆಮೇಲೆ ತನ್ನ ಚಾವಟಿಯನ್ನ ಜಾರುಬಂಡಿಯ ಕೆಳಭಾಗದಲ್ಲಿ ಕಟಕಟ ಎನಿಸಿದ. ಆ ಜಾಣ ಕುದುರೆಗೆ ಇದೇನೂ ಅವಶ್ಯಕವಾಗಿರಲಿಲ್ಲ

ವಾಸಿಲಿ ಆಂಡ್ರೆವಿಚ್ ಫರ್‌ನಿಂದ ಅಂಚುಗಟ್ಟಿದ್ದ ಎರಡು ಕೋಟುಗಳನ್ನು ಒಂದರ ಮೇಲೊಂದು ಧರಿಸಿ, ಈ ಹೊತ್ತಿಗೆ ಜಾರುಬಂಡಿಯಲ್ಲಿ ಕುಳಿತಿದ್ದ. ಅವನ ವಿಶಾಲವಾದ ಬೆನ್ನು ಅದರ ಅಗಲವನ್ನೆಲ್ಲ ಆಕ್ರಮಿಸಿತ್ತು. ತಾನೇ ಲಗಾಮುಗಳನ್ನು ಕೈಲಿ ತೆಗೆದುಕೊಂಡು ತಕ್ಷಣ ಕುದುರೆಯನ್ನು ಮುಟ್ಟಿದ. ಜಾರುಬಂಡಿ ಹೊರಟ ಕೂಡಲೇ ನಿಕಿಟ ಅದರೊಳಕ್ಕೆ ಹಾರಿ ಮುಂಭಾಗದ ಎಡಬದಿಯಲ್ಲಿ ಒಂದು ಕಾಲನ್ನು ಕೆಳಗೆ ಇಳಿಬಿಟ್ಟುಕೊಂಡು ಕುಳಿತ.

## 2

ಆ ಗಡಸು ಕುದುರೆ ಹೆಪ್ಪುಗಟ್ಟಿದ್ದ ಹಳ್ಳಿಯ ನುಣುಪು ದಾರಿಯ ಗುಂಟ ವೇಗವಾಗಿ ಜಾರುಬಂಡಿಯನ್ನು ಎಳೆದೊಯ್ದಿತು. ಗಾಡಿ ಮುಂದೆ ಸರಿದಂತೆಲ್ಲ ಜಾರುತೋಡುಗಳು ಸ್ವಲ್ಪ ಕೀಚು ಸದ್ದು ಮಾಡುತ್ತಿದ್ದವು.

"ಅಲ್ಲಿ ಕೂತಿರೋ ನಮ್ಮ ಮರಿಯನ್ನ ನೋಡು! ನಿಕಿಟ, ಎಲ್ಲಿ ಚಾವಟಿ ಕೊಡು"ಎಂದು ಕೂಗಿದ ವಾಸಿಲಿ ಆಂಡ್ರೆವಿಚ್ ದನಿಯಲ್ಲಿ ತನ್ನ 'ಉತ್ತರಾಧಿಕಾರಿ'ಯ ಬಗೆಗಿನ ಸಂಭ್ರಮ ಎದ್ದು ಕಾಣುತ್ತಿತ್ತು. ಹುಡುಗ ಜಾರುತೋಡುಗಳ ಮೇಲೆ ಕಾಲಿಟ್ಟುಕೊಂಡು ಜಾರುಬಂಡಿಯ ಗೋಡೆಗೆ ಒರಗಿ ನಿಂತಿದ್ದ. "ಕೆಳಗಿಳಿ, ಅಮ್ಮನ ಹತ್ರ ಹೋಗು" ಎಂದ.

ಹುಡುಗ ಕೆಳಗೆ ದುಮುಕಿದ. ನಿಧಾನವಾಗಿ ಸಾಗುತ್ತಿದ್ದ ಕುದುರೆ ಇದ್ದಕ್ಕಿದ್ದಂತೆ ತನ್ನ ಗತಿಯನ್ನು ಬದಲಿಸಿ ನಾಗಾಲೋಟಕ್ಕೆ ಶುರುಮಾಡಿತು.

ವಾಸಿಲಿ ಆಂಡ್ರೆವಿಚ್ ವಾಸಿಸುತ್ತಿದ್ದ ಹಳ್ಳಿಯ ತಿರುವಿನಲ್ಲಿ ಆರು ಮನೆಗಳಿದ್ದವು. ಹಳ್ಳಿಯ ಕೊನೆಯಲ್ಲಿದ್ದ ಕಮ್ಮಾರನ ಮನೆಯನ್ನು ಅವರು ಹಾದು ಹೋದ ತಕ್ಷಣವೇ, ತಾವಂದುಕೊಂಡದ್ದಕ್ಕಿಂತ ಗಾಳಿಯ ರಭಸ ಜೋರಾಗಿದೆ ಎಂದು ಅನ್ನಿಸಿತು. ದಾರಿಯು ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಸ್ಲೆಜ್‌ಗಳು ಹೋಗಿ ಬಿದ್ದಿದ್ದ ಜಾಡು ಬಹು ಬೇಗ ಹಿಮದಿಂದ ಮುಚ್ಚಿಕೊಂಡುಬಿಡುತ್ತಿದ್ದವು. ನೆಲದ ಉಳಿದ ಭಾಗಕ್ಕಿಂತ ಬಂಡಿ ಜಾಡು ಹಗುರವಾಗಿರುತ್ತಿದ್ದುದೇ ಜಾಡನ್ನು ಗುರುತಿಸಲು ಇದ್ದ ಒಂದೇ ದಾರಿ. ಹೊಲಗಳ ಮೇಲೆಲ್ಲ ಹಿಮದ ಕುಂಟೆಗಳು; ಹೀಗಾಗಿ ಭೂಮಿ-ಆಗಸ ಸೇರುತ್ತಿದ್ದ ಭಾಗ ಕಾಣಿಸುತ್ತಲೇ ಇರಲಿಲ್ಲ. ಟೆಲ್ಯಾಟಿನ್ ಅರಣ್ಯಪ್ರದೇಶ ಸಾಮಾನ್ಯವಾಗಿ ಸ್ಪಷ್ಟವಾಗಿ ಕಾಣುತ್ತಿತ್ತು; ಆದರೆ

ಈಗ ಗಾಡಿಯ ಓಟದಿಂದ ಮೇಲೆದ್ದ ಹಿಮದ ದೂಳಿನಲ್ಲಿ ಮಬ್ಬಾಗಿ ಆಗೊಮ್ಮೆ ಈಗೊಮ್ಮೆ ಎಂಬಂತೆ ಮಾತ್ರ ಕಾಣುತ್ತಿತ್ತು. ಗಾಳಿ ಎಡಭಾಗದಿಂದ ಬೀಸುತ್ತಿತ್ತು, ಮುಖೋರ್ಟಿಯ ಜೂಲಿನ ಒಂದು ಭಾಗದ ಮೇಲೆ ಬೀಸುತ್ತಿದ್ದ ಗಾಳಿ ಕುದುರೆಯ ಸರಳಗುಣಿಕೆ ಹಾಕಿದ್ದ ನವಿರುಗೂದಲ ಬಾಲವನ್ನು ಕೂಡ ಪಕ್ಕಕ್ಕೆ ಸರಿಸುತ್ತಿತ್ತು. ಗಾಳಿ ಬೀಸುವ ಕಡೆ ಕೂತಿದ್ದ ನಿಕಿಟನ ಅಗಲ ಕಾಲರಿನ ಕೋಟು ಅವನ ಗಲ್ಲ ಮತ್ತು ಮೂಗಿನ ಮೇಲೆ ಬಂದು ಕೂರುತ್ತಿತ್ತು.

"ಈ ರಸ್ತೆ ಮುಖೋರ್ಟಿ ಜೋರಾಗಿ ಓಡೋದಕ್ಕೆ ಸರಿಯಾದ ಅವಕಾಶವನ್ನೇ ಕೊಡಲ್ಲ? ರಸ್ತೆ ತುಂಬ ಬರೀ ಹಿಮ ತುಂಬಿದೆ" ಎಂದ ವಾಸಿಲಿ ಆಂಡ್ರೆವಿಚ್; ಅವನಿಗೆ ತನ್ನ ಕುದುರೆಯ ಬಗ್ಗೆ ತುಂಬ ಅಭಿಮಾನ. "ಒಂದ್ಸಲ ನಾನು ಪಶೂಟಿನೋಕ್ಕೆ ಗಾಡೀಲಿ ಹೋಗಿದ್ದೆ, ಅರ್ಧ ಗಂಟೇಲಿ, ಅಷ್ಟೆ"

"ಏನು?" ಎಂದ ನಿಕಿಟ, ಅವನ ಕಾಲರ್ ಕಿವಿ ಮುಚ್ಚಿದ್ದರಿಂದಾಗಿ ಮಾತು ಸರಿಯಾಗಿ ಕೇಳಿಸದೆ.

"ಹಿಂದೊಂದ್ಸಲ ನಾನು ಪಶೂಟಿನೋಕ್ಕೆ ಗಾಡೀಲಿ ಅರ್ಧ ಗಂಟೇಲೇ ಹೋಗಿದ್ದೆ", ಈ ಸಲ ವಾಸಿಲಿ ಆಂಡ್ರೆವಿಚ್ ಜೋರಾಗಿ ಹೇಳಿದ.

"ಇದು ಒಳ್ಳೆ ಕುದುರೆ ಅನ್ನೋದನ್ನೇನೂ ವಿಶೇಷವಾಗಿ ಹೇಳ್ಬೇಬೇಕಾಗಿಲ್ಲ" ಅಂದ ನಿಕಿಟ.

ಸ್ವಲ್ಪ ಹೊತ್ತು ಅವರು ಮೌನದಿಂದಿದ್ದರು. ಆದರೆ ವಾಸಿಲಿ ಆಂಡ್ರೆವಿಚ್‌ಗೆ ಮಾತನಾಡುವ ಚಪಲ.

"ಆ ಚಿಲ್ಲರೆ ಸಾರಾಯಿ ಮಾರಾಟಗಾರನಿಗೆ ವೋಡ್ಕಾ ಕೊಡಬೇಡ ಅಂತ ನಿನ್ನ ಹೆಂಡತಿಗೆ ಹೇಳಿದೆ ತಾನೇ?" ಎಂದು ಹಿಂದೆ ಮಾಡಿದ್ದ ರೀತಿಯಲ್ಲಿ ಜೋರಾಗಿ ಹೇಳಿದ. ತನ್ನಂಥ ಬುದ್ಧಿವಂತ ಹಾಗೂ ಮುಖ್ಯ ವ್ಯಕ್ತಿಯ ಜೊತೆ ಮಾತಾಡುವುದಕ್ಕೆ ನಿಕಿಟನಿಗೆ ಹೆಮ್ಮೆ ಅನ್ನಿಸುತ್ತೆ ಅನ್ನುವ ಖಾತ್ರಿಯಿತ್ತು ವಾಸಿಲಿ ಆಂಡ್ರೆವಿಚ್‌ಗೆ. ತಾನು ಆಡಿದ ವಿನೋದದ ಮಾತಿನ ಬಗ್ಗೆ ಅವನಿಗೆ ಸಂತೋಷವಾಗಿತ್ತು; ಆದರೆ ಈ ಮಾತು ನಿಕಿಟನ ಬಾಯಿಗೆ ಅಹಿತಕರವಾದೀತು ಎಂಬ ಸೂಕ್ಷ್ಮ ಅವನಿಗೆ ಅರ್ಥವಾಗಿರಲಿಲ್ಲ.

ತನ್ನ ಯಜಮಾನನ ಮಾತುಗಳು ಕೇಳಿಸದಿರುವ ಹಾಗೆ ಈಗಲೂ ಜೋರಾಗಿ ಬೀಸುತ್ತಿದ್ದ ಗಾಳಿ ತಡೆಯಿತು.

ವಾಸಿಲಿ ಆಂಡ್ರೆವಿಚ್ ಚಿಲ್ಲರೆ ಸಾರಾಯಿ ಮಾರಾಟಗಾರನ ಬಗೆಗಿನ ತನ್ನ ತಮಾಷೆ ಮಾತನ್ನು ಮತ್ತೊಮ್ಮೆ ಜೋರಾಗಿಯೂ ಸ್ಪಷ್ಟವಾಗಿಯೂ ಆಡಿದ.

"ಅದು ಅವರ ವಿಷಯ, ಯಜಮಾನ್ರೇ. ಅವರ ವ್ಯವಹಾರದಲ್ಲಿ ನಾನು ಮೂಗು ತೂರ್ಸೋದಿಲ್ಲ. ನಮ್ಮ ಹುಡುಗನನ್ನು ಅವಳು ಎಲ್ಲೀವರೆಗೂ ಚೆನ್ನಾಗಿ ನೋಡ್ಕೋತಾಳೋ ಅಲ್ಲೀವರೆಗೆ ಅವರಿಗೆ ದೇವರು ಒಳ್ಳೇದು ಮಾಡಲಿ."

"ಅದು ಸರಿಯೇ. ಈ ಬೇಸಿಗೇಲಿ ನಿನಗೇನಾದ್ರೂ ಕುದುರೆ ಕೊಂಡ್ಕೊಳ್ಳೋ ಆಲೋಚನೆ ಇದೆಯಾ?" ಎಂದ ವಾಸಿಲಿ ಆಂಡ್ರೆವಿಚ್ ಮಾತು ಬದಲಿಸುತ್ತ.

"ಹೌದು, ಬೇರೆ ದಾರಿಯೇ ಇಲ್ಲ" ಎಂದ ನಿಕಿಟ, ತನ್ನ ಕಾಲರನ್ನು ಕೆಳಕ್ಕೆ ಸರಿಸಿ, ಯಜಮಾನರ ಕಡೆ ಹಿಂದೆ ಬಾಗಿ.

ಮಾತುಕತೆ ಈಗ ಹೆಚ್ಚು ಆಸಕ್ತಿದಾಯಕವಾದ ವಿಷಯದ ಕಡೆ ತಿರುಗಿತ್ತು. ಹೀಗಾಗಿ ಅದನ್ನು ತಪ್ಪಿಸುವುದಕ್ಕೆ ಅವನಿಗೆ ಇಷ್ಟವಾಗಲಿಲ್ಲ.

"ಮಗ ಬೆಳಿತಿದಾನೆ. ಅವನು ತಾನೇ ಉಳೋದನ್ನು ಕಲ್ತುಕೋಬೇಕಲ್ಲ. ಇದುವರತನಕ ನಾವು ಕುದುರೇನ ಬಾಡಿಗೆಗೆ ತೊಗೋಬೇಕಾಗಿತ್ತು."

"ಅದ್ಸರಿ, ಒಂದು ಸಣ್ಣ ಗಾತ್ರದ್ದನ್ನ ಯಾಕೆ ತೊಗೋಬಾರ್ದು? ನಾನೇನು ಅದಕ್ಕೆ ಹೆಚ್ಚಿಗೆ ಕೇಳಲ್ಲ" ಎಂದು ವಾಸಿಲಿ ಆಂಡ್ರೆವಿಚ್ ಜೋರಾಗಿ ಕೂಗಿ ಹೇಳಿದ. ಅವನಲ್ಲಿ ಹೊಸ ಉತ್ಸಾಹ ತುಂಬಿ ಬಂದಿತ್ತು; ಅದಕ್ಕೇ ತನಗೆ ಪ್ರಿಯವಾದ ವ್ಯವಹಾರದ, ಅಂದರೆ ಕುದುರೆ ವ್ಯಾಪಾರದ, ಮಾತು ತೆಗೆದ. ಅವನ ತಲೇಲೆಲ್ಲ ಅದೇ ತುಂಬಿಕೊಂಡಿತ್ತು.

"ನೀವೇನಾದ್ರೂ ಹದಿನೈದು ರೂಬಲ್ ಕೊಟ್ರೆ ಕುದುರೆ ಮಾರ್ಕೆಟ್‌ನಲ್ಲಿ ಒಂದನ್ನ ಕೊಂಡ್ಕೋತೀನಿ" ಎಂದ ನಿಕಿಟ; ವಾಸಿಲಿ ಆಂಡ್ರೆವಿಚ್ ಮಾರಬೇಕು ಎಂದಿದ್ದ ಕುದುರೆಗೆ ಏಳು ರೂಬಲ್‌ಗಳಷ್ಟು ಜಾಸ್ತಿಯಾಗತ್ತೆ ಅಂದವನಿಗೆ ಗೊತ್ತಿತ್ತು. ಅಲ್ಲದೆ ತನ್ನ ತಲೆಗೇ ಕಟ್ಟಿದರೆ ಇಪ್ಪತ್ತೈದು ರೂಬಲ್‌ಗಳಷ್ಟು ಬೆಲೆ ಹೇಳ್ತಾನೆ ಬೇರೆ. ಹಾಗಾದ್ರೆ ಇನ್ನಾರು ತಿಂಗಳು ತಾನು ಬೇರೇನೂ ಹಣ ಪಡೆಯೋದಕ್ಕೆ ಸಾಧ್ಯವಿರಲಿಲ್ಲ.

"ಅದು ತುಂಬ ಒಳ್ಳೆ ಕುದುರೆ, ಕಣಯ್ಯ. ನಿನ್ನ ಒಳ್ಳೇದಕ್ಕೇ ನಾನು ಹೇಳ್ತಿರೋದು. ಬ್ರೆಖ್ಯುನೆವ್ ಯಾರಿಗೂ ಕೆಟ್ಟದ್ದು ಬಯಸೋ ಮನುಷ್ಯ ಅಲ್ಲ. ನಂಗೇ ನಷ್ಟವಾಗಲಿ ಬಿಡು. ನಾನು ಬೇರೆಯೋರ ಥರ ಅಲ್ಲ. ನಿಜವಾಗ್ಲೂ!" ಗಿರಾಕಿಗಳನ್ನೂ ವ್ಯಾಪಾರಿಗಳನ್ನೂ ಒಲಿಸಿಕೊಳ್ಳೋ ತನ್ನ ಎಂದಿನ ಪೂಸಿ ಹೊಡೆಯೋ ದನಿಯಲ್ಲಿ ಹೇಳಿ. "ಅದು ತುಂಬ ಒಳ್ಳೇ ಕುದುರೆ, ನೋಡು" ಎಂದ ಮತ್ತೊಮ್ಮೆ.

"ಅದೇನೋ ಸರಿ" ಎಂದ ನಿಕಿಟ ನಿಟ್ಟುಸಿರು ಬಿಡುತ್ತ; ಅವನು ಹೆಚ್ಚು ಹೇಳೊದನ್ನು ಸಾಧ್ಯವಿಲ್ಲ ಅಂತ ಅವನಿಗೆ ಗೊತ್ತಿತ್ತು. ಮತ್ತೊಂದು ಸಲ ತನ್ನ ಕಿವಿ ಮತ್ತು ಮುಖವನ್ನು ಮುಚ್ಚಿಕೊಂಡ ಕಾಲರ್ ಅನ್ನು ತಕ್ಷಣ ಸರಿಪಡಿಸಿಕೊಂಡ.

ಆ ಮುಂದಿನ ಅರ್ಧ ಗಂಟೆಯ ಪಯಣ ಮೌನದಿಂದ ಕೂಡಿತ್ತು. ನಿಕಿಟನ ಪಕ್ಕದಿಂದ ಗಾಳಿ ರಭಸವಾಗಿ ಬೀಸುತ್ತಿತ್ತು; ಅದು ಹೊಡೆಯುತ್ತಿದ್ದ ಜಾಗದಲ್ಲೇ ಅವನ ತುಪ್ಪುಳುಗಂಬಳಿ ಹರಿದುಹೋಗಿತ್ತು.

ಇನ್ನೂ ಪೂರ್ತಿ ತಣ್ಣಗಾಗದೇ ಇದ್ದ ತನ್ನ ಬಾಯನ್ನು ಮುಚ್ಚಿದ್ದ ಕಾಲರ್ ಅನ್ನು ಎಳೆದುಕೊಂಡು ಅದನ್ನು ಊದಿದ.

"ಏನು ಯೋಚನೆ ಮಾಡ್ತಿದ್ದೀಯಾ? ಕರಮ್ಯೆಶೆವೋ ಮೂಲಕ ಹೋಗೋಣ್ವೋ ಇಲ್ಲ ನೇರವಾದ ದಾರೀಲಿ ಹೋಗೋಣ್ವೋ?" ಎಂದು ಕೇಳಿದ ವಾಸಿಲಿ ಆಂಡ್ರೆವಿಚ್.

ಕರಮ್ಯೆಶೆವೋ ಮೂಲಕ ಹೋಗೋ ದಾರಿ ಹೆಚ್ಚು ಪರಿಚಿತವಾದ್ದದ್ದು, ಎರಡೂ ಕಡೆ ಎತ್ತರಿಸಿದ ರಸ್ತೆ ಸೂಚನೆ ನೀಡುವ ತೋರುಗಂಬಗಳನ್ನು ನೆಟ್ಟಿದ್ದರು. ನೇರವಾದ ರಸ್ತೇಲಿ ಹೋದರೆ ಹತ್ತಿರವೇನೋ ಆಗುತ್ತಿತ್ತು, ಆದರೆ ಹೆಚ್ಚು ಬಳಕೆಯದಲ್ಲ, ಜೊತೆಗೆ ರಸ್ತೆ ತೋರುಗಂಬಗಳು ಇರ್ಲಿಲ್ಲ, ಬರೀ ಹಿಮ ತುಂಬಿರುತ್ತಿತ್ತು.

ನಿಕಿಟ ಸ್ವಲ್ಪ ಹೊತ್ತು ಯೋಚಿಸಿದ.

"ಕರಮ್ಯೆಶೆವೋ ದೂರದ ದಾರಿ ಆದ್ರೂ, ಆ ಕಡೆ ಹೋಗೋದೇ ವಾಸಿ" ಎಂದ.

"ಆದ್ರೆ ನೇರವಾದ ರಸ್ತೇಲಿ ಹೋದ್ರೆ, ಕಾಡೊಳಗಿನ ಟೊಳ್ಳು ರಸ್ತೆ ದಾಟಿದ್ರೆ ಆಮೇಲೇನೂ ತೊಂದ್ರೆ ಇರಲ್ಲ" ಎಂದ ವಾಸಿಲಿ ಆಂಡ್ರೆವಿಚ್; ಅವನಿಗೆ ಹತ್ತಿರದ ದಾರಿಯಲ್ಲಿ ಹೋಗುವುದೇ ಇಷ್ಟವಾಗಿತ್ತು.

"ನೀವು ಹೇಳಿದ ಹಾಗೇ" ಎಂದ ನಿಕಿಟ ಮತ್ತೆ ತನ್ನ ಕಾಲರ್ ಸರಿಪಡಿಸಿಕೊಳ್ಳುತ್ತ.

ವಾಸಿಲಿ ಆಂಡ್ರೆವಿಚ್ ತಾನು ಹೇಳಿದ ಹಾಗೆಯೇ ಮಾಡಿದ. ಅರ್ಧ ವೆಸ್ಟ್ ದೂರ ಸಾಗಿದ ಮೇಲೆ ಒಂದು ನೀಳವಾದ ಓಕ್ ಮರದ ತೋರುಗಂಬ ಇತ್ತು. ಅದರಲ್ಲಿ ಒಂದೆರಡು ಒಣ ಎಲೆಗಳು ಜೋತಾಡುತ್ತಿದ್ದವು, ಅಲ್ಲಿ ಅವರು ಎಡಕ್ಕೆ ತಿರುಗಿದರು.

ತಿರುಗಿದಾಗ ಎದುರುಗಾಳಿ ಇತ್ತು, ಹಿಮ ಆಗಲೇ ಬೀಳಕ್ಕೆ ಶುರುವಾಗಿತ್ತು. ಗಾಡಿ ಓಡಿಸುತ್ತಿದ್ದ ವಾಸಿಲಿ ಆಂಡ್ರೆವಿಚ್ ತನ್ನ ಗಲ್ಲಗಳನ್ನು ಊದಿಸಿಕೊಂಡು ತನ್ನ ಮೀಸೆಯ ಮೂಲಕ ಉಸಿರು ಬಿಡುತ್ತಿದ್ದ. ನಿಕಿಟ ತೂಕಡಿಸುವುದಕ್ಕೆ ತೊಡಗಿದ.

ಮುಂದೆ ಹತ್ತು ನಿಮಿಷ ಅವರು ಮೌನದಿಂದಲೇ ಪಯಣಿಸಿದರು. ಇದ್ದಕ್ಕಿದ್ದಂತೆ ವಾಸಿಲಿ ಆಂಡ್ರೆವಿಚ್ ಏನೋ ಹೇಳಲು ತೊಡಗಿದ.

"ಆ್ಞ... ಏನು?" ಎಂದು ಕೇಳಿದ ನಿಕಿಟ ಕಣ್ಣುಬಿಡುತ್ತ.

ವಾಸಿಲಿ ಆಂಡ್ರೆವಿಚ್ ಉತ್ತರಿಸಲಿಲ್ಲ, ಆದರೆ ಬಾಗಿ ಹಿಂದಕ್ಕೆ ನೋಡಿ ಆಮೇಲೆ ಕುದುರೆಯ ಮುಂದೆ ಕಣ್ಣು ಹಾಯಿಸಿದ. ಮುಖೋರ್ಟಿಯ ಕಾಲುಗಳು ಮತ್ತು ಕತ್ತಿನ ಭಾಗದಲ್ಲಿ ಬೆವರು ಸಾಲುಗಟ್ಟಿತ್ತು. ಅದೀಗ ನಡಿಗೆ ನಿಧಾನಗೊಳಿಸಿತ್ತು.

"ಏನಾಯ್ತು?" ಅಂದ ನಿಕಿಟ.

"ಏನಾಯ್ತು? ಏನಾಯ್ತಾ?" ವಾಸಿಲಿ ಆಂಡ್ರೆವಿಚ್ ಕೋಪದಿಂದ ಅವನನ್ನು ಅಣಕಿಸಿದ. "ತೋರುಗಂಬಗಳೇ ಕಾಣಿಸ್ತಿಲ್ಲ. ಎಲ್ಲೋ ದಾರಿ ತಪ್ಪಿರಬೇಕು!" "ಸರಿ, ಗಾಡಿ ನಿಲ್ಲಿಸಿ, ನಾನು ಹೋಗಿ ನೋಡ್ತೀನಿ" ಎಂದು ನಿಕಿಟ ಗಾಡಿಯಿಂದ ಹಗುರವಾಗಿ ದುಮುಕಿದ; ಹುಲ್ಲಿನ ಅಡಿಯಲ್ಲಿ ಇರಿಸಿದ್ದ ಚಾವಟಿಯನ್ನು ತೆಗೆದುಕೊಂಡು ಗಾಡಿ ನಿಂತಿದ್ದ ಎಡಭಾಗದಲ್ಲಿ ತಿರುಗಿಕೊಂಡು ಹೋದ.

ಈ ವರ್ಷ ಹಿಮ ಹೆಚ್ಚಾಗಿರಲಿಲ್ಲ, ಹೀಗಾಗಿ ಎಲ್ಲಿ ಬೇಕಾದರೂ ನಡೆದು ಹೋಗಬಹುದಾಗಿತ್ತು. ಆದರೂ ಕೆಲವು ಕಡೆಗಳಲ್ಲಿ ಮೊಣಕಾಲುದ್ದ ಹಿಮ ಬಿದ್ದಿತ್ತು, ಅವನ ಬೂಟುಗಳೊಳಗೂ ಸೇರಿಕೊಂಡಿತು. ತನ್ನ ಕಾಲು ಹಾಗೂ ಚಾವಟಿಗಳಿಂದ ನೆಲಕ್ಕಾಗಿ ತಡಕಾಡುತ್ತ ಅತ್ತಿತ್ತ ಹೋದ ಅವನಿಗೆ ಎಲ್ಲಿಯೂ ರಸ್ತೆ ಕಾಣಲಿಲ್ಲ.

"ಇದು ಹೇಗಾಯ್ತು?" ಎಂದ ವಾಸಿಲಿ ಆಂಡ್ರೆವಿಚ್, ನಿಕಿಟ ಜಾರುಬಂಡಿ ಕಡೆಗೆ ವಾಪಸಾದಾಗ.

"ಈ ಕಡೆ ರಸ್ತೇನೇ ಇಲ್ಲ, ಇನ್ನೊಂದು ಕಡೆ ಹೋಗಿ ನೋಡ್ಬೇಕು." ಎಂದ ನಿಕಿಟ.

"ಮುಂದೆ ಏನೋ ಕಾಣಿಸ್ತಿದೆ, ಹೋಗಿ ನೋಡು."

ಏನೋ ಕಪ್ಪಗೆ ಕಾಣಿಸುತ್ತಿದ್ದ ಕಡೆಗೆ ನಿಕಿಟ ಹೋದ, ಆದರೆ ಅದು ಗಾಳಿ ಬೀಸಿ ಚಳಿಗಾಲದಲ್ಲಿ ಬೆಳೆಯಿಲ್ಲದ ಹೊಲಗಳಿಂದ ಹೊತ್ತು ತಂದಿದ್ದು ಹಿಮದ ಸುತ್ತ ಬಿದ್ದಿದ್ದ ಮಣ್ಣು, ಅದಕ್ಕೆ ಬಣ್ಣ ಬಳಿದಿತ್ತು. ಬಲಗಡೆಯಲ್ಲಿಯೂ ಹುಡುಕಿದ ಅವನು ಮತ್ತೆ ಗಾಡಿಯ ಬಳಿ ಹಿಂದಿರುಗಿದ. ತನ್ನ ಕೋಟಿನ ಮೇಲೆ ಕೂತಿದ್ದ ಹಿಮವನ್ನು ಕೊಡವಿಕೊಂಡ, ಬೂಟುಗಳನ್ನು ಜಾಡಿಸಿಕೊಂಡ, ಮತ್ತೆ ಬಂದು ಕೂತ.

"ನಾವು ಬಲಗಡೆಗೆ ಹೋಗಬೇಕು" ಎಂದ ಅವನು ನಿಶ್ಚಿತವಾಗಿ. "ಮುಂಚೆ ಗಾಳಿ ನಮ್ಮ ಎಡದಿಂದ ಬೀಸ್ತಿತ್ತು, ಆದ್ರೆ ಈಗ ಎದುರುಗಾಳಿಯಾಗಿದೆ. ಗಾಡೀನ ಬಲಕ್ಕೆ ಹೊಡೀರಿ" ಎಂದ ಮತ್ತೆ ದೃಢವಾಗಿ.

ಅವನ ಸಲಹೆಯನ್ನು ಸ್ವೀಕರಿಸಿದ ವಾಸಿಲಿ ಆಂಡ್ರೆವಿಚ್ ಗಾಡಿಯನ್ನು ಬಲಕ್ಕೆ ತಿರುಗಿಸಿದ. ಆದರೆ ಅಲ್ಲಿಯೂ ರಸ್ತೆ ಕಾಣಿಸಲಿಲ್ಲ. ಅವರು ಸ್ವಲ್ಪ ಹೊತ್ತು ಅದೇ ದಿಕ್ಕಿನಲ್ಲಿ ಮುಂದುವರಿದರು. ಗಾಳಿ ಎಂದಿಗಿಂತ ಹೆಚ್ಚು ಬಿರುಸಾಗಿ ಬೀಸುತ್ತಿತ್ತು; ಹಗುರವಾಗಿ ಹಿಮವೂ ಬೀಳುತ್ತಿತ್ತು.

"ನಾವು ದಾರಿ ತಪ್ಪಿದ್ದೀವಿ ಅಂತ ಕಾಣತ್ತೆ, ಯಜಮಾನ್ರೇ" ಎಂದ ನಿಕಿಟ ಇದ್ದಕ್ಕಿದ್ದಂತೆ, ಖುಷಿಯಿಂದಲೆಂಬಂತೆ. "ಅದೇನು?" ಎಂದು ಅವನು ಹಿಮದ ಹೊದಿಕೆಯ ಕೆಳಗೆ ಕಾಣಿಸುತ್ತಿದ್ದ ಆಲೂಗಡ್ಡೆಯ ಬಳ್ಳಿಗಳ ಕಡೆ ತೋರಿಸುತ್ತ.

ವಾಸಿಲಿ ಆಂಡ್ರೆವಿಚ್ ಬೆವರುತ್ತಿದ್ದ ಕುದುರೆ ಲಗಾಮು ಎಳೆದು ನಿಲ್ಲಿಸಿದ, ಕುದುರೆಯ ಪಕ್ಕೆಗಳು ಬಿರುಸಾದ ಉಸಿರಾಟದಿಂದಾಗಿ ಉಬ್ಬಿ ತಗ್ಗಿ ಮಾಡುತ್ತಿದ್ದವು.

"ಏನದು?"

"ಗೊತ್ತಾಗಲಿಲ್ವಾ? ನಾವು ಜರೋವ್ ಅವರ ಹೊಲದ ಹತ್ರ ಇದ್ದೀವಿ. ನಾವೆಲ್ಲಿ ಬಂದುಬಿಟ್ವಿ ನೋಡಿ."

"ಏನೇನೋ ಹೇಳ್ಬೇಡ" ಎಂದ ವಾಸಿಲಿ ಆಂಡ್ರೆವಿಚ್ ಕೋಪದಿಂದ.

"ಏನೇನೋ ಅಲ್ಲ, ಯಜಮಾನ್ರೇ. ಆಗಿರೋದೇ ಹಾಗೆ" ಎಂದುತ್ತರಿಸಿ ನಿಕಿಟ,

"ನಮ್ಮ ಜಾರುಬಂಡಿ ಆಲೂಗಡ್ಡೆ ಹೊಲದ ಮೇಲೆ ಹೋಗ್ತಾ ಇರೋದು ಕಾಣಿಸಲ್ವಾ? ಇಲ್ಲಿ ತಂದು ಸುರಿದಿರೋ ಆಲೂಗಡ್ಡೆ ಬಳ್ಳಿಗಳು ಗುಡ್ಡೆಯಾಗಿವೆ. ಇದು ಜಸಿಕರೋವ್ ಅವರ ಕಾರ್ಖಾನೆ ಜಾಗ."

"ಅಯ್ಯೋ ದೇವರೇ, ನಾವು ಹೇಗೆ ದಾರಿ ತಪ್ಪಿದ್ವೀ ಅಂತ! ಈಗೇನ್ಮಾಡೋದು?"

"ನಾವು ನೇರವಾಗೇ ಹೋಗ್ಬೇಕು, ಅಷ್ಟೆ. ಎಲ್ಲಾದ್ರೂ ಹೊಲದಿಂದ ಹೊರಕ್ಕೆ ಬರ್ತೀವಿ. ಜಸಿಕರೋವ್ ಅವರ ಹೊಲದ ಹತ್ರ ಅಲ್ಲದಿದ್ರೂ ಇನ್ನೆಲ್ಲೋ ಬಂದ್ಬಿಟ್ಟಿದ್ದೀವಿ" ಎಂದ ನಿಕಿಟ.

ವಾಸಿಲಿ ಆಂಡ್ರೆವಿಚ್ ಈ ಮಾತನ್ನೊಪ್ಪಿದ, ನಿಕಿಟ ಹೇಳಿದ ಹಾಗೆ ಗಾಡಿ ಓಡಿಸಿದ. ಸ್ವಲ್ಪ ದೂರ ಹೀಗೆ ಹೋದರು. ಕೆಲವು ಸಲ ಅವರಿಗೆ ಒಣಭೂಮಿ ಕಾಣಿಸಿದರೆ, ಕೆಲವು ಸಲ ಹಿಮಗಟ್ಟಿದ್ದ ಉಬ್ಬುಗಳ ಮೇಲೆ ಸ್ಲೆಜ್‌ಗಳು ಓಡಿಯಾಡಿ ಗುರುತಾಗಿದ್ದ ಜಾಗಗಳು ಎದುರಾದವು, ಕೆಲವು ಸಲ ಅವರು ಚಳಿಗಾಲದ ಗೋಧಿ ಹೊಲಗಳನ್ನು ಕಂಡರು, ಒಣ ಪುರುಲೆಗಳು ಬಿದ್ದಿದ್ದ ರಾಶಿಗಳು ಹಾಗೂ ಹಿಮದಲ್ಲಿ ಸಿಕ್ಕಿಕೊಂಡು ಗಾಳಿಗೆ ಅಲುಗಾಡುತ್ತಿದ್ದ ಹುಲ್ಲುಕಡ್ಡಿಗಳನ್ನು ಕೆಲವು ವೇಳೆ ಕಂಡರು. ಕೆಲವು ವೇಳೆ ದಟ್ಟವಾಗಿ ಬೆಳಗಿದ್ದ ಹಿಮರಾಶಿಯು ಎದುರಾಯಿತು, ಅದರ ಮೇಲೇ ಏನೂ ಕಾಣಿಸುತ್ತಿರಲಿಲ್ಲ.

ಹಿಮ ಮೇಲಿನಿಂದ ಬೀಳುತ್ತಿತ್ತು, ಕೆಲವು ವೇಳೆ ಕೆಳಗಿನಿಂದಲೂ ಮೇಲೇಳುತ್ತಿತ್ತು. ಕುದುರೆ ದಣಿದಿದ್ದುದು ಎದ್ದು ಕಾಣಿಸುತ್ತಿತ್ತು, ಬೆವರಿನಿಂದ ಅದರ ರೋಮಗಳು ಸುರುಳಿಗಟ್ಟಿ ಮೇಲೆಲ್ಲ ಮಂಜು ಮುಸುಕಿತ್ತು. ಅದೀಗ ನಿಧಾನ ನಡಿಗೆಯಲ್ಲಿ ಸಾಗುತ್ತಿತ್ತು. ಇದ್ದಕ್ಕಿದ್ದಂತೆ ಅದು ಒಂದೆಡೆ ಮುಗ್ಗರಿಸಿ ಕುಸಿದು ಕುಳಿತುಬಿಟ್ಟಿತು; ಅದೇನು ಗುಂಡಿಯೋ ನೀರಿನ ಕುಂಟೆಯೋ ಗೊತ್ತಾಗಲಿಲ್ಲ. ವಾಸಿಲಿ ಆಂಡ್ರೆವಿಚ್ ಗಾಡಿಯನ್ನು ನಿಲ್ಲಿಸಲು ಹಾತೊರೆಯುತ್ತಿದ್ದ, ಆದರೆ ನಿಕಿಟ ಅವನತ್ತ ತಿರುಗಿ ಕೂಗಿಕೊಂಡ:

"ಯಾಕೆ ನಿಲ್ಲಿಸಿದ್ರಿ? ದಾರಿಗೆ ಬಂದಿದ್ದೀವಿ, ಹೋಗೋಣ. ಏಯ್, ಮುಖೋರ್ಟಿ, ಮರಿ. ಎದ್ದೇಳು, ಓಡು!" ಎನ್ನುತ್ತ ಸಂತೋಷದಿಂದ ಕುದುರೆಗೆ ಹೇಳಿ, ಸ್ಲೆಜ್‌ನಿಂದ ಕೆಳಕ್ಕೆ ಜಿಗಿದು ತಾನೇ ಗುಂಡಿಯಲ್ಲಿ ಬಿದ್ದ.

ಕುದುರೆ ತಕ್ಷಣ ಮೇಲೆದ್ದು ಗುಂಡಿಯನ್ನು ಸರಕ್ಕನೆ ಹತ್ತಿ ಹಿಮಗಟ್ಟಿದ್ದ ದಂಡೆಯ ಮೇಲೆ ನಿಂತಿತು. ಅದು ಗುಂಡಿಯೇ, ಯಾರೋ ತೋಡಿದ್ದರು.

"ನಾವೆಲ್ಲಿದ್ದೀವೀಗ?" ಎಂದು ಕೇಳಿದ ವಾಸಿಲಿ ಆಂಡ್ರೆವಿಚ್.

"ಇಷ್ಟರಲ್ಲೇ ಗೊತ್ತಾಗತ್ತೆ! ಹೋಗೋಣ, ಎಲ್ಲಿಗಾದ್ರೂ ಹೋಗ್ತೀವಲ್ಲ" ಎಂದ ನಿಕಿಟ ಉತ್ತರವಾಗಿ.

"ಇದು ಗೊರ್ಯಾಚ್ಕಿನ್ ಕಾಡಲ್ಲವಾ!" ಎಂದು ವಾಸಿಲಿ ಆಂಡ್ರೆವಿಚ್ ಮುಂದೆ ಹಿಮದಲ್ಲಿ ಮೇಲೆದ್ದು ಕಾಣುತ್ತಿದ್ದ ಏನೋ ಕಪ್ಪಾದ ವಸ್ತುವಿನ ಕಡೆಗೆ ತೋರಿಸುತ್ತ.

"ಅದು ಯಾವ ಕಾಡು ಅಂತ ಅಲ್ಲಿಗೆ ಹೋದ್ರೆ ಗೊತ್ತಾಗತ್ತೆ" ಎಂದ ನಿಕಿಟ.

ಕಾಣಿಸಿದ್ದ ಆ ಕಪ್ಪು ವಸ್ತುವಿನ ಪಕ್ಕದಲ್ಲಿ ಒಣಗಿದ ನೀಳವಾದ ವಿಲೋ ಎಲೆಗಳು ಅಲುಗಾಡುತ್ತಿದ್ದುದು ಕಾಣಿಸಿತು; ಇದರಿಂದ ಅದು ಕಾಡಾಗಿರದೆ ವಸತಿ ಪ್ರದೇಶ ಅಂತ ಗೊತ್ತಾಯಿತು; ಆದರೆ ಹಾಗೆ ಹೇಳಲು ಅವನು ಇಷ್ಟಪಡಲಿಲ್ಲ. ಆ ಗುಂಡಿಯಿಂದ ಇನ್ನೂ ಇಪ್ಪತ್ತೈದು ಗಜಗಳಷ್ಟು ದೂರ ಕೂಡ ಸಾಗಿರಲಿಲ್ಲ, ಅವರಿಗೆ ಎದುರುಗಡೆ ಮರಗಳು, ಕಪ್ಪಾಗಿ ಕಾಣಿಸಿತಲ್ಲ, ಅಲ್ಲೇನೋ ನರಳುವ ದನಿ ಕೇಳಿಸಿದ ಹಾಗಾಯ್ತು. ನಿಕಿಟ ಊಹಿಸಿದ್ದುದು ನಿಜವೇ ಆಗಿತ್ತು: ಅದು ಕಾಡಲ್ಲ, ಅಲ್ಲಿ ಇಲ್ಲಿ ಅಲುಗಾಡುತ್ತಿದ್ದ ಎಲೆಗಳ ವಿಲೋ ಮರಗಳು. ಅವುಗಳನ್ನು ಒಕ್ಕುವ ಕಣದ ಬದುಗಳ ಗುಂಟ ನಟ್ಟಿದ್ದುದು ಸ್ಪಷ್ಟವಾಗಿತ್ತು. ಕರುಣಾಜನಕವಾಗಿ ನರಳುತ್ತಿದ್ದಂತೆ ಸದ್ದುಮಾಡುತ್ತಿದ್ದ ವಿಲೋ ಮರಗಳ ಹತ್ತಿರ ಬಂದ ಕುದುರೆ ಇದ್ದಕ್ಕಿದ್ದಂತೆ ತನ್ನ ಮುಂಗಾಲುಗಳನ್ನು ಜಾರುಬಂಡಿಯ ಎತ್ತರಕ್ಕೂ ಮೇಲಕ್ಕೆ ಎತ್ತಿ ಹಿಂಗಾಲುಗಳನ್ನು ಎಳೆದು ಜಾರುಬಂಡಿಯನ್ನು ತಗ್ಗಿನಿಂದ ಮೇಲಕ್ಕೆಳೆದೊಯ್ದು ಎಡಕ್ಕೆ ತಿರುಗಿತು, ಈಗದರ ಕಾಲುಗಳು ಹಿಮದಲ್ಲಿ ಹೂತುಹೋಗಲಿಲ್ಲ; ಅವರೀಗ ರಸ್ತೆಯಲ್ಲಿ ಬಂದಿದ್ದರು.

"ಅಬ್ಬ, ಸರಿಯಾಯಿತು, ಆದರೆ ಎಲ್ಲಿದ್ದೇವೋ ದೇವರೇ ಬಲ್ಲ!" ಎಂದ ನಿಕಿಟ.

ರಸ್ತೆಯಲ್ಲಿ ಕುದುರೆ ನೇರವಾಗಿ ಸಾಗಿತು; ಇನ್ನೊಂದು ನೂರು ಗಜಗಳಷ್ಟು ದೂರ ಹೋಗಿರಲಿಲ್ಲ, ಮನೆಯ ತಡಿಕೆ ಗೋಡೆಯೊಂದು ಅವರಿಗೆ ಕಪ್ಪಗೆ ಗೋಚರಿಸಿತು. ಅದರ ಚಾವಣಿಯ ಮೇಲೆಲ್ಲ ದಟ್ಟವಾಗಿ ಹಿಮ ತುಂಬಿ ಕೆಳಕ್ಕೆ ಇಳಿಯುತ್ತಿತ್ತು. ಆ ಗುಡಿಸಲನ್ನು ದಾಟಿದ ಮೇಲೆ ರಸ್ತೆ ಗಾಳಿಗೆದುರಾಯಿತು, ಅವರು ಮತ್ತೆ ಹಿಮದ ರಾಶಿಯಲ್ಲಿ ಸಾಗಿದರು. ಆದರೆ ಮುಂದೆ ಎರಡೂ ಬದಿಗಳಲ್ಲಿ ಮನೆಗಳಿದ್ದ ಒಂದು ಗಲ್ಲಿ ಕಾಣಿಸಿತು. ಗಾಳಿ ಬೀಸಿ ಹಿಮವನ್ನು ಹರಡಿದ್ದುದು ಸ್ಪಷ್ಟವಾಗಿತ್ತು; ಆಗಿದ್ದೂ ಅದೇ. ಹಿಮದಲ್ಲಿ ಸಾಗುತ್ತ ಗಾಡಿ ಒಂದು ಬೀದಿಗೆ ಬಂತು. ಹಳ್ಳಿಯ ಕೊನೆಯ ಮನೆ ಹಿಮಗಟ್ಟಿದ್ದ ಒಣಗಲೆಂದು ಹಾಕಿದ್ದ ಬಟ್ಟೆಗಳು? ಒಂದು ಕೆಂಪು ಮತ್ತೊಂದು ಬಿಳಿ ಅಂಗಿ, ಷರಾಯಿಗಳು, ಕಾಲಿನ ಪಟ್ಟಿಗಳು, ಒಂದು ಒಳಲಂಗ? ಗಾಳಿಯಿಂದಾಗಿ ಪಟಪಟನೆ ಹಾರಾಡುತ್ತಿದ್ದ ಹಗ್ಗ ಕಾಣಿಸಿತು. ಅದರಲ್ಲೂ ಆ ಬಿಳಿ ಅಂಗಿ ತೋಳುಗಳನ್ನು ಹಾಗೆ ಹೀಗೆ ಆಡಿಸುತ್ತ ಸಿಕ್ಕಾಪಟ್ಟೆ ಅಲುಗಾಡುತ್ತಿತ್ತು.

"ಅಲ್ನೋಡು, ಇಲ್ಲ ಸೋಮಾರಿ ಅಥವಾ ಸತ್ತವಳು ಯಾರೋ ವಿಶ್ರಾಂತಿಗಾಗಿ ಹೋಗಕ್ಕೆ ಮುಂಚೆ ಬಟ್ಟೆಗಳನ್ನೇ ತಗೊಂಡು ಹೋಗಿಲ್ಲ" ಎಂದ ನಿಕಿಟ. ಓಲಾಡುತ್ತಿದ್ದ ಅಂಗಿ ಕಡೆ ನೋಡುತ್ತ.

## 3

ಬೀದಿಯ ಪ್ರವೇಶದಲ್ಲಿ ಗಾಳಿ ಇನ್ನೂ ರಭಸವಾಗಿಯೇ ಬೀಸುತ್ತಿತ್ತು, ರಸ್ತೆಯ ಮೇಲೆಲ್ಲ ಹಿಮ ಆವರಿಸಿತ್ತು, ಆದರೆ ಹಳ್ಳಿಯೊಳಗೆ ಎಲ್ಲವೂ ನೀರವದಿಂದಿತ್ತು, ಬೆಚ್ಚಗೆ ಹಿತಕರವಾಗಿತ್ತು. ಒಂದು ಮನೆಯ ಮುಂದೆ ಮಾತ್ರ ನಾಯೊಂದು ಹೆಂಗುಸೊಬ್ಬಳ

ಮುಂದೆ ನಿಂತು ಬೊಗಳುತ್ತಿತ್ತು. ಅವಳು ಕೋಟಿನಿಂದ ತನ್ನ ತಲೆಯನ್ನು ಮುಚ್ಚಿಕೊಂಡು ಎಲ್ಲಿಂದಲೋ ಓಡಿ ಬಂದವಳು ಗುಡಿಸಿಲ ಬಾಗಿಲ ಬಳಿ ಹೊಸ್ತಿಲಲ್ಲಿ ನಿಂತು ಹಾದು ಹೋಗುತ್ತಿದ್ದ ಜಾರುಬಂಡಿಯನ್ನು ನೋಡುತ್ತ ನಿಂತಳು. ಹಳ್ಳಿಯ ನಡುವೆ ಹುಡುಗಿಯರು ಹಾಡು ಹೇಳುತ್ತಿದ್ದುದು ಕೇಳಿಸುತ್ತಿತ್ತು.

ಈ ಹಳ್ಳಿಯಲ್ಲಿ ಗಾಳಿಯ ರಭಸ ಕಡಿಮೆ ಇತ್ತು, ಹಾಗೆಯೇ ಹಿಮ ಬೀಳುವುದೂ, ಹೀಗಾಗಿ ಕಾವಳ ಕೂಡ ಕಡಿಮೆಯೇ.

"ಓ, ಇದು ಗ್ರಿಶ್ಕಿನೋ" ಎಂದ ವಾಸಿಲಿ ಆಂಡ್ರೆವಿಚ್.

"ಹಾಗೇ ಅನ್ನಸ್ತೆ" ಎಂದ ನಿಕಿಟ.

ಅದು ಗ್ರಿಶ್ಕಿನೋನೇ ಆಗಿತ್ತು, ಅಂದರೆ ತಾವು ಎಡಭಾಗಕ್ಕೆ ತುಂಬ ದೂರ ಬಂದುಬಿಟ್ಟಂತಾಗಿತ್ತು, ಸುಮಾರು ಆರು ಮೈಲಿ, ಜೊತೆಗೆ ತಾವು ಅಂದುಕೊಂಡ ದಿಕ್ಕಿನಲ್ಲಾಗಿರದೆ ತಾವು ಹೋಗಬೇಕಾಗಿದ್ದ ಕಡೆಗೇ.

ಗ್ರಿಶ್ಕಿನೋದಿಂದ ಗೊರ್ಯಾಶ್ಕಿನ್‌ಗೆ ಸುಮಾರು ನಾಲ್ಕು ಮೈಲಿ ದೂರ.

ಹಳ್ಳಿಯ ಮಧ್ಯೆ ರಸ್ತೆ ನಡುವೆಯೇ ನಡೆದು ಹೋಗುತ್ತಿದ್ದ ಒಬ್ಬ ನೀಳಕಾಯದ ವ್ಯಕ್ತಿಯೊಬ್ಬನ ಮೇಲೇ ಗಾಡಿ ಹೋಗುವಂತೆ ಚಲಿಸಿತು.

"ಯಾರು ನೀವು" ಎಂದ ಆ ವ್ಯಕ್ತಿ ಕುದುರೆಯನ್ನು ಹಿಡಿದುಕೊಂಡು ನಿಲ್ಲಿಸಿ; ಆದರೆ ವಾಸಿಲಿ ಆಂಡ್ರೆವಿಚ್‌ನನ್ನು ಗುರುತಿಸಿ ತಕ್ಷಣವೇ ಮೂಕಿಯನ್ನು ಹಿಡಿದುಕೊಂಡು ಹೆಜ್ಜೆ ಮೇಲೆ ಹೆಜೆಯಿಡುತ್ತ ಸ್ಲೆಜ್ ಹತ್ತಿರ ಬಂದು ಚಾಲಕನ ಜಾಗದಲ್ಲಿ ಕೂತ.

ಅವನ ಹೆಸರು ಇಸಾಯ್ ಅಂತ, ವಾಸಿಲಿ ಆಂಡ್ರೆವಿಚ್‌ಗೆ ಪರಿಚಿತನಾಗಿದ್ದ ಒಬ್ಬ ರೈತ, ಆ ಪ್ರದೇಶದಲ್ಲೆಲ್ಲ ಮಹಾ ಕುದುರೆಕಳ್ಳ ಎಂಬ ಕುಖ್ಯಾತಿಯನ್ನು ಪಡೆದಿದ್ದ.

"ಆ, ವಾಸಿಲಿ ಆಂಡ್ರೆವಿಚ್, ಎಲ್ಲಿಗೆ ಹೋಗ್ತಿದ್ದೀರಿ?" ಎಂದು ಕೇಳಿದ ಇಸಾಯ್, ಅವನ ಬಾಯಿಂದ ಹೊಮ್ಮಿದ ವೋಡ್ಕಾ ವಾಸನೆ ನಿಕಿಟನನ್ನು ಆವರಿಸಿತು.

"ನಾವು ಗೊರ್ಯಾಶ್ಕಿನ್‌ಗೆ ಹೊರಟಿದ್ವಿ."

"ನೋಡು, ಎಲ್ಲಿಗೆ ಬಂದ್ಬಿಟ್ಟಿದ್ದೀರ ನೀವು? ಮೋಲ್ಯನೋವ್ಕಾ ಮೂಲಕ ಹೋಗ್ಬೇಕಾಗಿತ್ತು."

"ಹೌದು, ಹೋಗ್ಬೇಕಾಗಿತ್ತು, ಆದರೆ ಹೋಗಕ್ಕೆ ಆಗಲಿಲ್ಲ" ಎಂದ ವಾಸಿಲಿ ಆಂಡ್ರೆವಿಚ್ ಕುದುರೆಯನ್ನು ನಿಲ್ಲಿಸಿಕೊಂಡು.

"ಈ ಕುದುರೆ ಒಳ್ಳೆ ಮಜಬೂತಾಗಿದೆ" ಎಂದ ಇಸಾಯ್, ಮುಖೋರ್ಟಿ ಕಡೆ ಒಂಥರ ದೃಷ್ಟಿ ಹಾಯಿಸಿ; ಆನಂತರ ತನ್ನ ನಿಪುಣ ಕೈಯಿಂದ ಕುದುರೆಯ ರೋಮಭರಿತ ಬಾಲದವರೆಗೆ ಗಂಟನ್ನು ಬಿಗಿಗೊಳಿಸಿದ.

"ರಾತ್ರಿ ಇಲ್ಲೇ ಇರ್ತೀರಾ?"

“ಇಲ್ಲ ಮಾರಾಯ, ಮುಂದೆ ಹೋಗ್ಬೇಕು.”

“ವ್ಯವಹಾರ ಜೋರಾಗಿರಬೇಕು. ಇವರ್ಯಾರು? ಓ, ನಿಕಿಟ ಸ್ಟೆಪಾನ್ಯಿಚ್ ಅಲ್ಲವಾ!”

“ಇನ್ಯಾರು? ಮತ್ತೆ ದಾರಿ ತಪ್ಪದೇ ಇರ್ಬೇಕಾದ್ರೆ ಹೇಗೆ ಹೋಗ್ಬೇಕು, ಹೇಳು” ಎಂದು ನಿಕಿಟ ಪ್ರಶ್ನಿಸಿದ.

“ಇಲ್ಲಿ ದಾರಿ ಹೇಗೆ ತಪ್ಪತ್ತೇಂತ? ಹಿಂದಕ್ಕೆ ತಿರುಗಿ ಇದೇ ಬೀದೀಲಿ ನೇರವಾಗಿ ಹೋಗಿ, ಅದಾದ ಮೇಲೂ ನೇರವಾಗಿಯೇ ಹೋಗಿ. ಎಡಗಡೆ ತಿರಕ್ಕೋಬೇಡಿ. ದೊಡ್ಡ ದಾರಿ ಸೇರ್ಕೋತೀರಿ, ಆಮೇಲೆ ಬಲಕ್ಕೆ ತಿರುಗಿಕೊಂಡು ಮುಂದೆ ಸಾಗಿ.”

“ದೊಡ್ಡ ದಾರೀಲಿ ಹೇಗೆ ತಿರುಕ್ಕೋಬೇಕು, ಬೇಸಿಗೆ ದಾರೀಲೋ, ಚಳಿಗಾಲದ ದಾರೀಲೋ?”

“ಚಳಿಗಾಲದ ದಾರೀಲಿ. ತಿರುಗಿಕೊಂಡ ತಕ್ಷಣ ಕೆಲವು ಪೊದೆಗಳು ಕಾಣ್ಸತ್ತೆ, ಅವುಗಳ ಎದುರಾಗಿ ಜಾಡು ಕಾಣತ್ತೆ ? ಒಂದು ಓಕ್ ತೋರುಗಂಬ ಇದೆ, ಅದರಲ್ಲಿ ಒಂದೆರಡು ಎಲೆಗಳೂ ಇವೆ ? ಅದೇ ದಾರಿ.”

ವಾಸಿಲಿ ಆಂಡ್ರೆವಿಚ್ ಕುದುರೆಯನ್ನು ಹಿಂದಕ್ಕೆ ತಿರುಗಿಸಿ ಹಳ್ಳಿಯ ಹೊರವಲಯದ ಕಡೆಗೆ ಗಾಡಿ ಓಡಿಸಿದ.

“ಇವತ್ತು ರಾತ್ರಿ ಇಲ್ಲೇ ಯಾಕೆ ಇರ್ಬಾರ್ದು?” ಇಸಾಯ್ ಕೂಗಿ ಹೇಳಿದ.

ಆದರೆ ವಾಸಿಲಿ ಆಂಡ್ರೆವಿಚ್ ಇದಕ್ಕೆ ಉತ್ತರ ಹೇಳದೆ ಕುದುರೆಯನ್ನು ತಿವಿದ. ಮುಂದಿನ ನಾಲ್ಕು ಮೈಲಿಗಳದು ಒಳ್ಳೆ ದಾರಿ, ಅವುಗಳಲ್ಲಿ ಎರಡು ಮೈಲಿ ಕಾಡಿನಲ್ಲೇ ಇತ್ತು, ಹೋಗುವುದು ಸುಲಭವಾಗಿತ್ತು. ಯಾಕೆಂದರೆ ಗಾಳಿಯ ರಭಸವೂ ಕಡಿಮೆಯಾಗಿತ್ತು, ಹಿಮ ಬೀಳುವುದೂ ನಿಂತಿತ್ತು.

ಗೊಬ್ಬರದಿಂದ ಕಪ್ಪಗಾಗಿದ್ದ ಮತ್ತು ಜನರ ಓಡಾಟದ ಹಳ್ಳಿಯ ಬೀದಿಯಲ್ಲಿ ಹೋಗುತ್ತ ಹಗ್ಗದ ಮೇಲೆ ಒಣಗಿಹಾಕಿದ್ದ ಬಟ್ಟೆಗಳು ಹಾರಾಡುತ್ತಿದ್ದು ಸಡಿಲವಾಗಿ ಹೆಪ್ಪುಗಟ್ಟಿದ್ದ ಹಿಮದಿಂದಾಗಿ ಅಂಟಿಕೊಂಡಿದ್ದ ಬಿಳಿ ಅಂಗಿಯ ಮನೆಯನ್ನು ದಾಟಿ ಮತ್ತೆ ಅವರು ವಿಲೋ ಮರಗಳ ನರಳುವಿಕೆ ಬರುತ್ತಿದ್ದ ತಾಣಕ್ಕೆ ಬಂದು ಬಯಲು ಹೊಲಗಳ ಪ್ರದೇಶ ಸೇರಿದರು. ರಭಸದ ಗಾಳಿ ಪೂರ್ತಿ ನಿಲ್ಲದೆ ಇದ್ದದ್ದು ಮಾತ್ರವಲ್ಲ, ಮತ್ತಷ್ಟು ಬಿರುಸಾದಂತೆ ತೋರಿತು. ಜಾರುತ್ತಿದ್ದ ಹಿಮ ರಸ್ತೆಯನ್ನು ಸಂಪೂರ್ಣವಾಗಿ ಮುಚ್ಚಿಬಿಟ್ಟಿತ್ತು; ತೋರುಗಂಬಗಳು ಅವರು ದಾರಿ ತಪ್ಪಿಲ್ಲದುದನ್ನು ಖಚಿತಪಡಿಸುತ್ತಿದ್ದವು. ಆದರೆ ಅವುಗಳು ಕೂಡ ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ, ಯಾಕಂದ್ರೆ ಗಾಳಿ ಅವರ ಮುಖಗಳಿಗೆ ರಾಚುತ್ತಿತ್ತು.

ವಾಸಿಲಿ ಆಂಡ್ರೆವಿಚ್ ತನ್ನ ಕಣ್ಣುಗಳನ್ನು ಬಿಟ್ಟುಕೊಂಡು, ತಲೆಯನ್ನು ತಗ್ಗಿಸಿಕೊಂಡು, ದಾರಿಯ ಕುರುಹುಗಳನ್ನು ಗಮನಿಸುತ್ತ ಸಾಗಿದ, ಆದರೆ ಅವನು

ಮುಖ್ಯವಾಗಿ ಭರವಸೆ ಇಟ್ಟಿದ್ದುದು ಕುದುರೆಯ ಜಾಣತನದ ಮೇಲೆ, ಹೀಗಾಗಿ ಅದು ತಾನಾಗಿ ಹೋಗಲು ಬಿಟ್ಟಿದ್ದ. ಕುದುರೆ ಕೂಡ ದಾರಿ ತಪ್ಪಲಿಲ್ಲ, ರಸ್ತೆಯ ಬಾಗು ತಿರುವುಗಳಲ್ಲಿ ಎಡಕ್ಕೆ ಬಲಕ್ಕೆ ತಿರುಗುತ್ತ, ತನ್ನ ಕಾಲಿಂದ ರಸ್ತೆಯ ಇರುವಿಕೆಯನ್ನು ಖಚಿತಪಡಿಸಿಕೊಳ್ಳುತ್ತ ಸರಿಯಾಗಿ ಹೋಗುತ್ತಿತ್ತು. ಹೀಗಾಗಿ ಹಿಮ ದಟ್ಟವಾಗಿ ತುಂಬಿದ್ದರೂ, ಗಾಳಿ ಜೋರಾಗಿದ್ದರೂ ಒಮ್ಮೆ ಎಡಗಡೆಯಲ್ಲಿ ಒಮ್ಮೆ ಬಲಗಡೆಯಲ್ಲಿ ಇದ್ದ ರಸ್ತೆಯ ಗುರುತನ್ನು ಕಾಣಲು ಅವರಿಗೆ ಕಷ್ಟವಾಗಲಿಲ್ಲ.

ಹೀಗೇ ಅವರು ಸುಮಾರು ಹತ್ತು ನಿಮಿಷದ ಕಾಲ ಪಯಣ ಮುಂದುವರಿಸಿದರು; ಆಗ ಇದ್ದಕ್ಕಿದ್ದಂತೆ ಗಾಳಿ ಬೀಸಿ ಓರೆಯಾಗಿದ್ದ ಹಿಮಪಾತದ ಪರದೆಯ ಮೂಲಕ ಎಂಥದೋ ಕಪ್ಪು ವಸ್ತುವೊಂದು ಕಣ್ಣಿಗೆ ಬಿತ್ತು, ಅದು ಕುದುರೆಯ ಮುಂದೆಯೇ ಚಲಿಸುತ್ತಿತ್ತು.

ಅದು ಬೇರೇನೂ ಅಲ್ಲ, ಸಹ ಪ್ರಯಾಣಿಕರಿದ್ದ ಇನ್ನೊಂದು ಜಾರುಬಂಡಿಯಾಗಿತ್ತು. ಮುಖೋರ್ಟಿ ಅದನ್ನು ಹಿಂದೆ ಹಾಕಲು ಹೋಗಿ ತನ್ನ ಕಾಲಿಂದ ಆ ಜಾರುಬಂಡಿಯ ಹಿಂಭಾಗವನ್ನು ಒದೆಯಿತು.

"ಮುಂದೆ ಹೋಗ್ರಪ್ಪಾ ... ಯಾರಲ್ಲಿ, ಮುಂದೇನೇ ಹೋಗಿ" ಎಂಬ ಧ್ವನಿಗಳು ಒಟ್ಟಿಗೇ ಆ ಸ್ಲೆಜ್‌ನಿಂದ ಹೊರಬಿದ್ದವು.

ವಾಸಿಲಿ ಆಂಡ್ರೆವಿಚ್ ಓರೆಯಾಗಿ ಸಾಗಿ ಇನ್ನೊಂದು ಜಾರುಬಂಡಿಯನ್ನು ಹಿಂದೆ ಹಾಕಿದ. ಅದರಲ್ಲಿ ಮೂವರು ಗಂಡಸರೂ ಒಬ್ಬ ಹೆಂಗಸೂ ಇದ್ದರು; ಹಬ್ಬ ಮುಗಿಸಿಕೊಂಡು ವಾಪಸಾಗುತ್ತಿದ್ದವರಂತೆ ಕಾಣಿಸಿತು. ಒಬ್ಬ ರೈತ ಹಿಮ ದಟ್ಟವಾಗಿ ಕೂತಿದ್ದ ಕುದುರೆಯ ಪಿರ್ರೆಗೆ ಬೆತ್ತದಿಂದ ಹೊಡೆಯುತ್ತಿದ್ದ. ಮುಂದೆ ಕೂತಿದ್ದ ಇನ್ನಿಬ್ಬರು ಗಂಡಸರು ತಮ್ಮ ತೋಳುಗಳನ್ನು ಬೀಸಿ ಏನೋ ಕೂಗಿ ಹೇಳಿದರು. ಮೈಪೂರ್ತಿ ಗುಬುರು ಹಾಕಿಕೊಂಡು ಹಿಂದೆ ಕೂತಿದ್ದ ಹೆಂಗಸು ಹಿಮದಲ್ಲಿ ಮುಚ್ಚಿಹೋಗಿ, ತೂಕಡಿಸುತ್ತ ಮೇಲೆಕೆಳಗೆ ಕುಲುಕಾಡುತ್ತಿದ್ದಳು.

"ಯಾರು ನೀವು" ಎಂದು ಕೂಗಿ ಕೇಳಿದ ವಾಸಿಲಿ ಆಂಡ್ರೆವಿಚ್.

"... ಕಡೆ" ಎಂಬಷ್ಟು ಮಾತ್ರ ಕೇಳಿಸಿತ್ತು.

"ಎಲ್ಲಿಂದ ಬರ್ತಿದ್ದೀರಿ?"

"...ಕಡೆ" ಒಬ್ಬ ರೈತ ತನಗೆ ಸಾಧ್ಯವಾಗುವಷ್ಟು ಜೋರಾಗಿ ಕೂಗಿ ಹೇಳಿದಾಗಲೂ ಕೇಳಿಸಿದ್ದು ಅಷ್ಟು ಮಾತ್ರ. ಅವರು ಯಾರು ಎಂಬುದನ್ನು ಗುರುತಿಸಲಂತೂ ಸಾಧ್ಯವಾಗಲಿಲ್ಲ.

"ಸರಿ ಮುಂದುವರೀರಿ, ಒಳ್ಳೆದಾಗಲಿ!" ಎಂದು ಕೂಗಿದ ಮತ್ತೊಬ್ಬ, ಬೆತ್ತದಿಂದ ಕುದುರೆಯ ಮೇಲೆ ಒಂದೇ ಸಮನಾಗಿ ಬಾರಿಸುತ್ತ.

"ಹಬ್ಬ ಮುಗಿಸಿಕೊಂಡು ಬರ್ತಿದ್ದೀರಿ ಅಂತ ಕಾಣತ್ತೆ?"

"ಹೋಗಿ ಹೋಗಿ, ಜೋರಾಗಿ ಸೈಮನ್! ಮುಂದೆ ಹೋಗು, ಜೋರಾಗಿ!"

ಸ್ಲೆಜ್‌ಗಳ ಪಕ್ಕಗಳು ಒಂದಕ್ಕೊಂದು ಡಿಕ್ಕಿ ಹೊಡೆದವು, ಒಂದರ ಮೇಲೊಂದು ನುಗ್ಗೋ ಹಾಗೆ ಕಾಣಿಸಿದರೂ, ದೂರ ಸರಿಯುವಂತೆ ನೋಡಿಕೊಂಡರು; ರೈತರ ಜಾರುಬಂಡಿ ಹಿಂದೆ ಬಿತ್ತು.

ಅವರ ಕೂದಲು ತುಂಬಿದ ಡೊಳ್ಳು ಹೊಟ್ಟೆಯ ಕುದುರೆಯ ಮೇಲೆಲ್ಲ ಹಿಮ ಆವರಿಸಿತ್ತು; ಅದಂತೂ ತಗ್ಗಿನ ಮೂಕಿಯಡಿಯಲ್ಲಿ ಏದುಸಿರು ಬಿಡುತ್ತಿತ್ತು; ತನ್ನ ಶಕ್ತಿಯನ್ನೆಲ್ಲ ಬಿಟ್ಟು ಅದು ಗಾಡಿಯನ್ನೆಳೆಯುತ್ತಿತ್ತು; ಪಾಪ, ಬೆತ್ತದೇಟಿನಿಂದ ತಪ್ಪಿಸಿಕೊಳ್ಳಲು ಹೆಣಗಾಡುತ್ತ ಆಳವಾದ ಹಿಮದಲ್ಲಿ ತನ್ನ ಗಿಡ್ಡ ಕಾಲುಗಳನ್ನಿಟ್ಟು ಮೇಲಕ್ಕೆ ಕೀಳುವಾಗ ಹಿಮವನ್ನು ಮೇಲೆಕ್ಕೆ ಚಿಮ್ಮಿಸಿ ಸಾಗುತ್ತಿತ್ತು.

ಸಣ್ಣ ವಯಸ್ಸಿನದರಂತಿದ್ದ ಅದರ ಮೂತಿ, ಮೀನಿನದರಂತೆ ಮೇಲೆದ್ದ ಕೆಳತುಟಿ, ಭಯದಿಂದಾಗಿ ಅರಳಿದ ಮೂಗಿನ ಹೊಳ್ಳೆಗಳು ಹಾಗೂ ಹಿಂದೆ ಅಂಟಿಕೊಂಡ ಕಿವಿಗಳು ನಿಕಿಟನ ಭುಜದ ಬಳಿ ಕೆಲ ಕ್ಷಣಗಳು ನಿಂತಿದ್ದು ಆನಂತರ ಹಿಂದೆ ಬಿದ್ದಿತು.

"ಸಾರಾಯಿ ಏನು ಮಾಡತ್ತೆ, ನೋಡಿ. ಆ ಕುದುರೆ ಸಾಯೋ ಹಾಗೆ ದಣಿಸಿದ್ದಾರಲ್ಲ, ಎಂತ ಅಜ್ಞಾನಿಗಳು!" ಎಂದ ನಿಕಿಟ.

ಕೆಲವು ನಿಮಿಷಗಳ ಕಾಲ ದಣಿದ ಆ ಕುದುರೆಯ ಹೆಜ್ಜೆ ಸಪ್ಪಳ ಹಾಗೂ ಅಮಲೇರಿದ್ದ ರೈತರ ಕೂಗಾಟಗಳು ಕೇಳಿಸುತ್ತಿದ್ದವು. ಬರಬರುತ್ತ ಸದ್ದು ಕಡಿಮೆಯಾಗಿ, ಕೊನೆಗೆ ನಿಂತೇ ಹೋಯಿತು. ಹೀಗಾಗಿ ಅವರ ಸುತ್ತ ಕಿವಿಯಲ್ಲಿ ಗುಂಯ್‌ಗುಟ್ಟುತ್ತಿದ್ದ ಗಾಳಿಯ ಶಿಳ್ಳೆ ಹಾಗೂ ಗಾಳಿಯಿಂದ ಬೋಳಾಗಿದ್ದ ದಾರಿಯಲ್ಲಿ ಸಾಗುವಾಗ ಆಗೊಮ್ಮೆ ಈಗೊಮ್ಮೆ ಕೇಳಿಸುತ್ತಿದ್ದ ಜಾರುಬಂಡಿಯ ಕುಂಯ್‌ಗುಟ್ಟವಿಕೆಯ ಹೊರತಾಗಿ ಬೇರಾವುದೇ ಸದ್ದು ಇರಲಿಲ್ಲ.

ಮತ್ತೊಂದು ಜಾರುಬಂಡಿ ಜೊತೆ ಮುಖಾಮುಖಿಯಾದದ್ದು ವಾಸಿಲಿ ಆಂಡ್ರೆವಿಚ್‌ನಲ್ಲಿ ಗೆಲುವು ಮೂಡಿಸಿತ್ತು. ಆಮೇಲೆ ಅವನು ರಸ್ತೆಯನ್ನು ಖಚಿತಪಡಿಸಿಕೊಳ್ಳದೆಯೇ ಕುದುರೆಯನ್ನು ಪುಸಲಾಯಿಸುತ್ತ ಅದರಲ್ಲಿ ನಂಬಿಕೆಯಿಟ್ಟು ಧೈರ್ಯವಾಗಿ ಗಾಡಿ ಚಲಾಯಿಸಿದ.

ನಿಕಿಟನಿಗೆ ಮಾಡಲು ಕೆಲಸವಿರಲಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಮಾಡುತ್ತಿದ್ದಂತೆ ತೂಕಡಿಸುತ್ತ ನಿದ್ದೆಗೆಟ್ಟಿದನ್ನು ಸರಿದೂಗಿಸಿಕೊಳ್ಳುತ್ತಿದ್ದ. ಕುದುರೆ ತಟಕ್ಕನೆ ನಿಂತಿತು, ನಿಕಿಟ ಮುಂದೆ ಮುಗ್ಗರಿಸಿದ.

"ಓ, ನಾವು ಮತ್ತೆ ದಾರಿ ತಪ್ಪಿಬಿಟ್ವಿ!" ಎಂದ ವಾಸಿಲಿ ಆಂಡ್ರೆವಿಚ್.

"ಅದು ಹೇಗಾಯ್ತು?"

"ಯಾಕೇಂದ್ರೆ, ಎಲ್ಲೂ ತೋರುಗಂಬಗಳೆ ಕಾಣಿಸ್ತಿಲ್ಲ. ಮತ್ತೆ ದಾರಿ ಬಿಟ್ಟು ಬಂದಿರಬೇಕು ನಾವು."

"ಸರಿ, ದಾರಿ ತಪ್ಪಿದ್ರೆ ಸರಿದಾರಿ ಹುಡುಕ್ಬೇಕು" ಎಂದು ಒರಟಾಗಿ ನುಡಿದ ನಿಕಿಟ ಗಾಡಿಯಿಂದ ಹೊರಕ್ಕೆ ಹಾರಿ ತನ್ನ ಪಾರಿವಾಳದ್ದರಂತಹ ಪಾದಗಳಿಂದ ಮೆಲು ಹೆಜ್ಜೆಗಳನ್ನಿಡುತ್ತ ಮತ್ತೆ ಹಿಮದ ಮೇಲೆ ದಾರಿ ಹುಡುಕಿಕೊಂಡು ಹೊರಟ.

ಈಗ ಕಣ್ಣ ಮುಂದೆ ಸ್ವಲ್ಪ ಹೊತ್ತು ಕಣ್ಮರೆಯಾಗಿ ತುಂಬ ಹೊತ್ತೇ ನಡೆದ ಮೇಲೆ ಅವನು ವಾಪಸು ಬಂದ.

"ಇಲ್ಲಿ ರಸ್ತೆ ಇಲ್ಲ. ಮುಂದೆ ಇರಬಹುದ್ದು" ಎಂದ ಸ್ಲೆಜ್‌ನೊಳಕ್ಕೆ ಬಂದು.

ಆಗಲೇ ಕತ್ತಲಾಗತೊಡಗಿತ್ತು. ಹಿಮಪೂರಿತ ಗಾಳಿಯ ರಭಸ ಹೆಚ್ಚಾಗಿರಲಿಲ್ಲ, ಆದರೆ ಕಡಿಮೆಯೂ ಆಗಿರಲಿಲ್ಲ.

"ಆ ರೈತರ ದನಿ ಮತ್ತೆ ಕೇಳೋ ಹಾಗಾದ್ರೆ!" ಎಂದ ವಾಸಿಲಿ ಆಂಡ್ರೆವಿಚ್.

"ಅವರು ನಮ್ಮನ್ನ ಹಿಂದೆ ಹಾಕಿ ಮುಂದೆ ಹೋಗಿಲ್ಲ, ಅಂದ್ರೆ ನಾವು ತುಂಬಾನೇ ದಾರಿ ತಪ್ಪಿ ಬಂದಿರ್ಬೇಕು; ಅಥವಾ ಅವರೂ ದಾರಿ ತಪ್ಪಿರ್ಬೇಕು."

"ಎಲ್ಲಿಗೆ ಹೋಗೋದು ನಾವೀಗ!" ಎಂದು ಚಿಂತಿಸಿದ ವಾಸಿಲಿ ಆಂಡ್ರೆವಿಚ್.

"ಅದ್ಯಾಕೆ, ಕುದುರೆ ತನಗೆ ತೋಚಿದ ದಾರೀಲಿ ಸಾಗಲಿ. ಅದು ಸರಿದಾರೀಗೆ ಕರೆದೊಯ್ಯುತ್ತೆ. ಎಲ್ಲಿ, ಲಗಾಮು ನನ್ನ ಕೈಲಿ ಕೊಡಿ" ಎಂದ ನಿಕಿಟ.

ವಾಸಿಲಿ ಆಂಡ್ರೆವಿಚ್ ಅವನಿಗೆ ಲಗಾಮುಗಳನ್ನು ಕೊಟ್ಟ; ಅವನಿಗೂ ಅದೇ ಬೇಕಾಗಿತ್ತು, ಗವಸು ಹಾಕಿದ್ದರೂ ಅವನ ಕೈಗಳು ಜಡ್ಡುಗಟ್ಟಿದ್ದವು.

ನಿಕಿಟ ಲಗಾಮು ಹಿಡಿದ, ಹಿಡಿದುಕೊಂಡಿದ್ದ ಅಷ್ಟೆ, ಅವುಗಳನ್ನು ಆಡಿಸದೆ ಇರಲು ಪ್ರಯತ್ನಿಸುತ್ತ, ತನ್ನ ನಂಬಿಕೆಯ ಕುದುರೆಯ ಮೇಲೇ ಭರವಸೆಯಿಟ್ಟು. ವಾಸ್ತವ ವಾಗಿಯೂ ಆ ಜಾಣ ಕುದುರೆ ತನ್ನ ಕಿವಿಗಳನ್ನು ಒಮ್ಮೆ ಈ ಕಡೆ ಮತ್ತೊಮ್ಮೆ ಆ ಕಡೆ ತಿರುಗಿಸಿ ಮತ್ತೆ ಮುಂದುವರಿಯಲು ತೊಡಗಿತು.

"ಇದಕ್ಕೆ ಬರದೇ ಇರೋದು ಅಂದ್ರೆ ಮಾತೊಂದೇ. ನೋಡಿ, ಏನು ಮಾಡ್ತ ಇದೇಂತ? ಹೋಗಣ್ಣ ಮರಿ, ಹೋಗು! ನಿಂಗೆ ಚೆನ್ನಾಗಿ ಗೊತ್ತು. ಅಷ್ಟೇ, ಹಾಗೇ ಮಾಡು" ಎಂದ ನಿಕಿಟ.

ಗಾಳಿ ಈಗ ಹಿಂದಿನಿಂದ ಬೀಸುತ್ತಿತ್ತು ಇದರಿಂದ ಬೆಚ್ಚಗೆನ್ನಿಸಿತು.

"ಹೌದು, ಅದು ಜಾಣ ಕುದುರೆ" ಕಿರ್ಗಿಜ್ ಕುದುರೆ ಬಲವಾಗೇನೋ ಇರತ್ತೆ, ಆದ್ರೆ ಮೊದ್ದು. ಆದ್ರೆ ಇದು - ನೀವೇ ನೋಡಿ ತನ್ನ ಕಿವಿಗಳಿಂದ ಏನು ಮಾಡ್ತಿದೇಂತ! ಅದಕ್ಕೆ ಟೆಲಿಗ್ರಾಫ್ ಏನೂ ಬೇಕಾಗಿಲ್ಲ, ಒಂದು ಮೈಲಿ ದೂರ ವಾಸನೆ ಹಿಡಿಯತ್ತೆ" ಎಂದು ಕುದುರೆಯನ್ನು ಮನಸಾರೆ ಹೊಗಳಿದ.

ಇನ್ನೊಂದು ಅರ್ಧ ಮೈಲಿ ಹೋಗೋದರೊಳಗೆ ಅದೇನೋ ಕಪ್ಪಗೆ ಕಾಣಿಸಿತು- ಕಾಡೋ ಹಳ್ಳಿಯೋ - ಪುನಃ ಬಲಗಡೆ ತೋರುಗಂಬಗಳು ಕಾಣಿಸಿದವು. ತಾವು ಮತ್ತೆ

ರಸ್ತೆಯನ್ನು ಸೇರಿರುವುದು ಸ್ಪಷ್ಟವಾಗಿತ್ತು.

"ಅದೇ ಗ್ರಿಶ್ಕಿನೋ ಮತ್ತೆ" ಎಂದ ನಿಕಿಟ ಇದ್ದಕ್ಕಿದ್ದಂತೆ ಅಚ್ಚರಿಯಿಂದ.

ಆಗಿದ್ದೂ ಅದೇ? ಅವರ ಎಡಗಡೆಗೆ ಹಿಮ ಜೋತಾಡುತ್ತಿದ್ದ ಗುಡಿಸಲು, ಆ ಮುಂದೆ ಹಿಮ ಕೂತಿದ್ದ ಅಂಗಿಗಳು, ಷರಾಯಿಗಳು ಇದ್ದ ಹಗ್ಗ, ನಿರ್ವಾಹವಿಲ್ಲದೆ ಗಾಳಿಯಲ್ಲಿ ಇನ್ನೂ ಪಟಪಟಗುಟ್ಟುತ್ತ.

ಮತ್ತೆ ಅದೇ ಬೀದಿಯಲ್ಲಿ ಸಾಗಿದರು, ಮತ್ತೆ ಎಲ್ಲ ನಿಶ್ಶಬ್ದವಾಗಿತ್ತು, ಅದೇ ಬೆಚ್ಚಗಿನ ವಾತಾವರಣ, ಗೆಲುವು, ಮತ್ತದೇ ಗೊಬ್ಬರದ ಬಣ್ಣವಾಗಿದ್ದ ಬೀದಿ, ಕಿವಿಗೆ ಬೀಳುತ್ತಿದ್ದ ಅವೇ ಹಾಡುಗಳು ಮತ್ತು ನಾಯಿಯ ಬೊಗಳುವಿಕೆ. ಈಗಾಗಲೇ ಕತ್ತಲೆ ಎಷ್ಟು ಆವರಿಸಿತ್ತೆಂದರೆ, ಕೆಲವು ಕಿಟಕಿಗಳಲ್ಲಿ ದೀಪ ಕಾಣಿಸಿಕೊಂಡಿತ್ತು.

ಹಳ್ಳಿಯ ಮಧ್ಯಭಾಗಕ್ಕೆ ಬಂದಾಗ ವಾಸಿಲಿ ಆಂಡ್ರೆವಿಚ್ ಕುದುರೆಯನ್ನು ಎರಡು ಬಾಗಿಲಿದ್ದ ಇಟ್ಟಿಗೆಯಿಂದ ಕಟ್ಟಿದ್ದ ಮನೆಯ ಕಡೆ ತಿರುಗಿಸಿ ಅದರ ಮುಂದೆ ನಿಲ್ಲಿಸಿದ.

ಹಿಮದ ಕಾವಳ ಮುಸುಕಿ ಒಳಗಿನಿಂದ ಬರುತ್ತಿದ್ದ ಬೆಳಕಿನಲ್ಲಿ ಹೊಳೆಯುತ್ತ ತೇಲಾಡುತ್ತಿದ್ದ ಹಿಮದ ಹಳುಕುಗಳು ತುಂಬಿದ ಕಿಟಕಿಯ ಹತ್ತಿರ ಹೋದ ನಿಕಿಟ ಅದರ ಮೇಲೆ ತನ್ನ ಚಾವಟಿಯಿಂದ ಸದ್ದು ಮಾಡಿದ.

"ಯಾರು?" ಎಂದಿತು ಒಳಗಿನಿಂದ ಸದ್ದಿಗೆ ಉತ್ತರಿಸುತ್ತ.

"ಕ್ರೆಸ್ತಿಯಿಂದ, ಬ್ರೆಖ್ಯುನೋವ್ ಕುಟುಂಬದವರು, ಕಣಪ್ಪ. ಒಂದ್‌ನಿಮಿಷ ಹೊರಗೆ ಬನ್ನಿ" ಎಂದ ನಿಕಿಟ.

ಕಿಟಕಿಯೆಡೆಯಿಂದ ಯಾರೋ ಚಲಿಸಿದಂತಾಯಿತು, ಒಂದೋ ಎರಡೋ ನಿಮಿಷದ ಬಳಿಕ ನಡುಮನೆಯ ಬಾಗಿಲ ಬಳಿ ಬಂದು ಸಲೀಸಾಗಿ ಬಾಗಿಲು ತೆರೆದಾಗ ತಲೆಬಾಗಿಲ ಒಳಗಿನಿಂದ ಚಿಲಕ ತೆಗೆದ ಸದ್ದಾಯಿತು. ಬಿಳಿ ಅಂಗಿಯ ಮೇಲೆ ತುಪ್ಪುಳುಗಂಬಳಿ ಹೊದ್ದ ಬಿಳಿಗಡ್ಡದ ಒಬ್ಬ ಮುದುಕ ಕೈಯಿಂದ ಗಾಳಿಗಡ್ಡಲಾಗಿ ಕದವೊಂದನ್ನು ಹಿಡಿದುಕೊಂಡು ಬಾಗಿಲಿಂದ ಹೊರಬಂದ; ಅವನ ಹಿಂದೆ ಕೆಂಪು ಅಂಗಿ ತೊಟ್ಟ ಒಬ್ಬ ಹುಡುಗ.

"ಓ, ನೀನಾ ಆಂಡ್ರೆವಿಚ್" ಎಂದು ಕೇಳಿದ ಆ ಮುದುಕ.

"ಹೌದಣ್ಣ, ನಾವು ದಾರಿ ತಪ್ಪಿಬಿಟ್ವಿ! ಗೊರ್ಯಾಶ್ಕಿನ್‌ಗೆ ಹೋಗಬೇಕೂಂತ ಹೊರಟ್ವಿ, ಆದ್ರೆ ಇಲ್ಲಿಗೆ ಬಂದು ಸೇರಿದ್ವಿ. ಇಲ್ಲಿಂದೇನೋ ಹೊರಟ್ವಿ ಆದ್ರೆ ಮತ್ತೆ ದಾರಿ ತಪ್ಪಿತು" ಎಂದ ವಾಸಿಲಿ ಆಂಡ್ರೆವಿಚ್.

"ನೋಡಿದ್ರಾ, ಹೇಗೆ ದಾರಿ ತಪ್ಪಿದಿರಿ ಅಂತ! ಪೆಟ್ರುಶ್ಕಾ, ಹೋಗಿ ಗೇಟ್ ತೆಗಿ!" ಎಂದ ಕೆಂಪು ಅಂಗಿ ತೊಟ್ಟ ಹುಡುಗನ ಕಡೆ ತಿರುಗಿ.

"ಸರಿ" ಎನ್ನುತ್ತ ಲವಲವಿಕೆಯ ಮಾತಾಡಿ ಆ ಹುಡುಗ ಗೇಟ್ ತೆಗೆದು ಮತ್ತೆ ಒಳಕ್ಕೆ ಓಡಿದ.

"ನಾವೇನೂ ರಾತ್ರಿ ಇಲ್ಲೇ ಉಳ್ಕೊಳ್ಳೋದಿಲ್ಲ" ಎಂದ ವಾಸಿಲಿ ಆಂಡ್ರೆವಿಚ್.

"ಇಷ್ಟು ಹೊತ್ತಲ್ಲಿ ಎಲ್ಲಿಗೆ ಹೋಗ್ತೀರಿ? ರಾತ್ರಿ ಇಲ್ಲೇ ಇರೋದು ಒಳ್ಳೇದು!"

"ಉಳ್ಕೊಳ್ಳೋದೇನೋ ಸಂತೋಷದ ವಿಷಯವೇ, ಆದ್ರೆ ಹೋಗ್ಲೇಬೇಕಾಗಿದೆ. ಒಂದು ವ್ಯವಹಾರ, ಅದಕ್ಕೇ ನಿರ್ವಾಹವಿಲ್ಲ."

"ಸರಿ, ಸ್ವಲ್ಪ ಬೆಚ್ಚಗಾದ್ರೂ ಮಾಡ್ಕೊಳಿ. ಟೀಗೆ ಎಸರು ಈಗಷ್ಟೇ ಸಿದ್ಧವಾಗಿದೆ."

"ಬೆಚ್ಚಗೆ ಮಾಡ್ಕೊಳ್ಳೋದಾ? ಸರಿ, ಹಾಗೇ ಆಗ್ಲಿ. ಕಗ್ಗತ್ಲೆಯೇನೂ ಆಗೋದಿಲ್ಲ. ಬೆಳುದಿಂಗಳು ಇರತ್ತೆ, ದಾರಿ ಚೆನ್ನಾಗಿ ಕಾಣತ್ತೆ. ಬಾ, ನಿಕಿಟ, ಒಳ್ಗೆ ಹೋಗೆ ಸ್ವಲ್ಪ ಹಾಯಾಗೋಣ" ಎಂದ ವಾಸಿಲಿ ಆಂಡ್ರೆವಿಚ್.

"ಆಗಬಹುದು. ದೇಹ ಬೆಚ್ಚಗೆ ಮಾಡ್ಕೊಳ್ಳೋಣ" ಎಂದು ನಿಕಿಟ ಉತ್ತರವಿತ್ತ. ಅವನು ಚಳಿಯಿಂದ ಸೆಡೆತಿದ್ದ, ತನ್ನ ಕೈಕಾಲುಗಳನ್ನು ಬೆಚ್ಚಗೆ ಮಾಡಿಕೊಳ್ಳುವುದು ಅವಶ್ಯಕವಾಗಿತ್ತು.

ಮುದುಕನ ಜೊತೆ ವಾಸಿಲಿ ಆಂಡ್ರೆವಿಚ್ ಕೋಣೆಯೊಳಕ್ಕೆ ಹೋದ; ಪೆಟ್ರುಷ್ಕಾ ತೆರೆದಿದ್ದ ಗೇಟ್ ಒಳಕ್ಕೆ ನಿಕಿಟ ಗಾಡಿ ತಂದು ಹುಡುಗ ಹೇಳಿದಂತೆ ಮುಂಚಾವಣಿಯ ಹತ್ತಿರ ನಿಲ್ಲಿಸಿದ. ನೆಲವೆಲ್ಲ ಗೊಬ್ಬರದಿಂದ ತುಂಬಿತ್ತು. ಕುದುರೆಯ ತಲೆಯ ಮೇಲಿನ ನೀಳವಾದ ಸರಗುಣಿಕೆ ತೊಲೆಗೆ ಸಿಕ್ಕಿಹಾಕಿಕೊಂಡಿತು, ಕೋಳಿಗಳು ಹುಂಜಗಳು ನಿದ್ದೆಗೆ ತೊಡಗಿದ್ದುವು, ನಸುಗೋಪದಿಂದ ತೊಲೆಗೆ ತಮ್ಮ ಪಂಜಗಳನ್ನು ಬಿಗಿಗೊಳಿಸಿ ಕ್ಲಕ್‌ಕ್ಲಕ್‌ಗುಟ್ಟಿದುವು. ಕ್ಷೋಭೆಗೊಂಡ ಕುರಿಗಳು ಸಂಕೋಚಗೊಂಡು ಗಟ್ಟಿಯಾದ ಗೊಬ್ಬರದ ಮೇಲೆ ಗೊರಸು ಮೆಟ್ಟಿ ಪಕ್ಕಕ್ಕೆ ಸರಿದುವು. ನಾಯಿ ಕೋಪ ಭಯಗಳಿಂದ ಒಂದೇ ಸಮನೆ ಗುರುಗುಟ್ಟುತ್ತ ಪುಟ್ಟ ಮರಿಯ ಹಾಗೆ ಕ್ಷೀಣವಾಗಿ ಬೊಗಳತೊಡಗಿತು.

ನಿಕಿಟ ಅವುಗಳೆಲ್ಲದರ ಜೊತೆ ಮಾತಾಡಿದ, ಕ್ಷಮೆ ಕೇಳಿದ, ಹೆಚ್ಚು ತೊಂದರೆ ಕೊಡುವುದಿಲ್ಲವೆಂದು ಆಶ್ವಾಸನೆಯಿತ್ತು, ಕಾರಣವಿಲ್ಲದೆ ಭಯಗೊಂಡ ಕುರಿಗಳನ್ನು ಝುಂಕಿಸಿ, ನಾಯಿಯನ್ನು ಸಮಾಧಾನಪಡಿಸಿ ಕುದುರೆಯನ್ನು ಕಟ್ಟಿ ಹಾಕಿದ.

"ಈಗ ಸರಿಹೋಯ್ತು" ಎನ್ನುತ್ತ ತನ್ನ ಬಟ್ಟೆಗಳ ಮೇಲಿದ್ದ ಹಿಮವನ್ನು ಜಾಡಿಸಿಕೊಂಡ. "ನೋಡು ಹೇಗೆ ಬೊಗಳತ್ತೆ" ಎಂದ ನಾಯಿಯ ಕಡೆ ತಿರುಗಿ. "ಸುಮ್ನಿರು, ಮುಂಡೇದೆ, ಯಾವ ಪ್ರಯೋಜನವೂ ಇಲ್ದೆ ಕಷ್ಟಪಡ್ತಿದ್ದೀ. ನಾವೇನು ಕಳ್ಳರಲ್ಲ, ಸ್ನೇಹಿತ್ರು .. .."

"ಇವು ಮೂರೂ ಮನೆಗೆ ಬುದ್ಧಿ ಹೇಳೋರು ಅಂತಾರೆ" ಎಂದ ಹುಡುಗ. ನಿಕಿಟ ಹೊರಗಿದ್ದ ಜಾರುಬಂಡಿಯನ್ನು ತನ್ನ ಬಲಿಷ್ಠ ತೋಳುಗಳಿಂದ ಮುಂಚಾವಣಿಯ ಕೆಳಗೆ ದಬ್ಬಿದ.

"ಅದು ಹ್ಯಾಗೆ ಬುದ್ಧಿ ಹೇಳೋದು?" ಎಂದು ಕೇಳಿದ ನಿಕಿಟ.

"ಹಾಗಂತ ಪುಸ್ತಕದಲ್ಲಿ ಪ್ರಿಂಟಾಗಿದೆ. ಕಳ್ಳ ಮನೆ ಒಳಕ್ಕೆ ನುಗ್ಗಿದರೆ, 'ಎಚ್ಚರವಾಗಿರು' ಅಂತ ನಾಯಿ ಬೊಗಳತ್ತೆ; 'ಎದ್ದೇಳು, ಮನೆಗೊಬ್ಬ ಬೇಕಾದ ಅತಿಥಿ ಬರ್ತಿದಾನೆ, ಬರಮಾಡಿಕೊಳ್ಳಕ್ಕೆ ಸಿದ್ಧನಾಗು' ಅಂತ ಕೋಳಿ ಕೂಗತ್ತೆ" ಎಂದ ಹುಡುಗ ಮುಗುಳ್ನಗುತ್ತ.

ಪೆಟ್ರುಷ್ಕನಿಗೆ ಓದುವುದು ಬರೆಯುವುದು ಗೊತ್ತಿತ್ತು, ಶಾಲೆಯಲ್ಲಿ ಇರಿಸಿದ್ದ ಒಂದೇ ಪುಸ್ತಕವಾದ ಪೌಲ್ಸನ್ ಪಠ್ಯವನ್ನು ಗಟ್ಟಿಮಾಡಿಕೊಂಡಿದ್ದ; ಸಮಯ ಸಿಕ್ಕಾಗಲೆಲ್ಲ ಸರಿಯಾದ ಮಾತುಗಳನ್ನು ಅಲ್ಲಿಂದ ತೆಗೆದು ಹೇಳುವುದು ಅಂದರೆ ಅವನಿಗಿಷ್ಟ, ಅದರಲ್ಲೂ ಕುಡಿಯುವುದಕ್ಕೆ ಏನಾದರೂ ಇವತ್ತಿನ ಹಾಗೆ ಸಿಕ್ಕಿದ ಸಂದರ್ಭದಲ್ಲಿ.

"ಹೌದ್ಹೌದು" ಎಂದ ನಿಕಿಟ.

"ನಿಮಗೆ ತುಂಬ ಚಳಿಯಾಗ್ತಿರ್ಬೇಕು" ಪೆಟ್ರುಷ್ಕ ಕೇಳಿದ.

"ನಿಜ, ಹಾಗೇ ಆಗ್ತಿದೆ" ಎಂದ ನಿಕಿಟ. ಆಮೇಲೆ ಅವರು ಅಂಗಳವನ್ನು ದಾಟಿ ಮನೆಯೊಳಕ್ಕೆ ಹೋದರು.

## 4

ವಾಸಿಲಿ ಆಂಡ್ರೆವಿಚ್ ಬಂದಿದ್ದ ಮನೆ ಹಳ್ಳಿಯ ಸಿರಿವಂತ ಮನೆಗಳಲ್ಲೊಂದು. ಈ ಕುಟುಂಬಕ್ಕೆ ಐದು ಹಿಡುವಳಿಗಳಿದ್ದುವು, ಜೊತೆಗೆ ಗುತ್ತಿಗೆ ನೀಡಿದ್ದ ಕೆಲವು ಹೊಲಗಳು. ಅವರ ಬಳಿ ಆರು ಕುದುರೆಗಳು, ಮೂರು ಹಸುಗಳು, ಎರಡು ಕರುಗಳು ಹಾಗೂ ಸುಮಾರು ಇಪ್ಪತ್ತು ಕುರಿಗಳೂ ಇದ್ದುವು. ಈ ಸಂಸಾರದಲ್ಲಿ ಇಪ್ಪತ್ತೆರಡು ಮಂದಿಯಿದ್ದರು: ನಾಲ್ಕು ಮಂದಿ ಮದುವೆಯಾಗಿದ್ದ ಗಂಡು ಮಕ್ಕಳು, ಆರು ಮೊಮ್ಮಕ್ಕಳು (ಅವರಲ್ಲೊಬ್ಬ ಪೆಟ್ರುಷ್ಕ, ಮದುವೆಯಾಗಿದ್ದವನು), ಇಬ್ಬರು ಮರಿಮಕ್ಕಳು, ಮೂರು ಮಂದಿ ಅನಾಥರು ಮತ್ತು ಮೂವರು ಕೂಸುಗಳನ್ನು ಹೊಂದಿದ್ದ ನಾಲ್ವರು ಸೊಸೆಯಂದಿರು. ಇನ್ನೂ ಒಡೆಯದಿದ್ದ ಅವಿಭಕ್ತ ಕುಟುಂಬಗಳಲ್ಲಿ ಅದೂ ಒಂದು, ಆದರೆ ಇಲ್ಲಿಯೂ ಮುಂದೊಂದು ದಿನ ವಿಘಟನೆಗೆ ಕಾರಣವಾಗಬಹುದಾದ ಬಿರುಕುಗಳು ಕಾಣಿಸಿ ಕೊಂಡಿದ್ದುವು, ಅದರ ಮೂಲ ಹೆಣ್ಣುಮಕ್ಕಳೇ, ಎಂದಿನಂತೆ. ಇಬ್ಬರು ಗಂಡುಮಕ್ಕಳು ಮಾಸ್ಕೋದಲ್ಲಿದ್ದರು, ಸರಕನ್ನು ನೀರಸಾಗಣೆ ಮಾಡುವವರಾಗಿ; ಒಬ್ಬ ಸೈನ್ಯದಲ್ಲಿದ್ದ. ಸದ್ಯ ಮನೆಯಲ್ಲಿದ್ದವರೆಂದರೆ ಮುದುಕ, ಅವನ ಹೆಂಡತಿ, ಮನೆಯ ವ್ಯವಹಾರ ನೋಡಿಕೊಳ್ಳುತ್ತಿದ್ದ ಅವರ ಎರಡನೆಯ ಮಗ, ರಜೆಗಾಗಿ ಮಾಸ್ಕೋದಿಂದ ಬಂದಿದ್ದ ಹಿರಿಯ ಮಗ, ಮಿಕ್ಕ ಹೆಂಗಸರು ಮತ್ತು ಮಕ್ಕಳು. ಕುಟುಂಬದ ಇವರಲ್ಲದೆ, ಮಕ್ಕಳಲ್ಲಿ ಒಬ್ಬನಿಗೆ ಗಾಡ್ ಫಾದರ್ ಆಗಿದ್ದ ನೆರೆಯ ಸಂದರ್ಶಕನೊಬ್ಬನೂ ಇದ್ದ.

ಕೋಣೆಯ ಮೇಜಿನ ಮೇಲೆ ಮುಸುಕಿದ್ದ ಒಂದು ದೀಪ ನೇತಾಡುತ್ತಿತ್ತು, ಅದರಡಿ ಟೀಗೆ ಸಂಬಂಧಿಸಿದ ವಸ್ತುಗಳ ಮೇಲೆ ಬೆಳಕು ಚೆಲ್ಲಿತ್ತು. ಒಂದು ವೋಡ್ಕಾ ತುಂಬಿದ ಸೀಸೆ, ಮತ್ತು ಕೆಲವು ತಿನಿಸುಗಳು. ಇಟ್ಟಿಗೆ ಗೋಡೆಗಳನ್ನಲ್ಲದೆ, ದೂರದ ಮೂಲೆಯಲ್ಲಿ

ನೇತು ಹಾಕಿದ್ದ ವಿಗ್ರಹ ಮತ್ತದರ ಬದಿಗಳಲ್ಲಿದ್ದ ಚಿತ್ರಗಳ ಮೇಲೂ ಬೆಳಕು ಬಿದ್ದಿತ್ತು. ಮೇಜಿನ ಮುಂಭಾಗದಲ್ಲಿ ಕಪ್ಪು ತುಪ್ಪುಳುಗಂಬಳಿ ಹೊದ್ದ ವಾಸಿಲಿ ಆಂಡ್ರೆವಿಚ್ ಕೂತ, ತನ್ನ ಹಿಮಗಟ್ಟಿದ ಮೀಸೆಯನ್ನು ಕಡಿಯುತ್ತ, ಸುತ್ತಲೂ ತನ್ನ ದೊಡ್ಡ ಹದ್ದಿನಂತಹ ಕಣ್ಣುಗಳನ್ನು ಹಾಯಿಸುತ್ತ. ಅವನ ಪಕ್ಕದಲ್ಲಿ ಮನೆಯ ಯಜಮಾನನಾದ ಬಕ್ಕತಲೆಯ ಬಿಳಿಗಡ್ಡದ, ಮನೆಯಲ್ಲೇ ನೂತ ಅಂಗಿ ತೊಟ್ಟ, ಮುದುಕ ಕೂತ. ಅವನ ಪಕ್ಕ ಕೂತವನು ಮಾಸ್ಕೋದಿಂದ ರಜೆಗೆಂದು ಬಂದಿದ್ದ ಅವನ ಮಗ, ತೆಳುವಾದ ಪ್ರಿಂಟೆಡ್ ಅಂಗಿ ತೊಟ್ಟಿದ್ದ ಬಲಿಷ್ಠ ಬೆನ್ನು ವಿಶಾಲವೃಕ್ಷದ ಯುವಕ. ಆಮೇಲೆ ಎರಡನೆಯ ಮಗ, ಅವನ ಭುಜಗಳೂ ಹರವಾಗಿದ್ದವು, ಈಗ ಮನೆಯ ವ್ಯವಹಾರ ನಿಭಾಯಿಸುತ್ತಿದ್ದವನು. ಆ ಬಳಿಕ ಕೂತಿದ್ದವನು ತೆಳುವಾದ ಕೆಂಚು ಕೂದಲ ರೈತ, ನೆರೆಯವನು.

ವೋಡ್ಕ ಕುಡಿದು ಏನೋ ಒಂದಷ್ಟು ತಿಂದು, ಇನ್ನೇನು ಟೀ ತೆಗೆದು ಕೊಳ್ಳುವುದರಲ್ಲಿದ್ದರು, ಪಕ್ಕದಲ್ಲೇ ನೆಲದ ಮೇಲಿನ ಅಗ್ಗಿಷ್ಟಿಕೆಯ ಪಕ್ಕದಲ್ಲಿ ಹಬೆ ಸೂಸುತ್ತಿದ್ದ ಟೀ ಎಸರಿನ ಪಾತ್ರೆಯಿತ್ತು. ಅಗ್ಗಿಷ್ಟಿಕೆಯ ಜಾಗದ ಮೇಲ್ಭಾಗದ ಅಟ್ಟದ ಮೇಲೆ ಮಕ್ಕಳು ಕೂತಿರುವುದು ಕಾಣಿಸುತ್ತಿತ್ತು. ಕೆಳ ಅಟ್ಟದಲ್ಲಿ ಒಬ್ಬ ಹೆಂಗಸು ತೊಟ್ಟಿಲೊಂದರ ಪಕ್ಕ ಕೂತಿದ್ದಳು. ಮುಖದ ತುಂಬ ಅಲ್ಲದೆ ತುಟಿಗಳೂ ಸುಕ್ಕುಗಟ್ಟಿದ್ದ ಮುದಿ ತಾಯಿ ವಾಸಿಲಿ ಆಂಡ್ರೆವಿಚ್‌ಗೆ ಬಡಿಸುತ್ತಿದ್ದಳು.

ನಿಕಿಟ ಮನೆಯೊಳಗೆ ಪ್ರವೇಶಿಸಿದಾಗ ಆಕೆ ವೋಡ್ಕ ತುಂಬಿದ ದಪ್ಪ ಗಾಜಿನ ಬಟ್ಟಲನ್ನು ಅತಿಥಿಗೆ ನೀಡುತ್ತಿದ್ದಳು.

"ಬೇಡ ಅನ್ನಬೇಡಿ, ವಾಸಿಲಿ ಆಂಡ್ರೆವಿಚ್, ತಗೊಳ್ಳಲೇಬೇಕು! ಹಬ್ಬ ಸಂತೋಷ ತರಲಿ, ಕುಡಿಯಿರಿ" ಎಂದಳು.

ವೋಡ್ಕ ಕಂಡದ್ದು ಮತ್ತದರ ವಾಸನೆ, ಅದೂ ತನಗೆ ಚಳಿ ಹತ್ತಿ ದಣಿದಿರುವಾಗ, ನಿಕಿಟನ ಮನಸ್ಸನ್ನು ಕಲಕಿತು. ಮುಖ ಗಂಟುಹಾಕಿಕೊಂಡು ತನ್ನ ಟೋಪಿ ಮತ್ತು ಕೋಟಿನ ಮೇಲಿದ್ದ ಹಿಮವನ್ನು ಕೊಡವಿ, ಯಾರನ್ನೂ ಗಮನಿಸದವನಂತೆ ವಿಗ್ರಹದ ಪಕ್ಕ ಹೋಗಿ ನಿಂತು, ಎದೆಯ ಮೇಲೆ ಮೂರು ಬಾರಿ ಶಿಲುಬೆಯಾಕಾರ ಮಾಡಿಕೊಂಡು ತಲೆಬಾಗಿದ. ಆಮೇಲೆ, ಮನೆಯ ಯಜಮಾನನ ಕಡೆ ತಿರುಗಿ ಅವನಿಗೆ ಮೊದಲು ತಲೆಬಾಗಿ, ಆಮೇಲೆ ಮೇಜಿನ ಮುಂದೆ ಕೂತಿದ್ದವರಿಗೆಲ್ಲ ವಂದಿಸಿದ; ಆಮೇಲೆ ಅಗ್ಗಿಷ್ಟಿಕೆಯ ಪಕ್ಕದಲ್ಲಿ "ಹಬ್ಬ ಹರುಷ ತರಲಿ" ಎಂದು ಹೇಳುತ್ತಿದ್ದ ಹೆಂಗಸರಿಗೆ ಬಾಗಿ ವಂದಿಸಿ, ಮೇಜಿನ ಕಡೆ ನೋಡದೆ ಹೊದ್ದಿದ್ದ ಬಟ್ಟೆಗಳನ್ನು ತೆಗೆಯಲು ತೊಡಗಿದ.

"ಮೈಮೇಲೆಲ್ಲ ಬಿಳಿ ಮಂಜು ಕೂತಿದೆಯಲ್ಲ!" ಎಂದ ಹಿರಿಯ ಮಗ, ನಿಕಿಟನ ಮುಖ, ಗಡ್ಡ, ಕಣ್ಣುಗಳ ಕಡೆ ನೋಡುತ್ತ.

ನಿಕಿಟ ತನ್ನ ಕೋಟನ್ನು ತೆಗೆದು, ಮತ್ತೆ ಒದರಿ, ಅಗ್ಗಿಷ್ಟಿಕೆ ಮೇಲೆ ತೂಗುಹಾಕಿ ಮೇಜಿನ ಬಳಿ ಬಂದ. ಅವನಿಗೂ ವೋಡ್ಕ ಕೊಟ್ಟರು. ಒಂದು ಕ್ಷಣ ಅವನಲ್ಲಿ ನೋವು

ತುಂಬಿದ ಹಿಂಜರಿಕೆ ಕಾಣಿಸಿತು; ಬಟ್ಟಲನ್ನು ಮೇಲೆತ್ತಿ ತಿಳಿಯಾದ ಸುವಾಸಿತ ಪಾನೀಯವನ್ನು ಗಂಟಲಿಗಿಳಿಸಬೇಕೆಂಬಷ್ಟರಲ್ಲಿ ವಾಸಿಲಿ ಆಂಡ್ರೆವಿಚ್ ಕಡೆಗೆ ದೃಷ್ಟಿ ಬೀರಿ, ತನ್ನ ಪ್ರತಿಜ್ಞೆಯನ್ನು ನೆನಪಿಸಿಕೊಂಡ, ಕುಡಿತಕ್ಕಾಗಿ ತನ್ನ ಷೂಗಳನ್ನು ಮಾರಿದ್ದುದೂ ನೆನಪಾಯಿತು, ಚಿಲ್ಲರೆ ಸಾರಾಯಿ ಮಾರಾಟಗಾರ ಮನಸ್ಸಿನಲ್ಲಿ ಸುಳಿದುಹೋದ, ಬೇಸಿಗೆ ಹೊತ್ತಿಗೆ ಕುದುರೆಯೊಂದನ್ನು ತೆಗೆದುಕೊಡುವುದಾಗಿ ತಾನು ಮಾತು ಕೊಟ್ಟಿದ್ದ ಮಗನ ನೆನಪು ಬಂತು; ನಿಟ್ಟುಸಿರುಬಿಟ್ಟು, ವೋಡ್ಕ ಬೇಡವೆಂದ.

"ನಾನು ಕುಡಿಯೋದಿಲ್ಲ, ನಿಮ್ಮ ಒಳ್ಳೆತನಕ್ಕೆ ನಮಸ್ಕಾರ" ಎಂದ ಮುಖ ಗಂಟಿಕ್ಕಿಕೊಂಡು, ಆಮೇಲೆ ಎರಡನೆಯ ಕಿಟಕಿಯ ಬಳಿಯಿದ್ದ ಬೆಂಚಿನ ಮೇಲೆ ಹೋಗಿ ಕೂತ.

"ಯಾಕೆ?" ಎಂದ ಹಿರಿಯ ಸೋದರ.

"ನಾನು ಕುಡಿಯೋದಿಲ್ಲ" ಎಂದ ನಿಕಿಟ ತನ್ನ ಮುಖವನ್ನು ಮೇಲೆತ್ತದೆ, ತನ್ನ ಗಡ್ಡ ಮೀಸೆಗಳ ಕಡೆ ಕುಡಿನೋಟ ಬೀರಿ, ಅವುಗಳ ಮೇಲೆದ್ದ ಹಿಮದ ಹಳುಕುಗಳನ್ನು ತೆಗೆದುಹಾಕುತ್ತ.

"ಅವನಿಗೆ ಅದು ಸರಿಹೋಗಲ್ಲ" ಎಂದ ವಾಸಿಲಿ ಆಂಡ್ರೆವಿಚ್ ತನ್ನ ಬಟ್ಟಲಿನ ಪಾನೀಯ ಮುಗಿಸಿ ಕುರುಕುಲು ತಿಂಡಿ ಮೆಲ್ಲುತ್ತ.

"ಸರಿ, ಸ್ವಲ್ಪ ಟೀ ತಗೋ ಹಾಗಾದ್ರೆ, ಮೈಗೆ ಚಳಿ ಹತ್ತಿರಬೇಕು. ಇನ್ನೂ ಪಾತ್ರೇಲಿ ನೀರು ಕುದ್ದಿಲ್ವಾ?" ಎಂದಳು ಮಿದು ಹೃದಯದ ಮನೆಯೊಡತಿ.

"ರೆಡಿಯಾಯ್ತು" ಎಂದಳು ಯುವತಿಯರಲ್ಲಿ ಒಬ್ಬಳು. ತನ್ನ ಮೇಲುವಸ್ತ್ರದಿಂದ ಕುದಿಯುತ್ತಿದ್ದ ನೀರಿದ್ದ ಪಾತ್ರೆಯನ್ನು ಕೆಳಗಿಳಿಸಿ ಕಷ್ಟದಿಂದಲೇ ಅದನ್ನು ತಂದು ಮೇಜಿನ ಮೇಲಿಟ್ಟಳು.

ಈ ಮಧ್ಯೆ, ತಾವು ಹೇಗೆ ದಾರಿ ತಪ್ಪಿದ್ದು, ಈ ಹಳ್ಳಿಗೆ ಎರಡು ಸಲ ಬಂದದ್ದು, ದಾರಿಯಲ್ಲಿ ಕುಡುಕ ರೈತರು ಎದುರಾದದ್ದು - ಎಲ್ಲವನ್ನೂ ವಾಸಿಲಿ ಆಂಡ್ರೆವಿಚ್ ವಿವರಿಸುತ್ತಿದ್ದ. ಮನೆಯವರಿಗೆ ಆಶ್ಚರ್ಯವಾಯಿತು, ಅವರೆಲ್ಲಿ ದಾರಿ ತಪ್ಪಿದ್ದು, ಅದು ಹೇಗಾಯ್ತು, ಆ ಅಮಲೇರಿದ್ದ ರೈತರು ಯಾರು ಎಂದೆಲ್ಲ ಹೇಳಿ ಅವರು ಮುಂದೆ ಯಾವ ದಾರಿಯಲ್ಲಿ ಮುಂದುವರಿಯಬೇಕು ಅನ್ನುವುದನ್ನು ವಿವರಿಸಿದರು.

"ಇಲ್ಲಿಂದ ಒಂದು ಸಣ್ಣ ಮಗುವಾದರೂ ಮೋಲ್ಕನೋವ್ಕಾಗೆ ದಾರಿ ತೋರ್ಸತ್ತೆ. ನೀವು ಮಾಡಬೇಕಾದ್ದಿಷ್ಟೇ: ದೊಡ್ಡದಾರಿಯಲ್ಲಿ ಬಲಕ್ಕೆ ತಿರುಗಿ; ಅಲ್ಲೊಂದು ಪೊದೆ ಇದೆ; ನೀವು ಅಲ್ಲೀವರೆಗೆ ಕೂಡ ಹೋಗಿರ್ಲಿಲ್ಲಾಂತ ಕಾಣತ್ತೇ" ಎಂದ ನೆರೆಮನೆಯವನು.

"ಇವತ್ತು ರಾತ್ರಿ ಇಲ್ಲೇ ಇರೋದು ವಾಸಿ. ನಿಮಗಾಗಿ ಮನೆ ಹೆಂಗಸರು ಹಾಸಿಗೆಗಳನ್ನು ಸಿದ್ಧಪಡಿಸಿಕೊಡ್ತಾರೆ" ಎಂದಳು ಯಜಮಾನಿತಿ ಮನವೊಲಿಕೆಯ ರೀತಿಯಲ್ಲಿ.

"ಬೆಳಿಗ್ಗೆ ಎದ್ದ ತಕ್ಷಣವೇ ಹೋಗ್ಬಹುದು, ಆಗ ವಾತಾವರಣ ಹಿತವಾಗಿರತ್ತೆ" ಎಂದ ಮುದುಕ, ತನ್ನ ಹೆಂಡತಿ ಹೇಳಿದ ಮಾತನ್ನು ಅನುಮೋದಿಸುತ್ತ.

"ಇಲ್ಲ ಮಾರಾಯರೇ, ಬಹಳ ಮುಖ್ಯವಾದ ವ್ಯವಹಾರ! ಒಂದು ಗಂಟೆ ತಡವಾದ್ರೆ ಒಂದು ವರ್ಷವಾದ್ರೂ ಸರಿಪಡಿಸೋದಕ್ಕಾಗಲ್ಲ" ಎಂದ ವಾಸಿಲಿ ಆಂಡ್ರೆವಿಚ್, ಅವನ ಮನಸ್ಸಲ್ಲಿ ತೋಪು ಮತ್ತದನ್ನು ಕಬಳಿಸಲು ಪ್ರಯತ್ನಿಸುತ್ತಿದ್ದ ವ್ಯಾಪಾರಿಗಳು ಸುಳಿದುಹೋದರು. "ಈಗಲೇ ಅಲ್ಲಿಗೆ ಹೊರಟುಬಿಡ್ತೀವಿ, ಆಗದೇ?" ಎಂದ ನಿಕಿಟನ ಕಡೆ ತಿರುಗಿ.

ನಿಕಿಟ ಸ್ವಲ್ಪ ಹೊತ್ತು ಉತ್ತರಿಸಲಿಲ್ಲ, ತನ್ನ ಗಡ್ಡಮೀಸೆಗಳನ್ನಾವರಿಸಿದ್ದ ಹಳುಕುಗಳನ್ನು ತೆಗೆಯುತ್ತ.

"ಇನ್ನೊಂದು ಸಲ ದಾರಿ ತಪ್ಪದಿದ್ರೆ ಆಗ್ಬಹುದು" ಎಂದ ನಿರುತ್ಸಾಹಿತನಾಗಿ.

ಅವನು ನಿರುತ್ಸಾಹಿತನಾಗಲು ಕಾರಣ ಮನಸ್ಸು ಒಂದಷ್ಟು ವೋಡ್ಕಕ್ಕಾಗಿ ಹಂಬಲಿಸುತ್ತಿದ್ದುದು. ಅದನ್ನು ಅಡಗಿಸಬಲ್ಲದ್ದು ಅಂದರೆ ಟೀ, ಇನ್ನೂ ಅವನಿಗೆ ಟೀ ಕೊಟ್ಟಿರಲಿಲ್ಲ.

"ನಾವು ಆ ತಿರುವನ್ನು ತಲುಪಬೇಕು ಅಷ್ಟೆ, ಆಮೇಲೆ ದಾರಿ ತಪ್ಪಕ್ಕೆ ಸಾಧ್ಯವೇ ಇಲ್ಲ. ಆಮೇಲೆ ರಸ್ತೆ ಪೂರ್ತಿ ಕಾಡಿನ ಮಧ್ಯೆ ಹಾದು ಹೋಗತ್ತೆ" ಎಂದ ವಾಸಿಲಿ ಆಂಡ್ರೆವಿಚ್.

"ನಿಮ್ಮಿಷ್ಟ ಇದ್ದ ಹಾಗೆ ಆಗ್ಲಿ, ಯಜಮಾನ್ರೇ. ಹೋಗಲೇಬೇಕಾದ್ರೆ ಹೊರಟುಬಿಡೋಣ." ಎಂದ ನಿಕಿಟ ತನಗೆ ಈ ಹೊತ್ತಿಗೆ ಕೊಟ್ಟಿದ್ದ ಟೀ ಬಟ್ಟಲನ್ನು ಬಾಯಿಗಿರಿಸಿಕೊಳ್ಳುತ್ತ.

"ಟೀ ಕುಡಿದು ಹೊರಟುಬಿಡೋಣ."

ನಿಕಿಟ ಬೇರೇನೂ ಹೇಳದೆ ತನ್ನ ತಲೆಯಾಡಿಸಿದ. ಬಹು ಎಚ್ಚರಿಕೆಯಿಂದ ಒಂದಷ್ಟು ಟೀಯನ್ನು ಸಾಸರ್‌ಗೆ ಬಸಿದುಕೊಂಡು ತನ್ನ ಕೈಗಳನ್ನು ಆವಿಯ ಮೇಲೆ ಹಿಡಿದುಕೊಂಡು ಬಿಸಿಪುಗೊಳಿಸಿಕೊಂಡ; ಅವನ ಕೈಬೆರಳುಗಳು ದುಡಿಮೆಯಿಂದ ಊದಿಕೊಂಡಿದ್ದವು. ಆಮೇಲೆ ಒಂದು ತುಂಡು ಸಕ್ಕರೆಯನ್ನು ಕಚ್ಚಿಕೊಂಡು, ಆತಿಥೇಯರ ಕಡೆ ತಿರುಗಿ "ನಿಮಗೆ ಒಳ್ಳೆಯದಾಗಲಿ" ಎಂದು ಹಬೆಯಾಡುತ್ತಿದ್ದ ಪಾನೀಯವನ್ನು ಗುಟುಕರಿಸಿದ.

"ಯಾರಾದ್ರೂ ಆ ತಿರುವಿನವರೆಗೆ ಬಂದಿದ್ರೆ ಚೆನ್ನಾಗಿತ್ತು" ಎಂದ ವಾಸಿಲಿ ಆಂಡ್ರೆವಿಚ್.

"ಆಗ್ಬಹುದು, ಅದಕ್ಕೇನಂತೆ. ಪೆಟ್ರುಷ್ಕ ನಿಮ್ಮ ಜತೆ ಅಲ್ಲೀವರೆಗೂ ಬರ್ತಾನೆ, ಬಿಡಿ" ಎಂದ ಹಿರಿಯ ಮಗ.

"ಸರಿ ಹಾಗಾದ್ರೆ, ಕುದುರೇನ ಗಾಡಿಗೆ ಹೂಡು ಮರಿ, ಅದಕ್ಕಾಗಿ

ಕೃತಜ್ಞನಾಗೀರ್ತೀನಿ ನಿಂಗೆ."

"ಓ, ಅದೆಲ್ಲ ಏನು ಮಹಾ ಬಿಡಿ, ಆ ಕೆಲಸಾನ ಸಂತೋಷವಾಗಿ ಮಾಡ್ತಾನೆ" ಎಂದಳು ಆ ಕರುಣಾಮಯಿ ಹೆಂಗಸು.

"ಪೆಟ್ರುಷ್ಕ, ಹೋಗು, ಕುದುರೆ ಹೂಡು" ಎಂದ ಹಿರಿಯಣ್ಣ.

"ಸರಿ" ಎಂದ ಪೆಟ್ರುಷ್ಕ ಮುಗುಳ್ನಗೆಯೊಂದಿಗೆ; ಸರ್‍ರನೆ ಮೊಳೆಗೆ ಸಿಕ್ಕಿಸಿದ್ದ ತನ್ನ ಟೋಪಿಯನ್ನು ತೆಗೆದುಕೊಂಡು ಗಾಡಿ ಕಟ್ಟಲು ಹೋದ.

ಕುದುರೆಯನ್ನು ಸಿದ್ಧಪಡಿಸುತ್ತಿರುವಾಗ ಇವರ ಮಾತು ವಾಸಿಲಿ ಆಂಡ್ರೆವಿಚ್ ಕಿಟಕಿಯವರೆಗೆ ಬಂದಾಗ ನಿಂತಿದ್ದ ಕಡೆಗೇ ಮರಳಿತ್ತು. ಮುದುಕ ಊರ ಹಿರಿಯನಾದ ನೆರೆಯವನಿಗೆ ತಮ್ಮ ಮೂರನೇ ಮಗನ ಹೆಂಡತಿಗೆ ತಾನು ಒಂದು ಫ್ರೆಂಚ್ ಶಾಲನ್ನು ಕಳಿಸಿದ್ದರೂ ಅವನು ಮಾತ್ರ ಈ ಹಬ್ಬಕ್ಕೆ ತನಗೇನೂ ಕಳಿಸದ ಬಗ್ಗೆ ದೂರುತ್ತಿದ್ದ.

"ಈಗಿನ ಕಾಲದ ಮಕ್ಕಳು ತಂದೆತಾಯಿಗಳ ಕೈಗೇ ಸಿಕ್ಕೋದಿಲ್ಲ" ಎಂದ ಮುದುಕ.

"ಅಲ್ದೆ ಅವರು ಇರೋದು ಹೇಗೆ! ಅವರನ್ನು ಹಿಡಿಯೋಕ್ಕೆ ಆಗಲ್ಲ! ಅವರಿಗೆ ಎಲ್ಲ ಗೊತ್ತು. ಆ ಡೆಮೋಚ್ಕಿನ್ ಅವರಪ್ಪನ ತೋಳನ್ನೇ ಮುರಿದ. ಬಹಳ ಜಾಣರಾಗಿರೋದ್ರಿಂದ ಹೀಗೋ ಏನೋ."

ನಿಕಿಟ ಎಲ್ಲವನ್ನೂ ಕೇಳಿಸಿಕೊಂಡ, ಅವರ ಮುಖಗಳನ್ನು ಗಮನಿಸಿದ, ಅವರ ಮಾತುಕತೆಯಲ್ಲಿ ತಾನೂ ಸೇರಿಕೊಳ್ಳಬೇಕೆಂಬ ತವಕ ಉಂಟಾಯಿತು, ಆದರೆ ಟೀ ಕುಡಿಯೋದ್ರಲ್ಲಿ ಅವನು ನಿರತನಾಗಿಬಿಟ್ಟಿದ್ದ, ಹೀಗಾಗಿ ಬರೀ ತಲೆಯಲ್ಲಾಡಿಸಿ ಅವರ ಮಾತುಗಳಿಗೆ ಒಪ್ಪಿಗೆ ಕೊಟ್ಟ. ಒಂದಾದ ಮೇಲೊಂದು ಬಟ್ಟಲು ಟೀಯನ್ನು ಬರಿದುಮಾಡಿ ಮೈಯನ್ನೆಲ್ಲ ಬಿಸಿಪುಗೊಳಿಸಿಕೊಂಡ, ಈಗವನಿಗೆ ಆರಾಮ ಅನ್ನಿಸಿತು. ಅದೇ ವಿಷಯದ ಬಗ್ಗೆ- ಒಡೆದ ಸಂಸಾರಗಳಿಂದಾಗುವ ಹಾನಿ - ಮಾತು ಬಹಳ ಹೊತ್ತು ಮುಂದುವರಿಯಿತು. ಅದೇನೂ ತಲೆಬುಡ ಇಲ್ಲದ ಮಾತುಕತೆಯಾಗಿರಲಿಲ್ಲ, ಮನೆ ಒಡೆದುಹೋಗುವ ಪ್ರಶ್ನೆ ಅದು. ಬೇರೆ ಮನೆ ಮಾಡುವ ಒತ್ತಾಯ ಹಾಕಿದ್ದ ಎರಡನೇ ಮಗ ಮುಖ ಕೆಳಗೆ ಹಾಕಿಕೊಂಡು ಮಾತನ್ನಾಡದೆ ಅಲ್ಲೇ ಕುಳಿತಿದ್ದ.

ಆ ಕಹಿ ವಿಷಯ ಎಲ್ಲರನ್ನೂ ಆವರಿಸಿತ್ತು, ಆದರೆ ಮನೆಯ ಮರ್ಯಾದೆಯ ಕಾರಣದಿಂದಾಗಿ ಅವರು ಯಾರೂ ಹೊರಗಿನವರ ಮುಂದೆ ಆ ವಿಷಯ ಹೆಚ್ಚು ಚರ್ಚೆ ಮಾಡಲಿಲ್ಲ. ಆದರೂ ಆ ಮುದುಕ ತಡೆದುಕೊಳ್ಳಲಾಗದೆ, ಕಣ್ಣಲ್ಲಿ ನೀರನ್ನು ತುಂಬಿಕೊಂಡು, ತಾನು ಬದುಕಿರುವವರೆಗೂ ಪ್ರವರ್ಧಮಾನಕ್ಕೆ ಬರುತ್ತಿರುವ ತಮ್ಮ ಮನೆ ಒಡೆಯುವುದಕ್ಕೆ ಅವಕಾಶ ಕೊಡುವುದಿಲ್ಲವೆಂದು ಹೇಳಿ, ಬೇರೆಯೇ ಆದರೆ, ಅವರೆಲ್ಲ ಬೀದಿಯಲ್ಲಿ ಭಿಕ್ಷೆ ಬೇಡುವಂತಾಗುತ್ತದೆಂದು ನುಡಿದ.

"ಮಾಟ್ವೀವ್ ಮನೆ ಆಯ್ತಲ್ಲ ಹಾಗೇನೇ ನಮಗೂ ಆಗತ್ತೆ; ಎಲ್ಲ ಒಡೆದು ಹೋಗಿದಾರೆ, ಯಾರ ಹತ್ರವೂ ಏನೂ ಉಳಿದಿಲ್ಲ" ಎಂದ ನೆರೆಯವನು.

"ನಮಗೂ ಹೀಗೇ ಆಗ್ಬೇಕೂನ್ನೋದೇನಪ್ಪ ನಿನ್ ಇಷ್ಟ?" ಎಂದ ಮುದುಕ ತನ್ನ ಎರಡನೆಯ ಮಗನ ಕಡೆ ತಿರುಗಿ.

ಮಗ ಏನೂ ಹೇಳಲಿಲ್ಲ, ಅಲ್ಲಿನ ಮೌನ ಮುಜುಗರ ತರಿಸುವಂಥದ್ದು. ಪೆಟ್ರುಷ್ಕ ಬಂದು ಆ ಮೌನವನ್ನು ಮುರಿದ, ಕುದುರೆಯನ್ನು ಸಿದ್ಧಪಡಿಸಿ ಕೆಲವು ನಿಮಿಷಗಳ ಹಿಂದೆ ಗುಡಿಸಿಲಿಗೆ ಬಂದಿದ್ದವನು ಮಾತುಗಳನ್ನೆಲ್ಲ ಮುಗುಳ್ನಗುತ್ತ ಕೇಳಿಸಿಕೊಂಡು ನಿಂತಿದ್ದ.

"ನಮ್ಮ ಪುಸ್ತಕದಲ್ಲಿ ಒಂದು ಕತೆ ಇದೆ: ಒಬ್ಬ ತಂದೆ ತಮ್ಮ ಮಕ್ಕಳಿಗೆ ಕಡ್ಡಿಗಳ ಒಂದು ಕಟ್ಟು ಕೊಟ್ಟು ಮುರೀರಿ ನೋಡೋಣ ಅಂತ ಹೇಳಿದನಂತೆ, ಆದರೆ ಹಾಗೆ ಮಾಡಕ್ಕೆ ಯಾರಿಗೂ ಆಗಲಿಲ್ಲ, ಆದರೆ ಕಟ್ಟನ್ನು ಬಿಚ್ಚಿ ಒಂದೊಂದೇ ಕಟ್ಟಿಗೆ ಬೇರೆ ಮಾಡಿದಾಗ ಸುಲಭವಾಗಿ ಮುರಿಯಕ್ಕೆ ಸಾಧ್ಯವಾಯಿತಂತೆ. ಅದೇ ಕತೇನೇ ಇಲ್ಲೂ" ಎಂದು ಜೋರಾಗಿ ನಕ್ಕ. "ನಾನು ಸಿದ್ಧವಾಗೀದೀನಿ" ಅಂದ.

"ನೀನು ಸಿದ್ಧವಾಗಿದ್ರೆ ಹೊರಡೋಣ. ಬೇರೆಯಾಗೋ ವಿಷಯ, ನೀನದಕ್ಕೆ ಅವಕಾಶ ಕೊಡ್ಬೇಡ ತಾತ. ನಿನ್ನ ಯಜಮಾನಿಕೇನಲ್ಲಿ- ಎಲ್ಲರೂ ಸೇರಿ ಇಷ್ಟೆಲ್ಲ ಸಂಪಾದಿಸಿದ್ರಿ. ಊರ ಪಂಚಾಯಿತಿದಾರರ ಹತ್ರ ಹೋಗು; ಏನು ಮಾಡ್ಬೇಕು ಅಂತ ಹೇಳ್ತಾರೆ."

"ಅವರೇನೋ ಹಾಗೆ ಮಾಡ್ತಾರೆ. ಆದ್ರೆ ಅವರ ಹತ್ರ ಹೋಗಿ ಏನೂ ಮಾಡೋಹಾಗಿಲ್ಲ. ಇವರನ್ನ ದೆವ್ವ ಮೆಟ್ಕೊಂಡ ಹಾಗಿದೆ."

ಈ ಮಧ್ಯೆ ಐದನೇ ಕಪ್ ಟೀ ಮುಗಿಸಿದ್ದ ನಿಕಿಟ ಬಟ್ಟಲನ್ನು ಬೋರಲು ಹಾಕದೆ ಪಕ್ಕಕ್ಕಿರಿಸಿದ, ಆರನೇ ಬಟ್ಟಲು ಟೀ ಕೊಡುವರೇನೋ ಎಂಬ ಆಸೆ ಅವನಿಗೆ. ಆದರೆ ಪಾತ್ರೆಯಲ್ಲಿ ಏನೂ ಉಳಿದಿರಲಿಲ್ಲ, ಹೀಗಾಗಿ ಯಜಮಾನಮ್ಮ ಅದಕ್ಕೆ ಏನನ್ನೂ ಬಗ್ಗಿಸಲಿಲ್ಲ. ಅಲ್ಲದೆ, ವಾಸಿಲಿ ಆಂಡ್ರೆವಿಚ್ ತನ್ನ ವಸ್ತುಗಳನ್ನೆಲ್ಲ ಜೋಡಿಸಿಕೊಳ್ಳುತ್ತಿದ್ದ, ಹೀಗಾಗಿ ಏನೂ ಮಾಡುವುದಕ್ಕಾಗದೆ ನಿಕಿಟ ಮೇಲೆದ್ದು ತನ್ನ ವಸ್ತುಗಳನ್ನೂ ಜೋಡಿಸಿಕೊಳ್ಳಬೇಕಾಯಿತು. ಸಕ್ಕರೆ ಬೋಗುಣಿಯಲ್ಲಿ ತಾನು ಹೊರಗಿಟ್ಟಿದ್ದ ಸಕ್ಕರೆ ಉಂಡೆಗಳನ್ನು ತೆಗೆದು ಹಾಕಿ, ಬೆವರುತ್ತಿದ್ದ ತನ್ನ ಮುಖವನ್ನು ತೊಟ್ಟಿದ್ದ ತುಪ್ಪುಳುಗಂಬಳಿಯ ಚುಂಗಿನಿಂದಲೇ ಒರೆಸಿಕೊಂಡು ತನ್ನ ಓವರ್‌ಕೋಟ್ ಧರಿಸಿದ.

ಎಲ್ಲ ಸಿದ್ಧವಾಗಿ ನೀಳ ಉಸಿರೊಂದನ್ನು ಬಿಟ್ಟ, ಆತಿಥೇಯರಿಗೆ ಕೃತಜ್ಞತೆ ಹೇಳಿ ಬರ್ತೀನಿ ಎಂದು ಬೆಳಕು ತುಂಬಿದ್ದ ಬೆಚ್ಚಗಿನ ಆ ಕೋಣೆಯಿಂದ ಹೊರಬಿದ್ದು ಕತ್ತಲು ಕತ್ತಲಾಗಿದ್ದ ತಲೆಬಾಗಿಲ ದಾರಿಯಲ್ಲಿ ಬಂದ. ಅಲ್ಲಾಡುತ್ತಿದ್ದ ಕಿಟಕಿಯ ಬಿರುಕುಗಳ ಮೂಲಕ ಗಾಳಿ ಬೀಸುತ್ತಿತ್ತು. ಅಲ್ಲಿಂದ ಅಂಗಳಕ್ಕೆ ಸಾಗಿದ.

ಪೆಟ್ರುಷ್ಕ ತನ್ನ ತುಪ್ಪುಳುಗಂಬಳಿಯನ್ನು ಹೊದ್ದು ಲಾಯದ ಮಧ್ಯದಲ್ಲಿ ನಿಂತುಕೊಂಡ ತನ್ನ ಪಠ್ಯಪುಸ್ತಕದ ಪದ್ಯವೊಂದನ್ನು ಗುನುಗುತ್ತಿದ್ದವನು ಮುಗುಳ್ನಗುತ್ತ ಹೇಳಿದ:

ಆಗಸವಡಗಿದೆ ಕಾವಳ ಬಿರುಗಾಳಿಯಲಿ
ಹಿಮಸುಳಿಗಳು ಬೀಸುತ ಬಿರುಸಾಗಿ
ಗುಟುರುತ್ತಿದೆ ಗೂಳಿಯ ಹಾಗೊಮ್ಮೆ
ಈಗದು ಅಳುತಿದೆ ಮಗುವಿನ ರೀತಿ

ನಿಕಿಟ ಅದನ್ನೊಪ್ಪುವಂತೆ ತಲೆಯಾಡಿಸುತ್ತ ಲಗಾಮುಗಳನ್ನು ಸರಿಪಡಿಸಿಕೊಂಡ ವಾಸಿಲಿ ಆಂಡ್ರೆವಿಚ್‌ನನ್ನು ಬೀಳ್ಕೊಟ್ಟ ಮುದುಕ ಅವನಿಗೆ ದಾರಿ ತೋರಿಸಲು ತಲೆಬಾಗಿಲವರೆಗಿನ ದಾರಿಯಲ್ಲಿ ಲಾಟೀನು ಹಿಡಿದು ಬಂದ. ಆದರೆ ಬಂದ ತಕ್ಷಣವೇ ಅದು ಆರಿ ಹೋಯಿತು. ಗಾಳಿ ಹೆಚ್ಚು ಬಿರುಸಾಗಿರುವುದು ಅಂಗಳದಲ್ಲೇ ತಿಳಿಯುತ್ತಿತ್ತು.

"ಏನು ಮಾಡೋದು, ಈ ಹವಾಗುಣ ಇದೇ ಥರಾನೇ! ನಾವು ಅಲ್ಲಿಗೇ ತಲಪ್ತೀವೋ ಇಲ್ಲವೇ ಇಲ್ವೋ. ಆದರೆ ಹೋಗದೆ ಬೇರೆ ದಾರಿ ಇಲ್ಲ. ವ್ಯವಹಾರ! ಅಲ್ಲದೆ, ಸಿದ್ಧ ಬೇರೆ ಆಗಿಬಿಟ್ಟಿದ್ದೀವಿ, ಕಳಿಸ್ಕೊಡಕ್ಕೆ ಹುಡುಗ ಕುದುರೆ ಸಿದ್ಧಪಡಿಸಿಕೊಂಡು ನಿಂತಿದಾನೆ. ದೇವರ ದಯೆಯಿದ್ರೆ ಹೋಗಿ ತಲಪ್ತೀವಿ!' ಎಂದುಕೊಂಡ ವಾಸಿಲಿ ಆಂಡ್ರೆವಿಚ್.

ಅವರು ಹೋಗದೇ ಇರುವುದೇ ವಾಸಿ ಎಂದು ಮುದುಕ ಕೂಡ ಆಲೋಚಿಸಿದ, ಆದರೆ ಈಗಾಗಲೇ ಅವರನ್ನು ಒಪ್ಪಿಸುವುದಕ್ಕೆ ಪ್ರಯತ್ನಪಟ್ಟು ವಿಫಲವಾಗಿದೆ.

"ಮತ್ತೆ ಅವರಿಗೆ ಹೇಳೋದ್ರಿಂದ ಪ್ರಯೋಜನವಿಲ್ಲ. ನನಗೆ ವಯಸ್ಸಾಗಿರೋದ್ರಿಂದ ಭಯಪಡ್ತೀನೋ ಏನೋ. ಅವರು ಕ್ಷೇಮದಿಂದ ಹೋಗಿ ತಲುಪ್ತಾರೆ. ಕೊನೆ ಪಕ್ಷ ನಾವಾದ್ರೂ ಸರಿಯಾದ ಹೊತ್ತಿಗೆ ಮಲಗಕ್ಕೆ ಅನುಕೂಲವಾಗತ್ತೆ' ಎಂದುಕೊಂಡ ಮುದುಕ.

ಪೆಟ್ರುಷ್ಕನಿಗೆ ಯಾವ ಅಪಾಯವೂ ಕಾಣಲಿಲ್ಲ. ಅವನಿಗೆ ರಸ್ತೆ ಮತ್ತದರ ಸುತ್ತುಮುತ್ತಲೆಲ್ಲ ಚೆನ್ನಾಗಿ ಗೊತ್ತಿತ್ತು. ಗೂಳಿಯ ಹಾಗೆ ಗುಟುರು ಹಾಕುವ ಹಿಮಸುಳಿಗಳ ಬಗೆಗಿನ ಸಾಲುಗಳು ಹೊರಗೆ ಏನಾಗ್ತಿದೆ ಎನ್ನುವುದನ್ನು ಸಮರ್ಪಕವಾಗಿ ವರ್ಣಿಸುತ್ತಿದ್ದವು, ಅದರಿಂದ ಅವನಿಗೆ ಖುಷಿ ಅನ್ನಿಸಿತು. ನಿಕಿಟನಿಗೆ ಹೊರಡುವ ಮನಸ್ಸೇ ಇಲ್ಲ, ಆದರೆ ಅವನಿಗೆ ತನ್ನ ಅಭಿಪ್ರಾಯಕ್ಕೆ ಅಂಟಿಕೊಳ್ಳೋ ಜಾಯಮಾನವೇ ಇರಲಿಲ್ಲ, ಬೇರೆಯವರ ಸೇವೆಯೇ ಅವನ ದೀರ್ಘಕಾಲದ ಅನುಭವ. ಹೀಗಾಗಿ ಪ್ರಯಾಣ ಮುಂದುವರಿಯುವುದಕ್ಕೆ ಯಾವ ಅಡ್ಡಿಯೂ ಇರಲಿಲ್ಲ.

## 5

ವಾಸಿಲಿ ಆಂಡ್ರೆವಿಚ್ ತಮ್ಮ ಸ್ಲೆಜ್ ಹತ್ತಿರ ಹೋಗಿ ನೋಡಿದರೆ ಕತ್ತಲಲ್ಲಿ ಅದನ್ನು ಹುಡುಕುವುದೇ ಕಷ್ಟವಾಯಿತು. ಕೊನೆಗೆ ಪತ್ತೆ ಹಚ್ಚಿ ಲಗಾಮು ಹಿಡಿದುಕೊಂಡ.

"ಮುಂದಕ್ಕೆ ಹೋಗು" ಎಂದು ಕಿರುಚಿದ.

ಪೆಟ್ರುಷ್ಕ ತನ್ನ ಕುಳ್ಳ ಜಾರುಬಂಡಿಯಲ್ಲಿ ಬಾಗಿ ಕುಳಿತು ಕುದುರೆಯನ್ನು ಚಲಾಯಿಸಿದ. ಸ್ವಲ್ಪ ಕಾಲ ಕೆನೆಯುತ್ತಿದ್ದ ಮುಖೋರ್ಟಿ ತನ್ನ ಮುಂದೊಂದು ಹೆಣ್ಣು ಕುದುರೆಯಿರುವುದರ ವಾಸನೆ ಹಿಡಿದು ಅದರ ಹಿಂದಕ್ಕೆ ನಡೆಯಿತು; ಎರಡೂ ರಸ್ತೆಯಲ್ಲಿ ಸಾಗತೊಡಗಿದುವು. ಅವರು ಮತ್ತೆ ಹಳ್ಳಿಯ ಹೊರವಲಯದ ಕಡೆಗೆ ಹಿಂದಿನ ದಾರಿಯಲ್ಲೇ ಗಾಡಿ ಓಡಿಸಿದರು; ಆದರೆ ಒಣಗಲು ಹಗ್ಗದ ಮೇಲೆ ಹಾಕಿದ್ದ ಹಿಮಗಟ್ಟಿದ್ದ ಬಟ್ಟೆಗಳ ಸಾಲಿದ್ದ ಅಂಗಳವನ್ನು ದಾಟಿದರೂ ಬಟ್ಟೆಗಳು ಕಾಣಲಿಲ್ಲ. ಗುಡಿಸಿಲ ಸೂರಿನವರೆಗೂ ಬೀಳುತ್ತಿದ್ದ ಮಂಜು ಅವನ್ನೆಲ್ಲ ಮುಸುಕಿಬಿಟ್ಟಿತ್ತು, ಅಲ್ಲಿಂದ ಕೊನೆಯಿಲ್ಲದಂತೆ ಮಂಜು ಸುರಿಯುತ್ತಿತ್ತು. ಮುಂದೆ ಹೋದರೆ ಅದೇ ನರಳುವ, ಶಿಳ್ಳೆ ಹಾಕುವ ವಿಲೋ ಮರಗಳನ್ನು ತೂಗಾಡಿಸುವ ಗಾಳಿಯ ಬೀಸಾಟ. ಈ ರೀತಿ ಅವರು ಮೇಲೂ ಕೆಳಗೂ ಆವರಿಸಿದ್ದ ಮಂಜಿನ ಸಾಗರವನ್ನು ಹೊಕ್ಕರು. ಗಾಳಿ ಎಷ್ಟು ಬಿರುಸಾಗಿತ್ತೆಂದರೆ ಪ್ರಯಾಣಿಕರು ಒಂದು ದಿಕ್ಕಿನಿಂದ ಇನ್ನೊಂದು ದಿಕ್ಕಿಗೆ ತಿರುಗುವಂತಾಗುತ್ತಿತ್ತು, ಸ್ಲೆಜ್‌ಗಳನ್ನು ತಿರುಗುಮುರುಗಾಗಿಸುತ್ತಿತ್ತು, ಕುದುರೆಗಳನ್ನು ಪಕ್ಕಕ್ಕೆ ಸರಿಸಿಬಿಡುತ್ತಿತ್ತು. ಪೆಟ್ರುಷ್ಕ ತನ್ನ ಕುದುರೆಯನ್ನು ಚಲಾಯಿಸುತ್ತ ದಾಪುಗಾಲಿಡುತ್ತ ಮುಂದೆ ಸಾಗುತ್ತ ಜೋರಾಗಿ ಕೂಗಾಡುತ್ತಿದ್ದ. ಮುಖೋರ್ಟಿ ಅದರ ಹಿಂದೆ ನುಗ್ಗುತ್ತಿತ್ತು.

ಇದೇ ರೀತಿ ಸುಮಾರು ಹತ್ತು ನಿಮಿಷಗಳು ಸಾಗಿದ ಮೇಲೆ, ಪೆಟ್ರುಷ್ಕ ಹಿಂದಕ್ಕೆ ತಿರುಗಿ ಏನೋ ಕೂಗು ಹಾಕಿದ. ವಾಸಿಲಿ ಆಂಡ್ರೆವಿಚ್‌ಗಾಗಲೀ ನಿಕಿಟನಿಗಾಗಲೀ ಗಾಳಿಯ ರಭಸದಿಂದಾಗಿ ಏನೂ ಕೇಳಿಸದಂತಾಗಿತ್ತು, ಆದರೆ ತಾವು ತಿರುವಿಗೆ ಬಂದಿದ್ದೇವೆಂಬುದು ತಿಳಿಯಿತು. ಪೆಟ್ರುಷ್ಕ ವಾಸ್ತವವಾಗಿ ಬಲಕ್ಕೆ ತಿರುಗಿದ್ದ, ಈಗ ಗಾಳಿಯು ಪಕ್ಕದಿಂದ ಅವರ ಮುಖಗಳಿಗೇ ರಾಚುತ್ತಿತ್ತು. ಮಂಜಿನ ತೆರೆಯ ಮೂಲಕ ಏನೋ ಕಪ್ಪಗಿನ ವಸ್ತು ಬಲಭಾಗದಲ್ಲಿ ಅವರಿಗೆ ಗೋಚರಿಸಿತು. ಅದೇ ತಿರುವುನಲ್ಲಿದ್ದ ಪೊದೆ.

"ಸರಿ ಹಾಗಾದ್ರೆ, ಒಳ್ಳೇದಾಗಲಿ!"

"ಥ್ಯಾಂಕ್ ಯೂ, ಪೆಟ್ರುಷ್ಕ!"

"ಆಗಸವಡಗಿದೆ ಕಾವಳ ಬಿರುಗಾಳಿಯಲಿ" ಎಂದು ಕೂಗುತ್ತ ಪೆಟ್ರುಷ್ಕ ಕಣ್ಮರೆಯಾದ.

"ಅವನಲ್ಲೊಬ್ಬ ಕವಿಯಿದ್ದಾನೆ!" ಎಂದು ಉದ್ಗರಿಸಿದ ವಾಸಿಲಿ ಆಂಡ್ರೆವಿಚ್ ಲಗಾಮುಗಳನ್ನೆಳೆಯುತ್ತ.

"ಹೌದು, ಬಹಳ ಒಳ್ಳೇ ಹುಡುಗ, ನಿಜವಾದ ಒಕ್ಕಲುಮಗ" ಎಂದ ನಿಕಿಟ.

ಅವರು ಮುಂದೆ ಸಾಗಿದರು.

ತನ್ನ ಮೈಯ ಸುತ್ತಲೂ ಕೋಟನ್ನು ಬಿಗಿಗೊಳಿಸಿಕೊಳ್ಳುತ್ತ ನಿಕಿಟ ತಲೆಯನ್ನು ಹೆಗಲ ಮೇಲೆ ಎಷ್ಟು ಒತ್ತಾಗಿ ಒತ್ತಿಕೊಂಡು ಕೂತನೆಂದರೆ ಅವನ ಕಿರು ಗಡ್ಡ ತನ್ನ

ಕೊರಳನ್ನಾವರಿಸಿತು. ಮನೆಯಲ್ಲಿ ಟೀಯನ್ನು ಮಸ್ತು ಕುಡಿದು ತಂದುಕೊಂಡಿದ್ದ ಮೈಯ ಬಿಸುಪನ್ನು ಕಡಿಮೆಗೊಳಿಸಿಕೊಳ್ಳದಂತೆ ಸುಮ್ಮನೆ ಕೂತ. ಅವನೆದುರಿಗೆ ಜಾರುಬಂಡಿಯ ಮೂಕಿಯಿಂದಾದ ನೇರ ಗೆರೆಗಳು ಕಾಣುತ್ತಿದ್ದುವು; ಬಹಳ ಜನ ಓಡಾಡೋ ರಸ್ತೆಯೇನೋ ಅದು ಎಂಬ ಭ್ರಮೆಯನ್ನದು ಅವನಲ್ಲುಂಟುಮಾಡುತ್ತಿತ್ತು. ಕುದುರೆಯ ಅತ್ತಿತ್ತ ಆಡುತ್ತಿದ್ದ ಬಾಲದ ಬದಿಗಿನ ಪಿರ್ಲೆಗಳು ಒಂದೆಡೆ ಕಾಣಿಸುತ್ತಿದ್ದರೆ, ಮತ್ತೊಂದೆಡೆ ಮುಂದೆ ಅದರ ಓಲಾಡುವ ಕತ್ತು ಮತ್ತು ಮೂಕಿಯ ಎತ್ತರದ ಅಂಚು ಕಾಣಿಸುತ್ತಿದ್ದವು. ಆಗಾಗ ಅವನಿಗೆ ದಾರಿಯ ಗುರುತುಗಳು ಕಣ್ಣಿಗೆ ಬೀಳುತ್ತಿದ್ದವು, ಇದರಿಂದಾಗಿ ತಾವಿನ್ನೂ ರಸ್ತೆಯಲ್ಲೇ ಸಾಗುತ್ತಿದ್ದೇವೆಂಬ ಭರವಸೆಯನ್ನು ಹುಟ್ಟಿಸುತ್ತಿದ್ದವು, ಹೀಗಾಗಿ ಯಾವ ಯೋಚನೆಗೂ ಆಸ್ಪದವಿರಲಿಲ್ಲ.

ವಾಸಿಲಿ ಆಂಡ್ರೆವಿಚ್ ಜಾರುಬಂಡಿಯನ್ನು ಮುಂದೆ ಚಲಾಯಿಸುತ್ತ. ರಸ್ತೆಯನ್ನನುಸರಿಸಲು ಕುದುರೆಯ ಹೊಣೆಗೇ ಬಿಟ್ಟಿದ್ದ. ಆದರೆ ಹಳ್ಳಿಯಲ್ಲೊಂದಷ್ಟು ಹೊತ್ತು ವಿಶ್ರಾಂತಿ ಪಡೆದಿದ್ದರೂ ಮುಖೋರ್ಟಿ ಮಾತ್ರ ಒಲ್ಲದ ಮನಸ್ಸಿನಿಂದೆಂಬಂತೆ ಓಡುತ್ತಿತ್ತು, ಅಲ್ಲದೆ ಈಗೊಮ್ಮೆ ಆಗೊಮ್ಮೆ ದಾರಿಬಿಟ್ಟು ಹೋಗುತ್ತಿದ್ದಂತೆಯೂ ತೋರುತ್ತಿತ್ತು. ಹೀಗಾಗಿ ವಾಸಿಲಿ ಆಂಡ್ರೆವಿಚ್ ಅದನ್ನು ಪದೇ ಪದೇ ಸರಿದಾರಿಗೆ ತರಬೇಕಾಗುತ್ತಿತ್ತು.

"ಬಲಗಡೆ ಒಂದು ತೋರುಗಂಬ ಇದೆ, ಇನ್ನೊಂದು ಅಲ್ಲಿ, ಅಲ್ಲೇ ಮೂರನೇದು" ಎಂದ ವಾಸಿಲಿ ಆಂಡ್ರೆವಿಚ್ ಎಣಿಸುತ್ತ ಹೋದ. ತನ್ನ ಮುಂದೇನೋ ಕಪ್ಪಗೆ ಕಾಣಿಸಿದ್ದರಿಂದ "ಇಲ್ಲಿ ಕಾಡು ಬೇರೆ ಇದೆ' ಎಂದುಕೊಂಡ. ಆದರೆ ಅವನಿಗೆ ಕಾಡಿನಂತೆ ಕಾಣಿಸಿದ್ದು ಒಂದು ಪೊದೆ ಅಷ್ಟೆ. ಆ ಪೊದೆಯನ್ನವರು ದಾಟಿ ಮುಂದೆ ಸುಮಾರು ನೂರು ಗಜಗಳಷ್ಟು ದೂರ ಸಾಗಿದರು, ಆದರೆ ಅಲ್ಲಿ ನಾಲ್ಕನೇ ತೋರುಗಂಬವಾಗಲೀ ಕಾಡಾಗಲೀ ಕಾಣಿಸಲಿಲ್ಲ.

"ನಾವು ಆದಷ್ಟು ಬೇಗ ಕಾಡನ್ನು ತಲುಪಬೇಕು' ಎಂದುಕೊಂಡ ವಾಸಿಲಿ ಆಂಡ್ರೆವಿಚ್. ಕುಡಿದಿದ್ದ ಟೀ ಮತ್ತು ವೋಡ್ಕಾದಿಂದ ಉದಿಸಿದ್ದ ಚೈತನ್ಯದಿಂದಾಗಿ ನಿಲ್ಲದೆ ಲಗಾಮುಗಳನ್ನಾಡಿಸಿದ, ವಿಧೇಯತೆಯಿಂದ ಕುದುರೆ ಒಡೆಯನ ಆಣತಿಯನ್ನು ಪಾಲಿಸಿತು. ಒಮ್ಮೆ ತೂಗಾಡುತ್ತ, ಒಮ್ಮೆ ನಿಧಾನಗತಿಯಲ್ಲಿ ಮುಂದರಿಯುತ್ತ ಯಜಮಾನ ಸೂಚಿಸಿದ ದಾರಿಯಲ್ಲಿ ಸಾಗಿತ್ತು, ಆದರೆ ತಾನು ಸರಿಯಾದ ದಿಕ್ಕಿನಲ್ಲಿ ಹೋಗುತ್ತಿಲ್ಲವೆಂದು ತಿಳಿದಂತಿತ್ತು. ಹೀಗೇ ಹತ್ತು ನಿಮಿಷ ಸಾಗಿದ ನಂತರವೂ ಕಾಡು ಕಂಡುಬರಲಿಲ್ಲ.

"ಓ, ಈಗ ಮತ್ತೆ ದಾರಿ ತಪ್ಪಿಬಿಟ್ಟಿದ್ದೀವಲ್ಲ" ಎಂದ ವಾಸಿಲಿ ಆಂಡ್ರೆವಿಚ್ ಕುದುರೆಯನ್ನು ಜಗ್ಗಿ ನಿಲ್ಲಿಸಿ.

ನಿಕಿಟ ಮಾತನಾಡದೆ ಸ್ಲೆಜ್‌ನಿಂದ ಹೊರಬಂದ. ಗಾಳಿ ರಭಸವಾಗಿ ಬೀಸಿ ಮೈಗೇ ಮೆತ್ತಿಹಾಕಿದಂತಿದ್ದ ಜೊತೆಗೆ ಹರಿದುಹೋದಂತಿದ್ದ ತನ್ನ ಕೋಟನ್ನು ಭದ್ರವಾಗಿ

ಹಿಡಿದುಕೊಂಡು, ಒಂದು ಕಡೆಯಿಂದ ಇನ್ನೊಂದು ಕಡೆ ತಿರುಗುತ್ತ ಹಿಮದಲ್ಲಿಯೇ ದಾರಿ ಹುಡುಕಲು ತೊಡಗಿದ. ಮೂರು ನಾಲ್ಕು ಬಾರಿ ಅವನು ಕಣ್ಮರೆಯಾಗಿದ್ದ. ಕೊನೆಗೆ ಅವನು ವಾಪಸಾಗಿ ವಾಸಿಲಿ ಆಂಡ್ರೆವಿಚ್‌ನಿಂದ ಲಗಾಮನ್ನು ತನ್ನ ಕೈಗೆ ತೆಗೆದುಕೊಂಡ.

"ನಾವು ಬಲಗಡೆಗೆ ಹೋಗ್ಬೇಕು" ಎಂದ ಗಡುಸಾಗಿ, ಖಚಿತ ದನಿಯಿಂದ ಆ ಕಡೆ ಕುದುರೆಯನ್ನು ತಿರುಗಿಸುತ್ತ.

"ಬಲಗಡೆಗೆ ಹೋಗ್ಬೇಕಾದ್ರೆ, ಬಲಕ್ಕೇ ಹೋಗು" ಎಂದ ವಾಸಿಲಿ ಆಂಡ್ರೆವಿಚ್, ನಿಕಿಟನಿಗೆ ಲಗಾಮುಗಳನ್ನೊಪ್ಪಿಸಿ. ಕೈಗಳನ್ನು ಗವಸುಗಳೊಳಗೆ ಬಿಗಿಗೊಳಿಸಿಕೊಳ್ಳುತ್ತ.

ನಿಕಿಟ ಉತ್ತರ ಕೊಡಲಿಲ್ಲ.

"ಅಯ್ಯಾ ಗೆಳೆಯ, ಸ್ವಲ್ಪ ಉತ್ಸಾಹ ತಗೋ" ಎಂದ ಕುದುರೆಯನ್ನು ಕುರಿತು. ಆದರೆ ಲಗಾಮುಗಳನ್ನು ಆಡಿಸುತ್ತಿದ್ದರೂ ಮುಖೋರ್ಟಿ ಮಾತ್ರ ನಿಧಾನಗತಿಯಿಂದಲೇ ಮುಂದೆ ಸಾಗಿತು.

ಕೆಲವು ಕಡೆ ಹಿಮ ಅದರ ಮೊಣಕಾಲವರೆಗೂ ತುಂಬಿತ್ತು, ಅದರ ಗತಿಗೆ ಅನುಗುಣವಾಗಿ ಜಾರುಬಂಡಿ ಬಿಟ್ಟೂ ಬಿಟ್ಟೂ ಹೋಗುತ್ತಿತ್ತು.

ಗಾಡಿಯ ಮುಂಭಾಗದಲ್ಲಿ ಸಿಕ್ಕಿಸಿದ್ದ ಚಾವಟಿಯನ್ನು ಕೈಗೆ ತೆಗೆದುಕೊಂಡ ನಿಕಿಟ ಕುದುರೆಯ ಬೆನ್ನ ಮೇಲೊಮ್ಮೆ ಝಾಡಿಸಿದ. ಚಾವಟಿ ಏಟಿನ ರುಚಿಯೇ ಕಾಣದಿದ್ದ ಈ ಜಾಣ ಕುದುರೆ ಮುಂದಕ್ಕೆ ಚಿಮ್ಮಿ ನಾಗಾಲೋಟ ಶುರುಮಾಡಿತು. ಆಮೇಲೆ ತಕ್ಷಣವೇ ಜಗ್ಗು ನಡೆಗೆ ಬಂದು ಕೊನೆಗೆ ನಿಧಾನವಾಗಿ ನಡೆಯತೊಡಗಿತು. ಹೀಗೇ ಐದು ನಿಮಿಷ ಹೋಗಿರಬೇಕು. ಕತ್ತಲು ಬೇರೆ, ಹಿಮ ಮೇಲುಗಡೆಯಿಂದ ಸುರಿಯುತ್ತಿದ್ದು ಕೆಳಗಡೆಯಿಂದ ಚಿಮ್ಮುತ್ತಿತ್ತು. ಇದರಿಂದ ಜಾರುಬಂಡಿಯ ಮೂಕಿಯೇ ಆಗಾಗ ಕಾಣದಾಗಿಬಿಡುತ್ತಿತ್ತು. ಗಾಡಿ ಕೆಲವೊಮ್ಮೆ ನಿಂತೇ ಬಿಟ್ಟಂತಾಗಿ, ನೆಲ ಹಿಂದೆ ಸರಿಯುವಂತೆ ಕಾಣುತ್ತಿತ್ತು. ಇದ್ದಕ್ಕಿದ್ದಂತೆ ಕುದುರೆ ನಿಂತುಬಿಟ್ಟಿತು, ಅದರ ಮುಂದೇ ಏನೋ ಇರುವುದು ಅದರ ಕಣ್ಣಿಗೆ ಬಿದ್ದಂತಿತ್ತು. ನಿಕಿಟ ಲಗಾಮುಗಳನ್ನು ಬಿಟ್ಟು ಮತ್ತೆ ಕೆಳಕ್ಕೆ ಚಿಮ್ಮಿ, ಕುದುರೆ ತಟಕ್ಕನೆ ನಿಂತುದರ ಕಾರಣವೇನಿರಬಹುದೆಂದು ನೋಡಲು ಹೋದ. ಆದರೆ ಕುದುರೆಯ ಮುಂದೆ ಇನ್ನೂ ಹೋಗಿ ನಿಂತಿರಲಿಲ್ಲ, ಅಷ್ಟರಲ್ಲೇ ಜಾರಿ ಮುಂದಿದ್ದ ಇಳಿಜಾರಿನಲ್ಲಿ ಉರುಳಿಕೊಂಡು ಹೋದ.

"ಹೋ ಹೋ ಹೋ" ಎಂದು ಕೂಗಿಕೊಂಡ ಬಿದ್ದ ತಕ್ಷಣ, ಬೀಳುವುದರಿಂದ ತಪ್ಪಿಸಿಕೊಳ್ಳಬೇಕೆಂದು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಕೊನೆಗೆ ಜಾರುತ್ತ ಬಂದು ತುಂಬಿಕೊಂಡಿದ್ದ ಹಿಮದ ದಟ್ಟ ಕುಳಿಯೊಂದರಲ್ಲಿ ಕಾಲು ಸಿಕ್ಕಿಹಾಕಿಕೊಂಡು ನಿಂತ.

ಜಾರಿ ಬಿದ್ದಿದ್ದ ಹಿಮದ ಅರುಗು ಆ ಕುಳಿಯ ಬದಿಯಲ್ಲಿ ಜೋತಾಡುತ್ತಿದ್ದು, ನಿಕಿಟ ಬಿದ್ದುದರಿಂದ ಸಡಿಲುಗೊಂಡು ಅವನ ಮೇಲೇ ಸುರಿದು ಅವನ ಕಾಲರ್ ಒಳಗೆಲ್ಲ ಸೇರಿಕೊಂಡುಬಿಟ್ಟಿತು.

"ಏನು ಕೆಲಸ ಮಾಡಿಬಿಟ್ಟೇ ನಾನು!" ಎಂದು ಆ ಹಿಮಪಾತವನ್ನು ಕುರಿತು ಬೈದುಕೊಂಡ ನಿಕಿಟ ತನ್ನ ಕಾಲರಿನೊಳಕ್ಕೆ ತೂರಿದ್ದ ಹಿಮವನ್ನು ಹೊರಗೆ ಹಾಕಲು ತೊಡಗಿದ.

"ನಿಕಿಟ, ಏಯ್ ನಿಕಿಟ" ಎಂದ ಮೇಲಿನಿಂದ ವಾಸಿಲಿ ಆಂಡ್ರೆವಿಚ್ ಕೂಗಿದ.

ಆದರೆ ನಿಕಿಟ ಉತ್ತರಿಸಲಿಲ್ಲ. ತನ್ನ ಮೇಲಿನ ಹಿಮವನ್ನು ಜಾಡಿಸಿ ತೆಗೆಯುವುದರಲ್ಲಿ ಅವನು ನಿರತನಾಗಿ, ಎಲ್ಲೋ ಬಿದ್ದಿದ್ದ ಚಾವಟಿಯನ್ನು ಹುಡುಕುತ್ತಲಿದ್ದ. ಚಾವಟಿಯನ್ನು ಕಂಡ ಮೇಲೆ ಕುಳಿಯ ಮೇಲೆ ಹತ್ತುವುದಕ್ಕೆ ಪ್ರಯತ್ನಿಸಿದ, ಆದರೆ ಅದು ಸಾಧ್ಯವಾಗಲಿಲ್ಲ, ಮತ್ತೆ ಕೆಳಕ್ಕೇ ಜಾರಿದ. ಹೀಗಾಗಿ ಮೇಲೆ ಹತ್ತುವುದಕ್ಕಾಗಿ ಕುಳಿಯ ಆಚೆಯ ಬದಿಗೆ ಹೋಗಬೇಕಾಗಿ ಬಂತು. ಸುಮಾರು ಏಳು ಗಜ ದೂರದಷ್ಟು ಮುಂದೆ ತುಂಬ ಪ್ರಯಾಸದಿಂದ ಕುಳಿಯಿಂದ ಮೇಲೆ ಬರಲು ಕೈಕಾಲುಗಳನ್ನು ಬಳಸಿಕೊಂಡು ತೆವಳಿಕೊಂಡೇ ಬರಬೇಕಾಯಿತು. ಆದರೆ ಅಲ್ಲಿರಬೇಕಾಗಿದ್ದ ಕುಳಿಯ ಬದುವಾಗಲೀ ಕುದುರೆಯಾಗಲೀ ಕಾಣಿಸಲಿಲ್ಲ. ಹೀಗಾಗಿ ಎದುರುಗಾಳಿಗೆ ಸಿಕ್ಕಿ ಮುಂದುವರಿದಾಗ ವಾಸಿಲಿ ಆಂಡ್ರೆವಿಚ್ ತನ್ನ ಹೆಸರು ಹಿಡಿದು ಕೂಗಿದ್ದೂ, ಕುದುರೆ ಕೆನೆದಿದ್ದೂ ಕೇಳಿಸಿತು.

"ಬಂದೆ, ಬಂದ್ಬಿಟ್ಟೆ! ಯಾಕೆ ಸುಮ್ನೆ ಕಿರಿಚ್ತಾ ಇದ್ದೀರಾ?" ಎಂದು ಗೊಣಗಿಕೊಂಡ.

ಜಾರುಬಂಡಿಯ ಹತ್ತಿರ ಬಂದಾಗಲೇ ಅವನಿಗೆ ಕುದುರೆ ಹಾಗೂ ಅದರ ಪಕ್ಕದಲ್ಲಿ ದೈತ್ಯನ ಹಾಗೆ ನಿಂತಿದ್ದ ವಾಸಿಲಿ ಆಂಡ್ರೆವಿಚ್ ಕಾಣಿಸಿದ್ದು.

"ಇಷ್ಟು ಹೊತ್ತು ಎಲ್ಲಿ ಕಣ್ಮರೆಯಾಗಿದ್ದೆ? ಮತ್ತೆ ಗ್ರಿಶ್ಕಿನೋಗೆ ವಾಪಸ್ಸು ಹೋಗ್ಬೇಕಾಗತ್ತೆ, ಅಷ್ಟೆ" ಎಂದು ಬೈದ. "ಹೋಗೋದಾದ್ರೆ ಸಂತೋಷವೇ ಯಜಮಾನ್ರೇ. ಆದ್ರೆ ಯಾವ ದಿಕ್ಕಿಗೆ ಹೋಗ್ಬೇಕೂಂತ? ಇಲ್ಲಿ ನೋಡಿದ್ರೆ ಇಷ್ಟೊಂದು ಕೊರಕಲಿದೆ, ಅದರಲ್ಲೇನಾದ್ರೂ ಒಂದ್ಸಲ ಬಿದ್ರೆ ಹೊರಕ್ಕೆ ಬರಕ್ಕಾಗಲ್ಲ. ಅಲ್ಲಿ ನಾನು ಎಷ್ಟು ಜೋರಾಗಿ ಬಿದ್ದೆ ಅಂದ್ರೆ ಮೇಲೆದ್ದು ಬರೋದು ಕಷ್ಟವಾಗಿಬಿಡ್ತು."

"ಏನು ಮಾಡೋದೀಗ? ಇಲ್ಲಿ ಉಳಿದುಕೊಳ್ಳಕ್ಕೆ ಆಗಲ್ಲ, ನಾವು ಯಾವ ದಿಕ್ಕಿಗೆ ಹೋಗ್ಬೇಕೋ ಗೊತ್ತಾಗ್ತಿಲ್ಲವಲ್ಲ!" ಎಂದ ವಾಸಿಲಿ ಆಂಡ್ರೆವಿಚ್.

ನಿಕಿಟ ಮಾತಾಡಲಿಲ್ಲ. ಗಾಳಿಗೆ ಬೆನ್ನು ಒಡ್ಡಿಕೊಂಡು ಜಾರುಬಂಡಿಯಲ್ಲಿ ಕೂತು ತನ್ನ ಬೂಟುಗಳನ್ನು ಕಳಚಿ, ಅದರಲ್ಲಿದ್ದ ಹಿಮದ ತುಣುಕುಗಳನ್ನು ಹೊರಚೆಲ್ಲಿದ. ಜಾರುಬಂಡಿಯ ಅಡಿಯಲ್ಲಿದ್ದ ಒಂದಷ್ಟು ಹುಲ್ಲನ್ನು ತೆಗೆದುಕೊಂಡು ತನ್ನ ಎಡ ಬೂಟಿನೊಳಕ್ಕೆ ಎಚ್ಚರಿಕೆಯಿಂದ ತೂರಿಸಿದ.

ವಾಸಿಲಿ ಆಂಡ್ರೆವಿಚ್ ಕೂಡ ಸುಮ್ಮನಾಗಿದ್ದ, ನೋಡಿದ್ರೆ ಎಲ್ಲವನ್ನೂ ನಿಕಿಟನ ವಿವೇಚನೆಗೇ ಬಿಟ್ಟಹಾಗಿತ್ತು. ಮತ್ತೆ ತನ್ನ ಬೂಟುಗಳನ್ನು ಹಾಕಿಕೊಂಡ ನಿಕಿಟ ಜಾರುಬಂಡಿಯೊಳಕ್ಕೆ ಕಾಲುಗಳನ್ನೆಳೆದುಕೊಂಡು ಮತ್ತೆ ಕೈಯಲ್ಲಿ ಲಗಾಮುಗಳನ್ನು ತೆಗೆದುಕೊಂಡು ಕುದುರೆಯನ್ನು ಕಮರಿಯ ಅಂಚಿನಲ್ಲೇ ಮುಂದರಿಸಿದ. ಆದರೆ ಇನ್ನೂ

ಒಂದು ನೂರು ಗಜ ಮುಂದಕ್ಕೆ ಹೋಗಿರಲಿಲ್ಲ, ಮತ್ತೆ ಕುದುರೆ ನಿಂತುಬಿಟ್ಟಿತು. ಅದರ ಮುಂದೇನೇ ಕಮರಿ!

ನಿಕಿಟ ಮತ್ತೆ ಹೊರಬಂದು ಹಿಮದಲ್ಲೇ ತಟ್ಟಾಡಿಕೊಂಡು ಹೋದ. ಸಾಕಷ್ಟು ಹೊತ್ತು ಹೀಗೆ ಮಾಡಿದ ಮೇಲೆ, ತಾನು ಹೊರಟಿದ್ದ ಕಡೆಗೆ ಮತ್ತೆ ವಾಪಸು ಬಂದ.

"ವಾಸಿಲಿ ಆಂಡ್ರೆವಿಚ್, ಎಲ್ಲಿದ್ದೀರಾ?"

"ಇಲ್ಲಿದ್ದೀನಿ, ಈಗೇನ್ಮಾಡೋದು" ಎಂದ ಅವನು.

"ನಂಗೇನೂ ತೋಚ್ತಾನೇ ಇಲ್ಲ. ತುಂಬ ಕತ್ತಲೆ ತುಂಬಿಕೊಂಡಿದೆ, ಇಲ್ಲಿ ನೋಡಿದರೆ ಬರೀ ಕಮರಿಗಳು. ಎದುರುಗಾಳಿಗೆ ಮುಖ ಮಾಡಿ ಆಕಡೆ ಹೋಗ್ಬೇಕು ಬೇರೆ."

ಮತ್ತೆ ಅವರು ಹೊರಟರು. ಮತ್ತೆ ನಿಕಿಟ ಹಿಮದಲ್ಲಿ ಜಾರಿದ, ಮತ್ತೆ ಮೇಲಕ್ಕೆ ಹತ್ತಿ ದಟ್ಟಡಿಯಿಡುತ್ತ ಬಂದು ಸುಸ್ತಾಗಿ ಜಾರುಬಂಡಿ ಬದಿಗೆ ಕುಸಿದು ಕುಳಿತ.

"ಏನಪ್ಪಾ ಮಾಡೋದು ಈಗ?" ಎಂದು ಕೇಳಿದ ವಾಸಿಲಿ ಆಂಡ್ರೆವಿಚ್.

"ನಂಗೆ ಸುಸ್ತಾಗಿಬಿಟ್ಟಿದೆ, ಕುದುರೆ ಬೇರೆ ಮುಂದಕ್ಕೆ ಹೋಗ್ತಾ ಇಲ್ಲ."

"ಹಾಗಾದ್ರೆ ಗತಿ ಏನು?"

"ಒಂದ್ನಿಮಿಷ ತಾಳಿ"

ಮತ್ತೆ ನಿಕಿಟ ಹೋಗಿ ಈ ಸಲ ಬೇಗನೇ ವಾಪಸು ಬಂದ.

"ನನ್ನ ಹಿಂದೇನೇ ಬನ್ನಿ" ಎಂದು ಕುದುರೆಯ ಮುಂದುಗಡೆಗೆ ಹೋಗುತ್ತ.

ವಾಸಿಲಿ ಆಂಡ್ರೆವಿಚ್ ಆಜ್ಞೆಗಳನ್ನೀಯುವ ಸ್ಥಿತಿಯಲ್ಲಿರದೆ, ನಿಕಿಟ ಹೇಳಿದ ಹಾಗೆ ಕೇಳಬೇಕಾಗಿತ್ತು.

"ಈ ಕಡೆ, ಹೀಗೆ ಬನ್ನಿ" ಎಂದು ಕೂಗಿದ ನಿಕಿಟ, ತಕ್ಷಣ ಬಲಗಡೆಗೆ ತಿರುಗಿ, ಲಗಾಮುಗಳನ್ನು ಹಿಡಿದುಕೊಂಡು ಹಿಮದ ಒಟ್ಟಿಲಿನ ಕಡೆಗೆ ಮುಖೋರ್ಟಿಯನ್ನು ಎಳೆದೊಯ್ದ.

ಮೊದಲು ಕುದುರೆ ಹಿಂಜರಿಯಿತು, ಆಮೇಲೆ ಕುಳಿಯನ್ನು ಹಾರುವ ನಿರೀಕ್ಷೆಯಿಂದ ಮುಂದೆ ಜರುಗಿದರೂ, ಶಕ್ತಿಯಿಲ್ಲದೆ ಕೊರಳವರೆಗೂ ಅದರಲ್ಲಿ ಕುಸಿಯಿತು.

"ಹೊರಗೆ ಬನ್ನಿ!" ಇನ್ನೂ ಸ್ಲೆಜ್‌ನಲ್ಲೇ ಕುಳಿತಿದ್ದ ವಾಸಿಲಿ ಆಂಡ್ರೆವಿಚ್ ಅನ್ನು ನಿಕಿಟ ಕರೆದ. ತನ್ನ ಕೈಯಲ್ಲಿ ಮೂಕಿಯೊಂದನ್ನು ಹಿಡಿದು ಕುದುರೆಯ ಸಮೀಪಕ್ಕೆ ಎಳೆದ. "ಕಷ್ಟ ಕಣಪ್ಪ, ಏನ್ಮಾಡ್ತೀ!" ಎಂದು ಮುಖೋರ್ಟಿಗೆ ಹೇಳುತ್ತ, "ಏನ್ಮಾಡೋದು, ಬೇರೇ ದಾರೀನೇ ಇಲ್ಲ. ಒಂದು ಸಲ ಪ್ರಯತ್ನ ಮಾಡು, ಒಂದೇ ಒಂದು ಸಣ್ಣ ಪ್ರಯತ್ನ!" ಎಂದು ಕೂಗಿದ.

"ಇಗೋ ನೋಡಣ್ಣ, ಹೀಗಾದ್ರೆ ಸರಿಹೋಗಲ್ಲ" ಎಂದು ಅದನ್ನು ಜರೆದ ನಿಕಿಟ

"ಇನ್ನೊಂದ್ಸಲ ಪ್ರಯತ್ನಪಡು!" ಎಂದ.

ನಿಕಿಟ ಮತ್ತೆ ತನ್ನ ಪಕ್ಕದಲ್ಲಿ ಮೂಕಿಯನ್ನು ಬಿಗಿಯಾಗಿ ಹಿಡಿದುಕೊಂಡ, ವಾಸಿಲಿ ಆಂಡ್ರೆವಿಚ್ ಇನ್ನೊಂದು ಕಡೆ ಹಾಗೆ ಮಾಡಿದ.

ಮುಖೋರ್ಟಿ ತನ್ನ ತಲೆಯನ್ನು ಮೇಲೆತ್ತಿ ತಟಕ್ಕನೆ ಮುಂದೆ ಚಿಮ್ಮಿತು.

"ಹಾಗೆ! ಹಾಗೆ! ಭಯಪಡ್ಬೇಡ, ಬಿದ್ದೇನೂ ಬೀಳಲ್ಲ" ಎಂದು ನಿಕಿಟ ಕೂಗಿದ.

ಒಂದು ಚಿಮ್ಮು, ಎರಡನೆಯದು, ಮೂರನೆಯದು, ಅಂತೂ ಕೊನೆಗೆ ಮುಖೋರ್ಟಿ ಆ ಹಿಮದ ಒಟ್ಟಿಲಿನಿಂದ ಹೊರಬಂದು, ಜೋರಾಗಿ ಉಸಿರುಬಿಡುತ್ತ ತಲೆ ಕೊಡವಿ ಮೈಮೇಲಿನ ಹಿಮವನ್ನು ಕೊಡವಿಕೊಂಡಿತು.

"ಸ್ವಲ್ಪ ಉಸಿರಾಡ್ತೀನಿ!" ಎಂದುಕೊಂಡು ಹಳ್ಳಿಯಲ್ಲಿ ತನ್ನ ತುಪ್ಪುಳುಗಂಬಳಿಯ ಕಾಲರ್‌ಗೆ ಸುತ್ತಿಕೊಂಡಿದ್ದ ಬಟ್ಟೆಯನ್ನು ಬಿಚ್ಚಿದ.

"ಇಲ್ಲಿ ಸರಿಯಾಗಿದೆ, ನೀವಲ್ಲಿ ಕೂತ್ಕೊಳ್ಳಿ, ನಾನು ಕುದುರೆಯನ್ನು ನಡೆಸ್ತೀನಿ" ಎಂದು ನಿಕಿಟ ಸೂಚಿಸಿದ. ವಾಸಿಲಿ ಆಂಡ್ರೆವಿಚ್ ಕೂತಿದ್ದಂತೆಯೇ ಕುದುರೆಯ ಕಡಿವಾಣ ಹಿಡಿದು ಜಾರುಬಂಡಿಯನ್ನು ಸುಮಾರು ಹತ್ತು ಹೆಜ್ಜೆಯಿಟ್ಟು ಒಂದು ಏರನ್ನು ಹತ್ತಿಸಿ ಮುನ್ನಡೆಸಿ ನಿಂತ.

ನಿಕಿಟ ನಿಂತಿದ್ದ ಜಾಗ ಬೆಟ್ಟದಿಂದ ಇಳಿದುಬರುತ್ತಿದ್ದ ಹಿಮವು ಅವರನ್ನು ಸಂಪೂರ್ಣವಾಗಿ ಹೂತುಹಾಕಿಬಿಡಬಹುದಾದಂತಹ ಗುಂಡಿಯೇನಾಗಿರಲಿಲ್ಲ. ಆದರೂ ಅದು ಕಮರಿಯ ಅಂಚಿನಲ್ಲಿ ಗಾಳಿಯಿಂದ ರಕ್ಷಿಸಿತ್ತು. ಗಾಳಿ ಬೀಸುವ ರಭಸ ಕೆಲವೊಮ್ಮೆ ಕಡಿಮೆಯಾಯಿತೆನಿಸುತ್ತಿದ್ದರೂ, ಅದು ಹೆಚ್ಚು ಕಾಲ ಮುಂದುವರಿಯಲಿಲ್ಲ; ಆ ವಿನಾಯಿತಿಯನ್ನು ಅಳಿಸಿಹಾಕಲೆಂಬಂತೆ ಗಾಳಿಯು ಮಹಾ ಬಿರುಸಿನಿಂದ ಬೀಸಿ ಗಿರ್ರನೆ ತಿರುಗುತ್ತಿತ್ತು. ಆ ರಭಸ ಒಂದು ಕ್ಷಣ ಅವರನ್ನಾವರಿಸಿತು; ಆಗ ವಾಸಿಲಿ ಆಂಡ್ರೆವಿಚ್ ತನ್ನ ಉಸಿರನ್ನು ಬಿಗಿಹಿಡಿದು, ಈ ಹೊತ್ತಿಗೆ ಸ್ವಲ್ಪ ಸುಧಾರಿಸಿಕೊಂಡಿದ್ದವನು, ಸ್ಲೆಜ್‌ನಿಂದ ಹೊರಬಂದು, ತಾವೀಗ ಏನು ಮಾಡಬೇಕೆಂದು ವಿಚಾರಿಸುವುದಕ್ಕಾಗಿ, ನಿಕಿಟ ಇದ್ದ ಜಾಗಕ್ಕೆ ಹೋದ. ಅವರಿಬ್ಬರೂ ತಮಗರಿವಿಲ್ಲದಂತೆಯೇ ಬಾಗಿ ಹಿಮಗಾಳಿಯ ಬಿರುಸು ಕಡಿಮೆಯಾಗುವವರೆಗೂ ಕಾದರು. ಮುಖೋರ್ಟಿ ಕೂಡ ಅಸಮಾಧಾನದಿಂದ ತನ್ನ ಕಿವಿಗಳೆರಡನ್ನೂ ಹಿಂದಕ್ಕೆ ಮಡಿಚಿಕೊಂಡಿತು. ಗಾಳಿಯ ಬಿರುಸು ಕೊಂಚ ಕಡಿಮೆಯಾದ ತಕ್ಷಣವೇ ನಿಕಿಟ ತನ್ನ ಕೈಗವಸುಗಳನ್ನು ತೆಗೆದು ತನ್ನ ಬೆಲ್ಟಿನಲ್ಲಿ ಸಿಕ್ಕಿಸಿಕೊಂಡು, ಅವುಗಳ ಮೇಲೆ ಉಸಿರು ಬಿಟ್ಟು ಮೂಕಿಯ ಕಟ್ಟುಗಳನ್ನು ಬಿಚ್ಚತೊಡಗಿದ.

"ಏನು ಮಾಡ್ತಾ ಇದ್ದೀಯಾ ನೀನು?" ಎಂದ ವಾಸಿಲಿ ಆಂಡ್ರೆವಿಚ್.

"ಕುದುರೆಯನ್ನು ಗಾಡಿಯಿಂದ ಬಿಚ್ತಿದ್ದೀನಿ. ಇನ್ನೇನ್ಮಾಡ್ಲಿ? ನನ್ನ ಕೈಲಿ ಶಕ್ತೀನೆ ಉಳಿದಿಲ್ಲ" ಎಂದ ನಿಕಿಟ ಸಬೂಬು ಹೇಳುವವನಂತೆ.

"ನಾವೆಲ್ಲಿಗಾದ್ರೂ ಹೋಗೋಕ್ಕಾಗೋದಿಲ್ವಾ?"

"ಉಹ್ಞೂ, ಆಗಲ್ಲ. ಹಾಗೆ ಮಾಡಿದ್ರೆ ಕುದುರೆ ಸಾಯತ್ತೆ, ಅಷ್ಟೆ. ಪಾಪ, ಮೂಕ ಪ್ರಾಣಿ ಈಗಾಗ್ಲೇ ಬಸವಳಿದುಬಿಟ್ಟಿದೆ" ಎಂದ ನಿಕಿಟ ಕುದುರೆಯ ಕಡೆ ತೋರಿಸುತ್ತ. ಪಾಪ, ಅದಾದರೋ ದೈನ್ಯದಿಂದ ಏನು ಬರುತ್ತೋ ಎಂದು ಕಾಯುತ್ತಿತ್ತು, ಅದರ ಪಕ್ಕೆಗಳು ಜೋರಾದ ಉಸಿರಾಟದಿಂದ ಮೇಲುಕೆಳಗಾಗುತ್ತಿದ್ದವು. "ನಾವು ರಾತ್ರಿ ಪೂರ್ತಿ ಇಲ್ಲೇ ಇರ್ಬೇಕು" ಎಂದ ಅವನು, ಯಾವುದೋ ಹೋಟಲಲ್ಲಿ ಉಳಿದುಕೊಳ್ಳುವವನ ಹಾಗೆ. ಕುದುರೆಯ ಕೊರಳ ಪಟ್ಟಿಗಳನ್ನು ಸಡಿಲಗೊಳಿಸಲು ಹೋದ. ಬಕಲ್‌ಗಳನ್ನು ಬಿಚ್ಚಿದ.

"ಹಾಗೆ ಮಾಡಿದ್ರೆ ಹೆಪ್ಪುಗಟ್ಟಿ ಹೋಗ್ತೀವಿ" ಎಂದ ವಾಸಿಲಿ ಆಂದ್ರೆವಿಚ್.

"ಸರಿಯೇ. ಆದ್ರೆ ಈಗ ವಿಧಿಯೇ ಇಲ್ಲವಾಗಿದೆ."

## 6

ತೊಟ್ಟಿದ್ದ ಎರಡು ಫರ್ ಕೋಟ್‌ಗಳಿಂದಾಗಿ ವಾಸಿಲಿ ಆಂದ್ರೆವಿಚ್‌ಗೆ, ಅದರಲ್ಲೂ ಹಿಮದ ಒಟ್ಟಿನಲ್ಲಿ ಸೆಣೆಸಾಡಿದ ಬಳಿಕ, ಸಾಕಷ್ಟು ಬೆಚ್ಚಗಿತ್ತು. ಆದರೆ ರಾತ್ರಿಯನ್ನೆಲ್ಲ ತಾವಿರುವ ಜಾಗದಲ್ಲೇ ಕಳೆಯಬೇಕಾದ ಅನಿವಾರ್ಯತೆಯ ಕಲ್ಪನೆಯಿಂದ ಅವನ ಬೆನ್ನಿನಲ್ಲಿ ತಣ್ಣನೆಯ ಚಳುಕು ಉಂಟಾಯಿತು. ತನ್ನನ್ನು ಸಮಾಧಾನಪಡಿಸಿಕೊಳ್ಳಲು ಅವನು ಜಾರುಬಂಡಿಯಲ್ಲಿ ಕೂತು, ಸಿಗರೇಟ್ ಮತ್ತು ಬೆಂಕಿಪೊಟ್ಟಣವನ್ನು ಹೊರತೆಗೆದ.

ಈ ಮಧ್ಯೆ ನಿಕಿಟ ಮುಖೋರ್ತಿಯ ಲಗಾಮುಗಳನ್ನು ಕಳಚಿದ್ದ. ಅದರ ನಡುಪಟ್ಟಿ ಬೆನ್ನುಪಟ್ಟಿಗಳನ್ನು ಸಡಿಲಿಸಿ, ಲಗಾಮುಗಳನ್ನು ತೆಗೆದು, ಕೊರಳಪಟ್ಟಿಯನ್ನು ಸಡಿಲಗೊಳಿಸಿದ; ಆಮೇಲೆ ಮೂಕಿಯ ದಿಂಡನ್ನು ತೆಗೆದ; ಹಾಗೆ ಮಾಡುವಾಗ ಉದ್ದಕ್ಕೂ ಅದರೊಡನೆ ಮಾತಾಡುತ್ತ ಉತ್ತೇಜಿಸುತ್ತಿದ್ದ.

"ಹೊರಗೆ ಬಾ, ಈ ಕಡೆ" ಎಂದು ಕುದುರೆಯನ್ನು ಮೂಕಿಯಿಂದ ಹೊರಕ್ಕೆ ಎಳೆದ. "ಈಗ ನಿನ್ನನ್ನ ಇಲ್ಲಿ ಕಟ್ಟಿಹಾಕ್ತೀನಿ, ಮುಂದೆ ಸ್ವಲ್ಪ ಹುಲ್ಲು ಹಾಕ್ತೀನಿ, ನಿನ್ನ ಕಡಿವಾಣ ಬಿಚ್ತೀನಿ. ಹೊಟ್ಟೆಗೆ ಏನಾದ್ರೂ ಬಿದ್ರೆ ಸ್ವಲ್ಪ ಹಾಯ್ ಅನಿಸತ್ತೆ."

ಆದರೆ ಮುಖೋರ್ತಿ ಮಾತ್ರ ತಹತಹಪಡುತ್ತಿತ್ತು, ನಿಕಿಟನ ಮಾತುಗಳ ಅದಕ್ಕೆ ಸಮಾಧಾನ ನೀಡುವಂತಿರಲಿಲ್ಲ. ಈಗೊಂದು ಹೆಜ್ಜೆ ಆಗೊಂದು ಹೆಜ್ಜೆ ಇಟ್ಟು ಸ್ಲೆಜ್ಜೆಗೆ ಒತ್ತಾಗಿ ನಿಂತು, ಗಾಳಿಗೆ ಬೆನ್ನೊಡ್ಡಿ ನಿಕಿಟನ ಕೋಟಿನ ತೋಳುಗಳಿಗೆ ತಲೆಯನ್ನುಜ್ಜತೊಡಗಿತು. ಆಮೇಲೆ, ತನ್ನ ಮುಂದೆ ಹರವಿದ ಹುಲ್ಲನ್ನು ನಿರಾಕರಿಸಿ ನಿಕಿಟನ ಮನಸ್ಸಿಗೆ ನೋವುಂಟುಮಾಡಬಾರದೆಂಬಂತೆ, ಸ್ಲೇಜ್‌ನೊಳಗಿನಿಂದ ಒಂದು ಹಿಡಿ ಹುಲ್ಲನ್ನು ಕಚ್ಚಿ ಎಳೆದು, ತಕ್ಷಣವೇ ಈಗ ತಿನ್ನುವ ಹೊತ್ತಲ್ಲವೆಂದು ಅನ್ನಿಸಿದ ಹಾಗೆ, ಅದನ್ನುಗುಳಿತು. ಉಗುಳಿದ್ದನ್ನು ಗಾಳಿ ತಕ್ಷಣವೇ ಚೆಲ್ಲಾಪಿಲ್ಲಿ ಮಾಡಿ ಹೊತ್ತುಕೊಂಡು ಹೋಯಿತು, ಸ್ವಲ್ಪ ಹೊತ್ತಲ್ಲೇ ಅದನ್ನು ಹಿಮ ಆವರಿಸಿತು.

"ಈಗ ಒಂದು ಗುರುತನ್ನು ಇಡೋಣ" ಎಂದುಕೊಳ್ಳುತ್ತ ನಿಕಿಟ ಗಾಳಿಗೆದುರಾಗಿ ಜಾರುಬಂಡಿಯ ಮುಂಭಾಗವನ್ನು ತಿರುಗಿಸಿ, ಮೂಕಿಯನ್ನು ದಾರದಿಂದ ಕಟ್ಟಿ, ಜಾರುಬಂಡಿಯ ಮುಂಭಾಗದಲ್ಲಿ ನಿಲ್ಲಿಸಿದ. "ಈಗ ಸರಿಹೋಯ್ತು. ಅದನ್ನು ಹಿಮ ಮುಚ್ಚಿಬಿಟ್ಟರೆ, ಜನಗಳಿಗೆ ಮೂಕಿ ಕಾಣ್ಸತ್ತೆ, ಪಕ್ಕದಲ್ಲಿ ಹೋಗ್ತಾರೆ" ಅಂದುಕೊಂಡ. ಆಮೇಲೆ ತನ್ನ ಕೈಗವಸುಗಳನ್ನು ಪರಸ್ಪರ ಅಪ್ಪಳಿಸಿ ತೊಟ್ಟುಕೊಂಡ. "ಹಿರಿಯರು ನಮಗೆ ಕಲಿಸಿದ್ದು ಇದೇ."

ಈ ಮಧ್ಯೆ ವಾಸಿಲಿ ಆಂಡ್ರೆವಿಚ್ ತನ್ನ ಕೋಟನ್ನು ಸಡಿಲಿಸಿ, ಅದನ್ನು ಮರೆಯಾಗಿ ಹರವಿ, ಒಂದಾದ ಮೇಲೊಂದರಂತೆ ಸ್ಟೀಲ್ ಪಟ್ಟಣದ ಮೇಲೆ ಕಡ್ಡಿ ಗೀರಿದ, ಆದರೇನು ಒಂದೂ ಹತ್ತಿಕೊಳ್ಳಲಿಲ್ಲ. ಅವನ ಕೈಗಳು ನಡುಗುತ್ತಿದ್ದವು, ಗೀರಿದ ಕಡ್ಡಿಗಳು ಇಲ್ಲವೇ ಹತ್ತಿಕೊಳ್ಳಲಿಲ್ಲ, ಅಥವಾ ಹತ್ತಿಕೊಂಡರೂ ಗಾಳಿಯಿಂದಾಗಿ ಸಿಗರೇಟಿಗೆ ಬೆಂಕಿ ತಾಕಿಸುವ ಹೊತ್ತಿನೊಳಗೆ ಆರಿಹೋಗುತ್ತಿತ್ತು. ಕೊನೆಗೂ ಒಂದು ಕಡ್ಡಿ ಉರಿಯತೊಡಗಿತು, ಕೋಟಿನ ತುಪ್ಪುಳ, ಚಿನ್ನದ ಉಂಗುರವಿದ್ದ ಅವನ ಬಾಗಿದ ಬೆರಳು ಹಾಗೂ ಹಾಸಿದ್ದ ತುಪ್ಪುಳಗಂಬಳಿಯ ಕೆಳಗಿನಿಂದ ಮೇಲೆದ್ದಿದ್ದ ಹುಲ್ಲನ್ನು ಒಂದು ಕ್ಷಣ ಬೆಳಗಿತು. ಸಿಗರೇಟು ಹತ್ತಿಕೊಂಡದ್ದರಿಂದ ಆತುರಾತುರವಾಗಿ ಒಂದೆರಡು ಬಾರಿ ದಮ್ಮು ಎಳೆದು, ಬಾಯಲ್ಲಿ ಹೊಗೆ ತುಂಬಿಕೊಂಡು ಮೀಸೆಯ ಮೂಲಕ ಹೊರಗೆ ಬಿಟ್ಟ. ಮತ್ತೆ ದಮ್ಮು ಎಳೆಯುವವನು, ಆದರೆ ಬಿರುಗಾಳಿ ಸಿಗರೇಟಿನ ಉರಿಯುವ ತುದಿಯನ್ನು ಮುರಿದು ಬೀಳಿಸಿ ಹಿಂದೆ ಹುಲ್ಲನ್ನು ಮಾಡಿದ್ದ ಹಾಗೆಯೇ ದೂರಕ್ಕೆಲ್ಲೋ ಒಯ್ದು ಹಾಕಿತು. ಆದರೆ ಎಳೆದಿದ್ದ ಕೆಲವು ದಮ್ಮುಗಳೇ ಅವನಿಗೆ ಆರಾಮವೆನ್ನಿಸಲು ಸಾಕಾಗಿದ್ದವು.

"ಈ ರಾತ್ರಿ ನಾವಿಲ್ಲೇ ಕಳೀಬೇಕಾದ್ರೆ, ಹಾಗೇ ಮಾಡ್ಬೇಕು, ನಿರ್ವಾಹವಿಲ್ಲ!" ಎಂದ ವಾಸಿಲಿ ಆಂಡ್ರೆವಿಚ್ ನಿರ್ಧಾರದಿಂದ. "ಆದರೆ ಒಂದು ಸ್ವಲ್ಪ ನಿಲ್ಲು, ನಾನೊಂದು ಒಳ್ಳೆ ಬಾವುಟ ಸಿದ್ಧಮಾಡ್ತೀನಿ" ಎಂದು ತನ್ನ ಕೊರಳ ಸುತ್ತ ಕಟ್ಟಿಕೊಂಡು ಸ್ವಲ್ಪ ಹೊತ್ತಿಗೆ ಮುಂಚೆ ಬಿಚ್ಚಿ ಜಾರುಬಂಡಿಯಲ್ಲಿ ಬಿಸಾಕಿದ್ದ ಒಂದು ಕರ್ಚೀಫ್ ತೆಗೆದುಕೊಂಡು, ತನ್ನ ಗವಸುಗಳನ್ನು ತೆಗೆದು, ಜಾರುಬಂಡಿಯ ಮುಂಭಾಗದಲ್ಲಿ ಬಂದು ನಿಂತು ತುದಿಯನ್ನು ಎಟುಕಿಸಿಕೊಳ್ಳುವಂತೆ ಮೇಲೆ ಚಾಚಿಕೊಂಡು, ಅದಕ್ಕೆ ಕರ್ಚೀಫ್ ಅನ್ನು ಬಿಗಿಯಾಗಿ ಕಟ್ಟಿದ.

ಆ ಕರ್ಚೀಫ್ ತಕ್ಷಣವೇ ಪಟ ಪಟ ಹಾರಾಡಲು ತೊಡಗಿತು, ಒಮ್ಮೆ ಮೂಕಿಗೆ ಆತುಕೊಂಡು, ಮರುಕ್ಷಣವೇ ಹೊರಕ್ಕೆ ಹರವಿಕೊಂಡು ಹಾರುತ್ತ.

"ನೋಡು, ಬಾವುಟ ಎಷ್ಟು ಚೆನ್ನಾಗಿದೆ!" ಎಂದು ವಾಸಿಲಿ ಆಂಡ್ರೆವಿಚ್ ತನ್ನ ಕೆಲಸಕ್ಕೆ ತಾನೇ ಮೆಚ್ಚಿಕೆ ಸೂಸುತ್ತ ಬಂದು ಜಾರುಬಂಡಿಯಲ್ಲಿ ಹೋಗಿ ಸೇರಿಕೊಂಡ. "ಒಳಗೆ ಇಬ್ಬರೂ ಬೆಚ್ಚಗಿರಬಹುದು; ಆದರೆ ಒಳಗೆ ಇಬ್ಬರಿಗೆ ಸಾಕಾಗೋ ಅಷ್ಟು ಜಾಗ ಇಲ್ಲ" ಎಂದುಕೊಂಡ.

"ನಾನೊಂದು ಜಾಗ ಹುಡುಕ್ಕೋತೀನಿ. ಆದ್ರೆ ಮೊದಲು ಕುದುರೆಗೆ ಏನಾದ್ರೂ ಹೊದ್ದಿಸ್ಬೇಕು. ಎಷ್ಟು ಕಷ್ಟಪಟ್ಟಿದೆ ಬಡಪ್ರಾಣಿ!" ಎಂದ ನಿಕಿಟ ವಾಸಿಲಿ ಆಂಡ್ರೆವಿಚ್ ಅಡಿಯಲ್ಲಿದ್ದ ಹಾಸುಗಂಬಳಿಯನ್ನು ಹೊರತೆಗೆದ.

ಆ ಹಾಸುಗಂಬಳಿಯನ್ನು ಎರಡು ಮಡಿಕೆಯಾಗಿ ಮಡಿಸಿ ಮುಖೋರ್ಟಿಗೆ ಹೊದ್ದಿಸಿದ.

"ಮುಂದೇನು, ಇನ್ನು ಸ್ವಲ್ಪ ಬೆಚ್ಚಗಿರ್ಬೋದು!" ಎಂದು ಅದನ್ನು ಕಟ್ಟಿದ್ದ ದಾರವನ್ನು ಮೇಲಿಟ್ಟ. ಆ ಕೆಲಸ ಮುಗಿಸಿದ ಅವನು ಸ್ಲೆಜ್ ಬಳಿ ವಾಪಸಾಗಿ ವಾಸಿಲಿ ಆಂಡ್ರೆವಿಚ್‌ಗೆ ಹೀಗೆಂದ: "ನಿಮಗೆ ಆ ಗೋಣಿಚೀಲ ಬೇಕಾ, ಬೇಡ ಅಲ್ವಾ? ಸ್ವಲ್ಪ ಹುಲ್ಲು ತೊಗೋತೀನಿ."

ವಾಸಿಲಿ ಆಂಡ್ರೆವಿಚ್‌ನ ಅಡಿಯಲ್ಲಿದ್ದ ಇವನ್ನು ತೆಗೆದುಕೊಂಡ ನಿಕಿಟ ಜಾರುಬಂಡಿಯ ಹಿಂಭಾಗಕ್ಕೆ ಹೋದ; ತನಗಾಗಿ ಹಿಮದಲ್ಲಿ ಒಂದು ಬಿಲವನ್ನು ತೋಡಿಕೊಂಡ, ಅದರಲ್ಲಿ ಹುಲ್ಲು ಹಾಕಿ, ತನ್ನ ಕೋಟನ್ನು ಬಿಗಿಯಾಗಿ ಸುತ್ತಿಕೊಂಡು, ತಲೆಯ ಮೇಲೆ ಗೋಣಿಚೀಲ ಹೊದ್ದು, ತನ್ನ ಟೋಪಿಯನ್ನು ಕೆಳಕ್ಕೆ ಸರಿಸಿಕೊಂಡು, ಬಿಲದಲ್ಲಿ ಹರಡಿದ್ದ ಹುಲ್ಲಿನ ಮೇಲೆ ತಾನು ಕುಳಿತುಕೊಂಡು, ಜಾರುಬಂಡಿಯ ಮರದ ಹಿಂಬದಿಗೆ ಒರಗಿಕೊಂಡು ಗಾಳಿ-ಹಿಮಗಳಿಂದ ತನಗೆ ರಕ್ಷಣೆ ಒದಗಿಸಿಕೊಂಡ.

ನಿಕಿಟ ಮಾಡುತ್ತಿರುವುದಕ್ಕೆ ತನ್ನ ಒಪ್ಪಿಗೆಯಿಲ್ಲವೆಂಬಂತೆ ವಾಸಿಲಿ ಆಂಡ್ರೆವಿಚ್ ತಲೆಯನ್ನು ಅಲ್ಲಾಡಿಸಿ, ಅವನ ಮೂರ್ಖತನಕ್ಕೂ ತಿಳಿವಳಿಕೆ ಸಾಲದ್ದಕ್ಕೂ ಅಸಂತೃಪ್ತಿ ವ್ಯಕ್ತಪಡಿಸಿ ತಾನು ರಾತ್ರಿ ಉಳಿಯಲು ಸಿದ್ಧತೆ ನಡೆಸಿದ.

ಜಾರುಬಂಡಿಯ ಕೆಳಗೆ ಉಳಿದಿದ್ದ ಹುಲ್ಲನ್ನು ಸಮವಾಗಿ ಹರಡಿಕೊಂಡ ಅವನು, ಹೆಚ್ಚಾಗಿ ಪಕ್ಕಗಳಲ್ಲಿರಿಸಿಕೊಂಡು ಸ್ವಲ್ಪ ಮೆತುವಾಗಿಸಿಕೊಂಡ. ಆನಂತರ ತೋಳುಗಳಲ್ಲಿ ಕೈಗಳನ್ನು ಸೇರಿಸಿ, ಎದುರಿಗೆ ಬೀಸುತ್ತಿದ್ದ ಗಾಳಿಯಿಂದ ತಪ್ಪಿಸಿಕೊಳ್ಳಲು ತಲೆಯನ್ನು ಜಾರುಬಂಡಿಯ ಒಂದು ಭಾಗದಲ್ಲಿರಿಸಿಕೊಂಡು ಉರುಳಿಕೊಂಡ.

ಅವನಿಗೆ ನಿದ್ದೆ ಮಾಡುವುದು ಬೇಕಿರಲಿಲ್ಲ. ಮಲಗಿಕೊಂಡು ಯೋಚಿಸತೊಡಗಿದ: ಅವನಿಗೆ ಬರುತ್ತಿದ್ದ ಯೋಚನೆಯೆಂದರೆ ಒಂದೇ ವಿಷಯದ್ದು; ಅದೆಂದರೆ, ತನ್ನ ಬದುಕಿನ ಸಂತೋಷ ಮತ್ತು ಹಿರಿಮೆಗಳು, ತಾನೆಷ್ಟು ದುಡ್ಡು ಮಾಡಿದ್ದೇನೆ, ಮತ್ತು ಮುಂದೆ ಎಷ್ಟು ಸಂಪಾದನೆ ಮಾಡಬಹುದು, ತನ್ನ ಪರಿಚಯದ ಇತರರು ಎಷ್ಟು ಹಣ ಮಾಡಿದ್ದಾರೆ, ಮಾಡುತ್ತಿದ್ದಾರೆ, ತಾನೂ ಅವರಂತೆಯೇ ಹೇಗೆ ಹೆಚ್ಚು ಸಂಪಾದನೆ ಮಾಡುವುದು? ಇದೇ. ಗೊರ್ಯಾಚ್ಕಿನ್ ತೋಪನ್ನು ಕೊಳ್ಳುವುದು ಅವನಿಗೆ ಅತ್ಯಂತ ಮಹತ್ವದ ವಿಷಯವಾಗಿತ್ತು. ಆ ವ್ಯವಹಾರದಿಂದ ತಾನು ಸುಮಾರು ಹತ್ತು ಸಾವಿರ ರೂಬಲ್‌ಗಳನ್ನು ಗಳಿಸಬಹುದೆಂಬುದು ಅವನ ಲೆಕ್ಕಾಚಾರ. ಕಳೆದ ಮಾಗಿಕಾಲದಲ್ಲಿ ತಾನು ನೋಡಿದ್ದ ಆ ಜಾಗ, ಆ ಐದು ಎಕರೆ ಜಾಗದಲ್ಲಿ ತಾನು ಎಣಿಸಿದ್ದ ಮರಗಳು?

ಎಲ್ಲ ಎಷ್ಟು ಬೆಲೆಬಾಳುತ್ತದೆಂದು ಅವನ ಮನಸ್ಸು ಲೆಕ್ಕ ಹಾಕಲು ತೊಡಗಿತು.

"ಓಕ್ ಮರಗಳನ್ನು ಸ್ಲೆಜ್ ಓಡಿಸುವವರು ಕೊಳ್ಳುತ್ತಾರೆ. ಇನ್ನೂ ಬಲಿಯದ ಮರಗಳನ್ನು ಬಿಟ್ಟರೂ, ದೆಸ್ಯಾತಿನ್‌ಗೆ ಇನ್ನೂ ಮೂವತ್ತು ಸಜೀನ್‌ಗಳಷ್ಟು ಸೌದೆ ಸಿಕ್ತದೆ. ಅಂದ್ರೆ, ಪ್ರತಿ ದೆಸ್ಯಾತಿನ್‌ಗೂ ಇನ್ನೂರಿಪ್ಪತ್ತೈದು ರೂಬಲ್‌ಗಳಷ್ಟು ಲಾಭ. ಐವತ್ತಾರು ದೆಸ್ಯಾತಿನ್‌ಗಳೂಂದ್ರೆ ಐದು ಸಾವಿರದ ಆರುನೂರು, ಐದು ಸಾವಿರದ ಆರುನೂರು, ಅಲ್ದೆ ಐನೂರ ಅರವತ್ತು, ಇನ್ನೂ ಐನೂರ ಅರವತ್ತು, ಆಮೇಲೆ ಐವತ್ತಾರೈದಲ .. ..' ಎಂದುಕೊಂಡ. ಒಟ್ಟು ಲೆಕ್ಕ ಹಾಕಿದರೆ ಹನ್ನೆರಡು ಸಾವಿರ ರೂಬಲ್‌ಗಳಿಗಿಂತ ಹೆಚ್ಚು, ಆದರೆ ಮಣಿಕಟ್ಟಿಲ್ಲದೆ ನಿಖರವಾಗಿ ಲೆಕ್ಕಾಚಾರ ಮಾಡುವುದಕ್ಕೆ ಸಾಧ್ಯವಿಲ್ಲ. "ಕನಿಷ್ಠ ಹತ್ತು ಸಾವಿರವಂತೂ ಬರತ್ತೆ, ಖಾಲಿ ಜಾಗ ಮಧ್ಯೆ ಮಧ್ಯೆ ಇರೋದ್ರಿಂದ ಎಂಟು ಸಾವಿರ ಕೊಡ್ತೀನಿ. ಸರ್ವೆಯರ್‌ನ ಕೈ ಬೆಚ್ಚಗೆ ಮಾಡ್ತೀನಿ - ಒಂದು ನೂರು ಅಥವಾ ನೂರೈವತ್ತು ರೂಬಲ್ ಕೊಟ್ಟರಾಯ್ತು - ಆಗ ಅವನು ಖಾಲಿ ಜಾಗಾನ ಐದು ದೆಸ್ಯಾತಿನ್ ಅಂತ ಲೆಕ್ಕ ಹಾಕಿ ಉತ್ತಾರ ಹಾಕ್ತಾನೆ. ಅಂದ್ರೆ ಎಂಟು ಸಾವಿರ ಅಂತ ಅವನು ನಿಗದಿಪಡಿಸ್ತಾನೆ. ಮೂರು ಸಾವಿರ ತಕ್ಷಣ ನಗದು. ಅದಕ್ಕವನು ಒಪ್ಪಿಕೋತಾನೆ; ಭಯವಿಲ್ಲ! ತನ್ನ ಮೊಣಕೈಯಿಂದ ಜೇಬಲ್ಲಿ ಇಟ್ಟುಕೊಂಡಿದ್ದ ಹಣವನ್ನು ಒತ್ತಿಕೊಂಡ.

'ನಾವು ತಿರುವನ್ನು ಹೇಗೆ ತಪ್ಪಿಸಿಕೊಂಡ್ವೋ ದೇವರೇ ಬಲ್ಲ. ಅಲ್ಲಿ ಕಾಡು, ಕಾವಲುಗಾರನ ಗುಡಿಸಲು, ನಾಯಿಗಳು ಬೊಗಳು? ಇರಬೇಕಲ್ಲ. ಆದರೆ ಈ ನಾಯಿಗಳು ಬೇಕಾದಾಗ ಬೊಗಳೊಲ್ಲ.' ಕಿವಿಯಿಂದ ಕಾಲರ್ ಅನ್ನು ತಿರುಗಿಸಿ ಆಲಿಸಿದ, ಆದರೆ ಹಿಂದಿನಂತೆಯೇ ಗಾಳಿಯ ಶಿಳ್ಳೆ, ಕರ್ಚೀಫ್‌ನ ಪಟಪಟ ಹಾರಾಟದ ಸದ್ದು, ಜಾರುಬಂಡಿಯ ಮರದ ಭಾಗಗಳ ಮೇಲೆ ಹಿಮ ಬೀಳುತ್ತಿದ್ದ ತೊಟತೊಟ ಶಬ್ದ ಮಾತ್ರ ಕೇಳಿಸುತ್ತಿತ್ತು. ಮತ್ತೆ ಕಿವಿ ಮುಚ್ಚಿಕೊಂಡ

'ಹೀಗಾಗತ್ತೆಂತ ಗೊತ್ತಿದ್ದಿದ್ರೆ ರಾತ್ರಿ ಅಲ್ಲೇ ಉಳುಕೋತಾ ಇದ್ದೆ. ಇರಲಿ, ಪರವಾಯಿಲ್ಲ, ನಾಳೆ ಅಲ್ಲಿಗೆ ಹೋಗ್ತೀವಲ್ಲ. ಒಂದೇ ದಿನ ತಾನೇ ತಡವಾಗಿರೋದು, ಬೇರೆಯೋರು ಯಾರೂ ಇಂಥ ಹವಾಮಾನದಲ್ಲಿ ಪ್ರಯಾಣ ಮಾಡಲ್ಲ' ಅಂದುಕೊಂಡ ಅವನಿಗೆ, ತನ್ನ ಎತ್ತುಗಳಿಗಾಗಿ ಕಸಾಯಿಯಿಂದ ಒಂಬತ್ತನೇ ತಾರೀಕು ಬರಬೇಕಾದ ಬಾಕಿ ಹಣ ನೆನಪಿಗೆ ಬಂತು. 'ತಾನೇ ಬರ್ಬೇಕು ಅಂತ ಇದ್ದ ಅವನು, ಆದ್ರೆ ಬಂದ್ರೆ ನಾನು ಸಿಕ್ಕಲ್ಲ, ನನ್ನ ಹೆಂಡತೀಗೋ ದುಡ್ಡನ್ನು ಹೇಗೆ ತಗೋಬೇಕೂಂತ ಗೊತ್ತಾಗಲ್ಲ. ಸರಿಯಾಗಿ ಯಾವ ಕೆಲಸ ಮಾಡಕ್ಕೂ ಅವಳಿಗೆ ಗೊತ್ತಾಗಲ್ಲ' ಅನ್ನಿಸಿತು, ಹಿಂದೆಯೇ ಹಿಂದಿನ ದಿನ ತಮ್ಮ ಮನೆಯಲ್ಲಿ ನಡೆದಿದ್ದ ಪಾರ್ಟಿಯಲ್ಲಿ ತಮ್ಮ ಅತಿಥಿಯಾಗಿ ಬಂದಿದ್ದ ಪೋಲೀಸ್ ಅಧಿಕಾರಿಯನ್ನು ಹೇಗೆ ಸತ್ಕರಿಸಬೇಕು ಅನ್ನೋದು ಅವಳಿಗೆ ಗೊತ್ತಿಲ್ಲದಿದ್ದುದು ನೆನಪಾಯಿತು. 'ಎಷ್ಟಾದ್ರೂ ಆಗಲಿ ಅವಳು ಹೆಂಗಸು! ಇದನ್ನೆಲ್ಲ ನೋಡಕ್ಕೆ ಅವಳಿಗೆ ಎಲ್ಲಿ ಅವಕಾಶ? ನಮ್ಮಪ್ಪನ ಕಾಲ್ದಲ್ಲಿ ನಮ್ಮ ಮನೆ ಹೇಗಿತ್ತು? ಒಬ್ಬ ರೈತನ ಮನೆ ತರಹ, ಅಷ್ಟೆ. ಒಂದು ಓಟ್ಮಿಲ್ ಮತ್ತು ಇನ್? ಇದ್ದ ಆಸ್ತಿ ಅಂದ್ರೆ ಅಷ್ಟೆ. ಕಳೆದ

ಹದಿನೈದು ವರ್ಷದಲ್ಲಿ ನಾನೇನು ಮಾಡಿದ್ದೀನಿ ಮನೇಲೆ ಅಂದ್ರೆ, ಒಂದು ಅಂಗಡಿ, ಎರಡು ಪ್ರವಾಸಿ ಹೋಟಲ್‌ಗಳು, ನಾಲ್ಕು ಮಿಲ್‌ಗಳು, ಒಂದು ಕಿರಾಣಿ ಅಂಗಡಿ, ಗುತ್ತಿಗೆ ಕೊಟ್ಟಿರೋ ಎರಡು ಜಮೀನು, ಕಬ್ಬಿಣದ ಸೂರಿರೋ ದೊಡ್ಡ ಮನೆ' ಎಂದುಕೊಂಡ ಹೆಮ್ಮೆಯಿಂದ. 'ಈಗ ಮನೆ ಅಪ್ಪನ ಕಾಲ್ದಲ್ಲಿದ್ದ ಹಾಗಿಲ್ಲ! ನಮ್ಮ ಊರಿನ ಸುತ್ತುಮುತ್ತಲೆಲ್ಲ ಜನ ಯಾರ ಬಗ್ಗೆ ಮಾತಾಡ್ಕೋತಾರೆ! ಬ್ರೆಖ್ಯುನೊವ್ ಬಗ್ಗೆ. ಯಾಕೆ? ಯಾಕೇಂದ್ರೆ ನಾನು ವ್ಯವಹಾರಕ್ಕೆ ಅಂಟಿಕೊಂಡಿರೋನು ಅಂತ. ಕಷ್ಟ ಪಡ್ತೀನಿ, ಬರೀ ನಿದ್ದೆ ಹೊಡೀತ ತಮ್ಮ ಕಾಲ ಕಳೆಯೋ ಮೂರ್ಖರ ರೀತಿ ಅಲ್ಲ ನಾನು, ರಾತ್ರಿಯೆಲ್ಲ ನಿದ್ದೆ ಕೆಡ್ತೀನಿ. ಹವಾ ಹೇಗಿದ್ರೂ ಹೊರಗೆ ಹೋಗ್ತೀನಿ, ಆದ್ರಿಂದ ವ್ಯವಹಾರ ಕುದುರುತ್ತೆ. ದುಡ್ಡು ಮಾಡೋದೂಂದ್ರೆ ತಮಾಷೆ ಅಂದ್ಕೊಂಡಿದಾರೆ ಅವರೆಲ್ಲ. ಉಹ್ಞೂ, ತೊಂದ್ರೆ ತಗೋಬೇಕು, ತಲೆ ಓಡಿಸ್ಬೇಕು! ರಾತ್ರಿ ಮನೆ ಹೊರಗೆ ಇವತ್ತಿನ ಹಾಗೆ ಕಷ್ಟಗಳು ಬರತ್ವೆ, ಅಥವಾ ರಾತ್ರಿಯೆಲ್ಲ ನಿದ್ದೆ ಕಟ್ಟಿಬರ್ಬೇಕು, ತಲೇಲಿ ಬರೋ ಆಲೋಚನೆಗಳೆಲ್ಲ ಒಂದು ರೂಪಕ್ಕೆ ಬರೋವರೆಗೂ' ಎಂದು ಹೆಮ್ಮೆಯಿಂದ ಅಂದುಕೊಂಡ. 'ಅದೃಷ್ಟ ಇದ್ರೆ ಎಲ್ಲ ಆಗತ್ತೆ ಅಂದ್ಕೋತಾರೆ ಜನ. ಮಿರೋನೋವ್ ಮನೆಯವರೀಗ ಕೋಟ್ಯಾಧಿಪತಿಗಳು. ಯಾಕೆ? ಕಷ್ಟಪಟ್ಟರೆ ದೇವರು ಕೊಡ್ತಾನೆ. ಅವನು ಆರೋಗ್ಯ ಕೊಡ್ಬೇಕು ಅಷ್ಟೆ.' ಆರಂಭದಲ್ಲಿ ಏನೂ ಇಲ್ಲದಿದ್ದ ಮೊರೋನೋವ್ ಥರ ತಾನೂ ಕೋಟ್ಯಧಿಪತಿಯಾಗಬಹುದು ಅನ್ನುವ ಕಲ್ಪನೆಯೇ ವಾಸಿಲಿ ಆಂಡ್ರೆವಿಚ್‌ನಲ್ಲಿ ಸಡಗರ ತುಂಬಿತು, ಈಗ ಯಾರದಾದರೂ ಜೊತೆಯಲ್ಲಿ ಮಾತಾಡಬೇಕು ಎಂದು ಅವನಿಗನ್ನಿಸಿತು. ಆದರೆ ಯಾರೂ ಜೊತೇಲಿ ಇಲ್ಲವಲ್ಲ ... ಗೊರ್ಯಾಚ್ಕಿನ್ ಅನ್ನು ತಲುಪಿಬಿಟ್ಟಿದ್ರೆ ಭೂಮಾಲೀಕನ ಜೊತೆ ಮಾತಾಡಿ ತನ್ನ ಜಾಣ್ಮೆ ತೋರಿಸಬಹುದಾಗಿತ್ತು.

ಜಾರುಬಂಡಿಯನ್ನ ಬಾಗಿಸಿ ಅದಕ್ಕೆ ಹಿಮ ರಾಚುವ ಹಾಗೆ ಬೀಸುವ ಗಾಳಿಯ ರಭಸ ನೋಡಿ, 'ಈ ಗಾಳಿ ನೋಡು ಹೇಗೆ ಬೀಸತ್ತೇಂತ! ಈ ಹಿಮ ನಮ್ಮನ್ನ ಎಷ್ಟು ಮಟ್ಟಿಗೆ ಮುಚ್ಚಿಬಿಡತ್ತೆ ಅಂದ್ರೆ ಬೆಳಗ್ಗೆ ಎದ್ದು ಬರಕ್ಕೆ ಆಗಕೂಡದು, ಹಾಗೆ!' ಅಂದುಕೊಂಡ. ಸ್ವಲ್ಪ ಮೇಲೆದ್ದು ಸುತ್ತಲೂ ನೋಡಿದ. ಗವ್ವಂತ ತುಂಬಿದ್ದ ಕತ್ತಲೆಯಲ್ಲಿ ಅವನಿಗೆ ಕಾಣಿಸಿದ್ದು ಮುಖೋರ್ಟಿಯ ಕಪ್ಪಾದ ತಲೆ, ಪಟಪಟ ಅಂತ ಹೊಡಕೋತ ಇದ್ದ ಅದರ ಬೆನ್ನ ಮೇಲೆ ಹೊದಿಸಿದ್ದ ಹಾಸುಗಂಬಳಿ ಮತ್ತದರ ದಪ್ಪನಾದ ಹುರಿಬಾಲ. ಉಳಿದಂತೆ, ಹಿಂದೆ ಮುಂದೆ, ಅದೇ ಬದಲಾಗುತ್ತಿದ್ದ ಬಿಳಿಪು ಕತ್ತಲೆ, ಈಗ ತಿಳಿಯಾದ ಹಾಗೆ ಕಾಣಿಸಿ ಮತ್ತೆ ಕೆಲವು ಸಲ ಕವಿಯುವ ಕಗ್ಗತ್ತಲು.

'ನಾನು ನಿಕಿಟನ ಮಾತು ಕೇಳಿ ಕೆಟ್ಟೆ, ನಾವು ಮುಂದೆ ಹೋಗಿಬಿಡಬೇಕಾಗಿತ್ತು, ಎಲ್ಲೋ ಒಂದು ಕಡೆ ಹೋಗ್ಬಿಡ್ತಿದ್ದಿವಿ, ಗ್ರಿಶ್ಕಿನೋಗೆ ಹೋಗಿದ್ದಿದ್ರೂ ರಾತ್ರಿ ತಾರಾಸ್ ಅವರ ಮನೆಯಲ್ಲಿದ್ದುಬಿಡಬಹುದಾಗಿತ್ತು. ಈಗಾದರೋ, ರಾತ್ರಿಯೆಲ್ಲ ಇಲ್ಲೇ ಕೂತು ಕಳೀಬೇಕು. ನಾನೇನು ಯೋಚ್ನೆ ಮಾಡ್ತಿದ್ದೆ? ಹ್ಞಾ, ಕಷ್ಟಪಡೋರಿಗೇ ದೇವ್ರು ಸಂಪತ್ತು ಕೊಡೋದು, ಉಂಡಾಡಿಗಳಿಗಲ್ಲ, ನಿದ್ದೆ ಹೊಡೆಯೋ ಸೋಮಾರಿಗಳಿಗಲ್ಲ,

ಮೂರ್ಖರಿಗಲ್ಲ. ಈಗ ಒಂದು ಸಿಗರೇಟು ಹಚ್ಚಬೇಕು!'

ಮತ್ತೆ ಕುಳಿತುಕೊಂಡ ಅವನು, ತನ್ನ ಸಿಗರೇಟ್ ಕೇಸನ್ನು ಹೊರತೆಗೆದು, ಹೊಟ್ಟೆ ಮೇಲೆ ಮಲಗಿ, ಕಡ್ಡಿ ಗೀರಿ ತನ್ನ ಕೋಟಿನ ಚುಂಗಿನಿಂದ ಮರೆಮಾಡಿಕೊಂಡ. ಆದರೆ ಗಾಳಿ ಹೇಗೋ ದಾರಿಮಾಡಿಕೊಂಡು ನುಗ್ಗಿ ಎಷ್ಟು ಸಲ ಕಡ್ಡಿ ಗೀರಿ ಹೊತ್ತಿಸಿದರೂ ಆರಿಸಿಬಿಡುತ್ತಿತ್ತು. ಕೊನೆಗೆ ಒಂದು ಕಡ್ಡಿ ಉರಿಯಕ್ಕೆ ತೊಡಗಿತು, ಅದರಿಂದ ಸಿಗರೇಟು ಹೊತ್ತಿಸಿಕೊಂಡ. ತನಗೆ ಬೇಕಾದುದನ್ನು ಮಾಡಿದ ಗೆಲುವು ಅವನನ್ನು ತುಂಬಿತ್ತು, ತನಗಿಂತ ಗಾಳಿಯೇ ಹೆಚ್ಚು ಹೊಗೆ ಕುಡಿದಿದ್ದರೂ, ಎರಡು ಮೂರು ದಮ್ಮು ಎಳೆದು ಹೆಚ್ಚು ಉತ್ತೇಜಿತನಾದ. ಮತ್ತೆ ಹಿಂದಿನಂತೆ ಒರಗಿ ಕೂತ, ಮೈಮೇಲೆ ಸರಿಯಾಗಿ ಹೊದ್ದ, ಮತ್ತೆ ಯೋಚನೆ-ನೆನಪುಗಳಲ್ಲಿ ಮುಳುಗಿದ. ಆದರೆ ಇದ್ದಕ್ಕಿದ್ದಂತೆ ಅನಿರೀಕ್ಷಿತವಾಗಿ ಅವನು ನಿದ್ದೆಯ ಆಳದಲ್ಲಿ ಬಿದ್ದ.

ಇದ್ದಕ್ಕಿದ್ದ ಹಾಗೆ ಏನೋ ತನ್ನನ್ನು ನೂಕಿದ ಹಾಗೆ ಅನ್ನಿಸಿ ಎಚ್ಚರಗೊಂಡ. ತನ್ನ ಕೆಳಗಿದ್ದ ಹುಲ್ಲನ್ನು ಎಳೆದದ್ದು ಮುಖೋರ್ಟಿಯೋ, ಅಥವಾ ತನ್ನೊಳಗಿನ ಏನೋ ಒಂದು ತನ್ನನ್ನು ಗಾಬರಿಗೊಳಿಸಿತೋ, ಅಂತೂ ಅವನು ಎಚ್ಚೆತ್ತು ಕೂತ. ಅವನ ಹೃದಯ ಹೆಚ್ಚೆಚ್ಚು ಜೋರಾಗಿ ಬಡಿದುಕೊಳ್ಳತೊಡಗಿತು, ಇದರಿಂದ ಜಾರುಬಂಡಿ ತನ್ನಡಿಯಲ್ಲಿ ನಡುಗುತ್ತಿದೆಯೇನೋ ಅನ್ನಿಸಿತು. ತನ್ನ ಕಣ್ಣುಗಳನ್ನು ಬಿಟ್ಟ. ಆದರೆ ಸುತ್ತಲೂ ಎಲ್ಲ ಹಿಂದಿದ್ದಂತೆಯೇ ಇದ್ದುವು. 'ಈಗ ಸ್ವಲ್ಪ ತಿಳಿಯಾಗಿದೆ, ಇನ್ನೇನು ಸ್ವಲ್ಪ ಹೊತ್ತಲ್ಲೇ ಬೆಳಕು ಹರಿದುಬಿಡತ್ತೆ' ಅನ್ನಿಸಿತು. ಆದರೆ ಆಕಾಶ ತಿಳಿಯಾಗಿರುವುದು ಚಂದ್ರ ಕಾಣಿಸಿಕೊಂಡಿರುವುದರಿಂದ ಎಂಬುದು ಗೊತ್ತಾಯಿತು. ಮೇಲೆದ್ದು ಕೂತು ಮೊದಲು ಕುದುರೆಯ ಕಡೆ ಕಣ್ಣೋಡಿಸಿದ. ಗಾಳಿಗೆ ಬೆನ್ನೊಡ್ಡಿಕೊಂಡು ಮುಖೋರ್ಟಿ ನಿಂತಿತ್ತು, ಪಾಪ ನಡುಗುತ್ತಿತ್ತು. ಪೂರ್ತಿ ಹಿಮ ಆವರಿಸಿದ್ದ ಒಂದು ಕಡೆಯ ಹಾಸುಗಂಬಳಿ ಹಿಂದಕ್ಕೆ ಸರಿದು ಪಿರ್ರೆಯಿಂದ ಕೆಳಗಿಳಿದಿತ್ತು. ಮುಂಗೂದಲು ಹಾಗೂ ಜೂಲು ತೊನೆದಾಡುತ್ತಿದ್ದ ಅದರ ತಲೆ ಹಿಮಾಚ್ಛಾದಿತವಾಗಿ ಈಗ ಹೆಚ್ಚು ಸ್ಪಷ್ಟವಾಗಿ ಕಾಣುತ್ತಿತ್ತು. ವಾಸಿಲಿ ಆಂದ್ರೆವಿಚ್ ಜಾರುಬಂಡಿಯ ಹಿಂದಕ್ಕೆ ಒರಗಿಕೊಂಡು ಹಿಂದೆ ದೃಷ್ಟಿ ಹಾಯಿಸಿದ. ನಿಕಿಟ ಹಿಂದೆ ಇದ್ದ ಭಂಗಿಯಲ್ಲೇ ಇನ್ನೂ ಕೂತಿದ್ದ. ಅವನನ್ನು ಮುಚ್ಚಿದ್ದ ಗೋಣಿಪಟ್ಟೆ, ಅವನ ಕಾಲುಗಳ ಮೇಲೆ ದಟ್ಟವಾಗಿ ಹಿಮ ಬಿದ್ದಿತ್ತು.

'ಈ ಬಡಪಾಯಿ ಮೈಯೆಲ್ಲ ಹಿಮಗಟ್ಟಿ ಸತ್ತೇಬಿಡ್ತಾನೋ ಏನೋ! ಅವನ ಬಟ್ಟೆಗಳೋ ಹರಿದು ಜೂಲಾಗಿವೆ. ಅವನಿಗೇನಾದ್ರೂ ಆದ್ರೆ ನಾನೇ ಹೊಣೆಗಾರನಾಗಬೇಕಾಗತ್ತೆ. ಎಂಥ ಕೆಲಸಕ್ಕೆ ಬಾರದ ವಿದ್ಯೆ ಇಲ್ಲದ ಜನ' ಅಂದುಕೊಂಡ ವಾಸಿಲಿ ಆಂದ್ರೆವಿಚ್. ಕುದುರೆಯ ಮೈಮೇಲಿದ್ದ ಹಾಸುಗಂಬಳಿಯನ್ನು ತೆಗೆದು ನಿಕಿಟನಿಗೆ ಹೊದಿಸಬೇಕೆನಿಸಿತು ಅವನಿಗೆ; ಆದರೆ ಗಾಡಿ ಇಳಿದು ಹೊರಗೆ ಹೋಗಲು ತುಂಬ ಚಳಿ, ಜೊತೆಗೆ ಕುದುರೇನೇ ಚಳಿಯಿಂದ ಸತ್ತುಹೋಗಿಬಿಟ್ಟರೆ! 'ನನ್ನ ಜೊತೆ ಅವನನ್ನು ಕರ್ಕೊಂಡು ಬಂದ ನಾನೆಂಥ ಮೂರ್ಖ!' ಎಂದುಕೊಂಡ. ತಾನು ಪ್ರೀತಿಸದ ಹೆಂಡತಿಯ

ಜ್ಞಾಪಕ ಬಂತು, ತಾನು ಹಿಂದಿದ್ದ ಜಾರುಬಂಡಿಯ ಮುಂಭಾಗಕ್ಕೆ ಜರುಗಿಕೊಂಡ. 'ನಮ್ಮ ಮಾವನೂ ಹಿಂದೊಂದು ಸಲ ಹೀಗೇನೇ ರಾತ್ರೀನೆಲ್ಲ ಕಳೆದಿದ್ದ, ಆದ್ರೂ ಅವಂಗೇನೂ ಆಗಿರಲಿಲ್ಲ' ಎಂಬುದು ನೆನಪಿಗೆ ಬಂತು. ತಕ್ಷಣವೇ ಇನ್ನೊಂದು ಪ್ರಸಂಗ ನೆನಪಿಗೆ ಬಂತು ? 'ಆದ್ರೆ ಸೆಬಾಸ್ಟಿಯನ್‌ನ ಒಳಗಿಂದ ಮೇಲೆತ್ತಿದಾಗ ಅವನು ಸತ್ತಿದ್ದ - ಹೆಪ್ಪುಗಟ್ಟಿದ್ದ ಹೆಣವಾಗಿದ್ದ. ಇವತ್ತು ರಾತ್ರಿ ಗ್ರಿಶ್ಕಿನೋದಲ್ಲೇ ಇದ್ದಿದ್ರೆ ಈ ಅವಸ್ಥೆ ಬರ್ತಿರ್ಲಿಲ್ಲ!'

ಯಾವೆಡೆಯಲ್ಲಿಯೂ - ಕತ್ತು, ಮಂಡಿ, ಪಾದಗಳು - ತುಪ್ಪಳದ ಬಿಸಿಪು ಯಾವ ರೀತಿಯಲ್ಲೂ ವ್ಯರ್ಥವಾಗದಂತೆ ಸುತ್ತಲೂ ಕೋಟನ್ನು ಬಿಗಿಗೊಳಿಸಿಕೊಳ್ಳುತ್ತ, ಮತ್ತೆ ಕಣ್ಮುಚ್ಚಿಕೊಂಡು ನಿದ್ದೆ ಮಾಡಲು ಪ್ರಯತ್ನಿಸಿದ. ಆದರೆ ಎಷ್ಟು ಪ್ರಯತ್ನಪಟ್ಟರೂ ಜೋಂಪು ಕೂಡ ಹತ್ತಲಿಲ್ಲ, ತದ್ವಿರುದ್ಧವಾಗಿ ಇನ್ನೂ ಹೆಚ್ಚು ಎಚ್ಚರವಾದಂತಾಯಿತು. ಮತ್ತೆ ತನ್ನ ಲಾಭ ಮತ್ತು ತನಗೆ ಬರಬೇಕಾದ ಬಾಕಿಗಳ ಕುರಿತೇ ಯೋಚಿಸಲುತೊಡಗಿದ. ತನ್ನ ಬಗ್ಗೆ ತನ್ನಲ್ಲೇ ಬಡಾಯಿ ಕೊಚ್ಚಿಕೊಳ್ಳುತ್ತ ತನ್ನ ಮತ್ತು ತನ್ನ ಇರುವಿಕೆಯ ಬಗ್ಗೆ ಸಂತುಷ್ಟನಾಗಲು ನೋಡಿದ, ಆದರೆ ಯಾವ ಮಾಯದಲ್ಲೋ ಬಂದು ಆವರಿಸುತ್ತಿದ್ದ ಭಯ ಮತ್ತು ತಾವು ಗ್ರಿಶ್ಕಿನೋದಲ್ಲಿಯೇ ಉಳಿಯಲಿಲ್ಲವಲ್ಲ ಎಂಬ ಭಾವನೆ ಅವನ ಮನಸ್ಸನ್ನು ತಲ್ಲಣಗೊಳಿಸುತ್ತಿದ್ದುವು.

'ಒಂದು ಬೆಂಚಿನ ಮೇಲೆ ಬೆಚ್ಚಗೆ ಮಲಗಿಕೊಂಡಿದ್ದರೆ ಎಷ್ಟು ಚೆನ್ನ!' ಬೀಸುವ ಗಾಳಿಯಿಂದ ಪಾರಾಗಲು ಕಾಲುಗಳಿಗೆ ಮತ್ತಷ್ಟು ಬಿಗಿಯಾಗಿ ಸುತ್ತಿಕೊಂಡು ಹೆಚ್ಚು ಆರಾಮದಾಯಕವಾದ ಭಂಗಿಯಲ್ಲಿ ಕುಳಿತುಕೊಳ್ಳಲು ಮಾಡುವ ಪ್ರಯತ್ನದಲ್ಲಿ ಅನೇಕ ಸಲ ಮಗ್ಗುಲು ಬದಲಿಸಿ ಕಣ್ಣುಗಳನ್ನು ಮುಚ್ಚಿಕೊಂಡು ಅಲ್ಲಾಡದೆ ಕುಳಿತ. ಒಂದೇ ಕಡೆ ಕುಳಿತಿದ್ದರಿಂದಾಗಿ ಗಟ್ಟಿ ಬೂಟುಗಳಲ್ಲಿನ ಕಾಲುಗಳು ನೋಯತೊಡಗಿತ್ತು, ಎಲ್ಲೋ ಒಂದೆಡೆಯಿಂದ ಗಾಳಿ ಬೀಸಿ ಚಳಿ ಹೆಚ್ಚುತ್ತಿತ್ತು. ಹೀಗೆ ಅಲ್ಲಾಡದೆ ಒಂದೇ ಕಡೆ ಸ್ವಲ್ಪ ಹೊತ್ತು ಕೂತಿದ್ದು ಮತ್ತೆ ಅವನ ಮನಸ್ಸಿನಲ್ಲಿ ತಾನು ಗ್ರಿಶ್ಕಿನೋದಲ್ಲೇ ಉಳಿಮಕೊಂಡಿದ್ದರೆ ಇಷ್ಟು ಹೊತ್ತಲ್ಲಿ ನಿರುಮ್ಮಳವಾಗಿ ನಿದ್ದೆ ಮಾಡಬಹುದಾಗಿತ್ತೆಂಬ ಯೋಚನೆ ಮನಸ್ಸನ್ನು ಕಲಕಿತು. ಮತ್ತೆ ಎದ್ದು ಕುಳಿತ, ಮಗ್ಗುಲು ಬದಲಿಸಿದ, ಮುದುರಿಕೊಂಡು ಮತ್ತೆ ಕೂತ.

ದೂರದಲ್ಲಿ ಕೋಳಿ ಕೂಗು ಕೇಳಿಸಿತೆಂಬ ಭ್ರಮೆ ಒಮ್ಮೆ ಉಂಟಾಯಿತು. ಅವನಿಗೆ ಸಂತೋಷವಾಯಿತು, ಕೋಟ್‌ನ ಕಾಲರನ್ನು ಕೆಳಗಿಳಿಸಿ ಕತ್ತು ನೋಯುವಂತೆ ಚಾಚಿಕೊಂಡು ಆಲಿಸಿದ, ಆದರೆ ಎಷ್ಟೇ ಪ್ರಯತ್ನಪಟ್ಟರೂ, ಗಾಡಿಯ ಮೂಕಿಯ ಮಾಲೆ ಶಿಳ್ಳೆ ಹೊಡೆಯುತ್ತ ಬೀಸುತ್ತಿದ್ದ ಗಾಳಿ, ಹಾರಾಡುತ್ತಿದ್ದ ಕರ್ಚೀಫಿನ ಪಟಪಟ, ಜಾರುಬಂಡಿಯ ಚೌಕಟ್ಟಿಗೆ ಬಡಿಯುತ್ತಿದ್ದ ಹಿಮಗಳ ಸದ್ದುಗಳ ಹೊರತು ಬೇರೇನೂ ಕೇಳಿಸಲಿಲ್ಲ.

ಮೊದಲಿಂದ ಕೂತಂತೆಯೇ ನಿಕಿಟ ಈಗಲೂ ಕೂತಿದ್ದ, ಅಲ್ಲಾಡದೆ ಮಾತ್ರವಲ್ಲ,

ಒಂದೆರಡು ಬಾರಿ ಮಾತಾಡಿಸಲು ಪ್ರಯತ್ನಿಸಿದ ವಾಸಿಲಿ ಆಂಡ್ರೆವಿಚ್‌ನ ಮಾತಿಗೂ ಉತ್ತರಿಸದೆ ಕೂತಿದ್ದ. 'ಅವನಿಗೆ ಕೇಳಿಸ್ತಿಲ್ಲ, ನಿದ್ದೆ ಹೋಗಿದಾನೋ ಏನೋ' ಎಂದುಕೊಂಡ ವಾಸಿಲಿ ಆಂಡ್ರೆವಿಚ್ ಚಡಪಡಿಕೆಯಿಂದ ದಪ್ಪ ಹಿಮದ ಹೊದಿಕೆಯು ಮುಸುಕಿದ್ದ ಜಾರುಬಂಡಿಯ ಹಿಂಭಾಗ ಹಾಗೂ ನಿಕಿಟನ ಕಡೆ ನೋಡಿದ.

ಮತ್ತೆ ಇಪ್ಪತ್ತು ಇಪ್ಪತ್ತೈದು ಬಾರಿ ವಾಸಿಲಿ ಆಂಡ್ರೆವಿಚ್ ಕೂತ, ಎದ್ದ. ರಾತ್ರಿ ಮುಗಿಯುವುದೇ ಇಲ್ಲ ಎನಿಸಿತು. 'ಇನ್ನೇನು ಬೆಳಗಾಗತ್ತೇಂತ ಕಾಣತ್ತೆ, ತನ್ನ ಗಡಿಯಾರವನ್ನ ನೋಡಿಕೊಳ್ಳೋಣ. ಆದ್ರೆ ಗುಂಡಿ ಬಿಚ್ಚಿದ್ರೆ ಚಳಿ ಹೆಚ್ಚಾಗತ್ತೆ, ಬೆಳಗಾಗ್ತಿದೆ ಅನ್ನೋದು ಗೊತ್ತಾದ್ರೆ ಎಷ್ಟೋ ಹಾಯನಿಸತ್ತೆ. ಗಾಡಿ ಕಟ್ಟಬಹುದು' ಅಂದುಕೊಂಡ ಸುತ್ತಲೂ ನೋಡುತ್ತ.

ತನ್ನ ಮನದಾಳದಲ್ಲಿ ಬೆಳಿಗ್ಗೆ ಅಷ್ಟು ಹತ್ತಿರವಿಲ್ಲ ಎಂಬ ಅರಿವು ವಾಸಿಲಿ ಆಂಡ್ರೆವಿಚ್‌ಗೆ ಗೊತ್ತಿತ್ತು, ಆದರೆ ಕಾಲ ಸರಿಯುತ್ತ ಅವನಲ್ಲಿ ಭಯ ಹೆಚ್ಚಾಗುತ್ತಿತ್ತು, ಆದರೂ ಎದ್ದು ನೋಡಬೇಕೆನ್ನುವ ಇದು ಆತ್ಮವಂಚನೆ ಎನ್ನುವ ಭಾವನೆಯ ತುಯ್ದಾಟದಲ್ಲಿ ಸಿಲುಕಿದ. ತನ್ನ ತುಪ್ಪುಳುಗಂಬಳಿಯನ್ನು ಎಚ್ಚರದಿಂದ ಸಡಿಲಗೊಳಿಸಿಕೊಂಡು ಒಳಗೆ ಕೈ ತೂರಿಸಿದ, ಆದರೆ ಎಷ್ಟು ಹೊತ್ತಾದರೂ ತನ್ನ ವೇಸ್ಟ್ ಕೋಟನ್ನು ಕೈ ತಲುಪಲಿಲ್ಲ. ಬಹಳ ಪ್ರಯಾಸದಿಂದ ಎನಾಮಲ್‌ನ ಹೂ ವಿನ್ಯಾಸವಿದ್ದ ತನ್ನ ಬೆಳ್ಳಿಯ ಗಡಿಯಾರವನ್ನು ಹೊರತೆಗೆಯುವುದರಲ್ಲಿ ಕೊನೆಗೂ ಸಫಲನಾಗಿ, ಗಂಟೆ ಎಷ್ಟೆಂದು ನೋಡಿಕೊಳ್ಳಲು ಯತ್ನಿಸಿದ. ಆದರೆ ಬೆಳಕಿಲ್ಲದೆ ಏನೂ ಕಾಣುತ್ತಿರಲಿಲ್ಲ. ಸಿಗರೇಟು ಹೊತ್ತಿಸಿಕೊಂಡಾಗಿನಂತೆ ಮತ್ತೆ ಮೊಳಕಾಲು-ಮೊಳಕೈಗಳ ಮೇಲೆ ಭಾರ ಊರಿ ಕೂತು ಬೆಂಕಿಕಡ್ಡಿಯನ್ನು ಹೊರತೆಗೆದು ಗೀರಲು ಪ್ರಯತ್ನಿಸಿದ. ಈ ಸಲ ಅವನು ಹೆಚ್ಚು ಮುತುವರ್ಜಿ ವಹಿಸಿದ್ದ, ಬೆರಳುಗಳಿಂದ ಮುಟ್ಟಿ ಮುಟ್ಟಿ ಹೆಚ್ಚು ಗುಂಡಗಿನ ತಲೆಯ ಕಡ್ಡಿಯನ್ನು ಆಯ್ದುಕೊಂಡು ಮೊದಲ ಗೀರಿನಲ್ಲಿಯೇ ಹೊತ್ತಿಸಲು ಸಫಲನಾದ. ಆ ಬೆಳಕಿನಲ್ಲಿ ತಲೆ ಬಾಗಿಸಿ ಗಡಿಯಾರದ ಕಡೆ ನೋಡಿದರೆ, ತನ್ನ ಕಣ್ಣನ್ನೇ ಅವನು ನಂಬಲಾಗಲಿಲ್ಲ! ಮಧ್ಯರಾತ್ರಿಗಿನ್ನೂ ಹತ್ತು ನಿಮಿಷಗಳಿದ್ದುವು. ಅಂದರೆ ಬಹುತೇಕ ರಾತ್ರಿ ಅವನೆದುರಿಗೆ ಅಟ್ಟಹಾಸ ಮಾಡುತ್ತ ನಿಂತಿತ್ತು.

'ಓ, ಈ ರಾತ್ರಿ ಎಷ್ಟು ನೀಳವಾದ್ದು!' ಅಂದುಕೊಂಡ. ಬೆನ್ನಲ್ಲಿ ಚಳುಕು ಹರಿದುಹೋದಂತಾಯಿತು. ಮತ್ತೆ ತನ್ನ ತುಪ್ಪುಳು ಕೋಟನ್ನು ಬಿಗಿಗೊಳಿಸಿಕೊಂಡು, ಜಾರುಬಂಡಿಯ ಒಂದು ಮೂಲೆಗೆ ಆತುಕೊಂಡು ತಾಳ್ಮೆಯಿಂದ ಬೆಳಕು ಹರಿಯುವುದನ್ನು ಕಾಯಬೇಕೆಂದುಕೊಂಡು ಕೂತ. ಆದರೆ ಇದ್ದಕ್ಕಿದ್ದಂತೆ, ಗಾಳಿಯ ಏಕತಾನದ ಬೀಸುವಿಕೆಯನ್ನು ಮೀರಿಸುವಂತೆ ಅವನಿಗೆ ಸ್ಪಷ್ಟವೂ ಗುರುತಿಸಬಹುದಾದುದೂ ಆದ ಹೊಸ ಪ್ರಾಣಿಯ ದನಿಯೊಂದು ಕೇಳಿಸಿತು. ನಿಧಾನವಾಗಿ ದನಿ ಹೆಚ್ಚತೊಡಗಿತು. ಅದು ತೋಳನ ಊಳುವಿಕೆಯೆಂಬುದರಲ್ಲಿ ಅನುಮಾನವೇ ಇರಲಿಲ್ಲ. ದನಿ ಎಷ್ಟು ಹತ್ತಿರವಾಯಿತೆಂದರೆ, ತನ್ನ ದವಡೆಗಳ

ಚಲನೆಯಿಂದ ಬೇರೆ ರೀತಿ ಊಳಲು ತೊಡಗಿದ್ದನ್ನು ಗಾಳಿ ಹೊತ್ತು ತಂದಿತು. ವಾಸಿಲಿ ಆಂಡ್ರೆವಿಚ್ ತನ್ನ ಕೋಟಿನ ಕಾಲರ್ ಅನ್ನು ಹಿಂದೆ ಸರಿಸಿಕೊಂಡು ಕಿವಿಗೊಟ್ಟು ಕೇಳಿಸಿಕೊಂಡ. ಮುಖೋರ್ಟಿ ಕೂಡ ತನ್ನ ಕಿವಿಗಳನ್ನಾಡಿಸುತ್ತ ಗಮನಕೊಟ್ಟು ಆಲಿಸುತ್ತಿತ್ತು. ತೋಳನ ಊಳುವಿಕೆ ನಿಂತಾಗ ಕುದುರೆ ನಿಂತ ಕಾಲನ್ನು ಬದಲಿಸಿಕೊಂಡು ಅಪಾಯಸೂಚನೆಯಂತೆ ಕೆನೆಯಿತು. ಇದಾದ ಮೇಲೆ ವಾಸಿಲಿ ಆಂಡ್ರೆವಿಚ್‌ಗೆ ನಿದ್ದೆ ಹತ್ತಿರ ಸುಳಿಯಲಿಲ್ಲ, ಸಮಾಧಾನ ಮಾಡಿಕೊಳ್ಳಲೂ ಸಾಧ್ಯವಾಗಲಿಲ್ಲ. ತನ್ನ ಬಗ್ಗೆ? ವ್ಯವಹಾರ, ಹೆಸರುವಾಸಿತನ, ತನ್ನ ಸಂಪತ್ತು - ಯೋಚಿಸಲು ಹೊರಟಷ್ಟೂ ಭಯ ಹಾಗೂ ಗ್ರಿಶ್ಕಿನೋದಲ್ಲಿ ತಾನು ರಾತ್ರಿ ಉಳಿದುಕೊಳ್ಳಲಿಲ್ಲವಲ್ಲ ಎಂಬ ಭಯ ಆವರಿಸಿಕೊಂಡು ಅವನ ಯೋಚನೆಯಲ್ಲಿ ಸಿಲುಕಿಕೊಳ್ಳುತ್ತಿತ್ತು.

'ಕಾಡು ಮನೆ ಹಾಳಾಗ! ದೇವರ ದಯೆಯಿಂದ ಅದಿಲ್ಲದೆ ಎಲ್ಲ ಸರಿಯಾಗಿತ್ತು. ಇವತ್ತೊಂದು ರಾತ್ರಿ ಕಳೆದರೆ ಸಾಕಾಗಿದೆ! ನಾನು ಸ್ವಲ್ಪ ವೋಡ್ಕ ಕುಡಿದಿದ್ದೆ ಸದ್ಯ' ಎಂಬ ಆಲೋಚನೆ ಬಂದು, ಏನಾಗುತ್ತಿದೆ ಎನ್ನಿಸಿದಾಗ ತಾನು ನಡುಗುತ್ತಿರುವುದು ಗಮನಕ್ಕೆ ಬಂತು, ಆದರೆ ಅದು ಚಳಿಯ ಕಾರಣದಿಂದಾದ್ದೋ ಭಯದಿಂದಾದ್ದೋ ತಿಳಿಯದಾಯಿತು. ಮೈಮೇಲೆ ಬಿಗಿಯಾಗಿ ಹೊದ್ದುಕೊಂಡು ಮೊದಲಿನ ಹಾಗೆ ಮಲಗಲು ಪ್ರಯತ್ನಿಸಿದ, ಆದರೆ ಹಾಗೆ ಮಾಡಲು ಸಾಧ್ಯವಾಗಲಿಲ್ಲ. ಒಂದೇ ಭಂಗಿಯಲ್ಲಿ ಕುಳಿತಿರಲೂ ಆಗದಾಯಿತು. ಮೇಲೆದ್ದು ತನ್ನಲ್ಲುಂಟಾಗಿದ್ದ ಭಯವನ್ನು ಹೋಗಲಾಡಿಸಿಕೊಳ್ಳಲು ಏನಾದರೂ ಮಾಡಬೇಕೆನ್ನಿಸಿತು, ಆದರೆ ಅದರ ಮುಂದೆ ತಾನು ಅಸಹಾಯಕನೆನ್ನಿಸಿತು. ಪುನಃ ಸಿಗರೇಟು ಬೆಂಕಿಕಡ್ಡಿಗಳನ್ನು ಹೊರತೆಗೆದು ನೋಡಿದರೆ, ಉಳಿದಿದ್ದುದು ಮೂರು ಕಡ್ಡಿಗಳು ಮಾತ್ರ, ಅದೂ ಚೆನ್ನಾಗಿಲ್ಲದವು. ತುದಿಯಲ್ಲಿದ್ದ ರಂಜಕ ಉಜ್ಜಿಹೋಗಿ ಅವು ಹೊತ್ತಿಕೊಳ್ಳಲೇ ಇಲ್ಲ.

'ಇದರ ಮನೆ ಹಾಳಾಗ! ದರಿದ್ರದ್ದು, ಬೇವಾರ್ಸಿದು!' ಎಂದು ಗೊಣಗಿಕೊಂಡ. ತನ್ನ ಶಾಪ ಯಾರಿಗೆ ತಟ್ಟಬೇಕು ಗೊತ್ತಾಗದೆ ನಜ್ಜುಗುಜ್ಜಾಗಿದ್ದ ಸಿಗರೇಟುಗಳನ್ನು ಎಸೆದ. ಕಡ್ಡಿಪೆಟ್ಟಿಗೆಯನ್ನೂ ಇನ್ನೇನು ಎಸೆದುಬಿಡುವುದರಲ್ಲಿದ್ದ, ಆದರೆ ತನ್ನ ಬೆರಳುಗಳ ಚಲನೆಯನ್ನು ಗಮನಿಸಿ ಅದನ್ನು ಮತ್ತೆ ಜೇಬಿನಲ್ಲಿರಿಸಿಕೊಂಡ. ಅವನು ಎಂಥ ತಳಮಳಕ್ಕೊಳಗಾದ ಎಂದರೆ ಒಂದೆಡೆ ಕುಳಿತುಕೊಳ್ಳಲು ಅವನಿಂದ ಸಾಧ್ಯವಾಗಲಿಲ್ಲ. ಸ್ಲೆಜ್‌ನಿಂದ ಕೆಳಗಿಳಿದು ಗಾಳಿಗೆ ಬೆನ್ನು ತಿರುಗಿಸಿ ನಿಂತುಕೊಂಡು ತನ್ನ ಬೆಲ್ಟನ್ನು ಸೊಂಟದಲ್ಲಿ ಮತ್ತಷ್ಟು ಕೆಳಗೆ ಸರಿಸಿ ಬಿಗಿದುಕೊಂಡ.

'ಮಲಗಿ ಸಾವಿಗಾಗಿ ಕಾಯುತ್ತ ಕೂರುವುದರಿಂದೇನು ಪ್ರಯೋಜನ? ಕುದುರೆಯನ್ನೇರಿ ದೌಡಾಯಿಸಿಬಿಡುವುದು ಉತ್ತಮ!' ಎಂಬ ಆಲೋಚನೆ ಇದ್ದಕ್ಕಿದ್ದ ಹಾಗೆ ಅವನಲ್ಲುದಿಸಿತು. 'ಬೆನ್ನ ಮೇಲೆ ಏನಾದ್ರೂ ಇದ್ರೆ ಕುದುರೆ ಓಡತ್ತೆ' ಅನ್ನಿಸಿದಾಗ, ನಿಕಿಟನ ನೆನಪು ಬಂದು, 'ಅವನಿಗೇನು, ಬದುಕೋದು ಸಾಯೋದು ಎರಡೂ ಒಂದೇ. ಅವನ ಜೀವನಕ್ಕೇನು ಬೆಲೆ ಇದೆ? ತನ್ನ ಬದುಕಿನ ಬಗ್ಗೆ ಅವನಿಗೆ ಅಭಿಮಾನ ಎಲ್ಲಿ?

ಆದರೆ ನನಗೆ ಬದುಕೋದಕ್ಕೆ ಏನೋ ಒಂದಷ್ಟಿದೆ, ದೇವರ ದಯೆ' ಎಂದುಕೊಂಡ.

ಕುದುರೆಯನ್ನು ಬಿಚ್ಚಿ, ಅದರ ಕೊರಳಿಗೆ ಕಡಿವಾಣ ಹಾಕಿ ಹತ್ತಲು ಪ್ರಯತ್ನಪಟ್ಟ, ಆದರೆ ತನ್ನ ಕೋಟು ಮತ್ತು ಬೂಟುಗಳ ಭಾರದಿಂದ ಸಾಧ್ಯವಾಗಲಿಲ್ಲ. ಆಮೇಲೆ ಸ್ಲೆಜ್‌ನೊಳಕ್ಕೆ ಪ್ರಯಾಸದಿಂದ ಹತ್ತಿ ಅಲ್ಲಿಂದ ಕುದುರೆಯ ಬೆನ್ನೇರಲು ನೋಡಿದ, ಆದರೆ ಅದೂ ಸಾಧ್ಯವಾಗಲಿಲ್ಲ. ಕೊನೆಗೆ ಮುಖಮೋರ್ಟೆಯನ್ನು ಜಾರುಬಂಡಿಯ ಹತ್ತಿರಕ್ಕೆಳೆದುಕೊಂಡು, ಬಹು ಎಚ್ಚರದಿಂದ ಅದರ ಒಂದು ತುದಿಯಲ್ಲಿ ನಿಂತು ಕುದುರೆಯ ಬೆನ್ನ ಮೇಲೆ ಹೊಟ್ಟೆ ಅಡಿಯಾಗಿ ಬೀಳುವಂತೆ ಹಾರಿದ. ಸ್ವಲ್ಪ ಹೊತ್ತು ಹಾಗೇ ಬಿದ್ದುಕೊಂಡಿದ್ದು ಸ್ವಲ್ಪ ಮುಂದಕ್ಕೆ ಸರಿದುಕೊಂಡು ಒಂದು ಕಾಲನ್ನು ಆ ಕಡೆ ಇರಿಸಿಕೊಂಡು ಪಾದಗಳನ್ನು ಜೋತಾಡುತ್ತಿದ್ದ ಕುದುರೆ ಪಿರ್ರೆಯ ಪಟ್ಟಿಯಲ್ಲಿ ಪಾದಗಳನ್ನಿರಿಸಿಕೊಂಡು ಕೊನೆಗೂ ಸವಾರಿಗೆ ಸಿದ್ಧನಾದ. ಸ್ಲೇಜ್‌ನ ಅಲುಗಾಡುವ ಸದ್ದಿನಿಂದ ನಿಕಿಟ ಎಚ್ಚರಗೊಂಡ. ಮೇಲೆದ್ದಾಗ, ಅವನೇನೋ ಹೇಳಿದ ಹಾಗೆ ವಾಸಿಲಿ ಆಂಡ್ರೆವಿಚ್‌ನಿಗೆ ಭಾಸವಾಯಿತು. "ನಿನ್ನಂಥ ಮೂರ್ಖನ ಮಾತು ಕೇಳಬೇಕಾ! ನಾನಿಲ್ಲಿ ವ್ಯರ್ಥವಾಗಿ ಬಿದ್ದು ಸಾಯ್ಬೇಕಾ?" ಎಂದ ಉದ್ಗರಿಸಿದ ವಾಸಿಲಿ ಆಂಡ್ರೆವಿಚ್. ತನ್ನ ತುಪ್ಪಳುಗಂಬಳಿಯ ಸಡಿಲಗೊಂಡ ತುದಿಗಳನ್ನು ಮೊಣಕಾಲ ಕೆಳಗೆ ಸಿಕ್ಕಿಸಿಕೊಂಡು, ಕುದುರೆಯನ್ನು ತಿರುಗಿಸಿ ಸ್ಲೆಜ್‌ನಿಂದ ದೂರವಾಗಿ ಕಾಡು ಮತ್ತು ಅಲ್ಲಿ ಕಾವಲುಗಾರನ ಗುಡಿಸಲಿದ್ದ ಕಡೆಗೆ ದೌಡಾಯಿಸಿದ.

## 7

ಗೋಣಿಬಟ್ಟೆಯಲ್ಲಿ ತನ್ನನ್ನು ಸುತ್ತಿಕೊಂಡು ಸ್ಲೆಜ್‌ನ ಹಿಂಭಾಗದಲ್ಲಿ ಕೂತಿದ್ದ ನಿಕಿಟ ಅಲುಗಾಡಿರಲಿಲ್ಲ. ಪ್ರಕೃತಿಯೊಡನೆ ಸಂಪರ್ಕವಿಟ್ಟುಕೊಂಡು ಬದುಕು ಎಲ್ಲರಂತೆಯೇ ಅವನೂ ಗಂಟೆಗಳಗಟ್ಟಲೆ, ಅಷ್ಟೇಕೆ ದಿನಗಟ್ಟಲೆ ಕೂಡ, ತಳಮಳಿಸದೆ ಇರಿಸುಮುರಿಸಿಗೊಳಗಾಗದೆ ಕಾಯುವ ತಾಳ್ಮೆಯನ್ನು ಹೊಂದಿದ್ದ. ಯಜಮಾನರು ತನ್ನನ್ನು ಕರೆಯುವುದು ಅವನಿಗೆ ಕೇಳಿಸಿತ್ತು, ಆದರೆ ಅದಕ್ಕೆ ಉತ್ತರಿಸದಿರಲು ಕಾರಣ ಅವನಿಗೆ ಚಲಿಸಲು ಅಥವಾ ಮಾತನಾಡಲು ಇಷ್ಟವಿರಲಿಲ್ಲ. ಟೀ ಕುಡಿದಿದ್ದರಿಂದಾಗಿ ಅವನಲ್ಲಿ ಸ್ವಲ್ಪ ಚೈತನ್ಯವುಂಟಾಗಿದ್ದರೂ, ಹಿಮದ ಒಟ್ಟಿಲನ್ನು ಏರುವ ಬಲಿಷ್ಠ ಹೋರಾಟದ ಸಾಹಸದಿಂದಲೂ ಉಂಟಾದ ಮೈಬಿಸುಪು ಹೆಚ್ಚು ಕಾಲ ಉಳಿಯಲಾರದೆಂಬುದು ಅವನಿಗೆ ತಿಳಿದಿತ್ತು; ಅಲ್ಲದೆ ಮತ್ತೆ ಓಡಾಡುವುದಕ್ಕೆ ತನ್ನಲ್ಲಿ ಶಕ್ತಿ ಇಲ್ಲವೆಂಬ ಅರಿವು ಅವನಿಗಿತ್ತು. ಚಾವಟಿಯಿಂದ ಬಾರಿಸಿದರೂ ಮುಂದಕ್ಕೆ ಒಂದು ಅಡಿಯನ್ನೂ ಇಡಲಾರದ ಕುದುರೆಯ ಪರಿಸ್ಥಿತಿಯೇ ಅವನದೂ ಆಗಿತ್ತು. ಅಂಥ ಸ್ಥಿತಿಯಲ್ಲಿ ಕುದುರೆ ಮತ್ತೆ ಕಾರ್ಯನಿರ್ವಹಿಸಬೇಕಾದರೆ ಅದಕ್ಕೆ ಮೇವುಣಿಸಬೇಕೆಂಬ ಪ್ರಜ್ಞೆ ಒಡೆಯನಿಗಿರುತ್ತದೆ. ತೂತಿದ್ದ ಬೂಟಿನಲ್ಲಿ ಅವಿತಿದ್ದ ಅವನ ಕಾಲಿಗೆ ಆಗಲೇ ಜೋಮು ಹಿಡಿದಿತ್ತು, ಅವನ ಕಾಲ ಹೆಬ್ಬೆರಳು ಎಲ್ಲ ಸಂವೇದನೆಯನ್ನು ಕಳೆದುಕೊಂಡಿತ್ತು. ಅಲ್ಲದೆ, ಅವನ ಇಡೀ ಮೈ

ಹೆಚ್ಚೆಚ್ಚು ತಣ್ಣಗಾಗುತ್ತಿತ್ತು.

ತಾನು ಆ ರಾತ್ರಿ ಸಾಯಬಹುದು, ಅಷ್ಟೇಕೆ ಸತ್ತೇ ಹೋಗುತ್ತೇನೆ ಎಂಬ ಆಲೋಚನೆಯು ಅವನಲ್ಲಿ ಬಂತು, ಆದರೆ ಅದು ಭಯವನ್ನಾಗಲೀ ನೋವನ್ನಾಗಲೀ ಉಂಟುಮಾಡುವಂತೆ ಕಾಣಲಿಲ್ಲ. ಅದೇನೂ ಅವನಿಗೆ ಅಸಂತೋಷಕರವಾಗೇನೂ ತೋಚದಿದ್ದುದು ವಿಶೇಷ, ಯಾಕೆಂದರೆ ಅವನ ಜೀವನ ಪೂರ್ತಿ ದೀರ್ಘ ಕಾಲದ ಬಿಡುವನ್ನು ಪಡೆದಿರಲಿಲ್ಲ, ಅದಕ್ಕೆ ವ್ಯತಿರಿಕ್ತವಾಗಿ ಕೊನೆಯಿರದ ಈ ದುಡಿಮೆ ಅವನಿಗೆ ಸಾಕೆನಿಸಿತ್ತು. ಭಯವಾಗದಿರಲು ಕಾರಣವೆಂದರೆ, ವಾಸಿಲಿ ಆಂಡ್ರೆವಿಚ್ ಅಡಿ ತಾನು ಮಾಡಿದ ಕೆಲಸಗಳಲ್ಲದೆ, ಯಾವಾಗಲೂ 'ಆ' ದೊಡ್ಡ ಒಡೆಯನ ಅಧೀನದಲ್ಲಿರಬೇಕಾದ ಅರಿವು ಅವನದಾಗಿತ್ತು. 'ಅವನೇ' ತಾನೇ ಈ ಬದುಕನ್ನು ಕೊಟ್ಟು ತನ್ನನ್ನಿಲ್ಲಿ ಕಳಿಸಿದ್ದು, ಹೀಗಾಗಿ ಸಾವಿನಲ್ಲಿಯೂ ಅವನ ಶಕ್ತಿಯ ಹಿಡಿತದಲ್ಲಿಯೇ ತಾನಿರುತ್ತೇನೆ, ಅವನೆಂದೂ ತನ್ನನ್ನು ದುರುಪಯೋಗಕ್ಕೊಳಗುಮಾಡುವುದಿಲ್ಲವೆಂಬ ನಂಬಿಕೆ ಅವನದಾಗಿತ್ತು. "ಅಭ್ಯಾಸಬಲದಿಂದ ತನಗೆ ಒಗ್ಗಿಹೋಗಿರುವುದನ್ನು ಬಿಟ್ಟುಕೊಡಬೇಕಾಗುವುದು ಕರುಣಾಜನಕವೇ ಸರಿ. ಆದರೆ ಏನೂ ಮಾಡುವಂತಿಲ್ಲವಲ್ಲ, ಹೀಗಾಗಿ ಹೊಸ ಸನ್ನಿವೇಶಗಳಿಗೆ ಹೊಂದಿಕೊಳ್ಳುತ್ತೇನೆ."

"ಪಾಪಗಳು?" ಎಂಬ ಆಲೋಚನೆ ಬಂತು. ತನ್ನ ಕುಡುಕತನ, ಅದಕ್ಕಾಗಿ ಖರ್ಚು ಮಾಡಿರುವ ಹಣ, ತನ್ನ ಹೆಂಡತಿಗೆ ಕೊಟ್ಟ ಕಿರುಕುಳ, ಶಾಪಹಾಕಿದ್ದು, ಚರ್ಚ್ ಅನ್ನು ಉಪವಾಸವ್ರತವನ್ನು ಉಪೇಕ್ಷೆ ಮಾಡಿದ್ದು, ತಪ್ಪೊಪ್ಪಿಗೆಯಲ್ಲಿ ಪಾದ್ರಿಗಳು ತನ್ನ ತಪ್ಪುಗಳಿಗಾಗಿ ಝುಂಕಿಸಿದ್ದು? ಎಲ್ಲ ನೆನಪಿಗೆ ಬಂತು, "ಅವೆಲ್ಲ ಪಾಪಕರ್ಮಗಳೇ, ನಿಜ. ಆದರೆ ಅವುಗಳನ್ನು ನಾನೇ ಆವಾಹಿಸಿಕೊಂಡಿದ್ದೆನೇ? ಆ ದೇವರು ನನ್ನನ್ನು ಸೃಷ್ಟಿಸಿದ್ದೇ ಹಾಗೆ. ಆದರೇನು, ಅವು ಪಾಪಕರ್ಮಗಳೇ ತಾನೇ? ಅವುಗಳಿಂದ ಪಾರಾಗೋದು ಹೇಗೆ?"

ಹೀಗೆ ಅವನಿಗೆ ಆ ರಾತ್ರಿ ತನಗೆ ಒದಗಬಹುದಾದ ಗತಿಯ ಬಗ್ಗೆ ಆಲೋಚನೆ ಬಂತು. ಆನಂತರವೇ ಅವನಲ್ಲಿ ಇತರ ಆಲೋಚನೆಗಳು ಮೂಡಿದ್ದು, ಆದರೆ ತಾವಾಗಿ ಬಂದ ನೆನಪುಗಳಿಗೆ ತನ್ನನ್ನವನು ಒಪ್ಪಿಸಿಕೊಂಡ. ಒಮ್ಮೆ ಮಾರ್ತಾ ತನ್ನ ಬದುಕಿನಲ್ಲಿ ಬಂದದ್ದು, ಇತರ ಕೆಲಸಗಾರರ ಜೊತೆ ಸೇರಿ ಕುಡಿಯಲು ತೊಡಗಿದ್ದು, ತಾನೇ ಅದನ್ನು ಬಿಟ್ಟದ್ದು, ಈಗಿನ ತಮ್ಮ ಪ್ರಯಾಣ, ತಾರಾಸ್ ಅವರ ಮನೆಗೆ ಹೋದದ್ದು, ಅಲ್ಲಿ ಯಜಮಾನರು ಸಂಸಾರ ಒಡೆಯುವುದನ್ನು ಹೇಳಿದ್ದು, ತನ್ನ ಮಗನ ಬಗ್ಗೆ ವಿವರಿಸಿದ್ದು, ಮುಖೋರ್ಟಿಯ ಮೈಯನ್ನು ಹಾಸುಗಂಬಳಿಯಿಂದ ಹೊದಿಸಿದ್ದು, ಆಮೇಲೆ ತಮ್ಮ ಯಜಮಾನರು ಜಾರುಬಂಡಿಯೊಳಗೆ ಮಲಗಿ ಮಗ್ಗುಲು ಬದಲಿಸುತ್ತ ಅದು ಕಿರುಗುಟ್ಟುವಂತೆ ಮಾಡಿದ್ದು - ಹೀಗೆ. "ಅಲ್ಲಿಂದ ಹೊರಟು ಬಂದದ್ದರಿಂದ ಈಗ ನಿಮಗೇ ಪಶ್ಚಾತ್ತಾಪವಾಗಿದೆ, ಅಲ್ಲವೇ? ಅವರದರಂಥ ಬದುಕನ್ನು ಬಿಟ್ಟು ಹೋಗುವುದು ಕಷ್ಟವೇ ಸರಿ! ಅದು ನಮ್ಮದರಂತಲ್ಲ."

ಆಮೇಲೆ ಈ ಎಲ್ಲ ನೆನಪುಗಳು ಅವನಲ್ಲಿ ಗೊಂದಲವನ್ನುಂಟುಮಾಡಿ ಅವನ ತಲೆಯಲ್ಲಿ ಒಂದರೊಳಗೊಂದು ಬೆರೆತುಹೋದುವು, ಅವನಿಗೆ ನಿದ್ದೆ ಹತ್ತಿತು.

ಆದರೆ ವಾಸಿಲಿ ಆಂಡ್ರೆವಿಚ್ ಕುದುರೆಯನ್ನೇರಿ ನಿಕಿಟ ಒರಗಿ ಮಲಗಿದ್ದ ಜಾರುಬಂಡಿಯ ಹಿಂಬದಿಯನ್ನು ಜರುಗಿಸಿ ಅದು ತನ್ನಿಂದ ದೂರ ಹೋಗಿ ಅವನ ಬೆನ್ನಿಗೆ ಅದರ ಜಾರುತುಂಡೊಂದು ತಗುಲಿ ನೋವಾದಾಗ ಅವನಿಗೆ ಎಚ್ಚರವಾಗಿತ್ತು, ಆಗ ಬೇಕಿರಲಿ ಬೇಡವಾಗಿರಲಿ ಅವನು ತಾನು ಕುಳಿತ ಭಂಗಿಯನ್ನು ಬದಲಿಸಲೇಬೇಕಾಯಿತು ಕಷ್ಟಪಟ್ಟು ತನ್ನ ಕಾಲುಗಳನ್ನು ನಿಗುಚಿ, ಅವುಗಳ ಮೇಲಿದ್ದ ಹಿಮವನ್ನು ಕೊಡವಿಕೊಂಡು ಮೇಲೆದ್ದ. ತಕ್ಷಣ ನೋವಿನ ಚಳುಕೊಂದು ಇಡೀ ಮೈಯಿನ ಆಳಕ್ಕಿಳಿಯಿತು. ಏನು ನಡೆಯುತ್ತಿದೆ ಎಂಬುದು ಅರಿವಿಗೆ ಬಂದು, ಕುದುರೆಗೀಗ ಆವಶ್ಯಕವಾಗಿರದ ಹಾಸುಗಂಬಳಿಯನ್ನು ತನಗೆ ಕೊಟ್ಟರೆ ಅದನ್ನು ಹೊದ್ದುಕೊಳ್ಳುತ್ತೇನೆಂದು ವಾಸಿಲಿ ಆಂಡ್ರೆವಿಚ್ ಅನ್ನು ಕೇಳಿದ್ದ.

ಆದರೆ ವಾಸಿಲಿ ಆಂಡ್ರೆವಿಚ್ ನಿಲ್ಲಲಿಲ್ಲ, ಹಿಮದ ಪುಡಿಯಲ್ಲಿ ಅದೃಶ್ಯನಾಗಿಬಿಟ್ಟಿದ್ದ

ಒಬ್ಬನೇ ಉಳಿದ ನಿಕಿಟ ಈಗ ತಾನು ಮಾಡಬೇಕಾದ್ದು ಏನೆಂದು ಒಂದು ಕ್ಷಣ ಚಿಂತಿಸಿದ. ಮತ್ತೆ ಮನೆಯನ್ನು ಹುಡುಕಿಕೊಂಡು ಹೋಗುವಷ್ಟು ಚೈತನ್ಯ ತನ್ನಲ್ಲುಳಿದಿರಲಿಲ್ಲ. ತನ್ನ ಹಿಂದಿನ ಜಾಗದಲ್ಲಿ ಕುಳಿತಿರಲೂ ಸಾಧ್ಯವಿಲ್ಲ. ಅದರಲ್ಲಿ ಈಗಾಗಲೇ ಹಿಮ ತುಂಬಿಕೊಂಡಿತ್ತು. ಜಾರುಬಂಡಿಯ ಒಳಗೂ ಬೆಚ್ಚಗಿರಲಾರದೆಂದು ಅವನಿಗನ್ನಿಸಿತು, ಯಾಕೆಂದರೆ ಹೊದ್ದುಕೊಳ್ಳಲು ತನ್ನ ಬಳಿ ಏನೂ ಇರಲಿಲ್ಲ, ತಾನು ತೊಟ್ಟಿರುವ ತುಪ್ಪುಳುಗಂಬಳಿಯಾಗಲೀ ಕೋಟಾಗಲೀ ತನ್ನನ್ನು ಬಿಸುಪಾಗಿಡಲು ಅಸಮರ್ಥವಾಗಿತ್ತು. ಮೈಮೇಲೆ ಏನೂ ಇಲ್ಲವೇನೋ ಎಂಬಷ್ಟು ಚಳಿ ಆಯಿತು ಅಂಗಿಯೊಂದನ್ನು ಬಿಟ್ಟು ಬೇರೇನೂ ಮೈಮೇಲಿಲ್ಲವೇನೋ ಎಂಬ ಅನುಭವ ಬಂತು ಭಯವಾಯಿತು. "ದೇವರೇ, ಸ್ವರ್ಗದೊಡೆಯನೇ!" ಎಂದು ಗೊಣಗಿಕೊಂಡ; ಆದರೆ ತಾನು ಒಂಟಿಯಾಗೇನೂ ಇಲ್ಲ, ತನ್ನೊಡನೆ 'ಒಬ್ಬ' ಇದ್ದಾನೆ, ತನ್ನ ಅಳಲನ್ನು ಕೇಳಿಸಿಕೊಳ್ಳುತ್ತಾನೆ, ತನ್ನನ್ನವನು ಕೈಬಿಡುವುದಿಲ್ಲ ಎಂಬ ಪ್ರಜ್ಞೆ ಅವನಿಗೆ ಸಾಂತ್ವನ ನೀಡಿತು. ಒಂದು ನೀಳವಾದ ಉಸಿರುಬಿಟ್ಟು ಗೋಣಿತಾಟನ್ನು ತಲೆಯ ಮೇಲೆ ಹೊದ್ದು ಸ್ಲೆಜ್‌ನೊಳಗೆ ಸೇರಿಕೊಂಡು ತನ್ನ ಯಜಮನ ಮಲಗಿದ್ದ ಜಾಗದಲ್ಲಿ ಉರುಳಿಕೊಂಡ.

ಆದರೆ ಸ್ಲೆಜ್‌ನೊಳಗೂ ಅವನಿಗೆ ಬೆಚ್ಚಗಾಗಲಿಲ್ಲ. ಮೊದಲು ಮೈಯೆಲ್ಲ ನಡುಗಿತು ಆನಂತರ ನಡುಕ ನಿಂತು ನಿಧಾನವಾಗಿ ತನ್ನ ಪ್ರಜ್ಞೆ ಕಳೆದುಕೊಂಡ. ತಾನು ಸಾಯುತ್ತಿದ್ದೇನೋ ನಿದ್ದೆ ಹೋಗುತ್ತಿದ್ದೇನೋ ಎಂಬುದು ಖಚಿತವಾಗಿ ಗೊತ್ತಾಗದಿದ್ದರೂ ಅವನು ಎರಡಕ್ಕೂ ಸಮಾನವಾಗಿ ಸಿದ್ಧನಾದ.

## 8

ಈ ಮಧ್ಯೆ ವಾಸಿಲಿ ಆಂಡ್ರೆವಿಚ್ ತನ್ನ ಕಾಲು ಮತ್ತು ಲಗಾಮುಗಳ ತುದಿಯಿಂದ ಕುದುರೆಯನ್ನು ಯಾವುದೋ ಕಾರಣದಿಂದ ಕಾಡು ಮತ್ತು ಕಾವಲುಗಾರನ ಗುಡಿಸಲು ಯಾವ ಕಡೆಗಿದೆ ಎಂದು ಭಾವಿಸಿದ್ದನೋ ಆ ದಿಕ್ಕಿಗೆ ಓಡಿಸಿದ. ಅವನ ಕಣ್ಣನ್ನು ಹಿಮ ಮೆತ್ತಿಕೊಳ್ಳುತ್ತಿತ್ತು, ಗಾಳಿ ಅವನನ್ನು ಹಿಡಿದು ನಿಲ್ಲಿಸಲು ಹಟತೊಟ್ಟಿದೆಯೋ ಎಂಬಂತೆ ಬೀಸುತ್ತಿತ್ತು, ಆದರೆ ಇವನು ಮುಂದಕ್ಕೆ ಬಾಗಿಕೊಂಡು, ಕೋಟನ್ನು ಮತ್ತೆ ಮತ್ತೆ ಎಳೆದುಕೊಂಡು, ತಾನು ಸರಿಯಾಗಿ ಕುಳಿತುಕೊಳ್ಳಲು ಅಡ್ಡಿಪಡಿಸುತ್ತಿದ್ದ ತಣ್ಣಗಿನ ಗಾಡಿಗೆ ಕಟ್ಟುವ ಉಪಕರಣ ಮತ್ತು ತನ್ನ ಕಾಲುಗಳ ನಡುವೆ ತೂರಿಸಿಕೊಳ್ಳುತ್ತ ಓಡುವಂತೆ ಒಂದೇ ಸಮನೆ ಕುದುರೆಯನ್ನು ಉತ್ತೇಜಿಸುತ್ತಿದ್ದ. ಮುಖೋರ್ಟಿ ಕಷ್ಟವಾದರೂ ಯಜಮಾನ ಅಪೇಕ್ಷಿಸಿದ್ದ ದಿಕ್ಕಿನೆಡೆಗೆ ವಿಧೇಯತೆಯಿಂದ ಜಗ್ಗುಹೆಜ್ಜೆ ಹಾಕುತ್ತಿತ್ತು.

ವಾಸಿಲಿ ಆಂಡ್ರೆವಿಚ್ ಹೀಗೆ ಸುಮಾರು ಐದು ನಿಮಿಷಗಳ ಕಾಲ ತಾನಂದುಕೊಂಡ ಕಡೆಯಲ್ಲಿ ನೇರವಾಗಿ, ಕುದುರೆಯ ತಲೆ ಮತ್ತು ಹಿಮವಿಸ್ತಾರಗಳ ಹೊರತಾಗಿ ಬೇರೇನನ್ನೂ ಕಾಣದೆ, ಕುದುರೆಯ ಕಿವಿಗಳು ಮತ್ತು ತನ್ನ ಕೋಟಿನ ಕಾಲರ್ಗಳೆಡೆಯಲ್ಲಿ ಗಾಳಿಯ ಶಿಳ್ಳೆಯನ್ನಷ್ಟೇ ಕೇಳುತ್ತ ಮುಂದೆ ಸಾಗಿದ.

ಇದ್ದಕ್ಕಿದ್ದಂತೆ ತನ್ನ ಮುಂದೆ ಏನೋ ಕಪ್ಪು ತೇಪೆ ಕಾಣಿಸಿದಂತೆ ಆಯಿತು. ಅವನ ಹೃದಯ ಆನಂದದಿಂದ ತೊನೆದಾಡಿತು, ಅದರೆಡೆಗೇ ಸವಾರಿ ಮುಂದುವರಿಸಿದ, ಅವನ ಕಲ್ಪನೆಯಲ್ಲಿ ಆಗಲೇ ಹಳ್ಳಿಯ ಮನೆಯೊಂದರ ಬಿಳಿ ಗೋಡೆ ಕಾಣತೊಡಗಿತ್ತು. ಆದರೆ ಆ ಕಪ್ಪು ತೇಪೆ ಒಂದೆಡೆಯೇ ಸ್ಥಿರವಾಗಿರದೆ ಚಲಿಸುತ್ತಿತ್ತು; ಅದು ಹಳ್ಳಿಯಾಗಿರದೆ, ಎರಡು ಹೊಲಗಳ ಮಧ್ಯದ ಹಿಮದ ನಡುವೆ ಬಿರುಸಾಗಿ ಬೀಸುತ್ತ ನುಗ್ಗಿ ಶಿಳ್ಳೆ ಹಾಕುತ್ತಿದ್ದ ಗಾಳಿಯಿಂದಾಗಿ ಒಂದೇ ಸಮನೆ ಅತ್ತಿಂದಿತ್ತ ಓಲಾಡುತ್ತ ನಿಂತಿದ್ದ ಮಾಚಿಪತ್ರೆಯ ನೀಳವಾದ ಕೊಂಬೆಗಳಾಗಿದ್ದವು. ಗಾಳಿಯ ಹೊಡೆತಕ್ಕೆ ಸಿಕ್ಕು ಜರ್ಜರಿತಗೊಂಡು ನಿಂತಿದ್ದ ಆ ಮಾಚಿಪತ್ರೆಯ ಗಿಡವನ್ನು ನೋಡಿ ವಾಸಿಲಿ ಆಂಡ್ರೆವಿಚ್ ಕಾರಣವಿಲ್ಲದೆ ನಡುಗಿದ, ಕುದುರೆಯನ್ನು ಮತ್ತಷ್ಟು ಜೋರಾಗಿ ಓಡುವಂತೆ ಉತ್ತೇಜಿಸಿದ; ಆ ಮಾಚಿಯ ಗಿಡದ ಹತ್ತಿರ ಬರುವವರೆಗೆ ತನ್ನ ಚಲನೆಯ ದಿಕ್ಕು ಬದಲಾಗಿದೆ ಎಂಬುದನ್ನವನು ಗಮನಿಸದೆ ತದ್ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತಿದ್ದ; ಆದರೆ ಅವನ ಮನಸ್ಸಿನಲ್ಲಿ ಗುಡಿಸಲಿದ್ದ ಜಾಗದ ಕಡೆಗೇ ಸಾಗುತ್ತಿದ್ದೇನೆಂದು ಭ್ರಮಿಸಿದ್ದ.. ಕುದುರೆ ಬಲಗಡೆಗೆ ತುಡಿಯುತ್ತಿದ್ದರೆ, ಅವನು ಎಡಕ್ಕೆ ಎಳೆಯುತ್ತಿದ್ದ.

ಮತ್ತೆ ಎಂಥದೋ ಕಪ್ಪಾದುದು ಮುಂದಿರುವುದು ಅವನ ಕಣ್ಣಿಗೆ ಬಿತ್ತು. ಮತ್ತೆ ಅವನ ಎದೆ ಕುಣಿಯಿತು, ಖಂಡಿತ ಈ ಸಲ ಅದು ಹಳ್ಳಿಯೆಂದು ಅವನ ಮನಸ್ಸು ಹೇಳಿತು. ಆದರೆ ಮತ್ತದೇ ಮಾಚಿಪತ್ರೆಯ ಗಿಡಗಳು ಹುಲುಸಾಗಿ ಬೆಳೆದಿದ್ದ ಹೊಲದ ಗಡಿಭಾಗ! ಹಿಂದಿನ ರೀತಿಯಲ್ಲೇ ಗಿಡವು ಗಾಳಿಯಿಂದ ಜೋರಾಗಿ ತೊನೆದಾಡುತ್ತಿತ್ತು,

ಇದರಿಂದ ಅವನ ಮನಸ್ಸಿನಲ್ಲಿ ಅಕಾರಣ ಭಯ ಹುಟ್ಟಿತು. ಆದರೆ ಅದು ಕೇವಲ ಗಿಡಗಳು ಮಾತ್ರವಾಗಿರದೆ, ಅದರ ಪಕ್ಕದಲ್ಲೇ ಹಿಮ ಆವರಿಸಿದ್ದ ಕೊಂಚ ಓಡಾಡಿದ ಗುರುತಿದ್ದ ಕುದುರೆಯ ಜಾಡು ಆಗಿತ್ತು. ವಾಸಿಲಿ ಆಂಡ್ರೆವಿಚ್ ನಿಂತುಕೊಂಡು ಕೆಳಗೆ ಬಾಗಿ ಎಚ್ಚರಿಕೆಯಿಂದ ಗಮನಿಸಿದ. ಅದು ಭಾಗಶಃ ಹಿಮ ಆವರಿಸಿದ್ದ ಕುದುರೆಯ ಜಾಡೇ ಆಗಿತ್ತು, ಅಂದರೆ ತನ್ನ ಕುದುರೆಯ ಗೊರಸುಗುರುತಿನ ಜಾಡೇ ಅದಾಗಿತ್ತು! ತಾನು ಅಲ್ಲೇ ಸುತ್ತುತ್ತಿದ್ದೆ ಎಂಬುದರ ಅರಿವಾಯಿತವನಿಗೆ. 'ನಾನು ಹೀಗೇ ಸತ್ತುಹೋಗಿಬಿಡ್ತೀನಿ' ಅನ್ನಿಸಿ, ತನ್ನ ಭಯವನ್ನು ಹತ್ತಿಕ್ಕಿಕೊಳ್ಳುವುದಕ್ಕಾಗಿ ಕುದುರೆಯನ್ನು ಮತ್ತಷ್ಟು ಉತ್ತೇಜಿಸಿ ಹಿಮಾಚ್ಛಾದಿತ ಕತ್ತಲಲ್ಲಿ ಇಣುಕಿ ನೋಡುತ್ತ ಮುಂದೆ ಸರಿದಾಗ, ಅವನಿಗೆ ಸರಿದಾಡುವ ಬೆಳಕಿನ ಬಿಂದುಗಳಷ್ಟೇ ಕಾಣಿಸಿದವು. ಒಮ್ಮೆ ಅವನಿಗೆ ನಾಯಿಗಳ ಬೊಗಳೋ ತೋಳಗಳ ಊಳೋ ಕೇಳಿಸಿದಂತಾಯಿತು. ಆದರೆ ಆ ಸದ್ದುಗಳು ಎಷ್ಟು ಕ್ಷೀಣವಾದುವೂ ದೂರದಿಂದ ಬಂದುವೂ ಆಗಿದ್ದುವೆಂದರೆ, ತನಗೆ ಸದ್ದು ಕೇಳಿಸಿತೋ, ಅದು ಕೇವಲ ತನ್ನ ಭ್ರಮೆಯೋ ಎಂಬ ಅನುಮಾನ ಅವನಿಗೇ ಉಂಟಾಯಿತು. ನಿಂತು ಸದ್ದನ್ನು ಕಿವಿಗೊಟ್ಟು ಆಲಿಸಿದ.

ಇದ್ದಕ್ಕಿದ್ದ ಹಾಗೆ ವಾಸಿಲಿ ಆಂಡ್ರೆವಿಚ್‌ನ ಕಿವಿಯ ಹತ್ತಿರ ಕಿವುಡಾಗಿಸುವಂಥ ಧ್ವನಿ ಕೇಳಿಸಿತು, ಅವನಡಿಯಲ್ಲಿದ್ದ ಸಕಲವೂ ನಡುಗಿ ಭಯದಿಂದ ಕಂಪಿಸಿತು. ಮುಖೋರ್ಟಿಯ ಕೊರಳನ್ನವನು ಅವುಚಿ ಹಿಡಿದುಕೊಂಡ, ಆದರೆ ಅದರ ಮೈಯೆಲ್ಲ ಕಂಪಿಸುತ್ತಿತ್ತು, ಆ ಭಯಂಕರ ಕೂಗು ಮತ್ತಷ್ಟು ಹೆಚ್ಚಾಯಿತು. ಕೆಲವು ಕ್ಷಣಗಳ ಕಾಲ ವಾಸಿಲಿ ಆಂಡ್ರೆವಿಚ್‌ಗೆ ತನ್ನನ್ನು ಸ್ತಿಮಿತಕ್ಕೆ ತಂದುಕೊಳ್ಳುವುದಕ್ಕಾಗಲೀ ಏನಾಯಿತೆಂದು ಅರಿಯುವುದಕ್ಕಾಗಲೀ ಸಾಧ್ಯವಾಗಲಿಲ್ಲ. ಆ ಧ್ವನಿ ಬೇರೇನೂ ಆಗಿರದೆ, ಮುಖೋರ್ಟಿಯೇ ತನ್ನನ್ನು ಸಮಾಧಾನಪಡಿಸಿಕೊಳ್ಳಲೋ ಸಹಾಯಕ್ಕೆಂದೋ ಮಾಡಿದ ಭಾರಿ ಕೆನೆತವಾಗಿತ್ತು, ಅಷ್ಟೆ. "ಥೂ, ಮುಂಡೇದೇ! ಹೇಗೆ ಹೆದರಿಸಿಬಿಟ್ಟೆ ನನ್ನ, ದರಿದ್ರದ್ದೇ!" ಎಂದ ಬೈದ. ಕಾರಣವನ್ನು ತಿಳಿದ ಮೇಲೂ ಭಯದಿಂದ ನಡುಗುತ್ತಿದ್ದ ಅವನ ಮೈ ಸುಧಾರಿಸಿಕೊಳ್ಳಲಿಲ್ಲ.

"ಮನಸ್ಸನ್ನು ಸ್ತಿಮಿತಕ್ಕೆ ತಂದುಕೊಂಡು ಸರಿಯಾಗಿ ಯೋಚಿಸ್ಬೇಕು" ಎಂದುಕೊಂಡ, ಆದರೂ ಅವನು ನಿಲ್ಲದೆ ಕುದುರೆಯನ್ನು ಮುಂದಕ್ಕೆ ಹೋಗಗೊಟ್ಟ, ಹಾಗೆ ಮಾಡುವಾಗ ತಾನು ಗಾಳಿಗನುಸಾರವಾಗಿ ಹೋಗುವುದರ ಬದಲು ಅದಕ್ಕೆ ವಿರುದ್ಧವಾಗಿ ಸಾಗುತ್ತಿರುವುದನ್ನು ಗಮನಿಸಲಿಲ್ಲ. ಅವನ ದೇಹ, ಅದೂ ಕುದುರೆಯನ್ನು ಗಾಡಿಗೆ ಹೂಡಿದ್ದ ಜಾಗವನ್ನು ತಾಕುತ್ತಿದ್ದು ತನ್ನ ಕೋಟಿನಿಂದ ಮುಚ್ಚಿಕೊಳ್ಳಲಾಗದಿದ್ದ ತನ್ನ ಕಾಲುಗಳ ನಡುವೆ ಯಾತನೆಯಿಂದ ಕೂಡುವಷ್ಟು ತಣ್ಣಗಾಗುತ್ತಿತ್ತು, ಅದೂ ಕುದುರೆ ನಿಧಾನವಾಗಿ ನಡೆಯುವಾಗ. ಅವನ ಕಾಲುಗಳೂ ತೋಳುಗಳೂ ನಡುಗಿದವು, ಉಸಿರಾಟ ತೀವ್ರವಾಯಿತು. ಈ ಕೊನೆಯಿರದ ಹಿಮವಿಸ್ತಾರದಲ್ಲಿ ತಾನು ಕ್ಷಯಿಸಿಹೋಗುತ್ತಿರುವ ಭಾವನೆ ಆಗಿ ಅದರಿಂದ ಪಾರಾಗುವ ದಾರಿ ಕಾಣದಾಯಿತು.

ತಾನು ಕೂತಿದ್ದ ಕುದುರೆ ಇದ್ದಕ್ಕಿದ್ದಂತೆ ಯಾವುದರಿಂದಲೋ ಮುಗ್ಗರಿಸಿ ಹಿಮರಾಶಿಯಲ್ಲಿ ತನ್ನ ಮಗ್ಗುಲಿಗೆ ಬಿದ್ದು ಕುಸಿಯತೊಡಗಿತು. ವಾಸಿಲಿ ಆಂಡ್ರೆವಿಚ್ ತಕ್ಷಣ ಅದರಿಂದ ಹಾರಿದ, ಹಾಗೆ ಮಾಡುವಾಗ ತನ್ನ ಕಾಲನ್ನಿರಿಸಿಕೊಂಡಿದ್ದ ಕುದುರೆ ಪಿರ್ರೆಯ ಪಟ್ಟಿಯನ್ನೆಳೆದು ಅದರ ಮೇಲೆಯೇ ಉರುಳಿಕೊಂಡ. ಅವನು ಹಾರಿಕೊಂಡ ತಕ್ಷಣವೇ ಕುದುರೆ ಮೇಲೇಳಲು ಹೆಣಗಿ ಮುಂದಕ್ಕೆ ಜಾರಿ ಒಂದಾದ ಮೇಲೊಂದು ಹಾರು ಹಾರಿ ಮತ್ತೆ ಕೆನೆದು, ಹಾಸುಗಂಬಳಿ ಮತ್ತು ಪಿರ್ರೆಯ ಪಟ್ಟಿಯನ್ನೆಳೆದುಕೊಂಡು ದೌಡಾಯಿಸಿ ಕಣ್ಮರೆಯಾಯಿತು. ಆ ಹಿಮದ ಒಟ್ಟಿಲಲ್ಲಿ ವಾಸಿಲಿ ಆಂಡ್ರೆವಿಚ್ ಒಂಟಿಯಾಗಿ ಬಿದ್ದಿದ್ದ.

ಅವನೇನೋ ಅದನ್ನು ಹಿಡಿದುಕೊಳ್ಳಲು ಪ್ರಯತ್ನಿಸಿದ್ದ, ಆದರೆ ಹಿಮದ ಗುಳಿ ಆಳವಾಗಿದ್ದುದಲ್ಲದೆ ಅವನ ಕೋಟಿನ ಭಾರ ಹೆಚ್ಚಾಗಿದ್ದು, ಪ್ರತಿ ಹೆಜ್ಜೆಯಿಟ್ಟಾಗಲೂ ಮೊಳಕಾಲವರೆಗೆ ಹಿಮದಲ್ಲಿ ಹೂತುಕೊಂಡು ಇಪ್ಪತ್ತು ಹೆಜ್ಜೆಗಳನ್ನಿಡುವಷ್ಟರಲ್ಲಿ ಉಸಿರು ಕಟ್ಟಿಕೊಂಡಂತಾಗಿ ನಿಂತುಬಿಟ್ಟ. ಕುರುಚಲುಕಾಡು, ಎತ್ತುಗಳು, ಗುತ್ತಿಗೆ ಕೊಟ್ಟ ಜಮೀನು, ಅಂಗಡಿ, ಹೋಟಲು, ಕಬ್ಬಿಣದ ಸೂರುಳ್ಳ ಮನೆ, ಕಟ್ಟಿಗೆ, ತನ್ನ ಉತ್ತರಾಧಿಕಾರಿ - ಎಲ್ಲ ನೆನಪಿಗೆ ಬಂದವು. "ಅವನ್ನೆಲ್ಲ ಹೇಗೆ ಬಿಟ್ಟಿರುವುದು? ಇದಕ್ಕೇನು ಅರ್ಥ? ಹಾಗಾಗಬಾರದು!" ಮನಸ್ಸಿನಲ್ಲಿ ಈ ಆಲೋಚನೆಗಳೆಲ್ಲ ಹಾದುಹೋದುವು. ಆಮೇಲೆ ಅವನ ನೆನಪಿಗೆ ಬಂದದ್ದು ಹಿಮದಲ್ಲಿ ತೊನೆದಾಡುತ್ತಿದ್ದ ಮಾಚಿಪತ್ರೆ ಗಿಡಗಳು; ಅವುಗಳನ್ನು ಅವನು ಎರಡು ಬಾರಿ ಹಾದು ಬಂದಿದ್ದ; ಅವನನ್ನು ಎಂಥ ಭಯ ಹಿಡಿದಿಟ್ಟಿತ್ತೆಂದರೆ ತನಗೆ ಆಗುತ್ತಿರುವುದು ನಿಜ ಎಂಬ ಬಗ್ಗೆ ಅವನಿಗೆ ನಂಬಿಕೆ ಬಾರದಾಯಿತು. "ಇದೇನು ಕನಸೇ?" ಎನ್ನಿಸಿ ಎಚ್ಚರಗೊಳ್ಳಲು ಪ್ರಯತ್ನಿಸಿ ವಿಫಲನಾದ. ಮುಖಕ್ಕೆ ರಾಚಿ, ತನ್ನನ್ನಾವರಿಸಿ, ಗವಸು ಕಳಚಿಹೋಗಿದ್ದ ಬಲಗೈ ಚಳಿ ಹೆಚ್ಚಿದಾಗ ಇದು ನಿಜವಾದ ಹಿಮ ಅನ್ನಿಸಿತು; ಇದು ನಿಜವಾದ ಹಿಮಭೂಮಿ, ತಾನಲ್ಲಿ ಮಾಚಿಪತ್ರೆ ಗಿಡದಂತೆ ಒಂಟಿಯಾಗಿ ಅನಿವಾರ್ಯವೂ ಶೀಘ್ರವೂ ಆದ ನಿರರ್ಥಕ ಸಾವನ್ನೆದುರಿಸುತ್ತಿರುವವನು ಎಂಬ ಅರಿವುಂಟಾಯಿತು.

"ಸ್ವರ್ಗದ ರಾಣಿಯೇ, ಸಂಯಮ ಬೋಧಿಸಿದ ಫಾದರ್ ನಿಕೊಲಸ್‌ನೇ!" ಎಂದುಕೊಂಡ, ಹಿಂದಿನ ದಿನ ನಡೆದ ಪ್ರಾರ್ಥನೆಯ ಸನ್ನಿವೇಶ, ಕಪ್ಪು ಮುಖ ಹೊಳಪಿನ ಚೌಕಟ್ಟಿನ ಅಲ್ಲಿದ್ದ ಪವಿತ್ರ ವಿಗ್ರಹ, ಆ ವಿಗ್ರಹದೆದುರು ಹೊತ್ತಿಸಿಡಲು ತಾನು ಮಾರಿದ್ದ ಮೇಣದ ಬತ್ತಿಗಳು, ಸ್ವಲ್ಪವೂ ಉರಿಯದ ಅವುಗಳನ್ನು ತಕ್ಷಣ ತನ್ನ ಬಳಿಗೆ ವಾಪಸು ತಂದದ್ದು, ಅವುಗಳನ್ನೆಲ್ಲ ತನ್ನ ಉಗ್ರಾಣದಲ್ಲಿರಿಸಿದ್ದು? ಎಲ್ಲ ನೆನಪಿಗೆ ಬಂದುವು. ತನ್ನನ್ನು ಕಾಪಾಡಬೇಕೆಂದು ಪವಾಡ ಪುರುಷ ನಿಕೊಲಸ್ ಅನ್ನು ಪ್ರಾರ್ಥಿಸತೊಡಗಿದ, ಕೃತಜ್ಞತಾ ಪೂಜೆ ಸಲ್ಲಿಸಿ ಕೆಲವು ಮೇಣದ ಬತ್ತಿಗಳನ್ನು ನೀಡುವುದಾಗಿ ಹರಕೆ ಹೊತ್ತ. ಆದರೆ ಆ ವಿಗ್ರಹ, ಅದರ ಚೌಕಟ್ಟು, ಮೇಣದ ಬತ್ತಿಗಳು, ಪುರೋಹಿತರು, ಕೃತಜ್ಞತಾಪೂಜೆ? ಇವೆಲ್ಲ ಚರ್ಚ್‌ನಲ್ಲಿ ಬಹು ಮುಖ್ಯವಾದುವಾದರೂ, ತನಗೆ ಅವು ಏನೂ

ಮಾಡಲಾರವು; ಅಲ್ಲದೆ ಮೇಣದ ಬತ್ತಿಗಳು ಹಾಗೂ ಪೂಜೆಗಳಿಗೂ ತನ್ನ ಈಗಿನ ದುರವಸ್ಥೆಗೂ ಏನೇನೂ ಸಂಬಂಧವಿರಲಾರದೆಂಬುದು ಅವನಿಗೆ ಸ್ಪಷ್ಟವಾಗಿಯೂ ನಿಸ್ಸಂಶಯವಾಗಿಯೂ ಅರ್ಥವಾಗಿತ್ತು. "ನಾನು ನಿರಾಶನಾಗಬಾರದು! ಹಿಮದಲ್ಲಿ ಹುದುಗಿಹೋಗುವ ಮುಂಚೆಯೇ ನಾನೀಗ ಕುದುರೆಯ ಜಾಡನ್ನು ಹಿಡಿದು ಹೋಗಬೇಕು. ಅದು ನನಗೆ ದಾರಿ ತೋರಿಸುತ್ತದೆ, ಅಥವಾ ಅದನ್ನು ನಾನು ಹಿಡಿಯಬೇಕು. ಯಾವುದಕ್ಕೂ ಆತುರಪಡಬಾರದು, ಹಾಗೇನಾದ್ರೂ ಮಾಡಿದ್ರೆ ಹಿಮದಲ್ಲಿ ಹೂತುಹೋಗಿ ಮತ್ತಷ್ಟು ಕಷ್ಟಕ್ಕೆ ಸಿಕ್ಕಿಹಾಕ್ಕೋತೀನಿ."

ಸಮಚಿತ್ತತೆಯಿಂದ ಹೋಗಬೇಕೆಂದು ನಿರ್ಧರಿಸಿದರೂ, ಜೋರಾಗಿ ಹೆಜ್ಜೆ ಹಾಕುವುದಷ್ಟೇ ಅಲ್ಲ, ಓಡಲೂ ತೊಡಗಿದ; ಹೀಗಾಗಿ ಮತ್ತೆ ಮತ್ತೆ ಕುಸಿಯುತ್ತಿದ್ದ. ಆ ಹೊತ್ತಿಗಾಗಲೇ ಕುದುರೆಯ ಗೊರಸು ಗುರುತುಗಳು ಹಿಮ ದಟ್ಟವಾಗಿ ಬಿದ್ದಿರದ ಕಡೆಗಳಲ್ಲಿಯೂ ಅಲ್ಲಲ್ಲಿ ಅಳಿಸಿಹೋಗಿದ್ದುವು. "ನಾನು ಕೆಟ್ಟೆ! ಗುರುತು ಪತ್ತೆ ಆಗಲಾರದು, ಕುದುರೆಯನ್ನು ಹಿಡಿಯಲಾರೆ" ಎಂದುಕೊಂಡ ವಾಸಿಲಿ ಆಂಡ್ರೆವಿಚ್. ಆದರೆ ಆ ಹೊತ್ತಿಗೆ ಸರಿಯಾಗಿ ಕಪ್ಪಗೆ ಏನೋ ಕಾಣಿಸಿತು. ನೋಡಿದರೆ, ಮುಖೋರ್ಟಿ! ಅಷ್ಟೇ ಅಲ್ಲ, ಜೊತೆಗೆ ಮೂಕಿ, ಅದರ ತುದಿಗೆ ಕಟ್ಟಿದ್ದ ಕರ್ಚೀಫ್ ಸಮೇತ ಜಾರುಬಂಡಿ ಕೂಡ. ಗೋಣಿತಾಟು ಮತ್ತು ಒಂದು ಕಡೆ ತಿರುಚಿಕೊಂಡಿದ್ದ ಪಿರ್ರೆಯ ಪಟ್ಟಿಗಳು. ಮುಖೋರ್ಟಿ ನಿಂತಿದ್ದುದು ಹಿಂದಿದ್ದ ಜಾಗದಲ್ಲಲ್ಲ, ಮೂಕಿಯ ಹತ್ತಿರ; ತಾನು ಪಾದಗಳನ್ನಿರಿಸಿಕೊಂಡಿದ್ದ ಲಗಾಮುಗಳು ಜಾರುತ್ತಿರಲು ಕುದುರೆ ತಲೆಯನ್ನು ಕೊಡವುತ್ತಿದೆ. ನೋಡಿದರೆ, ಹಿಂದೆ ನಿಕಿಟ ಕುಸಿದುಬಿದ್ದಿದ್ದ ಹಿಮದ ಗುಂಡಿಯಲ್ಲೇ ತಾನೀಗ ಬಿದ್ದಿದ್ದುದು ಎಂಬ ಅರಿವು ವಾಸಿಲಿ ಆಂಡ್ರೆವಿಚ್‌ಗೆ ಉಂಟಾಯಿತು. ಮುಖೋರ್ಟಿ ತನ್ನನ್ನೀಗ ಹೊರಟ ಎಡೆಗೇ ಜಾರುಬಂಡಿಯ ಹತ್ತಿರ ಕರೆತಂದಿತ್ತು, ತಾನು ಕುದುರೆಯಿಂದ ಕೆಳಗೆ ಬಿದ್ದಿದ್ದುದು ಈ ಜಾಗದಿಂದ ಕೇವಲ ಐವತ್ತು ಹೆಜ್ಜೆಗಳಷ್ಟು ದೂರ, ಅಷ್ಟೆ!

## 9

ಮತ್ತೆ ಸ್ಲೆಜ್ ಬಳಿಗೇ ಬಂದ ವಾಸಿಲಿ ಆಂಡ್ರೆವಿಚ್ ಅದನ್ನು ಹಿಡಿದುಕೊಂಡು, ಉಸಿರು ತೆಗೆದುಕೊಳ್ಳಲು ಹಾಗೂ ಸಮಸ್ಥಿತಿಗೆ ಬರಲು, ಸುಮಾರು ಹೊತ್ತು ಅಲ್ಲಾಡದೆ ನಿಂತುಕೊಂಡ. ನಿಕಿಟ ತನ್ನ ಮೊದಲಿನ ಜಾಗದಲ್ಲಿರಲಿಲ್ಲ, ಆದರೆ ಆಗಲೇ ಹಿಮ ಮುಸುಕಿದ್ದ ಏನೋ ಒಂದು ಜಾರುಬಂಡಿಯಲ್ಲಿ ಮುದುರಿಕೊಂಡಿತ್ತು, ಅದು ನಿಕಿಟನೇ ಇರಬೇಕೆಂದು ವಾಸಿಲಿ ಆಂಡ್ರೆವಿಚ್ ತೀರ್ಮಾನಿಸಿದ. ಅವನ ಭಯಾನಕತೆ ಈಗ ದೂರವಾಗಿತ್ತು, ಅದೇನಾದರೂ ಉಳಿದುಕೊಂಡಿದ್ದರೆ ಕುದುರೆಯ ಮೇಲೆ ಹೋಗುವಾಗ ಅದರಲ್ಲೂ ಹಿಮದ ಕುಳಿಯಲ್ಲಿ ತಾನೊಬ್ಬನೇ ಬಿದ್ದಾಗ ಆಗಿದ್ದ ಹಿಂದಿನ ಭಯಾನಕತೆ ಮತ್ತೆ ಮರುಕಳಿಸೀತೆಂಬುದರ ಬಗ್ಗೆ. ಏನಾದರಾಗಲೀ ಆ ಭಯಾನಕತೆ ಮತ್ತೆ ಕಾಣಿಸಿಕೊಳ್ಳಬಾರದಿತ್ತು, ಅದನ್ನು ದೂರಸರಿಸಲು ತಾನೀಗ ಏನಾದರೂ

ಮಾಡಬೇಕಾಗಿತ್ತು - ಯಾವುದರಲ್ಲಾದರೂ ತೊಡಗಿಸಿಕೊಳ್ಳಬೇಕು. ಅವನು ಮಾಡಿದ ಮೊದಲ ಕೆಲಸವೆಂದರೆ ಗಾಳಿಗೆ ಬೆನ್ನೊಡ್ಡಿ ನಿಂತು ತನ್ನ ತುಪ್ಪುಳುಕೋಟನ್ನು ಸಡಿಲಿಸಿಕೊಂಡದ್ದು. ಮತ್ತೆ ಉಸಿರನ್ನು ಸಲೀಸುಗೊಳಿಸಿಕೊಂಡ ಮೇಲೆ ತನ್ನ ಬೂಟುಗಳಲ್ಲಿ ಹಾಗೂ ಎಡ ಗವಸಿನಲ್ಲಿ (ಅವನ ಬಲ ಗವಸು ಎಲ್ಲೋ ಕಳೆದುಹೋಗಿತ್ತು, ಪ್ರಾಯಶಃ ಹಿಮದಲ್ಲಿ ಹೂತುಹೋಗಿದ್ದಿರಬೇಕು) ತುಂಬಿಕೊಂಡಿದ್ದ ಹಿಮವನ್ನು ಕೊಡವಿಕೊಂಡ. ಆಮೇಲೆ ಅಂಗಡಿಯಿಂದ ಹೊರಟು ರೈತರಲ್ಲಿ ದವಸವನ್ನು ಕೊಳ್ಳಲು ಹೋಗುವಾಗಿನ ಅಭ್ಯಾಸಬಲದಂತೆ ತನ್ನ ಸೊಂಟಪಟ್ಟಿಯನ್ನು ಕೆಳಕ್ಕೆ ಸರಿಸಿ ಬಿಗಿಗೊಳಿಸಿಕೊಂಡು ಕಾರ್ಯಪ್ರವೃತ್ತನಾಗಲು ಸಿದ್ಧನಾದ. ಅವನಿಗೆ ತೋಚಿದ ಮೊದಲ ಕೆಲಸವೆಂದರೆ ಮುಖೋರ್ಟಿಯ ಕಾಲನ್ನು ಲಗಾಮುಗಳಿಂದ ಬಿಡಿಸುವುದು. ಆ ಕೆಲಸ ಮಾಡಿ, ಮೊದಲಿದ್ದಂತೆಯೇ ಕುದುರೆಯನ್ನು ಜಾರುಬಂಡಿಯ ಮುಂಭಾಗದಲ್ಲಿದ್ದ ಕಬ್ಬಿಣದ ಸಲಾಕಿಗೆ ಕಟ್ಟಿಹಾಕಿ, ಪಿರ್ರೆಯ ಪಟ್ಟಿಯನ್ನು ಸರಿಯಾಗಿ ಮಾಡಿ, ಹಾಸುಗಂಬಳಿಯಿಂದ ಅದರ ಬೆನ್ನಿಗೆ ಹೊದಿಸಿದ. ಆದರೆ ಆ ಹೊತ್ತಿಗೆ ಸ್ಲೆಜ್‌ನಲ್ಲಿ ಏನೋ ಮಿಸುಕಾಡುತ್ತಿರುವಂತೆ ಕಾಣಿಸಿತು; ನಿಕಿಟನ ತಲೆ ಮುಸುಕಿದ್ದ ಹಿಮದಿಂದ ಮೇಲಕ್ಕೆದ್ದು ಕಾಣಿಸಿತು. ಅರ್ಧ ಹೆಪ್ಪುಗಟ್ಟಿದ್ದ ನಿಕಿಟ ತುಂಬ ಕಷ್ಟಪಟ್ಟು ಮೇಲೆದ್ದು ವಿಚಿತ್ರವಾಗಿ ನೊಣಗಳನ್ನು ಓಡಿಸುವ ರೀತಿಯಲ್ಲಿ ತನ್ನ ಮೂಗಿನ ಮುಂದೆ ಕೈಯನ್ನು ತಂದುಕೊಂಡ. ತನ್ನ ಕೈಯಾಡಿಸಿ ಏನೋ ಹೇಳಿದ, ತನ್ನನ್ನು ಅವನು ಕರೆಯುತ್ತಿರುವನೆಂಬ ಭಾವನೆ ವಾಸಿಲಿ ಆಂಡ್ರೆವಿಚ್‌ಗಾಯಿತು. ಇನ್ನೂ ಅಸ್ತವ್ಯಸ್ತವಾಗಿದ್ದ ತನ್ನ ಬಟ್ಟೆಗಳನ್ನು ಸರಿಪಡಿಸಿಕೊಳ್ಳದೆ ಅವನು ಜಾರುಬಂಡಿಯ ಬಳಿ ಹೋದ.

"ಏನದು? ಏನು ಹೇಳಿದೆ ನೀನು?"

"ನಾನು ಸಾ ... ಯ್ತಿದ್ದೀನಿ, ಅಷ್ಟೆ. ನನಗೆ ಕೊಡಬೇಕಾಗಿರೋ ... ಬಾಕಿಯನ್ನು ನನ್ನ ಮಗನಿಗೆ ಕೊಟ್ಬಿಡಿ, ... ಅಥ್ವಾ ... ಹೆಂಡತಿಗೆ ... ಕೊಟ್ಟರೂ ... ಪರವಾಯಿಲ್ಲ" ಎಂದ ನಿಕಿಟ ಬಿಟ್ಟು ಬಿಟ್ಟು, ತುಂಬ ಕಷ್ಟಪಟ್ಟು.

"ಯಾಕೆ, ನಿಜವಾಗ್ಲೂ ಹೆಪ್ಪುಗಟ್ಟಿಹೋಗಿದ್ದೀಯಾ?" ಎಂದು ವಿಚಾರಿಸಿದ ವಾಸಿಲಿ ಆಂಡ್ರೆವಿಚ್.

"ಇದು ನನ್ನ ಸಾವು ಅಂತ ಅನ್ನಿಸ್ತಿದೆ. ನನ್ನ ಕ್ಷಮಿಸಿಬಿಡಿ ..." ಎಂದ ನಿಕಿಟ ಅಳು ಬೆರೆತ ದನಿಯಲ್ಲಿ, ಮುಖದ ಮುಂದಿನ ನೊಣಗಳನ್ನು ಓಡಿಸುವ ರೀತಿಯಲ್ಲಿ ಕೈಯಾಡಿಸುತ್ತ.

ವಾಸಿಲಿ ಆಂಡ್ರೆವಿಚ್ ಮೂಕನಾಗಿ ಸುಮ್ಮನೆ ನಿಂತ ಒಂದರೆಕ್ಷಣ. ಆಮೇಲೆ ಇದ್ದಕ್ಕಿದ್ದಂತೆ - ಒಳ್ಳೆಯ ವ್ಯಾಪಾರ ಮಾಡುವಾಗ ಕೈಗಳನ್ನು ಹೊಡೆದುಕೊಳ್ಳುವಂತೆ - ನಿರ್ಧಾರದಿಂದ ಒಂದು ಹೆಜ್ಜೆ ಹಿಂದೆ ಸರಿದು ತನ್ನ ತೋಳನ್ನು ಹಿಂದೆ ಸರಿಸಿಕೊಂಡು ನಿಕಿಟನನ್ನು ಮುಸುಕಿದ್ದ ಹಾಗೂ ಸ್ಲೆಜ್‌ನಲ್ಲಿದ್ದ ಹಿಮವನ್ನು ತೊಡೆದು ಹಾಕಿದ. ಇಷ್ಟು

ಮಾಡಿ ತರಾತುರಿಯಿಂದ ತನ್ನ ಸೊಂಟಪಟ್ಟಿಯನ್ನು ತೆಗೆದು, ಫರ್ ಕೋಟನ್ನು ತೆಗೆದು, ನಿಕಿಟನನ್ನು ಕೆಳಗೆ ತಳ್ಳಿ ಅವನ ಮೇಲೆ ಮಲಗಿ, ಫರ್ ಕೋಟ್ ಮಾತ್ರವಲ್ಲ, ಬಿಸುಪಿನಿಂದ ಕೂಡಿದ್ದ ತನ್ನ ಇಡೀ ದೇಹದಿಂದ ಅವನನ್ನು ಮುಸುಕಿದ. ತನ್ನ ಕೋಟಿನ ಚುಂಗುಗಳನ್ನು ಸರಿಸಿ ನಿಕಿಟ ಮತ್ತು ಸ್ಲೆಜ್‌ನ ಬದಿಗಳಿಗೆ ಕಟ್ಟಿ, ತನ್ನ ಮೊಣಕಾಲುಗಳಿಂದ ಅವುಗಳನ್ನು ಹಿಡಿದುಕೊಂಡು ವಾಸಿಲಿ ಆಂಡ್ರೆವಿಚ್ ಹಾಗೇ ಮುಖಡಿಯಾಗಿ ಮಲಗಿದ. ಇಷ್ಟು ಆದಾಗ ಅವನಿಗೆ ಕುದುರೆಯ ಸದ್ದು ಕೇಳಿಸಲಿಲ್ಲ, ಗಾಳಿಯ ಶಿಳ್ಳೆಯೂ ಕೇಳಿಸಲಿಲ್ಲ, ಕೇಳಿಸುತ್ತಿದ್ದುದು ನಿಕಿಟ ಉಸಿರಾಟದ ಸದ್ದು ಮಾತ್ರ. ಮೊದಲು ದೀರ್ಘ ಕಾಲ ಚಲನೆಯಿಲ್ಲದೆ ಮಲಗಿದ್ದ ನಿಕಿಟ, ಆನಂತರ ನೀಳವಾದ ಉಸಿರುಬಿಟ್ಟು ಅಲ್ಲಾಡಿದ.

"ನೋಡಿದ್ಯಾ, ಸಾಯ್ತಿದ್ದೀನಿ ಅಂದ್ಯಲ್ಲ! ಹಾಗೇ ಮಲಗಿಕೊಂಡು ಬೆಚ್ಚಗಾಗು, ಇರಬೇಕಾದ್ದು ಹೀಗೆ!" ಎಂದು ವಾಸಿಲಿ ಆಂಡ್ರೆವಿಚ್ ಶುರುಮಾಡಿದ.

ಆದರೆ ತನಗೇ ಅಚ್ಚರಿಯಾಗವಂತೆ ಮುಂದೇನೂ ಮಾತನಾಡಲಾಗಲಿಲ್ಲ, ಅವನ ಕಣ್ಣುಗಳಲ್ಲಿ ನೀರು ತುಂಬಿ ಕೆಳದವಡೆ ಜೋರಾಗಿ ಬಡಿದುಕೊಳ್ಳತೊಡಗಿತು. ಮಾತನಾಡುವುದನ್ನು ನಿಲ್ಲಿಸಿ ತನ್ನ ಗಂಟಲಲ್ಲಿನ ಉಗುಳನ್ನು ನುಂಗಿಕೊಂಡ. "ನಾನು ತುಂಬ ಭಯದಿಂದ ತತ್ತರಿಸಿಹೋಗಿ ದುರ್ಬಲನಾದೆ" ಎಂದುಕೊಂಡ. ಆದರೆ ಈ ದೌರ್ಬಲ್ಯ ಅಸಂತೋಷಕರವಲ್ಲದ್ದು ಮಾತ್ರವಲ್ಲದೆ ಅವನಿಗೆ ವಿಶಿಷ್ಟವಾದೊಂದು ಸಂತೋಷವನ್ನೂ ನೀಡಿತ್ತು, ಅಂಥ ಅನುಭವ ಅವನಿಗೆ ಹಿಂದೆಂದೂ ಆಗಿರಲಿಲ್ಲ.

"ಇರಬೇಕಾದ್ದು ಹೀಗೆ!" ಅಂದುಕೊಂಡ ಅವನಿಗೆ ಅಪರೂಪವೂ ವಿಸ್ಮಯಕರವೂ ಆದ ಮೃದುತೆಯ ಅನುಭವ ಉಂಟಾಯಿತು. ತುಂಬ ಹೊತ್ತು ಹಾಗೆಯೇ ಮಲಗಿದ್ದ ಅವನು, ತನ್ನ ಕೋಟಿನ ತುಪ್ಪುಳಕ್ಕೆ ಕಣ್ಣುಗಳೊನ್ನರೆಸಿಕೊಂಡು, ಗಾಳಿ ಸಡಿಲಗೊಳಿಸಿದ್ದ ಬಲಭಾಗದ ಚುಂಗನ್ನು ಮೊಳಕಾಲಿಗೆ ಸಿಕ್ಕಿಸಿಕೊಂಡ.

ತನ್ನ ಆನಂದದ ಅನುಭವವನ್ನು ಯಾರಿಗಾದರೂ ಹೇಳಿಕೊಳ್ಳಬೇಕೆಂಬ ಬಲವಾದ ತುಡಿತ ಅವನಲ್ಲುಂಟಾಯಿತು. "ನಿಕಿಟ!" ಎಂದ.

"ಈಗ ಹಾಯಾಗಿದೆ, ಬೆಚ್ಚಗಿದೆ!" ಕೆಳಗಿನಿಂದ ದನಿ ಹೊರಬಿತ್ತು.

"ನೋಡು, ಗೆಳೆಯ, ನಾನು ಹಾಳಾಗಿ ಹೋಗ್ತಿದ್ದೆ. ನೀನು ಹೆಪ್ಪುಗಟ್ಟಿಬಿಡ್ತಿದ್ದೆ, ನಾನು .. .."

ಮತ್ತೆ ಅವನ ದವಡೆ ಕಂಪಿಸಿತು, ಕಣ್ಣುಗಳಲ್ಲಿ ಹನಿಗಟ್ಟಿದವು, ಮುಂದೇನೂ ಮಾತನಾಡಲಾಗಲಿಲ್ಲ.

"ಆದದ್ದಾಯಿತು. ನನಗೆ ನನ್ನ ಬಗ್ಗೆ ವಿಚಾರ ತಿಳಿಯಿತು" ಎಂದುಕೊಂಡ.

ಸುಮ್ಮನಾಗಿ, ಹಾಗೆ ಬಹು ಕಾಲ ಮಲಗಿದ್ದ.

ಅವನನ್ನು ನಿಕಿಟ ಕೆಳಗಿನಿಂದ ಬಿಸಿಪುಗೊಳಿಸಿದ್ದರೆ, ತುಪ್ಪುಳು ಕೋಟು ಮೇಲಿನಿಂದ

ಬೆಚ್ಚಗಿರಿಸಿತ್ತು. ನಿಕಿಟನ ಪಕ್ಕಗಳಲ್ಲಿ ಸುತ್ತಲೂ ಕೋಟಿನ ಚುಂಗುಗಳನ್ನು ಮುಚ್ಚಿದ್ದ ಹಾಗೂ ಗಾಳಿಯಿಂದಾಗಿ ಹೊದಿಕೆ ಕಳಚಿದ್ದ ಕಾಲುಗಳು ಚಳಿಗುಟ್ಟಲು ತೊಡಗಿದುವು, ಅದರಲ್ಲೂ ಗವಸು ಇಲ್ಲದಿದ್ದ ಬಲಗೈ. ತನ್ನ ಕಾಲುಗಳ ಬಗ್ಗೆಯಾಗಲೀ ಕೈಗಳ ಬಗ್ಗೆಯಾಗಲೀ ಅವನಿಗೆ ಯೋಚನೆ ಬರಲಿಲ್ಲ, ಅವನ ತಲೆಯಲ್ಲಿ ಸುಳಿಯುತ್ತಿದ್ದ ಯೋಚನೆಯೆಂದರೆ ತನ್ನ ಕೆಳಗೆ ಮಲಗಿದ್ದ ಬಡಪಾಯಿಯನ್ನು ಹೇಗೆ ಬೆಚ್ಚಗಿರಿಸುವುದೆಂಬ ಪ್ರಶ್ನೆ. ಮುಖೋರ್ಟಿಯ ಕಡೆ ಅನೇಕ ವೇಳೆ ಅವನ ಗಮನ ಹರಿದಿತ್ತು, ಪಾಪ ಅದರ ಬೆನ್ನ ಮೇಲೆ ಹೊದಿಕೆಯಿಲ್ಲದಿರುವುದು ಅವನ ಕಣ್ಣಿಗೆ ಬಿತ್ತು; ಹಾಸುಗಂಬಳಿ ಮತ್ತು ಪಿರ್ರೆಯ ಪಟ್ಟಿಗಳು ಹಿಮದಲ್ಲಿ ಬಿದ್ದಿದ್ದುವು. ತಾನೇ ಮೇಲೆದ್ದು ಅದಕ್ಕೆ ಹೊದಿಸಬೇಕಾಗಿತ್ತು, ಆದರೆ ನಿಕಿಟನನ್ನು ಬಿಟ್ಟೇಳಲು ಮನಸ್ಸು ಬರಲಿಲ್ಲ, ಕ್ಷಣಮಾತ್ರವಾದರೂ ತಾನಿದ್ದ ಆನಂದದ ಅನುಭವವನ್ನು ಕದಡಲು ಅವನು ಇಷ್ಟಪಡಲಿಲ್ಲ. ಅವನ ಮನಸ್ಸಿನಲ್ಲಿ ಭಯದ ಲೇಶವಾದರೂ ಉಳಿದಿರಲಿಲ್ಲ.

"ಇನ್ನು ಭಯವಿಲ್ಲ, ಈ ಸಲ ಅವನನ್ನು ಕಳೆದುಕೊಳ್ಳಬಾರದು!" ಎಂದುಕೊಂಡ, ನಿಕಿಟನನ್ನು ಬೆಚ್ಚಗಿರಿಸಿರುವುದನ್ನು ನೆನೆದು, ವ್ಯವಹಾರದಲ್ಲಿ ತನ್ನ ಚಾಕಚಕ್ಯತೆಯ ಬಗ್ಗೆ ಹೆಮ್ಮೆಪಟ್ಟಂತೆಯೇ.

ಆ ರೀತಿ ವಾಸಿಲಿ ಆಂಡ್ರೆವಿಚ್ ಒಂದು ಗಂಟೆ, ಎರಡು, ಮೂರು ಗಂಟೆಗಳ ಕಾಲ ಮಲಗಿದ್ದ, ಅವನಿಗೆ ಕಾಲ ಸರಿದದ್ದೇ ಗೊತ್ತಾಗಲಿಲ್ಲ. ಹಿಮಗಾಳಿ, ಜಾರುಬಂಡಿಯ ಮೂಕಿ, ತನ್ನ ಕಣ್ಣೆದುರಿಗೆ ಕಾಣಿಸಿದ್ದ ಮೂಕಿತುದಿಯ ಅಲುಗಾಟ? ಇವೆಲ್ಲ ಮೊದಮೊದಲು ಅವನ ಮನಸ್ಸಿನಲ್ಲಿ ಸುಳಿದುಹೋದುವು, ಆಮೇಲೆ ನೆನಪಿಗೆ ಬಂದದ್ದು ತನ್ನ ಕೆಳಗೆ ಮಲಗಿದ್ದ ನಿಕಿಟ, ಆಮೇಲೆ ಹಬ್ಬ, ತನ್ನ ಹೆಂಡತಿ, ಪೊಲೀಸ್ ಅಧಿಕಾರಿ, ಮೇಣದ ಬತ್ತಿಗಳ ಪೆಟ್ಟಿಗೆ? ಇವೆಲ್ಲ ಬೆಸೆದುಕೊಳ್ಳತೊಡಗಿದುವು. ಮತ್ತೆ ನೆನಪಾದದ್ದು, ಆಮೇಲೆ ಪೆಟ್ಟಿಗೆಯ ಕೆಳಗೆ ಮಲಗಿದ ನಿಕಿಟ, ಆನಂತರ ರೈತರು, ಗಿರಾಕಿಗಳು ಮತ್ತು ವ್ಯಾಪಾರಿಗಳು, ಆಮೇಲೆ ಬಿಳಿಪು ಗೋಡೆಗಳ ಕಬ್ಬಿಣದ ಸೂರಿನ ತನ್ನ ಮನೆಯ ಕೆಳಗೆ ಮಲಗಿದ ನಿಕಿಟ? ಎಲ್ಲ ಅವನ ಕಲ್ಪನೆಯಲ್ಲಿ ಸುಳಿದಾಡಿದುವು. ಕಾಮನಬಿಲ್ಲಿನ ಬಣ್ಣಗಳೆಲ್ಲ ಅಂತಿಮವಾಗಿ ಬಿಳಿಯಲ್ಲಿ ಸೇರಿಹೋಗುವಂತೆ ಆಮೇಲೆ ಈ ಅನಿಸಿಕೆಗಳೆಲ್ಲ ಒಂದು ಶೂನ್ಯದಲ್ಲಿ ಸೇರಿಹೋಗಿ ನಿದ್ರೆಯಲ್ಲಿ ಮುಳುಗಿದ.

ನಿಡುಗಾಲ ಯಾವುದೇ ಕನಸುಗಳಿಲ್ಲದೆ ಅವನು ನಿದ್ರಿಸಿದ, ಆದರೆ ಬೆಳಗಿನ ಜಾವಕ್ಕೆ ನಸು ಮುಂಚೆ ಕಲ್ಪನೆಗಳು ಮರುಕಳಿಸಲು ತೊಡಗಿದುವು. ತಾನು ಮೇಣದ ಬತ್ತಿಗಳ ಪೆಟ್ಟಿಗೆಯ ಪಕ್ಕದಲ್ಲಿ ನಿಂತಂತೆಯೂ, ತಿಖೋನ್‌ನ ಹೆಂಡತಿ ಚರ್ಚ್ ಹಬ್ಬಕ್ಕಾಗಿ ಐದು ಕೊಪೆಕ್‌ಗೆ ಮೇಣದ ಬತ್ತಿಯನ್ನು ಕೇಳಿದಂತೆಯೂ ಅವನಿಗೆ ಅನುಭವವಾಯಿತು. ಒಂದು ಮೇಣದ ಬತ್ತಿಯನ್ನು ತೆಗೆದು ಕೊಡಬೇಕೆಂದು ಅವನಿಗನ್ನಿಸಿತು, ಆದರೆ ಕೈಗಳೇ ಮೇಲೇಳಲಿಲ್ಲ, ಕೈಗಳು ಕೋಟು ಜೇಬುಗಳಲ್ಲಿ ಭದ್ರವಾಗಿದ್ದುವು. ಪೆಟ್ಟಿಗೆಯ ಸುತ್ತ ಸುಳಿದಾಡಬೇಕೆನಿಸಿತು, ಆದರೆ ಕಾಲುಗಳು ಅಲುಗಾಡಲಿಲ್ಲ. ಶುಭ್ರವಾದ

ಗೋಲೋಶ್‌ಗಳು ಕಲ್ಲಿನ ನೆಲಗಟ್ಟಿಗೆ ಅಂಟಿಕೊಂಡಿದ್ದುವು, ಅದನ್ನು ಮೇಲೆತ್ತಲಾಗಲೀ ಅವುಗಳಿಂದ ಕಾಲುಗಳನ್ನು ಹೊರತೆಗೆಯಲಾಗಲೀ ಸಾಧ್ಯವಾಗಲಿಲ್ಲ. ಆಮೇಲೆ ಇದ್ದಕ್ಕಿದ್ದಂತೆ ಮೇಣದ ಬತ್ತಿಯ ಪೆಟ್ಟಿಗೆ ಪೆಟ್ಟಿಗೆಯಾಗಿರದೆ ಹಾಸಿಗೆಯಾಗಿಬಿಟ್ಟಿತ್ತು. ಆಗ ತಾನು ಮನೆಯ ಹಾಸಿಗೆಯ ಮೇಲೆ ಮಲಗಿರುವಂತೆ ಅನುಭವವಾಯಿತು. ಮಲಗಿದ್ದರೂ ಮೇಲೇಳಲು ಸಾಧ್ಯವಾಗಲಿಲ್ಲ. ಏಳಲೇಬೇಕಾಗಿತ್ತು, ಯಾಕೆಂದರೆ ಪೊಲೀಸ್ ಅಧಿಕಾರಿ ಇವಾನ್ ಮ್ಯಾಟ್ವೀಚ್ ಇಷ್ಟರಲ್ಲೇ ತನ್ನನ್ನು ಬಂದು ಕಾಣುವವನಿದ್ದ, ಕಾಡಿನ ಬಗ್ಗೆ ಚೌಕಾಶಿ ಮಾಡುವುದಕ್ಕೋ ಮುಖ್ತೋರ್ಟಿಯ ಪಟ್ಟಿಗಳನ್ನು ಸರಿಪಡಿಸಲೋ ತಾನವನೊಡನೆ ಹೋಗಬೇಕಾಗಿತ್ತು.

ತನ್ನ ಹೆಂಡತಿಯನ್ನು, "ನಿಕೊಲಯೇವ್ನಾ, ಅವರಿನ್ನೂ ಬಂದಿಲ್ವಾ?" ಎಂದು ಕೇಳಿದ, "ಉಹ್ಞೂ, ಬಂದಿಲ್ಲ" ಎಂದುತ್ತರಿಸಿದಳು ಆಕೆ. ಯಾರೋ ತನ್ನ ಮನೆಯ ಮುಂದೆ ಗಾಡಿಯಲ್ಲಿ ಬಂದಂತಾಯಿತು. "ಅವರೇ ಇರ್ಬೇಕು." "ಅಲ್ಲ, ಗಾಡಿ ಮುಂದೆ ಹೋಯ್ತು." "ನಿಕೊಲಯೇವ್ನಾ, ನಿನ್ನೇ ಕೇಳ್ತಿರೋದು, ಅವರಿನ್ನೂ ಬರಲಿಲ್ಲ?" "ಉಹ್ಞೂ." ಅವನಿನ್ನೂ ಹಾಸಿಗೆಯಲ್ಲೇ ಮಲಗಿದ್ದ, ಮೇಲೇಳಲು ಆಗುತ್ತಿರಲಿಲ್ಲ, ಆದರೆ ಕಾಯುತ್ತಲೇ ಇದ್ದ. ಈ ಕಾಯುವಿಕೆ ವಿಲಕ್ಷಣವಾದ್ದು, ಆದರೂ ಸಂತೋಷ ದಾಯಕವಾದ್ದು. ಆಮೇಲೆ ಇದ್ದಕ್ಕಿದ್ದಂತೆ ಅವನ ಸಂತೋಷ ಪೂರ್ಣಗೊಂಡಿತು; ತಾನು ನಿರೀಕ್ಷಿಸುತ್ತಿದ್ದವನು ಬಂದಿದ್ದ, ಆದರೆ ಪೊಲೀಸ್ ಅಧಿಕಾರಿ ಇವಾನ್ ಮ್ಯಾಟ್ವೀಚ್ ಅಲ್ಲ, ಬೇರೆ ಯಾರೋ? ಆದರೂ ತಾನು ನಿರೀಕ್ಷಿಸುತ್ತಿದ್ದುದು ಅವನನ್ನೇ. ಬಂದವನೇ ತನ್ನನ್ನು ಕರೆದ; ಅವನೇ ತನಗೆ ನಿಕಿಟನ ಮೇಲೆ ಮಲಗಲು ಹೇಳಿದ್ದವನು. ಅವನು ಬಂದನಲ್ಲ ಎಂದು ವಾಸಿಲಿ ಆಂಡ್ರೆವಿಚ್ ಸಂತಸಗೊಂಡ.

"ಇಗೋ ಬಂದೆ" ಎಂದ ಸಂತಸದಿಂದ, ಅದೇ ಕೂಗು ಅವನ್ನು ಎಚ್ಚರಗೊಳಿಸಿತು; ಆದರೆ ಅವನು ಎಚ್ಚರಗೊಂಡಾಗ ಬಂದಿದ್ದವನು ತಾನು ನಿದ್ದೆಮಾಡಲು ತೊಡಗಿದಾಗ ಬಂದಿದ್ದವನಲ್ಲವೇ ಅಲ್ಲ. ಮೇಲೆ ಏಳಲು ನೋಡಿದ, ಸಾಧ್ಯವಾಗಲಿಲ್ಲ; ತೋಳುಗಳನ್ನಾಡಿಸಲು ಪ್ರಯತ್ನಿಸಿದ, ಆಗಲಿಲ್ಲ, ಕಾಲುಗಳು ಕೂಡ ಮೇಲೇಳಲಾರದಾದುವು, ತಲೆ ತಿರುಗಿಸಲು ನೋಡಿದರೆ ಅದೂ ಆಗಲಿಲ್ಲ. ಅವನಿಗೆ ಅಚ್ಚರಿಯೆನೋ ಆಯಿತಾದರೂ ಇದರಿಂದ ತಳಮಳವೇನಾಗಲಿಲ್ಲ. ಇದು ಸಾವು ಎಂಬುದು ಅವನಿಗೆ ಮನವರಿಕೆಯಾಗಿತ್ತು, ಇದರಿಂದ ಕೂಡ ಅವನು ವಿಚಲಿತಗೊಳ್ಳಲಿಲ್ಲ. ನಿಕಿಟ ತನ್ನ ಕೆಳಗೆ ಮಲಗಿರುವುದೂ 'ಮೈ ಬೆಚ್ಚಗಾಗಿ ಅವನು ಬದುಕಿರುವುದೂ ನೆನಪಿಗೆ ಬಂತು. ತಾನೇ ನಿಕಿಟ ಮತ್ತು ನಿಕಿಟನೇ ತಾನು ಎಂಬಂತೆ, ತನ್ನ ಜೀವ ತನ್ನ ಮೈಯಲ್ಲಿಲ್ಲದೆ ನಿಕಿಟನಲ್ಲಿರುವಂತೆ ತೋರಿತು. ನಿಕಿಟನ ಉಸಿರಾಟವನ್ನು ಕಿವಿಗೊಟ್ಟು ಆಲಿಸಿದ, ಅವನು ಮೆಲ್ಲಗೆ ಗೊರಕೆ ಹೊಡೆಯುತ್ತಲೂ ಇದ್ದ. "ನಿಕಿಟ ಬದುಕಿದ್ದಾನೆ, ಹೀಗಾಗಿ ನಾನೂ ಬದುಕಿದ್ದೀನಿ!" ಎಂದು ಸಡಗರದಿಂದ ಅಂದುಕೊಂಡ.

ಅವನಿಗೆ ತನ್ನ ಹಣ, ಅಂಗಡಿ, ಮನೆ, ಕೊಡುವ-ಮಾರುವ ವ್ಯವಹಾರ,

ಮೊರ್ಡಿನೋವ್‌ನ ಕೋಟ್ಯಂತರ ಆಸ್ತಿ? ಎಲ್ಲ ನೆನಪಾಯಿತು. ವಾಸಿಲಿ ಬ್ರೆಖ್ಯುನೊವ್ ಎಂಬ ಹೆಸರಿನ ವ್ಯಕ್ತಿ ಇವೆಲ್ಲದರಿಂದ ಯಾಕೆ ಗಾಸಿಗೊಳಗಾಗಿದ್ದ ಎಂಬುದನ್ನು ಅರ್ಥಮಾಡಿಕೊಳ್ಳುವುದೇ ಅವನಿಗೆ ಕಷ್ಟವಾಯಿತು.

"ಯಾಕೆ ಅಂದ್ರೆ, ಅವನಿಗೆ ನಿಜವಾದದ್ದೇನು ಅಂತ ಅರ್ಥ ಆಗಿರ್ಲಿಲ್ಲ, ಅಷ್ಟೆ" ಎಂದು ವಾಸಿಲಿ ಬ್ರೆಖ್ಯುನೊವ್‌ಗೆ ಸಂಬಂಧಿಸಿದಂತೆ ಭಾವಿಸಿದ. "ಅವನಿಗೆ ಗೊತ್ತಿರ್ಲಿಲ್ಲ, ಆದರೆ ನನಗೀಗ ಗೊತ್ತಾಗಿದೆ, ಖಂಡಿತವಾಗಿ. ಈಗ ನನಗೆ ಗೊತ್ತು!" ಹಿಂದೆ ಕರೆದಿದ್ದವನ ಧ್ವನಿ ಮತ್ತೆ ಕೇಳಿಸಿತು. "ಇಗೋ ಬಂದೆ, ಬರ್ತಿದ್ದೀನಿ!" ಎಂದು ಸಂತೋಷದಿಂದ ಉತ್ತರಿಸಿದ, ಅವನ ಇರುವಿಕೆಯೆಲ್ಲ ಸಂತಸದಿಂದ ತುಂಬಿತ್ತು. ತನಗೀಗ ಬಿಡುಗಡೆ, ತನ್ನನ್ನು ಯಾವುದೂ ಹಿಂದಕ್ಕೆ ಸೆಳೆಯಲಾರದು ಎನಿಸಿತು. ಆಮೇಲೆ ಅವನು ಮತ್ತೇನನ್ನೂ ನೋಡಲಿಲ್ಲ, ಕೇಳಲಿಲ್ಲ, ಅಥವಾ ಬೇರೇನೂ ಅನ್ನಿಸಲಿಲ್ಲ.

ಸುತ್ತಲೂ ಇನ್ನೂ ಸುಳಿಹಿಮ ಆವರಿಸುತ್ತಿತ್ತು. ಅದೇ ಹಿಮದ ಸುಳಿಗಾಳಿ ಮೇಲೇರಿ ಸತ್ತ ವಾಸಿಲಿ ಆಂಡ್ರೆವಿಚ್‌ನ ತುಪ್ಪಳುಕೋಟನ್ನು ಮುಚ್ಚಿತು. ನಡುಗುವ ಮುಖೋರ್ಟಿ, ಜಾರುಬಂಡಿ, ಕಾಣಿಸಲಾರದಾದವು; ಅದರಡಿಯಲ್ಲಿ ಮಲಗಿದ್ದ ನಿಕಿಟ ಸತ್ತ ತನ್ನ ಒಡೆಯನ ದೇಹದಡಿ ಬೆಚ್ಚಗೆ ಮಲಗಿದ್ದ.

## 10

ಬೆಳಗು ಹರಿಯುವ ಮೊದಲೇ ನಿಕಿಟನಿಗೆ ಎಚ್ಚರವಾಯಿತು, ತನ್ನ ಬೆನ್ನಿನಿಂದ ಹರಿದು ಬರುತ್ತಿದ್ದ ಚಳಿ ಅವನನ್ನೆಚ್ಚರಿಸಿತ್ತು, ತನ್ನ ಯಜಮಾನರ ಗಿರಣಿಯಿಂದ ಹಿಟ್ಟಿನ ಮೂಟೆಗಳನ್ನು ಹೊತ್ತ ಗಾಡಿಯ ಮೂಕ ತಾನು ಬರುತ್ತಿದ್ದುದಾಗಿಯೂ, ತೊರೆಯನ್ನು ಹಾಯುವಾಗ ಸೇತುವೆ ದಾರಿತಪ್ಪಿ ಗಾಡಿ ಹೂತುಕೊಂಡಂತೆಯೂ ಅವನಿಗೆ ಕನಸು ಬಿದ್ದಿತ್ತು. ಗಾಡಿಯಡಿಯಲ್ಲಿ ನುಸುಳಿಕೊಂಡು ಬಂದ ತಾನು ಅದರ ಹಿಂಭಾಗವನ್ನು ಹಿಡಿದು ಮೇಲೆತ್ತಿದಂತೆ ಅನಿಸಿತ್ತು. ಆದರೆ ವಿಚಿತ್ರವೆಂದರೆ ಗಾಡಿ ಚಲಿಸಲೇ ಇಲ್ಲ, ತನ್ನ ಬೆನ್ನಿಗೇ ಅಂಟಿಕೊಂಡು ಅದನ್ನು ಎತ್ತಲೂ ಆಗದೆ ಅದರಡಿಯಿಂದ ಹೊರಬರಲೂ ಆಗದೆ ಒದ್ದಾಡುವಂತಾಗಿತ್ತು. ಅವನ ತೊಳ್ಳುಗಳೆರಡೂ ಭಾರದಿಂದ ಕುಸಿಯುತ್ತಿದ್ದವು. ಅದೆಂಥ ಅನುಭವ! ಹೇಗಾದರೂ ತೆವಳಿಕೊಂಡ ಹೊರಬರಬೇಕಾಗಿತ್ತು. ತನ್ನ ಮೇಲೆ ಗಾಡಿಯನ್ನು ಒತ್ತುತ್ತಿದ್ದವರನ್ನು ಕುರಿತು "ಸಾಕು!" ಎಂದು ಕೂಗಿದ; "ಮೂಟೆಗಳನ್ನು ಹೊರತೆಗೆಯಿರಿ!" ಎಂದು ಕೂಗಿದ, ಆದರೆ ಗಾಡಿ ಹೆಚ್ಚು ಹೆಚ್ಚು ಶೀತಲವಾಗಿ ತನ್ನನ್ನು ಅದುಮುತ್ತಿತ್ತು. ಆಮೇಲೆ ಅದೇನೋ ವಿಲಕ್ಷಣ ಸದ್ದು, ಬಾಗಿಲು ಬಡಿದಂತೆ. ಅವನೀಗೀಗ ಪೂರ್ತಿ ಎಚ್ಚರವಾಯಿತು, ಎಲ್ಲ ನೆನಪಿಗೆ ಬಂತು. ಆ ಶೀತಲ ಗಾಡಿ ಎಂದರೆ ತನ್ನ ಮೇಲೆ ಬೋರಲಾಗಿ ಮಲಗಿದ್ದ ತನ್ನ ಯಜಮಾನನ ಕೊರಡಿನಂತಾಗಿದ್ದ ಹೆಣ. ಬಡಿದ ಶಬ್ದ ಮಾಡಿದ್ದುದು ಮಿಖೋರ್ಟಿ, ತನ್ನ ಗೊರಸಿನಿಂದ ಎರಡು ಬಾರಿ ಜಾರುಬಂಡಿಗೆ ಒದ್ದಿತ್ತು.

"ಆಂಡ್ರೆವಿಚ್, ಆಂಡ್ರೆವಿಚ್!" ಎಂದು ನವಿರಾಗಿ ಕೂಗಿದ ನಿಕಿಟ. ನಿಧಾನವಾಗಿ ಅವನಿಗೆ ಸತ್ಯವು ಅನಾವರಣಗೊಳ್ಳುತ್ತಿತ್ತು. ಅವನ ಬೆನ್ನನ್ನು ನೇರವಾಗಿ ಕೂರಿಸಲು ಪ್ರಯತ್ನಿಸಿದ. ಆದರೆ ವಾಸಿಲಿ ಆಂಡ್ರೆವಿಚ್ ಉತ್ತರಿಸಲಿಲ್ಲ, ಅವನ ಹೊಟ್ಟೆ ಮತ್ತು ಕಾಲುಗಳು ಸೆಡೆತುಹೋಗಿ, ತಣ್ಣಗಿದ್ದು, ಕಬ್ಬಿಣದ ತುಂಡಿನಂತೆ ಭಾರವಾಗಿದ್ದುವು.

"ಅವರು ಸತ್ತಿರಬೇಕು! ಅವರ ಆತ್ಮಕ್ಕೆ ಶಾಂತಿಯಿರಲಿ!" ಎಂದುಕೊಂಡ ನಿಕಿಟ.

ತನ್ನ ತಲೆ ತಿರುಗಿಸಿ, ಸುತ್ತಲಿನ ಹಿಮವನ್ನು ಕೈಗಳಿಂದ ತೆಗೆದುಹಾಕಿ ಅವನು ಕಣ್ಣುಗಳನ್ನು ತೆಗೆದ. ಬೆಳಗಾಗಿತ್ತು; ಹಿಂದಿನಂತೆಯೇ ಗಾಳಿ ಬಂಡಿಯ ಮೂಕಿಯ ನಡುವೆ ಶಿಳ್ಳೆ ಹಾಕುತ್ತಿತ್ತು, ಯಥಾಪ್ರಕಾರ ಹಿಮ ಸುರಿಯುತ್ತಿತ್ತು, ಆದರೆ ಜಾರುಬಂಡಿಯ ಚೌಕಟ್ಟಿಗೆದುರಾಗಿರಲಿಲ್ಲ, ಆದರೂ ಜಾರುಬಂಡಿ ಮತ್ತು ಕುದುರೆಗಳನ್ನು ಸದ್ದಿಲ್ಲದೆ ಹೆಚ್ಚೆಚ್ಚು ಆವರಿಸುತ್ತಿತ್ತು. ಕುದುರೆಯ ಅಲುಗಾಟವಾಗಲೀ ಅದರ ಉಸಿರಾಟದ ಸದ್ದಾಗಲೀ ಕೇಳಿಸುತ್ತಿರಲಿಲ್ಲ.

"ಅದೂ ಸೆಡೆತುಹೋಗಿರಬೇಕು!" ಎಂದುಕೊಂಡ ನಿಕಿಟ ಮುಖೋರ್ಟಿಯ ಕುರಿತು. ನಿಕಿಟನನ್ನು ಎಚ್ಚರಗೊಳಿಸಿದ್ದ ಅದು ಬಂಡಿಗೆ ಒದೆದಿದ್ದ ಗೊರಸಿನ ಸದ್ದು ಸಾಯುವ ಮೊದಲು ಮುಖೋರ್ಟಿ ಕೊರಡುಗಟ್ಟುವ ಮುನ್ನ ನಡೆಸಿದ್ದ ಕೊನೆಯ ಪ್ರಯತ್ನವಾಗಿತ್ತು.

"ಅಯ್ಯೋ ದೇವರೇ, ನೀನು ನನ್ನನ್ನೂ ಕರೆಯುತ್ತಿರಬಹುದು! ನಿನ್ನ ಇರಾದೆ ತಾನೇ ನಡೆಯುವುದು. ಆದರೆ ಇದು ವಿಚಿತ್ರವಾಗಿದೆ ... ಯಾರೂ ಎರಡು ಬಾರಿ ಸಾಯಲಾರರು, ಒಂದು ಬಾರಿ ಮಾತ್ರ. ಅದು ಬೇಗ ಬರಬಾರದೇ!" ಎಂದುಕೊಂಡ ನಿಕಿಟ.

ಮತ್ತೆ ತನ್ನ ತಲೆ ಮೇಲೆತ್ತಿ ಕಣ್ಣುಗಳನ್ನು ಮುಚ್ಚಿಕೊಂಡು ಪ್ರಜ್ಞಾಹೀನನಾದ, ತಾನೀಗ ಖಂಡಿತವಾಗಿ ಕೊನೆಗೂ ಸಾಯುತ್ತಿದ್ದೇನೆ ಎಂದು ಅವನಿಗೆ ಮನವರಿಕೆಯಾಗಿತ್ತು.

ಆ ದಿನ ಇನ್ನೂ ಮಧ್ಯಾಹ್ನ ಸಮೀಪಿಸಿರಲಿಲ್ಲ, ರಸ್ತೆಯಿಂದ ಎಪ್ಪತ್ತು ಗಜಗಳಷ್ಟೂ, ಹಳ್ಳಿಯಿಂದ ಅರ್ಧ ಮೈಲಿಯಷ್ಟೂ ದೂರವಿರದಿದ್ದ ಆ ಜಾಗದಲ್ಲಿ ರೈತರು ತಮ್ಮ ಗೋರುಸಲಿಕೆಗಳಿಂದ ವಾಸಿಲಿ ಆಂಡ್ರೆವಿಚ್ ಮತ್ತು ನಿಕಿಟರನ್ನು ಹಿಮರಾಶಿಯಿಂದ ಮೇಲೆತ್ತಿದರು.

ಹಿಮ ಜಾರುಬಂಡಿಯನ್ನು ಪೂರ್ತಿ ಮುಚ್ಚಿಬಿಟ್ಟಿತ್ತು, ಆದರೆ ಮೂಕಿ ಮತ್ತದರ ತುದಿಗೆ ಕಟ್ಟಿದ್ದ ಕರ್ಚೀಫ್ ಇನ್ನೂ ಕಣ್ಣಿಗೆ ಬೀಳುತ್ತಿತ್ತು. ಹೊಟ್ಟೆಯವರೆಗೆ ಹಿಮದಲ್ಲಿ ಹುದುಗಿದ್ದ ಹಾಸುಗಂಬಳಿ ಮತ್ತು ಪಿರ್ರೆಯ ಪಟ್ಟಿಗಳು ಜೋತಾಡುತ್ತ ಇದ್ದ ಮುಖೋರ್ಟಿ ಬೆಳ್ಳಗೆ ಕಾಣುತ್ತಿತ್ತು, ಅದರ ತಲೆ ಸೆಡೆತುಹೋಗಿದ್ದ ಕೊರಳಿಗೆ ಆತುಕೊಂಡಿತ್ತು, ಅದರ ಮೂಗಿನ ಹೊಳ್ಳೆಗಳಿಂದ ಹಿಮಕಣಗಳು ಜೋತಾಡುತ್ತಿದ್ದುವು, ಅದರ ಕಣ್ಣುಗಳನ್ನು ಕಣ್ಣೀರಿನಂತೆ ಹಿಮಮಣಿಗಳು ತುಂಬಿದ್ದುವು, ಅದೊಂದು ರಾತ್ರಿಯಲ್ಲೇ ಅದೆಷ್ಟು

ಕೃಶವಾಗಿತ್ತೆಂದರೆ ಬರಿ ಮೂಳೆ-ಚಕ್ಕಳವಾಗಿಬಿಟ್ಟಿತ್ತು.

ವಾಸಿಲಿ ಆಂಡ್ರೆವಿಚ್ ಹೆಪ್ಪುಗಟ್ಟಿದ ಶವದಂತೆ ಗಡುಸಾಗಿದ್ದ; ನಿಕಿಟನ ಮೇಲಿನಿಂದ ಅವನನ್ನು ಕೆಳಗುರುಳಿಸಿದಾಗ ಅವನ ಕಾಲುಗಳು ಹಿಂದಿನಂತೆಯೇ ಅಗಲಿಸಿಕೊಂಡೇ ಇದ್ದುವು, ತೋಳುಗಳು ಚಾಚಿಕೊಂಡಿದ್ದುವು. ಊದಿದ್ದ ಅವನ ಹದ್ದಿನ ಕಣ್ಣುಗಳು, ಮೀಸೆ ಮುಚ್ಚಿದ್ದ ಅವನ ತೆರೆದ ಬಾಯಿ - ಹಿಮದಿಂದ ತುಂಬಿದ್ದವು. ಚಳಿಯಿಂದ ಸೆಡೆತಿದ್ದರೂ ನಿಕಿಟ ಇನ್ನೂ ಬದುಕಿದ್ದ. ಅವನಿಗೆ ಎಚ್ಚರವಾದಾಗ ತಾನು ಸತ್ತಿರುವುದಾಗಿಯೂ, ತನ್ನ ಸುತ್ತಮುತ್ತ ನಡೆಯುತ್ತಿರುವುದು ಈ ಲೋಕದಲ್ಲಲ್ಲ, ಪರಲೋಕದಲ್ಲಿ ಎಂದು ಭಾವಿಸಿದ್ದ. ತನ್ನನ್ನು ಹೊರತೆಗೆದು, ತನ್ನ ಮೇಲಿದ್ದ ಕೊರಡುಗಟ್ಟಿದ್ದ ವಾಸಿಲಿ ಆಂಡ್ರೆವಿಚ್‌ನ ಹೆಣವನ್ನು ಉರುಳಿಸುವಾಗ ಮಾಡುತ್ತಿದ್ದ ರೈತರ ಕೂಗು ಕೇಳಿದ ಅವನಿಗೆ ಪರಲೋಕದಲ್ಲೂ ರೈತರು ಇಲ್ಲಿನಂತೆಯೇ ಸದ್ದು ಮಾಡುವವರಂತೆ, ಅವರಿಗೂ ಇಂತಹುದೇ ದೇಹಗಳಿರುವಂತೆ ಭಾಸವಾಯಿತು. ಆದರೆ ತಾನಿನ್ನೂ ಈ ಲೋಕದಲ್ಲಿಯೇ ಇರುವೆನೆಂಬ ತಿಳಿವಳಿಕೆ ಮೂಡಿದಾಗ, ಅದರಲ್ಲೂ ತನ್ನ ಕಾಲ್ಬೆರಳುಗಳು ಸೆಡೆತುಕೊಂಡಿರುವುದನ್ನು ಕಂಡು ಅವನಿಗೆ ಸಂತಸಕ್ಕಿಂತ ದುಃಖವೇ ಹೆಚ್ಚಾಯಿತು,

ನಿಕಿಟ ಎರಡು ತಿಂಗಳು ಆಸ್ಪತ್ರೆಯಲ್ಲಿದ್ದ. ಅವನ ಮೂರು ಕಾಲ್ಬೆರಳುಗಳನ್ನು ಕತ್ತರಿಸಿ ಹಾಕಿದ್ದರು, ಆದರೆ ಮಿಕ್ಕವು ಉಳಿದವು, ಹೀಗಾಗಿ ಅವನು ಎಂದಿನಂತೆ ಕೆಲಸಕಾರ್ಯಗಳಲ್ಲಿ ತೊಡಗಿಕೊಳ್ಳಲು ಅಡ್ಡಿಯಾಗಲಿಲ್ಲ. ಹೀಗೇ ಇಪ್ಪತ್ತು ವರ್ಷಗಳುರುಳಿದುವು, ಮೊದಲು ಹೊಲದಲ್ಲಿ ಕೂಲಿ ಕೆಲಸ ಮಾಡುತ್ತ, ವಯಸ್ಸಾದ ಮೇಲೆ ಕಾವಲುಗಾರನಾಗಿ. ಅವನಿಚ್ಛೆಯಂತೆಯೇ ಮನೆಯಲ್ಲಿ ಸತ್ತ, ಅದೂ ಇದೇ ವರ್ಷ, ತನ್ನ ಕೈಯಲ್ಲಿ ಮೇಣದ ಬತ್ತಿಯನ್ನು ಹಿಡಿದು ದೇವರ ವಿಗ್ರಹದ ಕೆಳಗೆ. ಸಾಯುವ ಮುಂಚೆ ತನ್ನ ಹೆಂಡತಿಯ ಕ್ಷಮೆ ಕೇಳಿದ, ಹೆಂಡಗಾರನ ಜೊತೆ ಇದ್ದ ಅವಳ ತಪ್ಪನ್ನು ಕ್ಷಮಿಸಿದ. ಅವನು ಮಕ್ಕಳು ಮೊಮ್ಮಕ್ಕಳಿಗೂ ವಿದಾಯ ಹೇಳಿದ. ತನ್ನನ್ನು ನೋಡಿಕೊಳ್ಳಬೇಕಾದ ಜವಾಬ್ದಾರಿಯಿಂದ ತನ್ನ ಮಗ ಮತ್ತು ಸೊಸೆಯನ್ನು ಮುಕ್ತಗೊಳಿಸುತ್ತಿರುವೆನೆಂಬ ಭಾವನೆಯಿಂದ ನಿರಾಳವಾದ ಸಾವನ್ನಪ್ಪಿದ. ಸಾಕಾಗಿ ಹೋದ ಈ ಬದುಕಿನಿಂದ ಪಾರಾಗಿ ಪ್ರತಿ ವರ್ಷ ಪ್ರತಿ ಗಂಟೆ ಹೆಚ್ಚೆಚ್ಚು ಸ್ಪಷ್ಟವಾಗಿಯೂ ಅಪೇಕ್ಷಣೀಯವಾಗಿಯೂ ಇರುವ ಮುಂದಿನ ಲೋಕಕ್ಕೆ ಸಾಗುತ್ತಿದ್ದ. ಇಲ್ಲಿ ಸತ್ತ ನಂತರ ಅಲ್ಲಿ ಎಚ್ಚರಗೊಂಡ. ಅವನೇನು ಇಲ್ಲಿಗಿಂತ ಉತ್ತಮವಾಗಿದ್ದಾನೆಯೋ ಕಷ್ಟವನ್ನೆದುರಿಸುತ್ತಿರುವನೋ. ಅವನಿಗೇನು ನಿರಾಸೆಯಾಗಿದೆಯೋ ಅವನ ನಿರೀಕ್ಷೆಯಂತೆಯೇ ಇದೆಯೋ? ಎಲ್ಲ ನಮಗೆ ಸದ್ಯದಲ್ಲಿಯೇ ಗೊತ್ತಾಗುತ್ತದೆ.

(1895)

# ಫಾದರ್ ಸರ್ಜಿಯಸ್

ಸಾವಿರದೆಂಟುನೂರ ಎಂಬತ್ತರ ದಶಕದಲ್ಲಿ ಪೀಟರ್ಸ್‌ಬರ್ಗ್‌ನಲ್ಲಿ ಒಂದು ವಿಚಿತ್ರ ಸಂಗತಿ ಜರುಗಿತು. ಕ್ಯುರೇಸಿಯರ್ ಲೈಫ್ ಗಾರ್ಡ್‌ನ ಒಬ್ಬ ಆಫೀಸರ್- ಅವನೊಬ್ಬ ಸುಂದರ ಯುವಕ, ಅವನು ಒಳ್ಳೆ ಭವಿಷ್ಯವುಳ್ಳವನಾಗಿದ್ದು ಮುಂದೊಂದು ದಿನ ಮೊದಲನೇ ನಿಕೋಲಸ್ ಚಕ್ರವರ್ತಿಯ ಏಡ್-ಡಿ-ಕ್ಯಾಂಪ್ ಆಗುತ್ತಾನೆ ಅಂತ ಎಲ್ಲರೂ ಅಂದುಕೊಳ್ಳುತ್ತಿದ್ದರು, ಅಂಥವನು - ತನ್ನ ಕೆಲಸ ಬಿಟ್ಟು, ಮಹಾರಾಣಿಗೆ ಬೇಕಾಗಿದ್ದ ಒಬ್ಬ ಸುಂದರಿಯೊಡನೆ ಆಗಿದ್ದ ಮದುವೆ ನಿಶ್ಚಯವನ್ನು ಮುರಿದು, ತನ್ನ ಸಣ್ಣ ಹಿಡುವಳಿಯನ್ನು ತಂಗಿಗೆ ಬಿಟ್ಟುಕೊಟ್ಟು ಒಂದು ಆಶ್ರಮವನ್ನು ಸೇರಿ ಸನ್ಯಾಸಿಯಾಗಿಬಿಟ್ಟ.

ಅವನ ಅಂತರ್ಯ ತಿಳಿಯದವರಿಗೆ ಈ ಸಂಗತಿ ಅಸಾಧಾರಣವಾದದ್ದು, ಊಹಿಸಲಸಾಧ್ಯವಾದದ್ದು ಅನ್ನಿಸಿತು; ಆದರೆ ರಾಜಕುಮಾರ ಸ್ಟೀಫನ್ ಕಾಟ್ಸ್‌ಕಿಗೇ ಇದೆಲ್ಲ ಎಷ್ಟು ಸಹಜವಾಗಿ ನಡೆದದ್ದಾಗಿತ್ತು ಅಂದರೆ ಇದನ್ನು ಬಿಟ್ಟು ಬೇರೆ ರೀತಿ ತಾನು ನಡೆದುಕೊಳ್ಳೋದು ಹೇಗೆ ಸಾಧ್ಯವಿತ್ತು ಅನ್ನಿಸುತ್ತಿತ್ತು.

ಗಾರ್ಡ್‌ನ ಒಬ್ಬ ನಿವೃತ್ತ ಕರ್ನಲ್ ಆಗಿದ್ದ ಅವರ ತಂದೆ ಇವನು ಹನ್ನೆರಡು ವರುಷದವನಾಗಿದ್ದಾಗಲೇ ತೀರಿಕೊಂಡಿದ್ದ; ಮಗನನ್ನು ಬಿಟ್ಟಿರಲು ತುಂಬ ಕಷ್ಟವಾಗಿದ್ದರೂ ಅವನ ತಾಯಿ, ತಂದೆಯ ಇರಾದೆಯಂತೆ, ಅವನನ್ನು ಮಿಲಿಟರಿ ಕಾಲೇಜಿಗೆ ಸೇರಿಸಿದ್ದಳು. ಆ ವಿಧವೆ ತಾಯಿ ಮಗನ ಹತ್ತಿರವೇ ಇದ್ದು ರಜೆಯ ಕೆಲವು ದಿವಸಗಳನ್ನಾದರೂ ಅವನೊಡನೆ ಇರುವ ಉದ್ದೇಶದಿಂದ ತನ್ನ ಮಗಳು ವರ್ವಾರಾ ಜೊತೆ ಪೀಟರ್ಸ್‌ಬರ್ಗ್‌ಗೆ ಹೋಗಿದ್ದಳು.

ಮಗ ತನ್ನ ಅಸಾಧಾರಣ ಬುದ್ಧಿವಂತಿಕೆಯಿಂದಲೂ ಆತ್ಮಾಭಿಮಾನದಿಂದಲೂ ಬೇರೆಯವರಿಗಿಂತ ಭಿನ್ನನಾಗಿದ್ದ. ತನ್ನ ಓದಿನಲ್ಲಿ- ಅದರಲ್ಲೂ ತನ್ನ ವಿಶೇಷ ಆಸಕ್ತಿಯ ವಿಷಯವಾಗಿದ್ದ ಗಣಿತದಲ್ಲಿ - ಮೊದಲಿಗನಾಗಿದ್ದುದಲ್ಲದೆ, ಕವಾಯತು ಮತ್ತು ಕುದುರೆ ಸವಾರಿಗಳಲ್ಲೂ ಪರಿಣತನಾಗಿದ್ದ. ಸರಾಸರಿಗಿಂತ ಸ್ವಲ್ಪ ಹೆಚ್ಚೇ ಎನ್ನಬಹುದಾದಷ್ಟು

ಎತ್ತರವಿದ್ದು ನೋಡಲು ಸ್ಫುರದ್ರೂಪಿಯೂ ಚಟುವಟಿಕೆಯುವನೂ ಆಗಿದ್ದ. ಮುಂಗೋಪವೊಂದನ್ನು ಬಿಟ್ಟರೆ ಅವನು ಮಾದರಿ ಕ್ಯಾಡೆಟ್ ಅನ್ನಿಸಿಕೊಂಡಿದ್ದವನು. ಅವನ ಸತ್ಯವಂತಿಕೆ ಗಾಢವಾದದ್ದು, ಕುಡಿತದ ಕಡೆಗಂತೂ ಅವನ ಮನಸ್ಸು ಎಂದೂ ವಾಲಲೇ ಇಲ್ಲ. ಅವನ ನಡತೆಯ ಕಪ್ಪು ಚುಕ್ಕೆ ಅಂದರೆ ಅವನು ಆಗಾಗ ಒಳಗಾಗುತ್ತಿದ್ದ ಕೋಪಾವೇಶ; ಅದಕ್ಕೊಳಗಾದ ಹೊತ್ತಿನಲ್ಲಿ ಅವನು ತನ್ನ ಹತೋಟಿ ಮೀರಿ ಕಾಡುಮಿಗದಂತೆ ವರ್ತಿಸುತ್ತಿದ್ದ. ತನ್ನ ಖನಿಜ ಸಂಗ್ರಹದ ಬಗ್ಗೆ ಚುಡಾಯಿಸುತ್ತಿದ್ದ ಒಬ್ಬ ಸಹಕ್ಯಾಡೆಟ್‌ನನ್ನಂತೂ ಒಮ್ಮೆ ಅನಾಮತ್ತಾಗಿ ಕಿಟಕಿಯಿಂದಾಚೆ ಎಸೆದುಬಿಟ್ಟಿದ್ದ. ಮತ್ತೊಂದು ಸಂದರ್ಭದಲ್ಲಿ, ಅವನೆಂಥ ದುಃಖಾವೇಶಕ್ಕೊಳಗಾಗಿದ್ದ ಅಂದರೆ ತನ್ನ ಮಾತಿಗೆ ತಪ್ಪಿ ಹಸಿ ಸುಳ್ಳನ್ನು ಹೇಳಿದ್ದ ಸ್ಟುಅರ್ಡ್ ಆಗಿದ್ದ ಒಬ್ಬ ಆಫೀಸರ್ ಮೇಲೆ ಹಲ್ಲೆ ಮಾಡಿ ಅವನ ಮುಖಕ್ಕೆ ಒಂದು ಕಟ್‌ಲೆಟ್ ಅನ್ನು ರೊಯ್ಯಂತ ಎಸೆದಿದ್ದ. ಕಾಲೇಜಿನ ನಿರ್ದೇಶಕರು ಆ ಸ್ಟುಅರ್ಡ್ ಅನ್ನು ಡಿಸ್ಮಿಸ್ ಮಾಡಿ ಇಡೀ ಪ್ರಕರಣವನ್ನು ಮುಚ್ಚಿಹಾಕಿರದಿದ್ದರೆ ಇವನನ್ನು ಕೆಳಗಿನ ರಾಂಕ್‌ಗೆ ಹಿಂಬಡ್ತಿ ಮಾಡಲಾಗಿಬಿಡುತ್ತಿತ್ತು. ತನಗೆ ಹದಿನೆಂಟು ವರುಷ ತುಂಬುವ ಹೊತ್ತಿಗೆ ಅವನು ಕಾಲೇಜು ಶಿಕ್ಷಣವನ್ನು ಮುಗಿಸಿ, ಗಾರ್ಡ್ಸ್‌ನ ಒಂದು ಶ್ರೀಮಂತ ರೆಜಿಮೆಂಟಿನಲ್ಲಿ ಲೆಫ್ಟಿನೆಂಟ್ ಆಗಿ ನೇಮಕಗೊಂಡ.

ಇವನಿನ್ನೂ ಕಾಲೇಜಿನಲ್ಲಿರುವಾಗಲೆ ಚಕ್ರವರ್ತಿ ನಿಕೊಲಸ್ ಪಾವ್ಲೋವಿಚ್ (ಮೊದಲನೇ ನಿಕೊಲಸ್) ಇವನನ್ನು ಗಮನಿಸಿದ್ದರು, ಈಗ ರೆಜಿಮೆಂಟ್ ಸೇರಿದ ಮೇಲೂ ಅವನ ಮೇಲೆ ಕಣ್ಣಿಟ್ಟಿದ್ದರು; ಈ ಕಾರಣದಿಂದಾಗಿಯೇ ಇವನು ಮುಂದೆ ಚಕ್ರವರ್ತಿಗಳಿಗೆ ಏಡ್ ಡಿ ಕ್ಯಾಂಪ್ ಆಗುತ್ತಾನೆ ಎಂದು ಜನ ಭಾವಿಸಿದ್ದುದು. ಕಸಾಟ್‌ಸ್ಕಿಗೂ ಈ ಬಗ್ಗೆ ಗಾಢವಾದ ಆಸೆಯಿತ್ತು, ಅದಕ್ಕೆ ಕಾರಣ ಅದರ ಮೇಲಿನ ವ್ಯಾಮೋಹಕ್ಕಿಂತ ಹೆಚ್ಚಾಗಿ ತನ್ನ ಕ್ಯಾಡೆಟ್ ದಿನಗಳಿಂದಲೂ ಅವನಿಗೆ ನಿಕೊಲಸ್ ಪಾವ್ಲೋವಿಚ್ ಬಗ್ಗೆ ಇದ್ದ ನಿಷ್ಠೆ. ಚಕ್ರವರ್ತಿಗಳು ಎಷ್ಟೋ ಸಲ ಕಾಲೇಜಿಗೆ ಭೇಟಿ ನೀಡಿದ್ದರು; ಆಗೆಲ್ಲ ಮಿಲಿಟರಿ ಕೋಟು ಧರಿಸಿ ಎದೆ ಸೆಟೆದು ನಿಂತ ಕಸಾಟ್‌ಸ್ಕಿಯ ನೀಳ ಆಕಾರ, ಅವನು ದಾಪುಗಾಲಿಡುತ್ತ ನಡೆಯುತ್ತಿದ್ದ ರೀತಿ, ತುದಿಗಳನ್ನು ಕತ್ತರಿಸಿದ್ದ ಅವನ ಕಪೋಲಕೇಶ ಮತ್ತು ಮೀಸೆಗಳು, ಚೂಪಾದ ಮೂಗು, ಕ್ಯಾಡೆಟ್‌ಗಳ ಜೊತೆ ಸ್ವಾಗತವಾಕ್ಯಗಳನ್ನು ವಿನಿಮಯಿಸಿಕೊಳ್ಳುವಾಗಿನ ಅವನ ಕಂಚಿನ ಕಂಠ? ಇವೆಲ್ಲ ಮುಂದೆ ತನ್ನ ಪ್ರೇಯಸಿಯನ್ನು ಕಂಡಾಗ ಅವನಿಗಾಗುತ್ತಿದ್ದ ಆನಂದವೇ ಆಗುತ್ತಿದ್ದುದನ್ನು ಸೂಚಿಸುತ್ತಿತ್ತು. ಅಷ್ಟೇಕೆ, ಚಕ್ರವರ್ತಿಗಳ ಬಗೆಗಿನ ವ್ಯಾಮೋಹ ಇನ್ನೂ ಹೆಚ್ಚಿನದೇ; ತನ್ನ ನಿಷ್ಠೆಯ ಪರಾಕಾಷ್ಠೆಯನ್ನು ತೋರಿಸಲು ಅವನು ಏನನ್ನು ಬೇಕಾದರೂ? ತನ್ನನ್ನೇ - ತ್ಯಾಗಮಾಡಲು ಬಯಸುತ್ತಿದ್ದ. ಚಕ್ರವರ್ತಿಗಳಿಗೂ ಇದರ ಅರಿವಿದ್ದು, ಅವರು ಉದ್ದೇಶ ಪೂರ್ವಕವಾಗಿಯೇ ಇದನ್ನು ಉದ್ದೀಪಿಸುತ್ತಿದ್ದರು. ಕ್ಯಾಡೆಟ್‌ಗಳ ಜೊತೆ ಆಟವಾಡಿ, ಅವರ ನಡುವೆ ಸೇರಿಕೊಂಡು, ಕೆಲವು ವೇಳೆ ಅವರನ್ನು ಬಾಲ್ಯಸರಳತೆಯಿಂದ ನಡೆಸಿಕೊಳ್ಳುತ್ತ, ಕೆಲವು ವೇಳೆ ಗೆಳೆಯನಂತೆ ತೋರಿಸಿಕೊಳ್ಳುತ್ತ, ಆದರೂ ತಮ್ಮ

ರಾಜಗಾಂಭೀರ್ಯವನ್ನೂ ಉಳಿಸಿಕೊಂಡಿರುತ್ತಿದ್ದರು. ಹಿಂದೆ ಹೇಳಿದ ಆಫೀಸರ್‌ನ ಪ್ರಸಂಗದ ನಂತರ ಚಕ್ರವರ್ತಿಗಳು ಕಸಾಟ್‌ಸ್ಕಿಗೆ ಏನನ್ನೂ ಹೇಳಲಿಲ್ಲ, ಆದರೆ ಮುಂದೊಂದು ದಿನ ತಮ್ಮನ್ನು ಕಂಡು ಹತ್ತಿರ ಬರಲು ಪ್ರಯತ್ನಿಸಿದಾಗ ಹುಬ್ಬು ಗಂಟಿಕ್ಕಿಕೊಂಡು, ದೂರ ಸರಿಯುವಂತೆ ನಾಟಕೀಯವಾಗಿ ತಮ್ಮ ಬೆರಳು ಬೀಸಿದ್ದರು: ಬಳಿಕ ಹೋಗುವಾಗ, "ನಂಗೆ ಎಲ್ಲ ಗೊತ್ತು, ನೆನಪಿರಲಿ. ಕೆಲವು ವಿಷಯಗಳು ನಂಗೆ ಗೊತ್ತಾಗಬಾರದಿತ್ತು, ಆದರೆ ಅವೆಲ್ಲ ಇಲ್ಲಿಗೆ ತಾಗಿದೆ" ಎಂದು ಹೇಳುತ್ತ ತಮ್ಮ ಎದೆಯತ್ತ ತೋರಿಸಿದ್ದರು.

ಕಾಲೇಜು ಬಿಡುವ ಸಂದರ್ಭದಲ್ಲಿ ಚಕ್ರವರ್ತಿಗಳು ಕ್ಯಾಡೆಟ್‌ಗಳನ್ನು ಅಭಿನಂದಿಸಿದ್ದರು; ಆಗವರು ಕಸಾಟ್‌ಸ್ಕಿಯ ಲೋಪದ ಬಗ್ಗೆ ಉಲ್ಲೇಖಿಸಿರಲಿಲ್ಲ, ಆದರೆ ತಮ್ಮ ಅಭ್ಯಾಸದಂತೆ, ತಮಗೂ ಪಿತೃಭೂಮಿಗೂ ನಿಷ್ಠೆಯಿಂದ ಸೇವೆ ಸಲ್ಲಿಸ ಬೇಕೆಂಬುದನ್ನು ಸೂಚಿಸಿದ್ದರು, ಜೊತೆಗೆ ತಾವವರ ಆಪ್ತ ಗೆಳೆಯನಂತೆ ಎಂದೂ, ಅವಶ್ಯಕವಾದಾಗ, ತಮ್ಮನ್ನವರು ನೇರವಾಗಿ ಸಂಪರ್ಕಿಸಬಹುದೆಂದೂ ಹೇಳಿದ್ದರು. ಈ ಮಾತುಗಳಿಂದ ಎಂದಿನಂತೆ ಕ್ಯಾಡೆಟ್‌ಗಳ ಮನಸ್ಸು ಕಲಕಿತು, ಕಸಾಟ್‌ಸ್ಕಿಯಂತೂ ಹಿಂದಿನದನ್ನು ನೆನೆಸಿಕೊಂಡು ಕಣ್ಣೀರನ್ನೇ ತಂದುಕೊಂಡ, ತನ್ನ ಪರಮಾಪ್ತ ತ್ಸಾರ್ ಚಕ್ರವರ್ತಿಗಳನ್ನು ಮನಃಪೂರ್ವಕವಾಗಿ ಸೇವಿಸುವೆನೆಂದು ಪಣತೊಟ್ಟ.

ಕಸಾಟ್‌ಸ್ಕಿ ತನ್ನ ಕಮಿಷನ್ ಅನ್ನು ಆರಂಭಿಸಿದಾಗ, ಅವನ ತಾಯಿ ಮಗಳೊಂದಿಗೆ ಮೊದಲು ಮಾಸ್ಕೋಗೆ ತೆರಳಿ, ಆನಂತರ ಹಳ್ಳಿಯ ತಮ್ಮ ತೋಟಕ್ಕೆ ಹೋದಳು. ತನ್ನ ಆಸ್ತಿಯ ಅರ್ಧ ಭಾಗವನ್ನು ಕಸಾಟ್‌ಸ್ಕಿ ತನ್ನ ತಂಗಿಗೆ ಬಿಟ್ಟುಕೊಟ್ಟು, ತಾನು ಸೇರಿಕೊಂಡಿದ್ದ ದುಬಾರಿ ರೆಜಿಮೆಂಟಿನಲ್ಲಿ ಬದುಕಲು ಬೇಕಾದಷ್ಟು ಪಾಲನ್ನು ಮಾತ್ರ ತನಗಾಗಿ ಉಳಿಸಿಕೊಂಡ.

ಹೊರನೋಟಕ್ಕೆ ಅವನೊಬ್ಬ ಸಾಧಾರಣ ಆದರೆ ಮೇಧಾವಿ ಗಾರ್ಡ್ಸ್ ಆಫೀಸರ್, ಒಂದು ನೌಕರಿಯನ್ನು ಪಡೆದಿದ್ದವನು, ಅಷ್ಟೆ; ಆದರೆ ಅವನ ಅಂತರಾಳದಲ್ಲಿ ತೀವ್ರವೂ ಸಂಕೀರ್ಣವೂ ಆದ ತೊಳಲಾಟಗಳು ನಡೆದಿದ್ದುವು. ಬಾಲ್ಯದಿಂದಲೂ ಅವನ ಪ್ರಯತ್ನಗಳೆಲ್ಲ ವಿಭಿನ್ನವಾದವುಗಳೆಂಬಂತೆ ತೋರುತ್ತಿದ್ದವು, ಆದರೆ ಸಾರತಃ ಅವೆಲ್ಲ ಒಂದೇ ಆಗಿದ್ದವು. ತಾನೇನೇ ಮಾಡಿದರೂ ಯಶಸ್ಸನ್ನು ಮಾತ್ರವಲ್ಲದೆ ಎಲ್ಲರ ಪ್ರಶಂಸೆಗೆ ಹಾಗೂ ಅಚ್ಚರಿಗೆ ಪಾತ್ರವಾಗುವಂತಹ ಪರಿಪೂರ್ಣತೆಯನ್ನು ಸಾಧಿಸುವುದರತ್ತ ಅವನ ಗಮನವಿರುತ್ತಿತ್ತು. ಅಭ್ಯಾಸವಾಗಿರಲಿ ಅಥವಾ ಸೈನಿಕ ತರಬೇತಿಯಾಗಿರಲಿ, ಅದನ್ನವನು ಶ್ರದ್ಧೆಯಿಂದ ಅನುಸರಿಸಿ ಎಲ್ಲರ ಹೊಗಳಿಕೆಗೆ ಪಾತ್ರವಾಗಿ ತಾನೊಂದು ಮಾದರಿ ಎನ್ನಿಸುವಂತೆ ಮಾಡುತ್ತಿದ್ದ. ಒಂದು ವಿಷಯವನ್ನು ಕೈವಶಮಾಡಿಕೊಂಡ ಬಳಿಕಷ್ಟೇ ಮತ್ತೊಂದರತ್ತ ಗಮನ ಹರಿಸುತ್ತಿದ್ದ, ಹೀಗಾಗಿ ಅವನು ವ್ಯಾಸಂಗದಲ್ಲಿ ಮೊದಲನೆಯ ಸ್ಥಾನ ಗಳಿಸಿದ. ನಿದರ್ಶನಕ್ಕೆ ಹೇಳಬೇಕಾದರೆ, ಕಾಲೇಜಿನಲ್ಲಿ ಓದುತ್ತಿದ್ದಾಗ ಫ್ರೆಂಚ್‌ನಲ್ಲಿ ಸಂಭಾಷಿಸುವಾಗ ತನ್ನ ಮಾತಿನಲ್ಲಿನ ಕೊರತೆಯನ್ನು ಗಮನಿಸಿದ ಅವನು, ರಷ್ಯನ್‌ನಲ್ಲಿ

ಮಾತಾಡುವಷ್ಟೇ ಸರಾಗವಾಗಿ ಫ್ರೆಂಚ್‌ನಲ್ಲೂ ಪ್ರಭುತ್ವವನ್ನು ಪಡೆಯಲು ಹೆಣಗಿ ಸಫಲನಾದ. ಆನಂತರ ಅವನು ಚೆಸ್ ಆಟದಲ್ಲಿ ತೊಡಗಿಕೊಂಡು ಅದರಲ್ಲಿ ಅತ್ಯಂತ ಚತುರ ಆಟಗಾರನೆನಿಸಿದ.

ತ್ಸಾರ್ ಮತ್ತು ಪಿತೃಭೂಮಿಯ ಸೇವೆ ಮಾಡುವ ತನ್ನ ಮೊದಲ ಕರ್ತವ್ಯವಲ್ಲದೆ, ಸದಾ ಬೇರೊಂದು ನಿರ್ದಿಷ್ಟ ಗುರಿಯನ್ನೂ ಹೊಂದಿರುತ್ತಿದ್ದ. ಅದೆಷ್ಟೇ ಅಮುಖ್ಯವಾದುದಾಗಿದ್ದರೂ ಅದರಲ್ಲಿ ತಲ್ಲೀನನಾಗಿ ಪರಿಣತಿಯನ್ನು ಹೊಂದುವವರೆಗೂ ತೊಡಗಿರುತ್ತಿದ್ದ. ಅದು ಕೈವಶವಾದ ತಕ್ಷಣವೇ ಅದರ ಜಾಗದಲ್ಲಿ ಮತ್ತೊಂದು ಗುರಿಯನ್ನು ತನ್ನ ಕಣ್ಣೆದುರಿಗೆ ನಿಲ್ಲಿಸಿಕೊಳ್ಳುತ್ತಿದ್ದ. ಹೀಗೆ ಕೆಲಸದ ವ್ಯಾಮೋಹ ಹಾಗೂ ಪರಿಣತಿಯ ಹಂಬಲ ಅವನ ಬದುಕನ್ನು ಆವರಿಸಿದ್ದವು. ಕಮಿಷನ್ ಅನ್ನು ಆರಂಭಿಸಿದಾಗ ಅವನ ಕಣ್ಣೆದುರಿಗಿದ್ದ ಗುರಿಯೆಂದರೆ ತನ್ನ ಕರ್ತವ್ಯದ ಬಗೆಗಿನ ಸಂಪೂರ್ಣ ತಿಳಿವಳಿಕೆ, ಅದರಲ್ಲಂತೂ ಅವನು ಬಹು ಬೇಗ ಒಬ್ಬ ಮಾದರಿ ಆಫೀಸರ್ ಎನಿಸಿದ; ಆದರೂ ತನ್ನನ್ನಾವರಿಸುತ್ತಿದ್ದ ಸಿಡುಕಿನಿಂದಾಗಿ ಅವನು ತನ್ನ ಯಶಸ್ಸಿಗೆ ಅಡ್ಡಿಯಾಗುವಂತಹ ತಪ್ಪುಗಳನ್ನು ಮಾಡಿಬಿಡುತ್ತಿದ್ದ. ಆನಂತರ, ಗಣ್ಯರ ಜೊತೆಗೆ ಮಾತುಕತೆಯಾಡುವಾಗ ತನ್ನ ಲೋಕಜ್ಞಾನ ಸಮಂಜಸವಾಗಿಲ್ಲವೆಂದು ಅನ್ನಿಸಿದ್ದರಿಂದ ಅವನು ಓದಿನಲ್ಲಿ ತೊಡಗಿಕೊಂಡು ಅದರಲ್ಲಿಯೂ ಗುರಿಯನ್ನು ಸಾಧಿಸಿದ. ಸಮಾಜದ ಗಣ್ಯವಲಯದಲ್ಲಿ ಗಣನೀಯ ಸ್ಥಾನ ಗಳಿಸಬೇಕೆಂಬ ಉದ್ದೇಶದಿಂದವನು ನರ್ತನದಲ್ಲಿ ಕೌಶಲವನ್ನು ಸಂಪಾದಿಸಿ ಬಹು ಬೇಗ ಅತ್ಯಂತ ಗಣ್ಯ ನರ್ತನಕೂಟಗಳಿಗೂ ಸಂಜೆಯ ಕೂಟಕಲಾಪಗಳಿಗೂ ಆಹ್ವಾನ ಪಡೆಯುವಂತಾದ. ಆದರೆ ಇಷ್ಟರಿಂದಲೇ ಅವನಿಗೆ ತೃಪ್ತಿಯಾಗುವಂತಿರಲಿಲ್ಲ: ಅವನಿಗೆ ಎಲ್ಲದರಲ್ಲೂ ಮೊದಲಿಗನಾಗಬೇಕೆಂಬ ಹಂಬಲ, ಗಣ್ಯ ಸಮಾಜದಲ್ಲಿ ಅವನಿಗಿನ್ನೂ ಈ ಸ್ಥಾನ ದೊರಕಿರಲಿಲ್ಲ.

ಆಗಿನ ಅತ್ಯಂತ ಗಣ್ಯ ಸಮಾಜವೆಂದರೆ, ನನ್ನ ಪ್ರಕಾರ ಎಲ್ಲ ಕಡೆಯೂ ಎಲ್ಲ ಕಾಲದಲ್ಲೂ, ನಾಲ್ಕು ನೆಲೆಯ ಜನರಿಂದ ಕೂಡಿರುವಂಥದು: ರಾಜಪರಿವಾರದಿಂದ ಆಹ್ವಾನಿತರಾಗುತ್ತಿದ್ದ ಶ್ರೀಮಂತರು, ಶ್ರೀಮಂತರಲ್ಲದಿದ್ದರೂ ರಾಜಪರಿವಾರದಲ್ಲಿ ಬೆಳೆದು ಬಂದವರು, ರಾಜಪರಿವಾರದ ಕೃಪಾಶ್ರಯಕ್ಕೆ ಸಲ್ಲುವ ಶ್ರೀಮಂತರು ಹಾಗೂ ಶ್ರೀಮಂತರೂ ಅಲ್ಲದ ರಾಜಪರಿವಾರಕ್ಕೂ ಸೇರದ ಆದರೆ ಅವೆರಡು ವರ್ಗಗಳ ಕೃಪೆಗೆ ಒಳಗಾದವರು.

ಕಸಾಟ್‌ಸ್ಕಿ ಮೊದಲೆರಡು ವರ್ಗಗಳಿಗೆ ಸೇರಿದವನಲ್ಲ, ಆದರೆ ಉಳಿದೆರಡು ವಲಯಗಳಲ್ಲಿ ಬಹು ಬೇಗ ಆಪ್ತನಾದ. ಗಣ್ಯಸಮಾಜವನ್ನು ಸೇರಿದ ಬಳಿಕ ಅವನಿಗೆ ತಾನು ಗಣ್ಯ ಸಮಾಜದ ಮಹಿಳೆಯೊಬ್ಬಳ ಸಂಪರ್ಕ ಹೊಂದಬೇಕೆಂಬ ಬಯಕೆಯುಂಟಾಯಿತು; ಅವನಿಗೇ ಅಚ್ಚರಿಯಾಗುವಷ್ಟು ಬೇಗ ಈ ಆಸೆಯೂ ಪೂರೈಸಿತು. ತಾನು ಒಡನಾಡುತ್ತಿದ್ದ ವಲಯಗಳು ಅತ್ಯಂತ ಗಣ್ಯವಲ್ಲವೆಂಬ ಅರಿವು ಅವನಿಗೆ ಬಹು ಬೇಗ ಉಂಟಾಯಿತು; ಅತ್ಯಂತ ಉನ್ನತ ವಲಯಗಳಿಗೆ ತನಗೆ

ಅವಕಾಶವಿದ್ದರೂ ತಾನು ಅದರ ಭಾಗವಲ್ಲ ಎಂಬ ಅರಿವು ಅವನಿಗುಂಟಾಯಿತು. ತಾನು ಅಂತಹ ಅತ್ಯುನ್ನತ ವಲಯದಲ್ಲಿ ಒಬ್ಬನಾಗಬೇಕೆಂಬ ಹೆಬ್ಬಯಕೆ ಕಸಾಟ್‌ಸ್ಕಿಯಲ್ಲುದಿಸಿತು. ಆ ಗುರಿಯ ಸಾಧನೆಗಾಗಿ ತಾನು ಚಕ್ರವರ್ತಿಗಳ ಏಡ್-ಡಿ-ಕ್ಯಾಂಪ್ ಆಗುವುದು ಆವಶ್ಯಕವೆನ್ನಿಸಿತು. ಅದನ್ನು ಹೊಂದುವ ಅಥವಾ ಅತ್ಯುನ್ನತ ವಲಯದಲ್ಲಿ ವಿವಾಹಸಂಬಂಧ ಬೆಳೆಸುವ ಭರವಸೆಯೂ ನಿರ್ಧಾರವೂ ಅವನಿಗಿತ್ತು. ಅವನ ಕಣ್ಣು ರಾಜಪರಿವಾರದ ಒಬ್ಬ ಸುಂದರಿಯ ಮೇಲೆ ನೆಟ್ಟಿತು, ತಾನು ಸೇರಬೇಕೆಂದು ಬಯಸಿದ ವರ್ತುಲಕ್ಕೆ ಆಕೆ ಸೇರಿದವಳು ಮಾತ್ರವಾಗಿರದೆ, ಅವಳ ಸ್ನೇಹವನ್ನು ಹೊಂದಲು ಅತ್ಯುನ್ನತ ವರ್ಗದವರೂ ಅತ್ಯಂತ ಗಣ್ಯ ವಲಯದಲ್ಲಿ ನೆಲೆಗೊಂಡಿದ್ದವರೂ ಬಯಸುತ್ತಿದ್ದರು. ಆ ಪರಮಸುಂದರಿಯೆಂದರೆ ಕೌಂಟೆಸ್ ಕೊರೊಟ್ಕೋವಾ. ಕಸಾಟ್‌ಸ್ಕಿ ಆಕೆಯಲ್ಲಿ ಪ್ರಣಯಾಸಕ್ತನಾದ; ಆದರೆ ಇದು ಕೇವಲ ವೃತ್ತಿಯ ಕಾರಣದಿಂದ ಕೂಡಿದುದಾಗಿರಲಿಲ್ಲ. ಆಕೆ ಮಹಾ ಚೆಲುವೆ, ಹೀಗಾಗಿ ಅವನು ಅವಳಲ್ಲಿ ಅನುರಕ್ತನಾದ. ಮೊದಮೊದಲು ಅವಳು ನಿರ್ಭಾವುಕವಾಗಿದ್ದಂತೆ ಕಂಡರೂ ಆನಂತರ ಬಹು ಬೇಗ ಬದಲಾಗಿ ಅವಳು ಅವನ ಮೇಲೆ ಒಲವು ತೋರಿದಳು; ಅವಳ ತಾಯಿಯಂತೂ ತಮ್ಮ ಮನೆಗೆ ಬರಲು ಇವನನ್ನು ಪದೇ ಪದೇ ಆಹ್ವಾನಿಸಿದಳು. ಕಸಾಟ್‌ಸ್ಕಿ ಮದುವೆಯ ಪ್ರಸ್ತಾಪ ಮಾಡಿದಾಗ ಅದಕ್ಕೆ ಒಪ್ಪಿಗೆಯೂ ದೊರೆಯಿತು. ಅಂಥ ಪರಮಸುಖವನ್ನು ಅಷ್ಟು ಸಲೀಸಾಗಿ ಪಡೆದುದಕ್ಕೆ ಅವನಿಗೇ ಅಚ್ಚರಿಯೆನಿಸಿತು. ತಾಯಿಮಗಳಿಬ್ಬರೂ ತನ್ನ ಬಗೆಗೆ ಏನೋ ವಿಚಿತ್ರವೂ ವಿಭಿನ್ನವೂ ಆದ ನಡವಳಿಕೆಯನ್ನು ತೋರಿಸುವುದನ್ನು ಗಮನಿಸಿದ ಅವನು ಕೊರೊಟ್ಕೋವಾಳ ಪ್ರೇಮದ ಬಲೆಯಲ್ಲಿ ಸಿಲುಕಿಹೋಗಿ ಕುರುಡಾದ. ಇದರಿಂದಾಗಿ, ಕಳೆದ ವರ್ಷ ಅವಳು ನಿಕೊಲಸ್ ಚಕ್ರವರ್ತಿಗಳ ಪ್ರೇಯಸಿಯಾಗಿದ್ದವಳು ಎಂಬ ಇಡೀ ನಗರಕ್ಕೆ ಗೊತ್ತಿದ್ದ ವಿಷಯವನ್ನು ಅವನು ಅರ್ಥಮಾಡಿಕೊಳ್ಳಲಿಲ್ಲ.

ಮದುವೆಗೆ ನಿಶ್ಚಯವಾಗಿದ್ದ ದಿನಕ್ಕೆ ಎರಡು ವಾರಗಳ ಮುಂಚೆ, ಕಸಾಟ್‌ಸ್ಕಿ ತನ್ನ ನಲ್ಲೆಯ ಹಳ್ಳಿಯಾದ ತ್ಸಾರಸ್ಕೋ ಸೆಲೋಕ್ಕೆ ಹೋಗಿದ್ದ. ಅದು ಮೇ ತಿಂಗಳ ಬೇಗೆಯ ದಿನ. ಅವನೂ ಅವನ ನಿಶ್ಚಿತ ವಧುವೂ ತೋಟದಲ್ಲಿ ಸುತ್ತಾಡಿ ಒಂದು ನಿಂಬೆಯ ಗಿಡದ ನೆರಳಿನಲ್ಲಿ ಬೆಂಚಿನ ಮೇಲೆ ಕೂತಿದ್ದರು. ಮೇರಿಯ ಬಿಳಿಯ ಮಸ್ಲಿನ್ ಉಡುಪು ಅವಳಿಗೆ ತುಂಬ ಚೆನ್ನಾಗಿ ಒಪ್ಪುತ್ತಿತ್ತು; ಮುಗ್ಧತೆ ಮತ್ತು ಒಲವುಗಳ ಸಾಕಾರವೆಂಬಂತೆ ಅವಳು ಪಕ್ಕದಲ್ಲಿ, ಒಮ್ಮೆ ತಲೆಯನ್ನು ಬಾಗಿಸುತ್ತ, ಮತ್ತೊಮ್ಮೆ ತನ್ನ ಮಾತೆಲ್ಲಿ ಅವಳ ಚೆಲುವನ್ನು ಅಪವಿತ್ರಗೊಳಿಸಿಬಿಡುತ್ತದೋ ಎಂಬ ಅಳುಕಿನಿಂದ ಮೃದುವಾಗಿಯೂ ಆತ್ಮಸಂಯಮ ದಿಂದಲೂ ತನ್ನ ಜೊತೆ ಮಾತಾಡುತ್ತಿದ್ದ ನೀಳ ಸುಂದರನ ಕಡೆ ನೋಡುತ್ತ ಕೂತಿದ್ದಳು.

ಕಸಾಟ್‌ಸ್ಕಿಯು ಈಗ ಕಾಣಬರದಿರುವ ಸಾವಿರದೆಂಟುನೂರ ನಲವತ್ತನೇ ದಶಕದ ವ್ಯಕ್ತಿಗಳ ಗುಂಪಿಗೆ ಸೇರಿದವನು; ಅವರ ಜಾಯಮಾನವೆಂದರೆ ತಮ್ಮಲ್ಲಿನ ಕೊಳಕನ್ನವರು ಉದ್ದೇಶಪೂರ್ವಕವಾಗಿಯೂ ಪ್ರಜ್ಞಾಪೂರ್ವಕ ಸ್ತಿಮಿತತೆಯಿಲ್ಲದೆಯೂ ಕ್ಷಮಿಸಿಕೊಳ್ಳುತ್ತ,

ತಮ್ಮ ಹೆಂಡಂದಿರಲ್ಲಿ ಮಾತ್ರ ಆದರ್ಶಮಯವೂ ದೈವೀ ಪರಿಶುದ್ಧವೂ ಆದ ಚಾರಿತ್ರ್ಯವನ್ನು ನಿರೀಕ್ಷಿಸುವವರು ಹಾಗೂ ತಮ್ಮ ವಲಯದ ಎಲ್ಲ ಅವಿವಾಹಿತೆಯರಲ್ಲೂ ಅಂಥ ಪರಿಶುದ್ಧತೆಯಿದೆಯೆಂದು ಭಾವಿಸಿ ಅವರೊಡನೆ ಹಾಗೆಯೇ ನಡೆದುಕೊಳ್ಳುವುದು. ಈ ದೃಷ್ಟಿಕೋನವು ಸುಳ್ಳಿನಿಂದ ಕೂಡಿ ಅಪಾಯಕಾರಿಯಾಗಿರುವಂಥದು; ಯಾಕೆಂದರೆ ಅದರಲ್ಲಿ ಗಂಡಸರಲ್ಲಿನ ದೌರ್ಬಲ್ಯವನ್ನು ಅವಗಣನೆ ಮಾಡಿದರೂ ಹೆಂಗಸರ ಬಗೆಗಿನ ಅಭಿಪ್ರಾಯದ ದೃಷ್ಟಿಯಿಂದ (ಪ್ರತಿ ಹುಡುಗಿಯನ್ನೂ ಸಂಗಾತಿಗಾಗಿ ಅರಸುತ್ತಿರುವ ಹೆಣ್ಣಿನಂತೆ ಮಾತ್ರ ಪರಿಗಣಿಸುವ ಇಂದಿನ ಯುವಕರ ದೃಷ್ಟಿಕೋನಕ್ಕೆ ವಿರುದ್ಧವಾಗಿ) ಮೌಲಿಕವಾದುದು. ಅಂಥ ಆರಾಧನೆಯನ್ನು ಅರಸುವ ಹುಡುಗಿಯರು ದೇವತೆಗಳಾಗುವುದರಲ್ಲಿ ಸುಮಾರು ಯಶಸ್ಸು ಕಾಣುವವರು.

ಕಸಾಟ್‌ಸ್ಕಿ ಹೆಣ್ಣಿನ ಬಗ್ಗೆ ಹೊಂದಿದ್ದ ಭಾವನೆಯು ಇಂತಹುದು, ಇದೇ ದೃಷ್ಟಿಯಿಂದಲೇ ಅವನು ತನ್ನ ನಲ್ಲೆಯನ್ನು ಕಾಣುತ್ತಿದ್ದುದು. ಅವತ್ತಂತೂ ಅವಳ ಬಗೆಗಿನ ಪ್ರೇಮ ಅವನಲ್ಲಿ ಉಕ್ಕೇರಿತ್ತು; ಆದರೆ ಲಾಲಸೆಯು ಕೊಂಚವೂ ಅದರಲ್ಲಿರಲಿಲ್ಲ. ಅದಕ್ಕೆ ವ್ಯತಿರಿಕ್ತವಾಗಿ ಅವಳ ಬಗ್ಗೆ ಅವನಲ್ಲಿ ಅಸಾಧ್ಯವಾದುದರ ಬಗೆಗೆ ಇರುವಂತಹ ಕೋಮಲ ಆರಾಧನಾಭಾವವು ತುಂಬಿಕೊಂಡಿತ್ತು.

ಅವನು ಮೇಲೆದ್ದು ತನ್ನೆರಡೂ ಕೈಗಳನ್ನು ಸೊಂಟದ ಕಿರುಗತ್ತಿಯ ಮೇಲಿಟ್ಟು ಕೊಂಡು ಅವಳೆದುರು ನಿಂತ.

"ವ್ಯಕ್ತಿಯೊಬ್ಬನಿಗೆ ಎಂಥ ಅಲೌಕಿಕ ಸುಖವು ಸಿಗಬಹುದೆಂಬ ಅರಿವು ನನಗುಂಟಾಗಿದೆ! ನಲ್ಲೆ, ನೀನೇ ನನಗೆ ಅಂಥ ಸುಖವನ್ನು ಉಂಟುಮಾಡಿರುವವಳು" ಎಂದ ಅಳುಕಿನ ಮುಗುಳ್ನಗೆಯೊಂದಿಗೆ.

ಅವರಿಬ್ಬರಲ್ಲಿ ಇನ್ನೂ ಅಂಥ ಆತ್ಮೀಯ ಮಾತುಕತೆಗಳು ಒಡಮೂಡಿರಲಿಲ್ಲ; ತಾನು ನೈತಿಕವಾಗಿ ಕೆಳಮಟ್ಟದವನೆಂದು ಭಾವಿಸಿದ್ದ ಅವನು ಅಂಥ ಅಪ್ಸರೆಗೆ ಲಲ್ಲೆಯ ಮಾತುಗಳನ್ನು ಒಪ್ಪಿಸುವುದಕ್ಕೆ ಹಿಂಜರಿಯುತ್ತಿದ್ದ.

"ನನ್ನ ಬಗ್ಗೆ ಅರಿವು ಮೂಡಿರುವುದಕ್ಕಾಗಿ ನಿಮಗೆ ನಾನು ಕೃತಜ್ಞನಾಗಿರಬೇಕು. ನಾನು ಅಂದುಕೊಂಡದ್ದಕ್ಕಿಂತ ನನ್ನ ಮಟ್ಟ ಉತ್ತಮವಾಗಿದೆ."

"ಅದು ಬಹಳ ದಿನಗಳಿಂದಲೂ ನಂಗೆ ಗೊತ್ತು. ಅದಕ್ಕೇ ನಂಗೆ ನಿಮ್ಮ ಬಗ್ಗೆ ಒಲವುಂಟಾದದ್ದು."

ನೈಟಿಂಗೇಲ್‌ಗಳು ಹತ್ತಿರವೇ ಉಲಿದವು, ಕೋಮಲವಾದ ಎಲೆಗಳು ಸರಪರನೆಂದವು, ತಂಗಾಳಿಯು ಬೀಸಿಹೋಯಿತು.

ಅವನು ಅವಳ ಕೈಯನ್ನು ಹಿಡಿದು ಮುತ್ತಿಕ್ಕಿದ, ಅವನ ಕಣ್ಣುಗಳು ನೀರು ತಂದುಕೊಂಡವು.

ತಾನವನನ್ನು ಪ್ರೀತಿಸುತ್ತಿದ್ದೇನೆಂದು ಹೇಳಿದ್ದಕ್ಕಾಗಿ ಅವನು ತನಗೆ ಕೃತಜ್ಞತೆಗಳನ್ನು

ಹೇಳುತ್ತಿದ್ದಾನೆಂದವಳು ಭಾವಿಸಿದಳು. ಮೌನವಾಗಿ ಒಂದೆರಡು ಹೆಜ್ಜೆಗಳನ್ನಿಟ್ಟು ಮತ್ತೆ ಅವಳೆಡೆಗೆ ಬಂದು ಪಕ್ಕದಲ್ಲಿ ಕೂತ.

"ಅಂದ ಹಾಗೆ ... ಏನು ಹೇಳಬೇಕು ಅಂತಿದ್ದೆ ಅಂದರೆ ... ನಿಮ್ಮನ್ನು ಪ್ರೀತಿಸಲು ತೊಡಗಿದಾಗ ನಾನೇನು ಅನಾಸಕ್ತನಾಗಿರಲಿಲ್ಲ. ಗಣ್ಯ ವಲಯಕ್ಕೆ ಸೇರಬೇಕೂಂತ ನನ್ನ ಆಸೆಯಾಗಿತ್ತು ... ಆದರೆ ಆಮೇಲೆ ನಿಮ್ಮ ಪರಿಚಯವಾದ ಮೇಲೆ ನಿಮ್ಮ ಜೊತೆ ಹೋಲಿಸಿದರೆ ಅದೆಷ್ಟು ಕ್ಷುಲ್ಲಕ ಅನ್ನಿಸಿತು. ಅದಕ್ಕಾಗಿ ನಿಮಗೆ ಕೋಪ ಇಲ್ಲ ತಾನೇ?"

ಅವಳು ಉತ್ತರಿಸಲಿಲ್ಲ, ಅವನ ಕೈಯ ಮೇಲೆ ತನ್ನ ಕೈಯಿಟ್ಟಳು. 'ಇಲ್ಲ ನಂಗೆ ಕೋಪ ಇಲ್ಲ' ಅನ್ನುವುದು ಆದರರ್ಥ ಅಂದುಕೊಂಡ.

"ನೀವು ಹೇಳಿದಿರಿ ..." ಎಂದು ಏನೋ ಹೇಳಬೇಕೆಂದವನು ತಡೆದ. "ನನ್ನನ್ನು ಪ್ರೀತಿಸತೊಡಗಿದೆ ಅಂತ ಹೇಳಿದಿರಿ. ನಾನದನ್ನ ನಂಬ್ತೀನಿ, ಆದರೆ ನಿಮ್ಮನ್ನ ಏನೋ ಬಾಧಿಸ್ತಾ ಇದೆ, ನಿಮ್ಮ ಭಾವನೆಗಳಿಗೆ ಅಡ್ಡಿಮಾಡ್ತಿದೆ. ಅದೇನು?" ಎಂದು ಕೇಳುವಷ್ಟು ಧೈರ್ಯ ಅವನಲ್ಲಿರಲಿಲ್ಲ.

"ಹ್ಞೂ, ಈಗಾಗ್ಬೇಕು, ಮುಂದೆ ಹಾಕಬಾರದು! ಆ ಬಗ್ಗೆ ಅವರಿಗೆ ಇವತ್ತಲ್ಲ ನಾಳೆ ಗೊತ್ತಾಗೇ ಗೊತ್ತಾಗತ್ತೆ. ಈ ಹಂತದಲ್ಲಿ ಅವರು ನನ್ನ ಕೈಬಿಡಲಾರರು. ಹಾಗೇನಾದ್ರೂ ಮಾಡಿದರೆ ಗತಿಯೇನು" ಎಂದು ಅವಳು ಚಿಂತಿಸಿದಳು. ಆನಂತರ ಅವನ ನೀಳ ಸುಂದರ ಉದಾತ್ತ ಸದೃಢ ದೇಹದತ್ತ ಒಮ್ಮೆ ಕಣ್ಣು ಹಾಯಿಸಿದಳು. ತ್ಸಾರ್ ಅವರನ್ನು ಪ್ರೀತಿಸಿದುದಕ್ಕಿಂತ ಹೆಚ್ಚು ಅವನನ್ನವಳು ಪ್ರೀತಿಸುತ್ತಿದ್ದಳು. ತ್ಸಾರ್‌ರಲ್ಲಿದ್ದ ಚಕ್ರವರ್ತಿ ವೈಭವವಿರದಿದ್ದರೆ ಇವನಿಗಿಂತ ಅವರನ್ನು ಹೆಚ್ಚೇನೂ ಬಯಸುತ್ತಿರಲಿಲ್ಲ.

"ಇಲ್ಲಿ ಕೇಳಿ, ನಾನು ನಿಮ್ಮನ್ನು ವಂಚಿಸಲಾರೆ. ಒಂದು ವಿಷಯ ಹೇಳಬೇಕು. ಏನು ಅಂತ ಕೇಳ್ತೀರಾ? ಅದು ಅಂದ್ರೆ ಹಿಂದಾಗಲೇ ನಾನೊಬ್ಬರನ್ನು ಪ್ರೀತಿಸಿದ್ದೆ."

ಹೀಗೆ ಹೇಳಿದ ಅವಳು ಮತ್ತೆ ಅವನ ಕೈಮೇಲೆ ಅನುನಯ ಮಾಡುವಂತೆ ತನ್ನ ಕೈಯನ್ನಿಟ್ಟಳು. ಅವನು ಮಾತಾಡಲಿಲ್ಲ.

"ಅವರಾರು ಅಂತ ತಿಳಿಯೋ ಕುತೂಹಲವಾ? - ಚಕ್ರವರ್ತಿಗಳು"

"ನಾವೆಲ್ಲ ಅವರನ್ನು ಪ್ರೀತಿಸ್ತೀವಿ. ಅದೂ ಒಬ್ಬ ಶಾಲಾ ಹುಡುಗಿಯಾಗಿ ಹಾಗೆ ಮಾಡಿದ್ದನ್ನ ನಾನು ಊಹಿಸಿಕೋಬಲ್ಲೆ."

"ಆಗಲ್ಲ, ಆಮೇಲೆ. ನಾನು ಅವರಲ್ಲಿ ಮೋಹಗೊಂಡಿದ್ದೆ, ಆದರೆ ಈಗದು ಮಾಯವಾಗಿದೆ ... ಏನು ಹೇಳಬೇಕೂಂತ ಇದ್ದೀನಿ ಅಂದ್ರೆ ..."

"ಸರಿ, ಈಗದೆಲ್ಲ ಯಾಕೆ?"

"ಹಾಗಲ್ಲ, ಅದು ಬರೀ ... " ಎನ್ನುತ್ತ ಕೈಗಳಿಂದ ತನ್ನ ಮುಖ ಮುಚ್ಚಿಕೊಂಡಳು.

"ಏನು. ನಿಮ್ಮನ್ನ ಒಪ್ಪಿಸಿಕೊಂಡುಬಿಟ್ಟಿದ್ರಾ?"

ಅವಳು ಮಾತಾಡಲಿಲ್ಲ.

"ಅಂದ್ರೆ, ಅವರ ಪ್ರೇಯಸಿ?"

ಅವಳು ಉತ್ತರ ಕೊಡಲಿಲ್ಲ.

ಅವನು ಥಿಗ್ಗನೆ ಮೇಲೆದ್ದ, ಅವನ ದವಡೆಗಳು ನಡುಗುತ್ತಿದ್ದುವು, ಮುಖ ಸಾವಿನ ಕಳೆಯನ್ನು ಹೊತ್ತಿತ್ತು. ಚಕ್ರವರ್ತಿಗಳು ತನ್ನನ್ನು ನೆವ್‌ಸ್ಕಿಯಂದು ನೋಡಿದಾಗ ಆಪ್ತತೆಯಿಂದ ಅಭಿನಂದಿಸಿದ್ದು ಈಗವನಿಗೆ ನೆನಪಾಯಿತು.

"ಅಯ್ಯೋ ದೇವರೇ! ನಾನೇನು ಮಾಡಿದೆ?"

"ನನ್ನ ಮುಟ್ಟಬೇಡ! ದೂರ ಇರು. ಇದೆಂಥ ನೋವು!"

ಅವನು ದಿಮ್ಮನೆ ಹಿಂದಿರುಗಿ ಮನೆಯೊಳಕ್ಕೆ ಹೋದ; ಅವಳ ತಾಯಿಯನ್ನು ಕಂಡ.

"ಏನಾಯ್ತು? ನಾನು..." ಎಂದವಳೆ ಅವನ ಮುಖದ ಸ್ವರೂಪವನ್ನು ಕಂಡು ಸುಮ್ಮನಾದಳು. ರಕ್ತವು ತಲೆಗೆ ಇದ್ದಕ್ಕಿದ್ದಂತೆ ಹತ್ತಿದ ಹಾಗಾಯಿತು ಅವನಿಗೆ.

"ನಿಮಗೆ ಅದು ಗೊತ್ತಿತ್ತಾ? ಅವರ ವಿರುದ್ಧ ನನ್ನನ್ನ ಗುರಾಣಿಯಾಗಿ ಮಾಡಿಕೊಂಡಿರಾ! ನೀವು ಹೆಂಗಸಾಗಿರದಿದ್ರೆ?!" ಎಂದು ಕಿರುಚಿದ ತನ್ನ ಬಲಿಷ್ಠ ಮುಷ್ಟಿಯನ್ನೆತ್ತಿ, ಕ್ಷಣಾನಂತರ ಪಕ್ಕಕ್ಕೆ ತಿರುಗಿ ಹೊರಗೆ ಧಾವಿಸಿದ.

ತನ್ನ ನಲ್ಲೆಯ ಪ್ರಿಯಕರ ಒಬ್ಬ ಸಾಧಾರಣ ವ್ಯಕ್ತಿಯಾಗಿದ್ದಿದ್ದರೆ ಅವನನ್ನು ಕೊಂದೇ ಬಿಡುತ್ತಿದ್ದ; ಆದರೆ ಅವನು ಚಕ್ರವರ್ತಿ, ತನ್ನ ಪ್ರೀತಿಪಾತ್ರ.

ಮಾರನೆಯ ದಿನವೇ ಅವನು ರಜೆ ಹಾಕಿದ ಹಾಗೆಯೇ ಬಿಡುಗಡೆಗಾಗಿ ಅರ್ಜಿಯನ್ನೂ, ತನಗೆ ಏನೋ ಕಾಯಿಲೆಯೆಂದು ಸಬೂಬು ಕೊಟ್ಟು, ಯಾರಿಗೂ ಗೊತ್ತಾಗದಂತೆ ಹಳ್ಳಿಗೆ ಹೋದ.

ತನ್ನ ವ್ಯವಹಾರಗಳನ್ನೆಲ್ಲ ವ್ಯವಸ್ಥೆ ಮಾಡುತ್ತ ಹಳ್ಳಿಯಲ್ಲಿ ಬೇಸಿಗೆಯನ್ನು ಕಳೆದ. ಬೇಸಿಗೆ ಮುಗಿದ ಮೇಲೆ ಪೀಟರ್ಸ್‌ಬರ್ಗ್‌ಗೆ ವಾಪಸಾಗದೆ, ಒಂದು ಆಶ್ರಮ ಸೇರಿ ಸನ್ಯಾಸ ಸ್ವೀಕರಿಸಿದ.

ಈ ನಿರ್ಧಾರವನ್ನು ಬದಲಾಯಿಸುವಂತೆ ಒಲಿಸಿಕೊಳ್ಳಲು ತಾಯಿ ಅವನಿಗೆ ಕಾಗದ ಬರೆದಳು; ಆದರೆ ದೇವರ ಕರೆ ಮಿಕ್ಕೆಲ್ಲವನ್ನೂ ಮೀರಿದುದು ಎಂದವನು ಉತ್ತರಿಸಿದ. ಅವನಂತೆಯೇ ಸ್ವಾಭಿಮಾನಿಯೂ ಮಹತ್ವಾಕಾಂಕ್ಷಿಯೂ ಆಗಿದ್ದ ತಂಗಿ ಮಾತ್ರ ಅವನನ್ನು ಅರ್ಥಮಾಡಿಕೊಂಡಳು.

ತನಗಿಂತ ಮಿಗಿಲು ಎಂದು ಭಾವಿಸಿದ್ದವರನ್ನು ಮೀರುವ ಉದ್ದೇಶದಿಂದಲೇ ಅಣ್ಣ ಸನ್ಯಾಸಿಯಾಗಿರುವನೆಂಬುದನ್ನು ತಂಗಿ ಗುರುತಿಸಿದಳು. ಅವನನ್ನವಳು ಸರಿಯಾಗಿ ಅರ್ಥಮಾಡಿಕೊಂಡಿದ್ದಳು. ಸನ್ಯಾಸಿಯಾಗುವುದರ ಮೂಲಕ ಮಿಕ್ಕೆಲ್ಲರೂ ಮತ್ತು

ಸೈನಿಕನಾಗಿದ್ದಾಗ ತಾನೂ ಮಹತ್ವದ್ದೆಂದು ಭಾವಿಸಿದುದೆಲ್ಲವನ್ನೂ ಅವನೀಗ ಕ್ಷುಲ್ಲಕವೆಂದು ಪರಿಗಣಿಸಿದ. ಹಿಂದೆ ತಾನು ಯಾರನ್ನು ಕಂಡು ಅಸೂಯೆಪಟ್ಟಿದ್ದನೋ ಅವರೆಲ್ಲರನ್ನೂ ಮೇಲಿನಿಂದ ನೋಡುವ ಎತ್ತರವನ್ನವನೀಗ ಏರಿದ್ದ... ಇದಷ್ಟೇ ಅಲ್ಲ, ಅವನ ತಂಗಿ ವಾರ್ವಾರಾ ಊಹಿಸಿದ್ದಂತೆ, ಅವನ ಮೇಲೆ ಪ್ರಭಾವ ಬೀರಿದ್ದುದು, ಅವನ ಮನಸ್ಸಿನಲ್ಲಿ ಬೇರೇನೋ ಇತ್ತು. ವಾರ್ವಾರಾಗೆ ಗೊತ್ತಿಲ್ಲದಂತೆ ಅವನಲ್ಲಿ ಹುದುಗಿದ್ದ ತೀವ್ರ ಧಾರ್ಮಿಕ ಭಾವನೆ; ಆ ಭಾವನೆಯು ಹೆಮ್ಮೆ ಮತ್ತು ಔನ್ನತ್ಯಗಳೊಡನೆ ಅವಿನಾಭಾವದಿಂದ ಹೆಣೆದುಕೊಂಡಿತ್ತು, ಅದೇ ಅವನಿಗೆ ಮಾರ್ಗದರ್ಶಕವಾಗಿದ್ದುದು. ದೈವೀ ಚೆಲುವನ್ನು ಹೊಂದಿದವಳು ಎಂದು ತಾನು ಭಾವಿಸಿದ್ದ ಮೇರಿಯ ಬಗ್ಗೆ ಭ್ರಮನಿರಸನ ಗೊಂಡಿದ್ದರಿಂದಾದ ಆಘಾತವು ಅವನನ್ನು ಹತಾಶೆಯ ಕೂಪಕ್ಕೆ ತಳ್ಳಿತ್ತು, ಆ ಹತಾಶೆಯು ಅವನನ್ನು ನೂಕಿದ್ದುದೆಲ್ಲಿಗೆ? ದೇವರ ಸಾನ್ನಿಧ್ಯಕ್ಕೆ, ತನ್ನ ಚಿಕ್ಕಂದಿನಿಂದ ಹುದುಗಿದ್ದ ನಂಬಿಕೆಯೆಡೆಗೆ.

## 2

ಮೇರಿ ಮಾತೆಯ ಹಬ್ಬದ ದಿನ ಕಸಾಟ್‌ಸ್ಕಿ ಮಠವನ್ನು ಪ್ರವೇಶಿಸಿದ. ಅಲ್ಲಿನ ಸ್ಥಾನಪತಿಗಳು ಹುಟ್ಟಿನಿಂದ ಸಂಭಾವಿತ ಕುಟುಂಬದವರು, ವಿದ್ವತ್ ಲೇಖಕರು ಹಾಗೂ ಆಧ್ಯಾತ್ಮಿಕ ಗುರುಗಳಾಗಿದ್ದವರು; ವಲಾಶಿಯದಲ್ಲಿ ಹುಟ್ಟಿ ತಾನು ಆರಿಸಿದ ಮಾರ್ಗದರ್ಶಕ ಹಾಗೂ ಗುರುವನ್ನು ಅತ್ಯಂತ ವಿಧೇಯತೆಯಿಂದ ಅನುಸರಿಸುವ ಸನ್ಯಾಸಿಗಳ ಪಂಗಡಕ್ಕೆ ಸೇರಿದವರು ಅವರು. ಈ ಗುರುಶ್ರೇಷ್ಠರು ಆಂಬ್ರೋಸ್ ಅಧ್ಯಾತ್ಮ ಗುರುಗಳ ಶಿಷ್ಯರು, ಅವರು ಮಕಾರಿಯಸ್ ಅವರ ಶಿಷ್ಯರಾಗಿದ್ದವರು, ಅವರು ಲಿಯೋನಿಡ್ ಗುರುಗಳ ಶಿಷ್ಯರು, ಮತ್ತವರು ಪೈಸಿ ವೆಲಿಶ್ಕೋವ್‌ಸ್ಕಿ ಅವರ ಶಿಷ್ಯರು.

ಇಂಥ ಗುರುಗಳನ್ನು ತನ್ನ ಮಾರ್ಗದರ್ಶಕರಾಗಿ ಆರಿಸಿಕೊಂಡ ಕಸಾಟ್‌ಸ್ಕಿ ಅವರ ಚರಣಾರವಿಂದಗಳಲ್ಲಿ ಶರಣಾದ. ಮಠದಲ್ಲಿ ಇತರರಿಗಿಂತ ಉನ್ನತವಾದ ಬದುಕನ್ನು ಹೊಂದಿದೆನೆಂಬ ಭಾವನೆಯೊಡನೆ ಜಗತ್ತಿನಲ್ಲಿನಂತೆ ಇಲ್ಲಿಯೂ ತೃಪ್ತಿಯನ್ನು ಪಡೆದ. ಅಂತರಂಗ ಬಹಿರಂಗಗಳೆರಡರಲ್ಲಿಯೂ ಪರಿಪೂರ್ಣತೆಯನ್ನು ಸಾಧಿಸಿದ ಸಂತೃಪ್ತಿಯನ್ನು ಹೊಂದಿದ. ರೆಜಿಮೆಂಟಿನಲ್ಲಿ ಹೇಗೆ ತಾನು ಲೋಪವಿಲ್ಲದ ಆಫೀಸರ್ ಅನ್ನಿಸಿಕೊಂಡು ತನ್ನ ಕರ್ತವ್ಯಗಳ ನಿರ್ವಹಣೆಯಲ್ಲಿ ಹೆಚ್ಚಿನದನ್ನು ನಿರ್ವಹಿಸಿ ಪರಿಪೂರ್ಣತೆಯ ದಿಗಂತಗಳನ್ನು ವಿಸ್ತರಿಸಿಕೊಂಡಿದ್ದನೋ ಹಾಗೆಯೇ ಇಲ್ಲಿಯೂ ಸನ್ಯಾಸಿಯಾಗಿ ಅವನು ಪರಿಪೂರ್ಣತೆಯನ್ನು ಸಾಧಿಸಲು ಸದಾ ಹೆಣಗುತ್ತಿದ್ದ; ಪ್ರಯತ್ನಶೀಲತೆ, ಹಿತಮಿತ ನಡೆನುಡಿ, ವಿನೀತತೆ, ವಿಧೇಯತೆ, ಮಾತು-ಕೃತಿಗಳೆರಡರ ಪರಿಶುದ್ಧತೆ ಇವುಗಳು ಅವನ ವ್ಯಕ್ತಿತ್ವದ ಭಾಗಗಳಾದುವು. ವಿಧೇಯತೆಯಿಂದಾಗಿ ಅವನ ಬದುಕು ಸರಳವಾಯಿತು. ರಾಜಧಾನಿಗೆ ಹತ್ತಿರವಿದ್ದು ಪದೇ ಪದೇ ಹೋಗಿಬರಬೇಕಾಗಿದ್ದ ಜಾಗದಲ್ಲಿದ್ದ ಮಠದ ಬದುಕಿನ ಹಲವು ಅಂಶಗಳು ಅವನಿಗೆ ಸಂತಸವುಂಟುಮಾಡಲಾರದೆ ಆಮಿಷದಂತೆ

ತೋರಿದವುಗಳನ್ನೂ ವಿಧೇಯತೆಯಿಂದಾಗಿ ನಿರ್ವಹಿಸಲು ಅವನಿಗೆ ಸಾಧ್ಯವಾಯಿತು. 'ಆಲೋಚಿಸುವುದು ನನ್ನ ಕೆಲಸವಲ್ಲ, ಅವಶೇಷಗಳ ಪಕ್ಕದಲ್ಲಿ ನಿಲ್ಲುವುದೋ, ಮೇಳಗಾನವಲ್ಲಿ ಹಾಡುವುದೋ, ಮಠದ ಅತಿಥಿಗೃಹದ ಲೆಕ್ಕಪತ್ರಗಳನ್ನು ನಿರ್ವಹಿಸುವುದೋ ಯಾವುದಾದರೂ ಆಗಲಿ, ನನಗೆ ವಹಿಸಿದ ಕೆಲಸವನ್ನು ನಿರ್ವಹಿಸುವುದು, ಅಷ್ಟೆ,' ಯಾವುದೇ ವಿಷಯದ ಬಗೆಗಿನ ಸಂಶಯದ ಸಾಧ್ಯತೆಯನ್ನು ಅವನು ಗುರುಗಳನ್ನು ವಿಧೇಯತೆಯಿಂದ ಅನುಸರಿಸುವ ಮೂಲಕ ದಮನಿಸಿಕೊಂಡ. ಇಲ್ಲದಿದ್ದರೆ, ದೀರ್ಘವೂ ಏಕತಾನವೂ ಆದ ಚರ್ಚ್‌ನ ಆರಾಧನೆಗಳೂ, ನಾನಾ ಬಗೆಯ ಸಂದರ್ಶಕರ ಗದ್ದಲವೂ, ಇತರ ಸನ್ಯಾಸಿಗಳ ದುಶ್ಚಟಗಳೂ ಅವನನ್ನು ಅಪ್ಪಚ್ಚಿ ಮಾಡಿಬಿಡುತ್ತಿದ್ದವು. ಅವೆಲ್ಲವನ್ನೂ ಸಂತಸದಿಂದ ಸಹಿಸಿಕೊಂಡಿದ್ದೇ ಅಲ್ಲದೆ ಅದರಲ್ಲಿಯೇ ಒಂದು ಬಗೆಯ ಸಮಾಧಾನವನ್ನೂ ಕಾಣುತ್ತಿದ್ದ. 'ಪ್ರತಿದಿನ ಅನೇಕ ವೇಳೆ ಹೇಳಿದ ಪ್ರಾರ್ಥನೆಗಳನ್ನೇ ಏಕೆ ಹೇಳಬೇಕೋ ನಾನರಿಯೆ, ಆದರೆ ಇದು ಅನಿವಾರ್ಯವೆಂದು ನಾನು ಬಲ್ಲೆ; ಇದರಿಂದಾಗಿ ಅವುಗಳಲ್ಲೇ ನನಗೆ ಸಂತೋಷ ದೊರೆಯುತ್ತದೆ.' ದೇಹದ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳುವುದಕ್ಕಾಗಿ ಆಹಾರ ಸೇವನೆ ಹೇಗೆ ಮುಖ್ಯವೋ ಹಾಗೆಯೇ ಆಧ್ಯಾತ್ಮಿಕ ಬದುಕಿನ ಸ್ವಾಸ್ಥ್ಯಕ್ಕಾಗಿ ಆಧ್ಯಾತ್ಮಿಕ ಆಹಾರವಾದ ಪ್ರಾರ್ಥನೆಗಳು ಮುಖ್ಯ ಎಂದು ಅವನ ಮಾರ್ಗದರ್ಶಕ ಗುರುಗಳು ಹೇಳುತ್ತಿದ್ದರು. ಇದನ್ನವನು ನಂಬಿದ. ಚರ್ಚ್‌ನ ಆರಾಧನೆಗಳಿಗಾಗಿ ಬೆಳಗಿನ ಜಾವವೇ ಏಳಬೇಕಾಗುತ್ತಿತ್ತು, ಇದು ಕಷ್ಟದ ಕೆಲಸವೇ, ಆದರೆ ಗುರುಗಳ ಮಾತಿನಿಂದ ಅವನಿಗೆ ಸಮಾಧಾನವಾಗುತ್ತಿತ್ತು. ಇದೆಲ್ಲ ಸಾಧ್ಯವಾಗಿದ್ದುದು ವಿನಯದ ಎಚ್ಚರದಿಂದ, ತಾನು ಮಾಡಬೇಕಾಗಿದ್ದುದನ್ನು ಗುರುಗಳು ಸಮಂಜಸವಾಗಿಯೇ ನಿರ್ಧರಿಸುತ್ತಾರೆ ಎಂಬ ನಂಬಿಕೆಯಿಂದ.

ಅವನ ಬದುಕಿನ ಆಸಕ್ತಿಯಿದ್ದುದು ತನ್ನ ಬಯಕೆಗಳನ್ನು ಹೆಚ್ಚು ಹೆಚ್ಚು ದಮನಗೊಳಿಸಿ ಕೊಳ್ಳುವುದರಲ್ಲಿ ಮಾತ್ರವಲ್ಲದೆ, ಮೊದಮೊದಲು ತನಗೆ ಅಸಾಧ್ಯ ಎನಿಸಿದ್ದ ಎಲ್ಲ ಕ್ರಿಶ್ಚಿಯನ್ ಗುಣಗಳನ್ನೂ ಅಳವಡಿಸಿಕೊಳ್ಳುವುದರಲ್ಲಿ. ತನ್ನೆಲ್ಲ ತೋಟವನ್ನೂ ತನ್ನ ತಂಗಿಗೆ ಬಿಟ್ಟುಕೊಟ್ಟಿದ್ದರ ಬಗ್ಗೆ ಅವನಿಗೆ ವಿಷಾದವೇನೂ ಇರಲಿಲ್ಲ; ಈಗವನಿಗೆ ಸ್ವಂತ ಆಸ್ತಿ ಯಾವುದೂ ಇರಲಿಲ್ಲ, ತನಗಿಂತ ಕೆಳಗಿನವರ ಬಗ್ಗೆ ವಿನಯದಿಂದಿರುವುದು ಅವನಿಗೀಗ ಸುಲಭವಷ್ಟೇ ಅಲ್ಲ, ಅದು ಅವನ ಸಂತಸಕ್ಕೂ ಕಾರಣವಾಗಿತ್ತು. ದೈಹಿಕ ಬಯಕೆ, ದುರಾಶೆ ಹಾಗೂ ಕಾಮನೆಗಳನ್ನು ಗೆಲ್ಲುವುದು ಅವನಿಗೆ ಸುಲಭವಾಯಿತು. ಕಾಮನೆಯ ಬಗ್ಗೆ ಅವನ ಗುರುಗಳು ವಿಶೇಷವಾಗಿ ಎಚ್ಚರಿಸಿದ್ದರು. ಆದರೆ ಕಸಾಟ್‌ಸ್ಕಿ ಅದರಿಂದ ಮುಕ್ತನಾಗಿ ಆನಂದದಿಂದಿದ್ದ.

ಅವನನ್ನು ಕಾಡುತ್ತಿದ್ದುದು ಒಂದೇ ವಿಷಯ? ತನ್ನ ನಲ್ಲೆಯ ನೆನಪು; ಅದೂ ಬರಿಯ ನೆನಪಲ್ಲ, ಮುಂದಾಗಲಿದ್ದುದರ ವರ್ಣಮಯ ಚಿತ್ರ. ತನಗರಿವಿಲ್ಲದೆಯೇ ಅವನು ಚಕ್ರವರ್ತಿಗಳಿಗೆ ಆಪ್ತಳಾಗಿದ್ದು ಮುಂದೆ ಮದುವೆಯಾಗಿ ತಾಯಿಯಾಗಿ ಸಂತೋಷ ವಾಗಿದ್ದವಳೊಬ್ಬಳ ವಿಷಯ ನೆನಪಾಯಿತು. ಅವಳ ಗಂಡ ಹಿರಿಯ ಹುದ್ದೆಯಲ್ಲಿದ್ದ,

ಗೌರವಸ್ಥನೆನಿಸಿದ್ದವನಿಗೆ ಅವಳು ಮೆಚ್ಚಿನ ಸತಿಯಾಗಿದ್ದಳು.

ಮನಸ್ಸು ಪ್ರಸನ್ನವಾಗಿದ್ದಾಗ ಕಸಾಟ್‌ಸ್ಕಿಗೆ ಅಂಥ ಆಲೋಚನೆಗಳು ಕಾಟ ಕೊಡುತ್ತಿರಲಿಲ್ಲ, ಸಂತಸದಲ್ಲಿದ್ದಾಗ ಅವುಗಳು ನೆನಪಿಗೆ ಬಂದು ತನ್ನ ಆಕರ್ಷಣೆಗಳೀಗ ಗತಕಾಲದವೆಂದು ನಸುನಗುತ್ತಿದ್ದ. ಆದರೆ ತನ್ನ ಈಗಿನ ಬದುಕು ಬಣ್ಣಗೇಡಿಯಾದುದೆನ್ನಿಸಿದ ಕ್ಷಣಗಳಲ್ಲಿ ಅವನು ಮಂಕಾಗುತ್ತಿದ್ದ, ತಾನು ಕಣ್ಣ ಮುಂದಿರಿಸಿಕೊಂಡಿದ್ದ ಆದರ್ಶಗಳು ಅಸಾಧ್ಯವೆನ್ನಿಸಿ ಅವುಗಳಲ್ಲಿ ನಂಬಿಕೆ ಬಾರದಾದಾಗ ಬದುಕನ್ನು ಬದಲಾಯಿಸಿಕೊಂಡಿದ್ದರ ಬಗ್ಗೆ ವಿಷಾದಕ್ಕೊಳಗಾಗುತ್ತಿದ್ದ.

ಅಂಥ ಕ್ಷಣಗಳಲ್ಲಿ ಅವನನ್ನು ಪಾರುಮಾಡುತ್ತಿದ್ದುದೆಂದರೆ ವಿಧೇಯತೆ ಮತ್ತು ಕೆಲಸಗಳು, ಮತ್ತು ಇಡೀ ದಿನವನ್ನು ಆಕ್ರಮಿಸಿಕೊಳ್ಳುತ್ತಿದ್ದ ಪ್ರಾರ್ಥನೆ. ಅವನು ಎಂದಿನ ಪ್ರಾರ್ಥನೆಗಳಲ್ಲಿ ತಲ್ಲೀನನಾಗುತ್ತಿದ್ದ, ಎಂದಿಗಿಂತಲೂ ಹೆಚ್ಚು ಪ್ರಾರ್ಥನೆಗಳಲ್ಲಿ ತೊಡಗಿಕೊಳ್ಳುತ್ತಿದ್ದ; ಆದರೆ ಅದೆಲ್ಲ ತುಟಿಯೀಚೆಗಿನದವಾಗಿರುತ್ತಿದ್ದವೇ ಹೊರತು ಮನಸ್ಸು ಅದರಲ್ಲಿ ನಟ್ಟಿರುತ್ತಿರಲಿಲ್ಲ. ಇಂಥ ಸನ್ನಿವೇಶಗಳು ಕೆಲವು ವೇಳೆ ದಿನವಿಡೀ ಅಥವಾ ಎರಡು ದಿನಗಳು ಆವರಿಸುತ್ತಿದ್ದವು, ಆನಂತರ ತಾವಾಗಿ ಹಿಂದೆ ಸರಿಯುತ್ತಿದ್ದವು. ತಾನು ತನ್ನ ಸ್ತಿಮಿತದಲ್ಲೂ ಇಲ್ಲ ದೇವರ ಹಿಡಿತದಲ್ಲೂ ಇಲ್ಲ, ಮತ್ತಾವುದೋ ಒಂದರ ನಿಯಂತ್ರಣದಲ್ಲಿದ್ದೇನೆ ಎಂದು ಕಸಾಟ್‌ಸ್ಕಿಗೆನ್ನಿಸುತಿತ್ತು. ಅಂಥ ಕ್ಷಣಗಳಲ್ಲಿ ಅವನು ಮಾಡಬಹುದಾಗಿದ್ದುದೆಂದರೆ ಗುರುಗಳನ್ನು ವಿಧೇಯವಾಗಿ ಅನುಸರಿಸುವುದು, ತಾನಾಗಿ ಯಾವ ಕೆಲಸಕ್ಕೂ ಕೈಹಾಕದಿರುವುದು, ಸುಮ್ಮನೆ ಕಾದು ಕುಳಿತಿರುವುದು. ಸಾಮಾನ್ಯವಾಗಿ ಈ ಸಂದರ್ಭಗಳಲ್ಲಿ ಅವನು ತನ್ನ ಇಚ್ಛೆಯ ಬದುಕನ್ನು ಬಾಳದೆ ಗುರುಗಳ ಆದೇಶದಂತೆ ನಡೆಯುವುದು; ಇಂಥ ವಿಧೇಯತೆಯು ಅವನಲ್ಲಿ ವಿಶಿಷ್ಟ ಪ್ರಸನ್ನತೆಯನ್ನು ಉಂಟು ಮಾಡುತ್ತಿತ್ತು.

ಹೀಗೆ ತನ್ನ ಮಠದಲ್ಲಿ ಅವನು ಏಳು ವರ್ಷಗಳನ್ನು ಕಳೆದ. ಮೂರನೆಯ ವರ್ಷದ ಕೊನೆಯ ಹೊತ್ತಿಗೆ ಅವನ ತಲೆಯನ್ನು ಬೋಳಿಸಿ ಸರ್ಜಿಯಸ್ ಎಂಬ ಹೆಸರಿನಿಂದ ಗುರುವಿನ ಸ್ಥಾನವನ್ನು ನೀಡಲಾಯಿತು. ಈ ಸ್ಥಾನವನ್ನು ಪಡೆದುದು ಅವನ ಆಂತರಿಕ ಬದುಕಿನಲ್ಲಿ ಒಂದು ಮಹತ್ವದ ಸನ್ನಿವೇಶ. ಧಾರ್ಮಿಕ ಕಾರ್ಯಗಳಲ್ಲಿ ಭಾಗಿಯಾಗಿ ಗುರುಗಳನ್ನು ಅನುಸರಿಸುತ್ತಿದ್ದುದು ಹಿಂದೆ ಅವನಿಗೆ ಸಮಾಧಾನ ಮತ್ತು ಆಧ್ಯಾತ್ಮಿಕ ಉನ್ನತಿಗಳನ್ನು ಅನುಭವಕ್ಕೆ ತಂದಿದ್ದುವು, ಆದರೆ ಈಗ ತಾನೇ ಅಂತಹವುಗಳ ಉಸ್ತುವಾರಿ ಹೊತ್ತ ಸನ್ನಿವೇಶದಲ್ಲಿ ಅದರ ಸಿದ್ಧತೆಯ ನಿರ್ವಹಣೆಯಲ್ಲಿ ಅವನ ಮನಸ್ಸು ಗಾಢವಾದ ಆನಂದದ ಭಾವನೆಯನ್ನು ತುಂಬುತ್ತಿತ್ತು. ಆದರೆ ಬರಬರುತ್ತ ಅದರ ತೀವ್ರತೆ ಕಡಿಮೆಯಾಗುತ್ತ ನಡೆಯಿತು. ಒಮ್ಮೆಯಂತೂ ಅಂತಹ ಸನ್ನಿವೇಶವನ್ನು ನಿರ್ವಹಿಸುವಾಗ ಯಾವುದೋ ಖಿನ್ನ ಮನಃಸ್ಥಿತಿಯಲ್ಲಿ ಈ ವಿಧಿಯು ಉಂಟುಮಾಡುವ ಪರಿಣಾಮವು ದೀರ್ಘ ಕಾಲ ಬಾಳುವುದಿಲ್ಲ ಎನಿಸಿತು. ವಾಸ್ತವವಾಗಿ ಪರಿಣಾಮ ನಿಂತಿತು, ಬರಿಯ ಆಚರಣೆ ಉಳಿಯಿತು.

ಒಟ್ಟಾರೆ, ಮಠದ ಬದುಕಿನ ಅವನ ಏಳನೆಯ ವರ್ಷದಲ್ಲಿ ಸರ್ಜಿಯಸ್‌ಗೆ ಸಾಕು ಸಾಕೆನಿಸಿತು. ಅಲ್ಲಿ ಕಲಿಯಬಹುದಾದುದನ್ನೆಲ್ಲ ಅವನು ಕಲಿತಾಗಿತ್ತು, ಸಾಧಿಸ ಬಹುದಾದುದನ್ನೆಲ್ಲ ಸಾಧಿಸಿಯಾಗಿತ್ತು; ಹೀಗಾಗಿ ಮಾಡುವುದಕ್ಕೇನೂ ಉಳಿದಿರಲಿಲ್ಲ ಮತ್ತು ಅವನ ಆಧ್ಯಾತ್ಮಿಕ ಸೋಂಬೇತನ ಹೆಚ್ಚಾಯಿತು. ಈ ಅವಧಿಯಲ್ಲಿ ಅವನಿಗೆ ತನ್ನ ತಾಯಿಯು ಸತ್ತ ಹಾಗೂ ತಂಗಿ ವಾರ್ವರಾಳ ಮದುವೆಯ ವಿಷಯ ತಿಳಿಯಿತು. ಆದರೆ ಅವೆರಡೂ ಅವನ ಮಟ್ಟಿಗೆ ನಗಣ್ಯ ವಿಚಾರಗಳಾಗಿದ್ದವು. ಅವನ ಗಮನ ಹಾಗೂ ಆಸಕ್ತಿಗಳು ಸಂಪೂರ್ಣವಾಗಿ ತನ್ನ ಆಂತರಿಕ ಬದುಕಿನ ಬಗ್ಗೆ ಕೇಂದ್ರೀಕೃತವಾಗಿದ್ದುವು.

ಗುರುವಾದ ನಂತರದ ನಾಲ್ಕನೆಯ ವರ್ಷ, ಅಂದರೆ ಬಿಷಪ್ ಅವನ ಬಗ್ಗೆ ವಿಶೇಷ ಕೃಪೆಯಿರಿಸಿಕೊಂಡಿದ್ದಾಗ, ತನಗೇನಾದರೂ ಹೆಚ್ಚಿನ ಜವಾಬ್ದಾರಿಗಳನ್ನು ವಹಿಸಿದರೆ ತಿರಸ್ಕರಿಸಬಾರದೆಂದು ಅವನ ಗುರುಗಳು ಹೇಳಿದ್ದರು. ಆಧ್ಯಾತ್ಮಿಕ ಆಕಾಂಕ್ಷೆಯ ಬಗ್ಗೆ ಇತರ ಸನ್ಯಾಸಿಗಳು ತೀರ ಬೇಸರಿಕೆಯನ್ನು ಹೊಂದಿದ್ದರು ಎಂಬುದನ್ನವನು ಕಂಡುಕೊಂಡಿದ್ದ, ಆದರೆ ಅದರ ಬಗ್ಗೆ ಅವನಿಗೆ ಒಳಗೊಳಗೇ ಹೆಚ್ಚು ಒಲವು ಬೆಳೆದಿತ್ತು. ಅವನನ್ನು ರಾಜಧಾನಿಗೆ ಹತ್ತಿರದಲ್ಲಿನ ಒಂದು ಮಠಕ್ಕೆ ನಿಯೋಜಿಸಲಾಯಿತು. ಅದನ್ನು ತಿರಸ್ಕರಿಸಬೇಕೆನ್ನಿಸಿದರೂ ಅವನ ಗುರುಗಳು ಒಪ್ಪಿಕೊಳ್ಳಬೇಕೆಂದು ಒತ್ತಾಯಿಸಿದರು. ಅವನು ಅದರಂತೆಯೇ ನಡೆದುಕೊಂಡ; ಗುರುಗಳ ಆಶೀರ್ವಾದವನ್ನು ಪಡೆದು ಬೀಳ್ಕೊಂಡು ನಿಗದಿತ ಮಠಕ್ಕೆ ಹೋದ.

ಸರ್ಜಿಯಸ್‌ನ ಬದುಕಿನಲ್ಲಿ ಬೇರೊಂದು ಮಠಕ್ಕೆ ವರ್ಗಾವಣೆಯಾದುದು ಮಹತ್ತರವಾದೊಂದು ವಿಷಯವಾಯಿತು. ಅಲ್ಲಿ ಅವನನ್ನು ಅನೇಕ ಆಕರ್ಷಣೆಗಳು ಕಾಡಿದವು, ಅವನ ಸಂಕಲ್ಪಶಕ್ತಿಯೆಲ್ಲ ಅವುಗಳನ್ನೆದುರಿಸುವುದರಲ್ಲಿಯೇ ವಿನಿಯೋಗ ವಾಯಿತು.

ಮೊದಲನೆಯ ಮಠದಲ್ಲಿದ್ದಾಗ ಹೆಣ್ಣು ಅವನ ಆಕರ್ಷಣೆಯ ವಸ್ತುವಾಗಿರಲಿಲ್ಲ, ಆದರೆ ಇಲ್ಲಿ ಅದು ಅದಮ್ಯವೆನಿಸಹತ್ತಿತ್ತು, ಅದಕ್ಕೊಂದು ಖಚಿತ ರೂಪವೂ ಉಂಟಾಯಿತು. ಚೆಲ್ಲು ಚೆಲ್ಲಾದ ಹೆಣ್ಣೊಬ್ಬಳು ಅಲ್ಲಿದ್ದಳು, ಅವನಿಂದ ವಿಶೇಷ ಮನ್ನಣೆಯನ್ನವಳು ನಿರೀಕ್ಷಿಸಿದಳು. ಅವನೊಡನೆ ಮಾತಿನಲ್ಲಿ ತೊಡಗುವುದರೊಂದಿಗೆ ತನ್ನ ಮನೆಗೆ ಬರಲೂ ಆಹ್ವಾನವಿತ್ತಳು. ಅದನ್ನು ಸರ್ಜಿಯಸ್ ಖಡಾಖಂಡಿತವಾಗಿ ನಿರಾಕರಿಸಿದ, ಆದರೆ ತನ್ನಲ್ಲಿ ಆಸೆಯು ಸ್ಥಿರವಾಗಿ ರೂಪುಗೊಂಡಿದ್ದುದರ ಬಗ್ಗೆ ಹೌಹಾರಿದ. ತೀರ ಗಾಬರಿಗೊಂಡ ಅವನು ತನ್ನ ಗುರುಗಳಿಗೆ ಈ ಕುರಿತು ಪತ್ರವನ್ನು ಬರೆದ. ಜೊತೆಗೆ, ತನ್ನನ್ನು ನಿಯಂತ್ರಣದಲ್ಲಿಟ್ಟುಕೊಳ್ಳಲು ಅವನು ಒಬ್ಬ ಹೊಸಬ ಸನ್ಯಾಸಿಗೆ ಆ ಕುರಿತು ಹೇಳಿಕೊಂಡ; ತನ್ನ ನಾಚಿಕೆಯನ್ನು ಅಡಗಿಸಿಕೊಂಡು ಅವನ ಮುಂದೆ ತನ್ನ ದೌರ್ಬಲ್ಯವನ್ನು ಒಪ್ಪಿಕೊಂಡ; ತನ್ನ ಮೇಲೆ ಕಣ್ಣಿಟ್ಟು ಧಾರ್ಮಿಕ ವಿಧಿಗಳ ಹೊರತಾಗಿ ಬೇರೆಲ್ಲೂ ಹೋಗದ ಹಾಗೆಯೂ ಕರ್ತವ್ಯಗಳನ್ನು ನಿರ್ವಹಿಸುವ ಕಡೆಯೂ ನಿಗಾ ವಹಿಸಬೇಕೆಂದು ಕೇಳಿಕೊಂಡ.

ಇಷ್ಟಲ್ಲದೆ, ಸರ್ಜಿಯಸ್‌ನ ಎದುರಿದ್ದ ದೊಡ್ಡ ಅಪಾಯವೆಂದರೆ ಹೊಸ ಸ್ಥಾನಪತಿಯ ಬಗೆಗಿನ ಹೇವರಿಕೆ; ಚರ್ಚ್‌ನಲ್ಲಿ ವೃತ್ತಿಯನ್ನು ದಂಧೆ ಮಾಡಿಕೊಂಡಿದ್ದ ಅವನೊಬ್ಬ ಮಹಾ ಲೌಕಿಕ ವ್ಯಕ್ತಿ. ತನ್ನ ಸಾಮರ್ಥ್ಯ ಮೀರಿ ಹೋರಾಡಿದರೂ ಅವನು ತನ್ನ ಭಾವನೆಗಳನ್ನು ಹತ್ತಿಕ್ಕಿಕೊಳ್ಳಲಾರದಾದ. ಸ್ಥಾನಪತಿಯ ಮುಂದೆ ಅವನು ವಿನೀತನಾಗಿದ್ದ, ಆದರೆ ಮನದಾಳದಲ್ಲಿ ಅವನ ಬಗ್ಗೆ ತೀವ್ರ ವಿರೋಧವಿತ್ತು. ಹೊಸ ಮಠದಲ್ಲಿನ ಬದುಕಿನ ಎರಡನೆಯ ವರ್ಷದಲ್ಲಿ ಆ ವಿರೋಧಭಾವನೆ ಕಟ್ಟೆಯೊಡೆಯಿತು.

ಮೇರಿ ಮಾತೆಯ ಹಬ್ಬದ ಹಿಂದಿನ ದಿನ ಚರ್ಚ್‌ನ ವಿಶಾಲ ಅಂಗಣದಲ್ಲಿ ಜಾಗರಣೆಯ ಆರಾಧನೆ ನಡೆಯುತ್ತಿತ್ತು. ಅಲ್ಲಿ ಅನೇಕ ಭಕ್ತರು ನೆರೆದಿದ್ದರು. ಸ್ಥಾನಪತಿಗಳೇ ಆರಾಧನೆಯನ್ನು ನಡೆಸುತ್ತಿದ್ದರು. ಫಾದರ್ ಸರ್ಜಿಯಸ್ ತನ್ನ ಎಂದಿನ ಜಾಗದಲ್ಲಿ ನಿಂತು ಪ್ರಾರ್ಥನೆ ಸಲ್ಲಿಸುತ್ತಿದ್ದ. ಇಂತಹ ಆರಾಧನೆಯ ಸಮಯದಲ್ಲಿ, ಅದೂ ವಿಶಾಲ ಚರ್ಚ್‌ನಲ್ಲಿ ಜರುಗುತ್ತಿದ್ದ ಆರಾಧನೆಯ ನೇತೃತ್ವ ತಾನೇ ವಹಿಸಿರುವಾಗ ತನ್ನ ಮನಸ್ಸಿನಲ್ಲಿ ನಡೆಯುತ್ತಿದ್ದ ತುಮುಲವನ್ನು ಎದುರಿಸುತ್ತಿದ್ದ. ಜನರು, ಅದರಲ್ಲೂ ಹೆಂಗಸರು ನೆರೆದಿರುವುದರಿಂದ ಮನಸ್ಸಿನಲ್ಲುಂಟುಮಾಡಿದ ಕೋಲಾಹಲದಿಂದಾಗಿ ಈ ತುಮುಲ ಆರಂಭಗೊಂಡಿತ್ತು. ಅವರ ಕಡೆಯಾಗಲೀ ನಡೆದಿರುವ ಯಾವುದರ-ಸೈನಿಕನೊಬ್ಬ ಸಾಮಾನ್ಯ ಮಂದಿಯನ್ನು ನೂಕಿ ನಿಯಂತ್ರಿಸುತ್ತಿದ್ದುದು, ಹೆಂಗಸರು ಒಬ್ಬರಿಗೊಬ್ಬರು ಸನ್ಯಾಸಿಗಳ ಕಡೆ, ಅದರಲ್ಲಿಯೂ ತನ್ನ ಕಡೆ ಹಾಗೂ ನೋಡಲು ಚೆನ್ನಾಗಿದ್ದ ಮತ್ತೊಬ್ಬನ ಕಡೆಯೂ, ತೋರಿಸುತ್ತಿದ್ದುದು ಮುಂತಾದವುಗಳ ಕಡೆಯಾಗಲೀ - ದೃಷ್ಟಿ ಹಾಯಿಸದಿರಲು ಪ್ರಯತ್ನಿಸಿದ. ಅಂದರೆ ತನ್ನ ಮನಸ್ಸನ್ನು ಹತೋಟಿಯಲ್ಲಿಟ್ಟು ಕೊಳ್ಳಲು, ಬಲಿಪೀಠದ ಬಳಿಯಿರಿಸಿದ್ದ ಮೇಣದ ಬತ್ತಿಗಳ ಬೆಳಕು, ವಿಗ್ರಹಗಳು, ಆರಾಧನೆಯ ನೇತೃತ್ವ ವಹಿಸಿದವರು, ಇವರ ಹೊರತಾಗಿ ಬೇರಾವುದನ್ನೂ ಗಮನಿಸದಂತೆ ಇರಲು, ಪಠಿಸುತ್ತಿದ್ದ ಪ್ರಾರ್ಥನೆಗಳ ಹೊರತಾಗಿ ಬೇರಾವುದನ್ನು ಕೇಳಿಸಿಕೊಳ್ಳದಿರಲು, ಅನೇಕ ಸಲ ತಾನು ಹೇಳಿಕೊಂಡಿದ್ದುದನ್ನೇ ಇತರರು ಹೇಳುವುದನ್ನು ಕೇಳುವಾಗ, ಉಳಿದಾವ ವಿಷಯದಲ್ಲಿಯೂ ತನ್ನ ಗಮನ ಹರಿಯದಿರುವ ಹಾಗೆ ಆಗುತ್ತಿದ್ದ ಭಾವನೆಯಾದ ತನ್ನ ಕರ್ತವ್ಯವನ್ನು ನಿರ್ವಹಿಸುವುದರ ಹೊರತಾಗಿ ಬೇರಾವುದರೆಡೆಗೂ ಯೋಚಿಸದಂತಿರಲು ಹೆಣಗಿದ.

ಹೀಗೆಯೇ ಅವನು ನಿಂತಿದ್ದ, ಎದೆಯ ಮೇಲೆ ಶಿಲುಬೆಯ ಆಕಾರ ಮಾಡಿಕೊಳ್ಳುತ್ತ, ಅವಶ್ಯಕವಾದಾಗ ದೀರ್ಘದಂಡ ನಮಸ್ಕಾರ ಮಾಡುತ್ತ; ಅವನ ಅಂತರಂಗದಲ್ಲಿ ಹೋರಾಟ ನಡೆಯುತ್ತಿತ್ತು? ಒಮ್ಮೆ ತನ್ನನ್ನು ಹಳಿದುಕೊಳ್ಳವುದು, ಇನ್ನೊಮ್ಮೆ ತನ್ನ ಭಾವನೆಗಳನ್ನೂ ಆಲೋಚನೆಗಳನ್ನೂ ಮರೆಯುವುದು ನಡೆಯುತ್ತಿತ್ತು. ಆನಂತರ, ಸುಮ್ಮಸುಮ್ಮನೆ ಸ್ಥಾನಪತಿಗಳನ್ನು ಹೊಗಳುತ್ತ ತನಗೆ ಮಹಾ ಅಡ್ಡಿಯೆನಿಸಿದ್ದ ಮಠದ ಪಾರುಪತ್ತೇದಾರ ಫಾದರ್ ನಿಕೋಡೆಮಸ್ ಅವನ ಬಳಿ ಬಂದು ತಲೆಬಾಗಿ ಪವಿತ್ರ ಚರ್ಚ್‌ನ ಗೇಟಿನ ಬಳಿ ಬಂದಿರಲು ಕೇಳಿಕೊಂಡ. ಫಾದರ್ ಸರ್ಜಿಯಸ್ ತನ್ನ

ಮೇಲಂಗಿ ಟೋಪಿಗಳನ್ನು ಸರಿಪಡಿಸಿಕೊಂಡು ಜನಸಂದಣಿಯನ್ನು ಬಳಸಿಕೊಂಡು ನಡೆದ.

"ಲೀಸ್, ಬಲಗಡೆ ನೋಡು, ಎಲ್ಲಿದೆ ಗಮನ?" ಎಂದು ಹೇಳುತ್ತಿದ್ದ ಒಬ್ಬ ಹೆಂಗಸಿನ ಧ್ವನಿ ಕೇಳಿಸಿತು.

"ಅವರನ್ನ ನೋಡು, ಎಷ್ಟು ಚೆನ್ನಾಗಿದಾರಲ್ಲವಾ?"

ಅವರಿಬ್ಬರೂ ತನ್ನನ್ನೇ ಕುರಿತು ಮಾತಾಡುತ್ತಿರುವವರೆಂಬುದು ಅವನಿಗೆ ಗೊತ್ತಾಯಿತು; ಅವರ ಮಾತೂ ಕೇಳಿಸಿತು. ಅಲ್ಲದೆ, ಅಂಥ ಸಂದರ್ಭಗಳಲ್ಲಿ ಮಾಡುತ್ತಿದ್ದಂತೆ ಈಗಲೂ 'ನನ್ನನ್ನು ಆಮಿಷದತ್ತ ಒಯ್ಯಬೇಡ' ಎಂದು ಹೇಳಿಕೊಳ್ಳುತ್ತ ತಲೆ ತಗ್ಗಿಸಿಕೊಂಡು ಕಣ್ಣುಗಳನ್ನು ಕೆಳಗೆ ಮಾಡಿ, ಪ್ರವಚನಪೀಠವನ್ನು ಹಾದು, ಅಲ್ಲೇ ಹಾದುಹೋಗುವ ನಿಲುವಂಗಿ ತೊಟ್ಟ ಗುರುಗಳ ಕಣ್ಣಿಗೆ ಬೀಳದಂತೆ ಉತ್ತರ ಬಾಗಿಲ ಮೂಲಕ ಹೊರಬಿದ್ದ. ಪವಿತ್ರ ಪೂಜಾಪ್ರದೇಶವನ್ನು ಹೊಕ್ಕಾಗ ತಲೆ ಬಾಗಿ ಎಂದಿನಂತೆ ಎದೆಯ ಮೇಲೆ ಶಿಲುಬೆಯಾಕಾರ ಮಾಡಿದ, ಪ್ರತಿಮೆಗಳ ಮುಂದೆ ಎರಡು ಬಾರಿ ಬಾಗಿ ನಮಸ್ಕರಿಸಿದ. ಆಮೇಲೆ ತನ್ನ ತಲೆಯನ್ನು ಮೇಲೆತ್ತಿ ಕತ್ತು ತಿರುಗಿಸದೆ ಮೂಲೆಯಾಚೆಗಿದ್ದ ಸ್ಥಾನಪತಿಗಳತ್ತ ಓರೆನೋಟ ಬೀರಿದ; ಅವರು ಮತ್ತೊಂದು ಕಣ್ಸೆಳೆಯುವ ವ್ಯಕ್ತಿಯ ಪಕ್ಕದಲ್ಲಿ ನಿಂತಿದ್ದರು.

ಸ್ಥಾನಪತಿಗಳು ತಮ್ಮ ದಗಲೆ ನಿಲುವಂಗಿ ಧರಿಸಿ ಗೋಡೆಯ ಪಕ್ಕದಲ್ಲಿ ನಿಂತಿದ್ದರು. ತಮ್ಮ ಗಿಡ್ಡ ಪುಷ್ಟ ಕೈಗಳನ್ನು ಅಂಗಿಯ ಕೆಳಗಿನಿಂದ ತೆಗೆದು ತಮ್ಮ ಗುಂಡುದೇಹದ ಬೊಜ್ಜು ಹೊಟ್ಟೆಯ ಮೇಲೆ ಜೋಡಿಸಿಕೊಂಡಿದ್ದರು; ತಮ್ಮ ನಿಲುವಂಗಿಯ ದಾರಗಳ ಮೇಲೆ ಬೆರಳುಗಳನ್ನಾಡಿಸುತ್ತ ಮುಗುಳ್ನಗೆಯಿಂದ ಕೂಡಿ ಜನರಲ್‌ನ ಇಂಪೀರಿಯಲ್ ಸಮವಸ್ತ್ರ ಧರಿಸಿದ್ದ ಸೈನಿಕನೊಬ್ಬನಿಗೆ ಏನನ್ನೋ ಹೇಳುತ್ತಿದ್ದರು; ಅನುಭವಿಯಾದ ಫಾದರ್ ಸರ್ಜಿಯಸ್‌ಗೆ ಆ ಸೈನಿಕನ ಲಾಂಛನ ಮತ್ತು ತೋಳುಗಂಟುಗಳು ಕಣ್ಣಿಗೆ ಬಿದ್ದವು. ಆ ಜನರಲ್ ಸರ್ಜಿಯಸ್ ಇದ್ದ ಸೇನಾ ತುಕಡಿಯ ಮುಖ್ಯಸ್ಥನಾಗಿದ್ದ. ಈಗೊಂದು ಪ್ರಮುಖ ಸ್ಥಾನದಲ್ಲಿರುವುದು ಸ್ಪಷ್ಟವಾಗಿತ್ತು; ಇದನ್ನು ಬಲ್ಲ ಸ್ಥಾನಪತಿಗಳು ತಮ್ಮ ಕೆಂಪು ಮುಖವನ್ನು ಊರಗಲ ಮಾಡಿಕೊಂಡು ಬಕ್ಕ ತಲೆಯಿಂದ ಕೂಡಿ ತೃಪ್ತಿ ಸುಪ್ರಸನ್ನತೆಗಳಿಂದ ಮಾತಾಡುತ್ತಿದ್ದುದನ್ನು ಫಾದರ್ ಸರ್ಜಿಯಸ್ ತಟ್ಟನೆ ಗುರುತಿಸಿದ. ಇದನ್ನು ಕಂಡ ಫಾದರ್ ಸರ್ಜಿಯಸ್‌ಗೆ ಖೇದವೂ ಗಲಿಬಿಲಿಯೂ ಉಂಟಾದವು; ತಾನು ಮುಖ್ಯಸ್ಥನಾಗಿದ್ದ ತುಕಡಿಯಲ್ಲಿಯೇ ಹಿಂದೆ ನೌಕರಿಗಿದ್ದ ವ್ಯಕ್ತಿಯೊಬ್ಬ ಇಲ್ಲಿರುವುದನ್ನು ಕೇಳಿ ಅವನನ್ನು ಕಾಣಬಯಸಿದ ಜನರಲ್‌ನ ಇರಾದೆಯ ಮೇಲೆ ತನಗೆ ಸ್ಥಾನಪತಿಗಳು ಹೇಳಿಕಳಿಸಿದುದನ್ನು ಕೇಳಿದ ಮೇಲಂತೂ ಅವು ಮತ್ತಷ್ಟು ಗಾಢವಾದವು.

"ಈ ದೈವೀ ಉಡುಪಿನಲ್ಲಿ ಕಾಣುತ್ತಿರುವುದರಿಂದ ನಂಗೆ ತುಂಬ ಸಂತೋಷವಾಗಿದೆ. ನೀವು ಹಿಂದಿನ ಸಹೋದ್ಯೋಗಿಯನ್ನು ಮರೆತಿಲ್ಲ ಅಂದುಕೊಂಡಿದ್ದೇನೆ" ಎಂದರು

ಜನರಲ್ ಕೈ ಚಾಚುತ್ತ.

ಮುಗುಳ್ನಗೆಯಿಂದ ಕೂಡಿದ ಸ್ಥಾನಪತಿಗಳ ಕೆಂಪು ಮುಖ, ಮುಖದಂಚಿನ ನರೆಗೂದಲು, ಜನರಲ್‌ರ ಮಾತು, ಆತ್ಮತೃಪ್ತಿಯಿಂದ ತುಂಬಿಕೊಂಡಿದ್ದ ಅವರ ಮುಖ, ಉಸುರಿನೊಡನೆ ಹೊಮ್ಮುತ್ತಿದ್ದ ವೈನ್ ಮತ್ತು ಮೀಸೆಯಿಂದ ಚಿಮ್ಮುತ್ತಿದ್ದ ಸಿಗಾರ್ ವಾಸನೆ? ಎಲ್ಲವೂ ಫಾದರ್ ಸರ್ಜಿಯಸ್‌ನಲ್ಲಿ ಪ್ರತಿಭಟನೆಗೆ ಸಜ್ಜುಗೊಳಿಸಿದವು. ಸ್ಥಾನಪತಿಗಳೆಡೆ ಮತ್ತೆ ತಲೆ ಬಾಗಿ, 'ಬುದ್ಧಿಯೋರು ನಂಗೆ ಹೇಳಿ ಕಳಿಸಿದರಂತೆ" ಎಂದು ಕೇಳಿದ, ಅವನ ಮುಖದ ಮೇಲೆ ಅದಕ್ಕೆ ಕಾರಣವೇನು ಎಂಬ ಪ್ರಶ್ನೆ ಮೂಡಿತ್ತು.

"ಹೌದು, ಜನರಲ್ ಅವರನ್ನು ಭೇಟಿಯಾಗು" ಎಂದರು ಸ್ಥಾನಪತಿಗಳು.

ಮುಖ ಬಿಳುಪೇರಿ ತುಟಿಗಳು ನಡುಗುತ್ತಿರುವಾಗ ಫಾದರ್ ಸರ್ಜಿಯಸ್ ಹೇಳಿದ: "ಬುದ್ಧಿ, ನಾನು ಪ್ರಾಪಂಚಿಕತೆಯನ್ನು ತೊರೆದು ಬಂದದ್ದೇ ಆಮಿಷವನ್ನು ಗೆಲ್ಲುವುದಕ್ಕಾಗಿ. ಹೀಗಿರುವಾಗ, ದೇವರ ಗುಡಿಯಲ್ಲಿ, ಅದೂ ಪ್ರಾರ್ಥನೆಯ ಹೊತ್ತಿನಲ್ಲಿ, ಏಕೆ ನನ್ನನ್ನು ಮತ್ತೆ ಪ್ರಾಪಂಚಿಕತೆಯತ್ತ ದೂಡುತ್ತೀರಿ?" ಎಂದ.

"ನೀನು ಹೋಗಬಹುದು" ಎಂದರು ಸ್ಥಾನಪತಿಗಳು. ಅವರ ಮುಖ ಕೆಂಪೇರಿತ್ತು, ಹುಬ್ಬು ಗಂಟಿಕ್ಕಿತ್ತು.

ಮಾರನೆಯ ದಿನ ಫಾದರ್ ಸರ್ಜಿಯಸ್ ತನ್ನ ಹೆಮ್ಮೆಯ ಭಾವನೆಗಾಗಿ ಸ್ಥಾನಪತಿಗಳ ಹಾಗೂ ಸಹಸನ್ಯಾಸಿಗಳ ಕ್ಷಮೆ ಯಾಚಿಸಿದ, ಆದರೆ, ಒಂದು ರಾತ್ರಿಯಿಡೀ ಪ್ರಾರ್ಥನೆಯಲ್ಲಿ ಕಳೆದ ಬಳಿಕ, ಅವನು ಈ ಮಠವನ್ನು ಬಿಡಲು ನಿರ್ಧರಿಸಿದ್ದ. ಅದೇ ರೀತಿ ಧರ್ಮಗುರುಗಳಿಗೆ ಪತ್ರವೊಂದನ್ನು ಬರೆದು ತನ್ನನ್ನು ತನ್ನ ಪಾಡಿಗೆ ಬಿಟ್ಟುಕೊಡುವಂತೆ ಪ್ರಾರ್ಥಿಸಿಕೊಂಡ. ತನ್ನ ದೌರ್ಬಲ್ಯ ಹಾಗೂ ಅವರೊಡನೆ ಕೂಡಿ ಆಮಿಷಗಳೊಡನೆ ತಾನು ಹೋರಾಡಲಾರದ ಸ್ಥಿತಿಯ ಬಗ್ಗೆ ಅರಿವು ತನಗುಂಟಾಗಿದೆಯೆಂದೂ ತನ್ನ ಹೆಮ್ಮೆಯ ಬಗ್ಗೆ ತನಗೆ ಪಶ್ಚಾತ್ತಾಪವುಂಟಾಗಿದೆಯೆಂದೂ ನಿವೇದಿಸಿಕೊಂಡ. ಧರ್ಮಗುರುಗಳಿಂದ ಬಹು ಬೇಗನೆಯೇ ಉತ್ತರವೊಂದು ಬಂದಿತು: ನಡೆದುದಕ್ಕೆಲ್ಲ ಸರ್ಜಿಯಸ್‌ನ ಹೆಮ್ಮೆಯೇ ಕಾರಣ ಎಂದು ತಿಳಿಸಿದ್ದರು. ಧಾರ್ಮಿಕ ಗೌರವಗಳ ನಿರಾಕರಣೆಯು ದೇವರಿಗಾಗಿ ಆಗಿರದೆ, ತನ್ನದೇ ಹೆಮ್ಮೆಯ ಸಲುವಾಗಿ ಆಗಿರುವುದೇ ಅವನ ಕೋಪತಾಪಗಳಿಗೆ ಕಾರಣ ಎಂದು ಆ ಹಿರಿಯರು ಬರೆದಿದ್ದರು. 'ಹಾಗಾದರೆ, ಏನನ್ನೂ ಬಯಸದ ನಾನು ಉತ್ಕೃಷ್ಟ ವ್ಯಕ್ತಿಯಲ್ಲವೇ?' ಆದ್ದರಿಂದಲೇ ತಾನು ಸ್ಥಾನಪತಿಗಳ ನಡವಳಿಕೆಯನ್ನು ಸಹಿಸದಿದ್ದುದು. 'ದೇವರ ಕೃಪೆಗಾಗಿ ನಾನು ಸರ್ವಸ್ವವನ್ನೂ ಪರಿತ್ಯಜಿಸಿದ್ದೇನೆ, ಆದರೆ ಇಲ್ಲಿ ನನ್ನನ್ನು ಕಾಡುಪ್ರಾಣಿಯಂತೆ ಪ್ರದರ್ಶಿಸಲಾಗಿದೆ!' 'ನೀನೇನಾದರೂ ದೇವರಿಗಾಗಿ ನಿಮ್ಮ ಬಡಿವಾರವನ್ನು ತೊರೆದಿದ್ದರೆ ನೀನು ಅದನ್ನು ಸಹಿಸಿಕೊಂಡಿರುತ್ತಿದ್ದೆ. ಪ್ರಾಪಂಚಿಕ ಜಂಬವಿನ್ನೂ ನಿನ್ನಲ್ಲಿ ಸತ್ತಿಲ್ಲ. ಮಗು ಸರ್ಜಿಯಸ್, ನಾನು ನಿನ್ನ ಬಗ್ಗೆ ಯೋಚಿಸಿದ್ದೇನೆ, ನಿನಗಾಗಿ ಪ್ರಾರ್ಥಿಸಿದ್ದೇನೆ ಕೂಡ,

ಅದಕ್ಕೇ ದೇವರು ನನಗೆ ಇದನ್ನು ಪ್ರೇರಿಸಿದ್ದಾನೆ. ತಾಂಬೊವ್ ಮಠದಲ್ಲಿ ಸಂತನಂತೆ ಬಾಳುವ ವಿರಕ್ತ ಹಿಲರಿಯವರು ತೀರಿಕೊಂಡಿದ್ದಾರೆ. ಅವರಲ್ಲಿ ಹದಿನೆಂಟು ವರ್ಷಗಳು ಬದುಕಿದ್ದರು. ಅವರ ಜಾಗದಲ್ಲಿ ಕೂರಬಲ್ಲ ಕಿರಿಯರಾರೂ ಇಲ್ಲವೇ ಎಂದು ಅಲ್ಲಿನ ಸ್ಥಾನಪತಿಗಳು ಕೇಳಿದ್ದಾರೆ. ಆ ಹೊತ್ತಿನಲ್ಲೇ ನಿನ್ನ ಕಾಗದ ಬಂದಿದೆ. ತಾಂಬೊವ್ ಮಠದಲ್ಲಿ ಫಾದರ್ ಪೈಸಿ ಅವರ ಬಳಿಗೆ ಹೋಗು. ನಿನ್ನ ಬಗ್ಗೆ ನಾನವರಿಗೆ ಬರೆದು ತಿಳಿಸುತ್ತೇನೆ. ಅಲ್ಲಿ ನೀನು ಹಿಲರಿಯ ಜಾಗವನ್ನು ಕೊಡಲು ಕೇಳು. ಹಾಗಂತ, ನೀನು ಹಿಲರಿಯವರ ಜಾಗವನ್ನು ತುಂಬಬಲ್ಲೆ ಎಂದಲ್ಲ, ನಿನ್ನ ಹೆಮ್ಮೆಯನ್ನು ಹತ್ತಿಕ್ಕಲು ನಿನಗೆ ಏಕಾಂತದ ಆವಶ್ಯಕತೆಯಿದೆ. ದೇವರು ನಿನ್ನನ್ನು ಒಲಿಯಲಿ!'

ಸರ್ಜಿಯಸ್ ಧರ್ಮಗುರುಗಳ ಆಜ್ಞೆಯನ್ನು ಪಾಲಿಸಿದ, ಸ್ಥಾನಪತಿಗಳಿಗೆ ಅವರ ಪತ್ರವನ್ನು ತೋರಿಸಿ ಅವರ ಅನುಮತಿಯನ್ನು ಪಡೆದು ತನ್ನ ಜಾಗವನ್ನು ತೆರವುಗೊಳಿಸಿ ತನ್ನೆಲ್ಲ ವಸ್ತುಗಳನ್ನೂ ಮಠಕ್ಕೆ ಬಿಟ್ಟುಕೊಟ್ಟು, ತಾಂಬೊವ್ ಮಠದತ್ತ ತೆರಳಿದ.

ಅಲ್ಲಿನ ಸ್ಥಾನಪತಿಗಳು, ವರ್ತಕಮೂಲದಿಂದ ಬಂದ ಶ್ರೇಷ್ಠ ಕಾರ್ಯನಿರ್ವಾಹಕರಾಗಿದ್ದರು. ಅವರು ಸರ್ಜಿಯಸ್ ಅನ್ನು ಸರಳತೆಯಿಂದಲೂ ಹೆಚ್ಚು ಮಾತಿಲ್ಲದೆಯೂ ಬರಮಾಡಿಕೊಂಡು ಅವನನ್ನು ಹಿಲರಿಯವರಿದ್ದ ಸೆಲ್‌ಗೆ ಕಳಿಸಿದರು. ಮೊದಲು ಅವನ ಅಧೀನದಲ್ಲಿ ಕಿರಿಯ ಸನ್ಯಾಸಿಯೊಬ್ಬನನ್ನು ನೇಮಿಸಿದರೂ ಆನಂತರ ಸರ್ಜಿಯಸ್ ಕೇಳಿಕೊಂಡದ್ದರಿಂದ ಅವನು ಒಬ್ಬಂಟಿಯಾಗಿರಲು ಅವಕಾಶವಿತ್ತರು. ಆ ಸೆಲ್‌ನಲ್ಲಿ ಗುಡ್ಡದೆಡೆ ಕೊರೆದ ಎರಡು ಗುಹೆಗಳಿದ್ದು, ಅದರಲ್ಲಿ ಹಿಲರಿಯವರನ್ನು ಸಮಾಧಿ ಮಾಡಲಾಗಿತ್ತು. ಹಿಲರಿ ಸಮಾಧಿಯ ಹಿಂಬದಿಯಲ್ಲಿ ಮೊದಲು ನಿದ್ರಿಸಲು ಒಂದು ತೆರಪು ಇದ್ದು, ಅಲ್ಲೊಂದು ಚಾಪೆ ಹಾಸಲಾಗಿತ್ತು, ಜೊತೆಗೆ ಒಂದು ಮೇಜು ಹಾಗೂ ವಿಗ್ರಹಗಳು ಮತ್ತು ಪುಸ್ತಕಗಳಿದ್ದ ಒಂದು ಶೆಲ್ಫ್ ಕೂಡ ಇದ್ದುವು. ಹೊರಬಾಗಿಲ ಹೊರಬದಿಗೆ ಕೊಕ್ಕೆಯೊಂದಿದ್ದು ಅದಕ್ಕೆ ಮತ್ತೊಂದು ಶೆಲ್ಫ್ ಅನ್ನು ಹೊಂದಿಸಲಾಗಿತ್ತು. ಅದರಲ್ಲಿ ಮಠದಿಂದ ಬಂದ ಸನ್ಯಾಸಿಯೊಬ್ಬ ದಿನವೂ ಆಹಾರವನ್ನಿರಿಸಿ ಹೋಗುತ್ತಿದ್ದ.

ಈ ರೀತಿಯಲ್ಲಿ ಸರ್ಜಿಯಸ್ ಒಬ್ಬ ಏಕಾಂತವಾಸಿಯಾದ.

## 3

ಸರ್ಜಿಯಸ್ ಮಠ ಸೇರಿದ ಆರನೆಯ ವರ್ಷ ಜಾತ್ರೆಯ ಸಂದರ್ಭದಲ್ಲಿ, ನೆರೆಯ ಊರೊಂದರಿಂದ ಬಂದಿದ್ದ ಶ್ರೀಮಂತರ ಗಂಡು-ಹೆಣ್ಣುಗಳ ಒಂದು ಖಯಾಲಿ ಗುಂಪು, ಜಾತ್ರೆಯ ಕೇಕ್ ಮತ್ತು ವೈನ್ ಕೂಟವಾದ ನಂತರ ಟ್ರೋಯ್ಕಾ ಗಾಡಿಯಲ್ಲಿ ವಿಹಾರಪಯಣವನ್ನು ಏರ್ಪಡಿಸಿದ್ದರು. ಅದರಲ್ಲಿ ಇಬ್ಬರು ವಕೀಲರು, ಒಬ್ಬ ಶ್ರೀಮಂತ ಜಮೀನ್ದಾರ, ಒಬ್ಬ ಅಧಿಕಾರಿ ಮತ್ತು ನಾಲ್ಕು ಮಂದಿ ಮಹಿಳೆಯರಿದ್ದರು. ಆ ಮಹಿಳೆಯರಲ್ಲಿ ಒಬ್ಬಾಕೆ ಅದರಲ್ಲಿನ ಅಧಿಕಾರಿಯ ಹೆಂಡತಿ, ಮತ್ತೊಬ್ಬಾಕೆ ಜಮೀನ್ದಾರನ ಹೆಂಡತಿ, ಮೂರನೆಯಾಕೆ ಅವಳ ತಂಗಿ? ಒಬ್ಬ ಚಿಕ್ಕ ಹುಡುಗಿ? ಮತ್ತು ನಾಲ್ಕನೆಯವಳು

ಒಬ್ಬ ವಿಚ್ಛೇದಿತೆ. ಆಕೆ ಶ್ರೀಮಂತಳು, ಸುಂದರಿ, ಆದರೆ ಸ್ವೇಚ್ಛಾಚಾರಿ, ತನ್ನ ಸ್ವೈರತೆಯಿಂದ ನಗರದಲ್ಲಿ ಸಂಚಲನವನ್ನುಂಟುಮಾಡಿದವಳು.

ಅಂದು ಹವಾಗುಣ ಆಹ್ಲಾದಕಾರಿಯಾಗಿತ್ತು, ಮಂಜಿನಿಂದ ಆವೃತ್ತವಾದ ರಸ್ತೆಗಳು ಹಿಟ್ಟಿನ ಹಾಗೆ ನುಣುಪಾಗಿದ್ದವು. ಅವರೆಲ್ಲ ಊರ ಹೊರಗೆ ಏಳು ಮೈಲಿಗಳವರೆಗೆ ಹೋದರು, ಆಮೇಲೆ ನಿಂತು ಮುಂದೆ ಹೋಗಬೇಕೇ ಹಿಂದಿರುಗಬೇಕೇ ಎಂದು ಸಮಾಲೋಚಿಸಿದರು.

"ಈ ರಸ್ತೆ ಎಲ್ಲಿಗೆ ಹೋಗತ್ತೆ ಅಂತ ಗೊತ್ತಿಲ್ವಲ್ಲ" ಎಂದಳು ಸುಂದರಿ ವಿಚ್ಛೇದಿತೆ ಮಕೋವ್‌ಕಿನ.

"ತಾಂಬೋವ್‌ಗೆ, ಇಲ್ಲಿಂದ ಎಂಟೇ ಮೈಲಿ ದೂರ" ಎಂದ ಒಬ್ಬ ವಕೀಲ, ಅವನಿಗೆ ಅವಳೊಡನೆ ಸಲಿಗೆಯಿತ್ತು.

"ಆಮೇಲೆ ಮುಂದೆಲ್ಲಿಗೆ?"

"ಆಮೇಲೆ? ಮಠದ ಆಚೆಗೆ."

"ಫಾದರ್ ಸರ್ಜಿಯಸ್ ಇದಾರಲ್ಲ, ಅಲ್ಲಿಗಾ?"

"ಹೌದು."

"ಅದೇ ಕಸಾಟ್‌ಸ್ಕಿ, ಸುಂದರ ಯತಿ?"

"ಹ್ಞೂ."

"ಮಹನೀಯರೇ ಮಹಿಳೆಯರೇ, ಮುಂದೆ ಹೋಗೋಣ, ಕಸಾಟ್‌ಸ್ಕಿ ಅವರನ್ನು ನೋಡಿಬರೋಣ! ನಾವು ತಾಂಬೋವ್‌ನಲ್ಲೇ ಉಳಿದುಕೊಳ್ಳಬಹುದು, ಅಲ್ಲೇ ಏನಾದ್ರೂ ತಿನ್ನಬಹುದು."

"ಆದ್ರೆ, ನಾವು ಇವತ್ತು ರಾತ್ರೀನೇ ಊರಿಗೆ ಹೋಗಿ ಸೇರ್ಕೋಬೇಕು!"

"ಏನೂ ಪರ್ವಾಗಿಲ್ಲ, ನಾವೆಲ್ಲ ಕಸಾಟ್‌ಸ್ಕಿ ಅವರಿರೋ ಕಡೇನೇ ಉಳಿದುಕೋಬಹುದು."

"ಸರಿ, ಹಾಗಾದ್ರೆ, ಮಠದಲ್ಲೇ ಉಳಿದುಕೊಳ್ಳಕ್ಕೆ ಒಂದು ಒಳ್ಳೇ ವಸತಿಗೃಹ ಇದೆ. ಮಖೀನ್ ಅವರ ಪರ ವಕಾಲತ್ತು ವಹಿಸಿದ್ದಾಗ ನಾನು ಅಲ್ಲೇ ಉಳುಕೊಂಡಿದ್ದದ್ದು."

"ಉಹ್ಞೂ, ನಾನು ಒಂದು ರಾತ್ರಿ ಕಸಾಟ್‌ಸ್ಕಿ ಜೊತೇಲೇ ಇರ್ತೀನಿ!"

"ಅದಂತೂ ಅಸಾಧ್ಯ! ನೀವು ಸರ್ವವ್ಯಾಪಿಯಾಗಿದ್ರೂ ಅದು ಸಾಧ್ಯವಾಗಲ್ಲ!"

"ಅಸಾಧ್ಯಾನಾ? ಪಂತ ಕಟ್ತೀರಾ?"

"ಹಾಗೇ ಆಗಲಿ! ನೀವೇನಾದ್ರೂ ಒಂದು ರಾತ್ರಿ ಅವರ ಜೊತೆ ಕಳೆದ್ರೆ, ನೀವು ಕೇಳಿದ್ದು ಕೊಡ್ತೀನಿ."

"ಕೇಳಿದ್ದು ಕೊಡ್ತೀರಾ?"

"ಇದು ನಿಮಗೂ ಅನ್ವಯಿಸುತ್ತೆ."

"ಅದ್ಸರಿ, ಹಾಗಾದ್ರೆ ಮುಂದೆ ಹೋಗೋಣ."

ಚಾಲಕರುಗಳಿಗೆ ವೋಡ್ಕಾ ಕೊಟ್ಟರು, ಆನಂತರ ಗುಂಪು ತಂದಿದ್ದ ಕಡುಬಿನ ಬುತ್ತಿ ಬಿಚ್ಚಿ, ವೈನ್ ಹಾಗೂ ಸಿಹಿಗಳ ಜೊತೆಯಲ್ಲಿ ತಿಂದು ಕುಡಿದು, ತಮ್ಮ ಪ್ರಯಾಣ ಮುಂದುವರಿಸಿತು, ಮಹಿಳೆಯರು ತಮ್ಮ ಡಾಗ್‌ಸ್ಕಿನ್ ಕವುದಿಗಳನ್ನು ಹೊದ್ದು ಕೊಂಡರು. ಮುಂದೆ ಸಾಗಬೇಕಾದದ್ದರ ಬಗ್ಗೆ ಚಾಲಕರು ತಮ್ಮಲ್ಲೇ ಚರ್ಚೆ ಮಾಡಿಕೊಂಡರು, ಗಾಡಿಯ ಪಕ್ಕ ಎದುರುಗಾಳಿಗೆ ಮುಖ ಮಾಡಿ ಕೂತಿದ್ದ ಅವರಲ್ಲಿನ ಅತ್ಯಂತ ಕಿರಿಯವನು, ತನ್ನ ಉದ್ದನೆಯ ಚಾಟಿ ಬೀಸಿ ಕುದುರೆಗಳಿಗೆ ತಿವಿದ. ಗಾಡಿಯ ಕಿರುಗಂಟೆಗಳು ಘಲ್ ಘಲ್ ಸದ್ದು ಮಾಡತೊಡಗಿದವು, ಕೆಳಗೆ ಜಾರುಪಟ್ಟೆ ಕಿರುಗುಟ್ಟತೊಡಗಿದವು.

ಗಾಡಿಗಳು ಅಲುಗಾಡುತ್ತಲೇ ಇರಲಿಲ್ಲ, ಕಟ್ಟಿದ್ದ ಕುದುರೆ, ತನ್ನ ಬಾಲವನ್ನು ಗಟ್ಟಿಯಾಗಿ ಹಿಂದೆ ಸರಿಸಿಕೊಂಡು ಬಿರುಸಿನಿಂದ ಆದರೆ ಸರಾಗವಾಗಿ ಓಡುತ್ತಿತ್ತು; ಮೃದು ರಸ್ತೆ ಬಹು ಬೇಗ ಹಿಂದೆ ಸರಿಯುತ್ತಿದ್ದಂತೆ ತೋರುತ್ತಿತ್ತು. ಚಾಲಕ ಗತ್ತಿನಿಂದ ಕಡಿವಾಣ ಹಿಡಿದಿದ್ದ. ಎದುರುಬದುರು ಕೂತಿದ್ದ ಇಬ್ಬರು ವಕೀಲರೂ ಅಧಿಕಾರಿಯೂ ಮಕೋವ್‌ಕಿನಳ ಪಕ್ಕದಲ್ಲಿದ್ದವನ ಜೊತೆ ಏನೇನೋ ಹರಟುತ್ತಿದ್ದರು. ಆದರೆ ಬಿಗಿಯಾಗಿ ಹೊದ್ದುಕೊಂಡು ಕೂತಿದ್ದ ಮಕೋವ್‌ಕಿನ ಮಾತ್ರ ಸುಮ್ಮನೆ ನಿಶ್ಚಲಳಾಗಿದ್ದಳು. "ಸದಾ ಅದೇ, ಗಬ್ಬು! ವೈನ್ ಮತ್ತು ಸಿಗಾರ್‌ಗಳ ವಾಸನೆ ಹೊತ್ತ ಅವೇ ಹೊಳೆಯುವ ಕೆಂಪು ಮೂತಿಗಳು! ಅದೇ ಮಾತು, ಅವೇ ಆಲೋಚನೆಗಳು, ಮತ್ತವೇ ವಿಷಯಗಳು! ಇದೆಲ್ಲ ಹೀಗೇ ಇರಬೇಕು, ಅಲ್ಲದೆ ಹೀಗೆಯೇ ಎಲ್ಲವೂ ಸಾಗಬೇಕಾದದ್ದು ಎಂಬಂತೆ ಇವರೆಲ್ಲ ತೃಪ್ತಿಯಿಂದ ಸುಪ್ರಸನ್ನರಾಗಿ ಕೂತಿದ್ದಾರೆ. ಆದರೆ ನಾನು ಮಾತ್ರ ಹಾಗಿರಲಾರೆ. ಇವೆಲ್ಲ ತಲೆಬೇಸರ. ಇವನ್ನೆಲ್ಲ ತಲೆಕೆಳಗು ಮಾಡೋ ಅಂಥ ಏನಾದ್ರೂ ಬೇಕು ನಂಗೆ! ಸರಟೋವ್ ಅಂತ ಕಾಣತ್ತೆ, ಅಲ್ಲಿ ಗಾಡೀಲಿ ಹೋಗ್ತಾ ಹೋಗ್ತಾನೇ ಹೆಪ್ಪುಗಟ್ಟಿಬಿಟ್ಟರಂತಲ್ಲ ಹಾಗೇನಾದ್ರೂ ನಮಗೆ ಆದರೆ... ಆಗ ನಮ್ಮವರೆಲ್ಲ ಏನು ಮಾಡಬಹುದು? ಅವರು ಹೇಗೆ ನಡಕೋತಾರೇ? ಖಂಡಿತ ತುಂಬ ಕೀಳಾಗಿ. ಒಬ್ಬೊಬ್ಬನೂ ಬೇರೆ ರೀತಿ. ನಾನೂ ಕೆಟ್ಟದಾಗಿ ನಡಕೋತೀನೀಂತ ಕಾಣತ್ತೆ. ಆದರೆ ನಂಗೆ ಅಪರೂಪದ ಚೆಲುವು ಇದೆ. ಎಲ್ಲರಿಗೂ ಅದು ಗೊತ್ತಿರೋದೇ. ಆದರೆ ಆ ಯತಿ ಹೇಗೋ? ನನ್ನ ರೂಪನ್ನು ಕಂಡೂ ಅವನು ಅನಾಸಕ್ತಿಯಿಂದ ಇರಬಹುದೇ? ಉಹ್ಞೂ. ಎಲ್ಲರೂ ಬಯಸೋದು ಇದನ್ನೇ? ಕಳೆದ ವಸಂತದಲ್ಲಿ ಆ ಸೈನಿಕ ಮಾಡಿದನಲ್ಲ ಹಾಗೆ. ಅವನೆಂಥ ದಡ್ಡ ಅಂತೀನಿ!"

"ಇವಾನ್ ನಿಕೋಲೆವಿಚ್!" ಎಂದಳು ಜೋರಾಗಿ.

"ಅಪ್ಪಣೆ ಕೊಡಿ ಮೇಡಂ."

"ಅವನಿಗೆಷ್ಟು ವಯಸ್ಸು?"

"ಯಾರಿಗೆ?"

"ಅದೇ, ಕಸಾಟ್‌ಸ್ಕಿಗೆ."

"ನಲವತ್ತರ ಮೇಲೆ ಅನ್ಸತ್ತೆ."

"ಬಂದೋರನ್ನೆಲ್ಲ ಚೆನ್ನಾಗಿ ಕಾಣ್ತಾನಾ ಅವನು?"

"ಹೌದು, ಎಲ್ಲರನ್ನೂ. ಆದರೆ ಯಾವಾಗಲೂ ಅಂತ ಹೇಳಕ್ಕಾಗಲ್ಲ."

"ನನ್ನ ಪಾದಗಳ ಮೇಲೆ ಹೊದಿಸಿ. ಹಾಗಲ್ಲ, ಎಷ್ಟು ಒಡ್ಡೊಡ್ಡಾಗಿ ಹೊದಿಸ್ತೀರ. ಇನ್ನೂ ಜಾಸ್ತಿ, ಹ್ಲಾ, ಹಾಗೆ! ಆದ್ರೆ ಅದನ್ನ ಬಿಗಿಮಾಡ್ಬೇಕು!"

ಅಂತೂ ಅವರು ಆ ಸೆಲ್ ಇದ್ದ ಕಾಡುಪ್ರದೇಶಕ್ಕೆ ಬಂದರು.

ಮಕೋವ್‌ಕಿನ ಗಾಡಿಯಿಂದ ಕೆಳಗಿಳಿದು, ಅವರು ಮುಂದೆ ಹೋಗೋ ಹಾಗೆ ಹೇಳಿದಳು. ಅವಳ ನಿರ್ಧಾರ ಬದಲಾಯಿಸೋಕ್ಕೆ ಅವರೆಲ್ಲ ಪ್ರಯತ್ನಪಟ್ಟರು. ಆದರೆ ಅವಳು ರೇಗಿ ಮಿಕ್ಕನಾದೋರೆಲ್ಲ ಹೋಗಿ ಅಂತ ಹೇಳಿದಳು.

ಗಾಡಿಗಳೆಲ್ಲ ಹೋದ ಮೇಲೆ ಅವಳು ಬಿಳಿ ಡಾಗ್‌ಸ್ಕಿನ್ ಕೋಟ್ ಧರಿಸಿ ದಾರಿಯವರೆಗೆ ಹೋದಳು. ಅವಳೇನು ಮಾಡ್ತಾಳೆ ಅಂತ ನೋಡೋದಕ್ಕೆ ವಕೀಲ ಅಲ್ಲೇ ನಿಂತುಕೊಂಡ.

ಅಷ್ಟು ಹೊತ್ತಿಗೆ ಫಾದರ್ ಸರ್ಜಿಯಸ್ ಏಕಾಂತವನ್ನು ಹೊಕ್ಕು ಆರು ವರ್ಷಗಳಾಗಿತ್ತು; ಅವನಿಗೀಗ ನಲವತ್ತೊಂಬತ್ತು ವರ್ಷ ವಯಸ್ಸು. ಅವನ ಏಕಾಂತ ಜೀವನ ಕಷ್ಟಕರವಾಗಿತ್ತು- ಉಪವಾಸ ಪ್ರಾರ್ಥನೆ ಇವುಗಳಿಂದ ಅಲ್ಲ (ಅವುಗಳು ಅವನಿಗೆ ಪ್ರಯಾಸಕರ ಅಂತ ಅನ್ನಿಸ್ತಿರಲಿಲ್ಲ)- ಆದರೆ ಅವನು ನಿರೀಕ್ಷಿಸದೇ ಇದ್ದ ಒಳತೋಟಿ ಅವನ ಮನಸ್ಸನ್ನು ಕಾಡಿಸುತ್ತ ಇದ್ದದ್ದರಿಂದ. ಆ ತೊಳಲಾಟದ ಕಾರಣ ಎರಡು: ಸಂಶಯಗಳು ಮತ್ತು ದೈಹಿಕ ಕಾಮನೆ. ಈ ಎರಡೂ ಒಟ್ಟಿಗೇ ಅವನನ್ನ ಕಾಡಿಸುತ್ತಿದ್ದವು. ಅವೆರಡೂ ತನ್ನ ಶತ್ರುಗಳು ಅಂತ ಅವನಿಗನ್ನಿಸಿತ್ತು, ಆದರೆ ವಾಸ್ತವದಲ್ಲಿ ಅವೆರಡೂ ಬೇರೆಬೇರೆಯಾಗಿರದೇ ಒಂದೇ ಆಗಿತ್ತು. ಸಂಶಯ ಮರೆಯಾದ ಕ್ಷಣವೇ ದೈಹಿಕ ಕಾಮನೆಯೂ ಕಾಣಿಸುತ್ತಿರಲಿಲ್ಲ. ಅವೆರಡನ್ನೂ ಪ್ರತ್ಯೇಕ ಪಿಶಾಚಿಗಳು ಅಂದುಕೊಂಡು ಅವೆರಡರ ವಿರುದ್ಧ ಪ್ರತ್ಯೇಕವಾಗಿಯೇ ಅವನು ಹೋರಾಟ ನಡೆಸುತ್ತಿದ್ದ.

"ಓ ದೇವರೇ, ದೇವರೇ! ನಂಗೆ ನೀನ್ಯಾಕೆ ನಂಬಿಕೆಯನ್ನು ದಯಪಾಲಿಸುತ್ತಿಲ್ಲ? ನನ್ನಲ್ಲಿ ಕಾಮ ತುಂಬಿದೆಯೆಂಬುದೇನೋ ನಿಜ: ಹಿಂದೆಯೂ ಸಂತ ಆಂತೋಣಿ ಮುಂತಾದ ಸಂತರೂ ಅದರ ವಿರುದ್ಧ ಹೋರಾಡಬೇಕಾಯ್ತು. ಆದರೆ ಅವರಿಗೆ ಗಟ್ಟಿ ನಂಬಿಕೆಯಿತ್ತು, ಆದರೆ ನನ್ನ ಮಟ್ಟಿಗೆ ಅದು ಬರಿಯ ಕ್ಷಣಗಳಲ್ಲ, ಗಂಟೆಗಳಲ್ಲ, ದಿನಗಳೇ

ಅಂತಹ ನಂಬಿಕೆ ಮನೆಮಾಡುವುದಿಲ್ಲ. ಎಷ್ಟೇ ಸುಖಸಂತೋಷಗಳಿದ್ದರೂ ಅದೇಕೆ ಈ ಜಗತ್ತು ಪಾಪ ತುಂಬಿ ತ್ಯಜಿಸಬೇಕು ಎನ್ನಿಸುತ್ತದಲ್ಲ? ಆಕರ್ಷಣೆ ಎಂಬುದನ್ನೇಕೆ ಸೃಷ್ಟಿಸಿದೆ ಪ್ರಭುವೇ? ಆಕರ್ಷಣೆಯೇ? ಉಹ್ಞೂ ನಾನು ತೊರೆದುಬಿಡಲು ಹೆಣಗಾಡುತ್ತಿರುವುದು ಈ ಆಕರ್ಷಣೆಯನ್ನು ಮಾತ್ರವೇ ಬಿಟ್ಟುಬಿಡಲಲ್ಲ, ಇಡೀ ನೆಲದ ಎಲ್ಲ ಆನಂದಗಳನ್ನು; ಹಾಗೆ ಬಿಟ್ಟು ಪ್ರಾಯಶಃ ಏನೂ ಇಲ್ಲದ ಸ್ಥಿತಿಯನ್ನು ತಲುಪಲು ಸಿದ್ಧಗೊಳ್ಳಬೇಕು ಎಂದು." ಹಲುಬುತ್ತಿದ್ದ. ತನ್ನ ಬಗ್ಗೆಯೇ ಅವನಿಗೆ ಭಯ ಜಿಗುಪ್ಸೆಗಳು ತುಂಬಿಕೊಂಡವು. "ಅಯ್ಯೋ ದುಷ್ಟ ಜಂತುವೇ! ನೀನು ಸಂತನಾಗಲು ಬಯಸುತ್ತೀಯಾ!" ಎಂದು ಆತ್ಮಭರ್ತ್ಸನೆ ಮಾಡಿಕೊಳ್ಳುತ್ತಿದ್ದ, ಆ ಕ್ಷಣ ಪ್ರಾರ್ಥನೆಯ ಮೊರೆಹೋಗುತ್ತಿದ್ದ. ಆದರೆ ಪ್ರಾರ್ಥನೆಗೆ ತೊಡಗಿದ ಕ್ಷಣವೇ ತಾನು ಮಠದಲ್ಲಿದ್ದಾಗಿನ ಗುರುವಿನ ಟೋಪಿ-ನಿಲುವಂಗಿಗಳಲ್ಲಿರುತ್ತಿದ್ದ ಧೀರೋದಾತ್ತ ಚಿತ್ರ ಕಣ್ಣ ಮುಂದೆ ಧುತ್ತನೆ ಬಂದು ನಿಂತು ತಲೆಯಾಡಿಸುತ್ತಿದ್ದ. "ಉಹ್ಞೂ, ಇದು ಸರಿಯಲ್ಲ, ಆತ್ಮವಂಚನೆ ಇದು. ಬೇರೆಯವರನ್ನು ನಾನು ವಂಚಿಸಬಹುದು, ಆದರೆ ನನ್ನನ್ನೇ ದೇವರನ್ನೇ ವಂಚಿಸಲು ಸಾಧ್ಯವಿಲ್ಲವಲ್ಲ! ನಾನು ಧೀರೋದಾತ್ತ ವ್ಯಕ್ತಿಯಲ್ಲ, ಕನಿಕರಕ್ಕೆ ಅರ್ಹನಾದ ಕ್ಷುದ್ರ ಪ್ರಾಣಿ!" ಅಂದುಕೊಳ್ಳುತ್ತಿದ್ದ. ನಿಲುವಂಗಿಯ ಮಡಿಕೆಗಳನ್ನು ಮೇಲೆ ಸರಿಸಿ ತನ್ನ ಸಣಕಲು ಕಾಲುಗಳನ್ನು ನೋಡಿಕೊಂಡು ನಕ್ಕ.

ಆಮೇಲೆ ನಿಲುವಂಗಿಯ ಮಡಿಕೆಗಳನ್ನು ಇಳಿಬಿಟ್ಟು ಮತ್ತೆ ಪ್ರಾರ್ಥನೆಯ ಕಡೆ ಗಮನ ಹರಿಸಲು ಪ್ರಯತ್ನಿಸಿದ, ಎದೆಯ ಮೇಲೆ ಶಿಲುಬೆಯ ಆಕಾರ ರಚಿಸಿ ಸಾಷ್ಟಾಂಗವೆರಗಿದ. "ಈ ಹಾಸಿಗೆಯೇ ನನ್ನ ಚಟ್ಟವಾಗಿಬಿಡಬಹುದೇ" ಎಂಬ ವಾಕ್ಯವನ್ನೋದಿದ. ಯಾವುದೋ ಪಿಶಾಚವೊಂದು ಬಂದು ತನ್ನ ಕಿವಿಯಲ್ಲಿ, 'ಒಂಟಿ ಹಾಸಿಗೆಯೇ ಚಟ್ಟ. ಸುಳ್ಳು!' ಎಂದು ಪಿಸುಗುಟ್ಟಿದಂತಾಯಿತು. ತಾನು ಹಿಂದೆ ಜೊತೆಗಿದ್ದ ವಿಧವೆಯ ಭುಜಗಳನ್ನವನು ಕಲ್ಪನೆಯಲ್ಲಿ ಕಂಡ. ತನ್ನ ಮೈಕೊಡವಿಕೊಂಡು ಮತ್ತೆ ಗ್ರಂಥ ಓದಲು ತೊಡಗಿದ. ದೈವಾಜ್ಞೆಗಳನ್ನು ಓದಿಯಾದ ಮೇಲೆ ಅವನು ಸುವಾರ್ತೆಯನ್ನೋದ ತೊಡಗಿದ. ಪುಸ್ತಕವನ್ನು ತಿರುವಿದ ತಕ್ಷಣ ಈಗಾಗಲೇ ಓದಿ ಕಂಠಸ್ಥವಾಗಿದ್ದ "ದೇವರೇ, ನಾನು ನಿನ್ನನ್ನು ನಂಬುತ್ತೇನೆ. ನನ್ನ ಅಪನಂಬಿಕೆಯನ್ನು ಹೋಗಲಾಡಿಸು!" ಎಂಬ ವಾಕ್ಯ ಕಣ್ಣಿಗೆ ಬಿತ್ತು. ತನ್ನಲ್ಲಿ ಉದಿಸಿದ್ದ ಸಂಶಯಗಳನ್ನೆಲ್ಲ ದೂರಮಾಡಿದ. ಯಾವುದಾದರೂ ವಸ್ತುವನ್ನು ಡೋಲಾಯಮಾನ ಸ್ಥಿತಿಯಲ್ಲಿಡುವಂತೆ ತನ್ನ ನಂಬಿಕೆಯನ್ನು ಬಹು ಎಚ್ಚರಿಕೆಯಿಂದ ಅಲ್ಲಾಡುತ್ತಿದ್ದ ಪೀಠದ ಮೇಲಿರಿಸಿ ಅದೆಲ್ಲಿ ಉರುಟಿಕೊಂಡು ಬಿಡುವುದೋ ಎಂದು ಜಾಗರೂಕನಾಗಿ ಅದರಿಂದ ಹಿಂದೆ ಸರಿದ. ತನ್ನ ಕಣ್ಣಡೆಯನ್ನು ಸರಿಪಡಿಸಿಕೊಂಡಾಗ ಸಮಾಧಾನವೆನ್ನಿಸಿತು. ಆಗ ತನ್ನ ಬಾಲ್ಯದ ಪ್ರಾರ್ಥನೆಯನ್ನು ಉಸುರಿದ: 'ದೇವರೇ, ನನ್ನನ್ನು ಸ್ವೀಕರಿಸು, ಸ್ವೀಕರಿಸು!' ಮನಸ್ಸಿನ ಬಿಗಿತ ಸಡಿಲಗೊಂಡದ್ದೇ ಅಲ್ಲದೆ ಅದರಿಂದ ರೋಮಾಂಚನ ಆನಂದಗಳುಂಟಾದವು. ಎದೆಯ ಮೇಲೆ ಶಿಲುಬೆಯಾಕಾರ ರಚಿಸಿಕೊಂಡು, ನಿಲುವಂಗಿಯನ್ನು ಸರಿಪಡಿಸಿಕೊಂಡು

ಇಕ್ಕಟ್ಟಾದ ಮಂಚದ ಮೇಲಿನ ತನ್ನ ಹಾಸಿಗೆಯ ಮೇಲೆ ಉರುಳಿಕೊಂಡ. ತಕ್ಷಣವೇ ಅವನಿಗೆ ನಿದ್ದೆ ಬಂತು. ಅರೆಮಂಪರಿನಲ್ಲಿ ಅವನಿಗೆ ಸ್ಲೆಜ್ ಗಾಡಿಯ ಚಲನೆಯಿಂದಾಗುವ ಗಂಟೆಗಳ ಕಿಣಿಕಿಣಿ ಸದ್ದು ಕೇಳಿಸಿತು. ತನಗೇನು ಕನಸೋ ಎಚ್ಚರವೋ ಅವನಿಗೆ ತಿಳಿಯಲಿಲ್ಲ, ಆದರೆ ಬಾಗಿಲ ಮೇಲೆ ಬಡಿದ ಸದ್ದಾಗಿ ಅವನಿಗೆ ಎಚ್ಚರವಾಯಿತು. ಎದ್ದು ಕೂತ, ಇದು ಭ್ರಮೆಯಿರಬೇಕು ಎನ್ನಿಸಿತು; ಆದರೆ ಮತ್ತೆ ಬಾಗಿಲು ಬಡಿದ ಸದ್ದು! ಹೌದು, ಯಾರೋ ಬಾಗಿಲು ಬಡಿಯುತ್ತಿದ್ದಾರೆ, ಇಲ್ಲಿಯೇ, ಜೊತೆಯಲ್ಲಿ ಒಂದು ಹೆಣ್ಣಿನ ಧ್ವನಿ!

"ಓ ದೇವರೇ, ಇದು ನಿಜವೇ! 'ಸಂತರ ಬದುಕು' ಗ್ರಂಥದಲ್ಲಿ ಓದಿದ ಹಾಗೆ ಪಿಶಾಚಿಗಳು ಹೆಣ್ಣಿನ ರೂಪ ಧರಿಸುತ್ತವೆಯೇ? ನಿಜ, ಅದೂ ಹೆಣ್ಣಿನ ಧ್ವನಿಯೇ. ಅದೂ ಕೋಮಲವಾದ, ಅಂಜಿಕೆಯ, ಮಧುರವಾದ ಧ್ವನಿ, 'ಥೂ!' ಎನ್ನುತ್ತ ಪಿಶಾಚಿಯನ್ನು ಓಡಿಸಲು ಮಂತ್ರ ಹಾಕಿ ಉಗುಳಿದ. "ಇಲ್ಲ, ಎಲ್ಲೋ ನನ್ನ ಕಲ್ಪನೆ, ಅಷ್ಟೆ." ಎಂದು ಸಮಾಧಾನ ಹೇಳಿಕೊಳ್ಳುತ್ತ ಮೂಲೆಯಲ್ಲಿದ್ದ ನಿಲುಮೇಜಿನ ಬಳಿ ಹೋಗಿ ಯಥಾಪ್ರಕಾರ ಮಂಡಿಯೂರಿ ಕುಳಿತ, ಅಷ್ಟರಿಂದಲೇ ಅವನಿಗೆ ಕೊಂಚ ನೆಮ್ಮದಿ ಎನಿಸಿತು. ಮುಖದ ಮೇಲೆ ತಲೆಗೂದಲು ಬೀಳುವಂತೆ ಬಾಗಿ, ಅದಾಗಲೇ ಮುಂಭಾಗ ಬಕ್ಕವಾಗತೊಡಗಿದ್ದ ತನ್ನ ತಲೆಯನ್ನು ಸೋರುವಿಕೆಯಿಂದ ನೆಂದಿದ್ದ ನೆಲದ ಮೇಲಿನ ಹಾಸುಗಂಬಳಿಯ ತುದಿಗೆ ಒತ್ತಿದ. ಆಕರ್ಷಣೆಯಿಂದ ಪಾರಾಗಲು ಫಾದರ್ ಪಿಮೋನ್ ಸೂಚಿಸಿದ್ದ ಸ್ತುತಿಗೀತೆಯನ್ನು ಓದಿದ. ಹಗುರವೂ ಕೃಶವೂ ಆದ ತನ್ನ ದೇಹವನ್ನು ಸಣ್ಣದಾಗಿದ್ದರೂ ಸದೃಢವಾದ ಕಾಲುಗಳ ಮೇಲೆ ನಿಧಾನವಾಗಿ ನಿಲ್ಲಿಸಿ ಸ್ತುತಿಗೀತೆಯ ಪಠಣವನ್ನು ಮುಂದುವರಿಸಲು ಯತ್ನಿಸಿದ. ಆದರೆ ಹಾಗೆ ಮಾಡುವ ಬದಲಾಗಿ ಅರಿವಿಲ್ಲದಂತೆಯೇ ಧ್ವನಿಯನ್ನು ಆಲಿಸುತ್ತ ತನ್ನ ಕಿವಿಗಳನ್ನು ನೋಯಿಸಿದ. ಮತ್ತಷ್ಟು ಕೇಳಬೇಕೆನಿಸಿತು. ಸೂರಿನ ಮೂಲೆಯಿಂದ ಹನಿಗಳು ಕೆಳಗಿರಿಸಿದ್ದ ಬೋಗುಣಿಯಲ್ಲಿ ಲಳಕ್ ಲಳಕ್ ಎಂದು ಬೀಳುತ್ತಿತ್ತು. ಹೊರಗೆ ಮಂಜು ಕಾವಳಗಳನ್ನು ನೆಲದ ಮೇಲೆ ಬಿದ್ದಿದ್ದ ಹಿಮ ನುಂಗಿಹಾಕುತ್ತಿತ್ತು. ಎಲ್ಲೆಡೆ ನಿಶ್ಶಬ್ದ, ನಿಶ್ಚಲ. ಇದ್ದಕ್ಕಿದ್ದಂತೆ ಕಿಟಕಿಯ ಬಳಿ ಸರಸರ ಸದ್ದು, ಮತ್ತದೇ ಕೋಮಲ, ಅಂಜಿಕೆಯ ಧ್ವನಿ? ಅದು ಸುಂದರ ಹೆಣ್ಣಿನದಾಗಿರಲು ಮಾತ್ರ ಸಾಧ್ಯ ಎನಿಸುವಂಥದ್ದು? "ದಯವಿಟ್ಟು ಬಾಗಿಲು ತೆಗೀರಿ, ದೇವರಾಣೆ?" ಎಂದದ್ದು ಕೇಳಿಸಿತು.

ತನ್ನ ಮೈಯಲ್ಲಿನ ರಕ್ತವೆಲ್ಲ ಹೃದಯಕ್ಕೆ ನುಗ್ಗಿ ನೊರೆಗಟ್ಟಿದಂತಾಯಿತು. ಉಸಿರಾಡುವುದೇ ದುಸ್ತರವೆನಿಸಿತು. "ದೇವರು ಏಳಲಿ, ಅವನ ಶತ್ರುಗಳೆಲ್ಲ ಛಿದ್ರಗೊಳ್ಳಲಿ... "

"ಆದರೆ ನಾನು ಪಿಶಾಚಿಯಲ್ಲವಲ್ಲ!" ಹೀಗೆ ನುಡಿದ ತುಟಿಗಳ ಮೇಲೆ ಮಂದಹಾಸ ಮೂಡಿರುವುದು ಖಚಿತ. "ನಾನು ಪಿಶಾಚಿಯಲ್ಲ, ಅಲಂಕಾರಿಕವಾಗಲ್ಲ ವಾಚ್ಯಾರ್ಥದಲ್ಲಿಯೇ ದಾರಿ ತಪ್ಪಿದ ಒಬ್ಬ ಪಾಪಿ ಹೆಂಗಸು! ಮೈಯೆಲ್ಲ ಹೆಪ್ಪುಗಟ್ಟಿದೆ,

ದಯವಿಟ್ಟು ಆಸರೆ ಕೊಡಿ" ಎಂದು ನಕ್ಕಳು.

ಅವನು ಕಿಟಕಿಗೆ ತನ್ನ ಮುಖವನ್ನೊತ್ತಿದ. ವಿಗ್ರಹವಿದ್ದ ಪುಟ್ಟ ಸೊಡರು ಇಡೀ ಕದದ ಮೇಲೆ ಪ್ರತಿಫಲಿಸಿ ಹೊಳೆಯಿತು. ಮುಖದೆರಡೂ ಬದಿಗೆ ಕೈಗಳನ್ನಿರಿಸಿಕೊಂಡು ನಡುವೆ ಇಣುಕಿ ನೋಡಿದ. ಕಾವಳ, ಮಂಜು, ಮರ, ಮತ್ತು ತನಗೆದುರಾಗಿ ಅವಳೇ! ನಿಜ, ತನ್ನಿಂದ ಕೆಲವೇ ಅಂಗುಲಗಳ ದೂರದಲ್ಲಿ ನೀಳವಾದ ತುಪ್ಪುಳದ ಕೋಟು ಟೋಪಿಗಳನ್ನು ಧರಿಸಿದ್ದ ಹೆಂಗಸೊಬ್ಬಳ ಮೋಹಕ ಕರುಣಾಜನಕ ಮುಖ ತನ್ನೆಡೆಗೆ ಬಾಗಿದ್ದಿತು. ಕ್ಷಣಾರ್ಧದಲ್ಲಿ ಆ ಕಣ್ಣುಗಳ ಗುರುತು ಸಿಕ್ಕಿತು: ಪರಸ್ಪರ ಪರಿಚಯ ಇತ್ತು ಎಂದಲ್ಲ? ಯಾಕೆಂದರೆ ಅವರಿಬ್ಬರು ಎಂದೂ ಭೇಟಿಯಾಗಿರಲಿಲ್ಲ? ಆದರೆ ವಿನಿಮಯ ಮಾಡಿಕೊಂಡ ನೋಟಗಳಿಂದಾಗಿ? ಅದರಲ್ಲೂ ಅವನು? ತಮ್ಮಿಬ್ಬರಿಗೆ ಪರಿಚಯ ವಿರುವುದು ಮಾತ್ರವಲ್ಲ ತಾವು ಚೆನ್ನಾಗಿಯೇ ಗೊತ್ತಿದೆ ಎನ್ನಿಸಿತು. ಆ ನೋಟದ ನಂತರ ಅವಳನ್ನು ಪಿಶಾಚಿಯಾಗಿ ಕಲ್ಪಿಸಿಕೊಳ್ಳುವುದು ಅಸಾಧ್ಯವಾಗಿ ಅವಳೊಬ್ಬ ಸರಳ, ಮೆಲುಹೃದಯದ, ಮೋಹಕ, ಅಂಜಿದ ಒಬ್ಬ ಹೆಣ್ಣಾಗಿ ಕಂಡಳು.

"ಯಾರು ನೀವು? ಇಲ್ಲಿಗೇಕೆ ಬಂದಿರಿ?" ಎಂದು ಕೇಳಿದ.

"ದಯವಿಟ್ಟು ಬಾಗಿಲು ತೆಗೀರಿ. ಚಳಿಯಿಂದಾಗಿ ಕುಗ್ಗಿಬಿಟ್ಟಿದ್ದೀನಿ. ನಾನು ದಾರಿ ತಪ್ಪಿ ಬಂದವಳು" ಎಂದಳು ವಿಚಿತ್ರ ಅಧಿಕಾರವಾಣಿಯಿಂದ.

"ನಾನು ಒಬ್ಬ ಸನ್ಯಾಸಿ, ಬೈರಾಗಿ."

"ಓ ದಯವಿಟ್ಟು ಬಾಗಿಲು ತೆಗೀರಿ. ಒಳಗೆ ನೀವು ಪ್ರಾರ್ಥನೆ ಸಲ್ಲಿಸುತ್ತಿರೋವಾಗ ನಾನು ಈ ಕಿಟಕಿ ಹತ್ತಿರವೇ ಹೆಪ್ಪುಗಟ್ಟಿಬಿಡಬೇಕೂಂತ ನಿಮಗೆ ಆಸೆಯಾ?"

"ಆದ್ರೆ, ನೀವು ಹೇಗೆ .. .."

"ನಾನೇನು ನಿಮ್ಮನ್ನ ತಿಂದು ಹಾಕಲ್ಲ. ದೇವರಾಣೆ ಒಳಗೆ ಬರಕ್ಕೆ ಬಿಡಿ. ಚಳಿಯಿಂದ ಕುಗ್ಗಿಬಿಟ್ಟಿದ್ದೀನಿ."

ಅವಳಿಗೆ ನಿಜವಾಗಿಯೂ ಭಯವಾಗಿತ್ತು. ಹೀಗೆ ಹೇಳುವಾಗ ಅವಳದು ಅಳುಮುಖವಾಗಿತ್ತು.

ಕಿಟಕಿಯ ಬಳಿಯಿಂದ ಹಿಂದೆ ಸರಿದ ಅವನು ಮುಳ್ಳಿನ ಕಿರೀಟ ಧರಿಸಿದ್ದ ರಕ್ಷಕನ ಪ್ರತಿಮೆಯ ಕಡೆ ನೋಡಿದ. "ದೇವರೇ, ಕಾಪಾಡು!, ಕಾಪಾಡು" ಎಂದು ಚೀರಿದ, ತನ್ನ ಎದೆಯ ಮೇಲೆ ಶಿಲುಬೆಯಾಕಾರ ಬರೆದು ನಸು ಬಾಗಿದ. ಆನಂತರ ಚಿಕ್ಕ ಮುಂಜೂರಿರುವ ಬಾಗಿಲ ಬಳಿ ಕಡೆ ಹೋಗಿ ಹೊರಬಾಗಿಲನ್ನು ಭದ್ರಪಡಿಸಿದ್ದ ಕೊಕ್ಕೆಗಾಗಿ ತಡಕಾಡಿ ಅದನ್ನು ಮೇಲೆತ್ತಿದ. ಹೊರಗೆ ಹೆಜ್ಜೆಗಳ ಸದ್ದಾದುವು. ಕಿಟಕಿಯ ಬಳಿಯಿಂದ ಅವಳು ಬಾಗಿಲ ಕಡೆಗೆ ಬರುತ್ತಿದ್ದಳು. ಇದ್ದಕ್ಕಿದ್ದಂತೆ "ಆ!" ಎಂದು ಉದ್ಗರಿಸಿದಳು; ಸೂರಿನಿಂದ ತೊಟ್ಟಿಕ್ಕಿದ್ದರಿಂದಾದ ಬಾಗಿಲ ಮುಂದಿನ ನೀರು ತುಂಬಿದ ಗುಂಡಿಯಲ್ಲಿ

ಅವಳು ಧಿಡೀರನೆ ಕಾಲಿಟ್ಟಿದ್ದಳು. ಅವನ ಕೈಗಳು ನಡುಗಿದವು, ಬಿಗಿಯಾಗಿ ಹಾಕಿದ್ದ ಕೊಕ್ಕೆಯನ್ನವನು ಎತ್ತಲಾರದೇ ಹೋದ.

"ಓ ಏನು ಮಾಡ್ತಿದ್ದೀರಾ ನೀವು? ಒಳಗೆ ಬರಕ್ಕೆ ಅವಕಾಶ ಕೊಡಿ. ನೆಂದು ತೊಪ್ಪೆಯಾಗಿಬಿಟ್ಟಿದ್ದೀನಿ. ಮೈ ನಡುಗ್ತಿದೆ! ನಿಮಗೆ ನಿಮ್ಮ ಆತ್ಮವನ್ನು ರಕ್ಷಿಸಿಕೊಳ್ಳೋ ಚಿಂತೆ, ನಾನಿಲ್ಲಿ ಒದ್ದಾಡ್ತಿದ್ದೀನಿ .."

ತನ್ನ ಕಡೆ ಅವನು ಬಾಗಿಲನ್ನು ಎಳೆದುಕೊಂಡು ಕೊಕ್ಕೆಯನ್ನು ಮೇಲೆತ್ತಿದ; ತಾನೇನು ಮಾಡುತ್ತಿರುವೆನೆಂಬ ಅರಿವಿಲ್ಲದೆಯೇ ಬಾಗಿಲನ್ನು ಜೋರಾಗಿ ದಬ್ಬಿದ, ಅಲ್ಲೇ ಇದ್ದ ಅವಳಿಗದು ಬಡಿಯಿತು.

"ಓ ದಯವಿಟ್ಟು ಕ್ಷಮಿಸಿ!" ಎಂದು ತಕ್ಷಣವೇ ಉದ್ಗರಿಸಿದ, ಹಿಂದೆಲ್ಲ ಹೆಂಗಸರ ಜೊತೆಯಲ್ಲಿ ನಡೆದುಕೊಳ್ಳುತ್ತಿದ್ದ ರೀತಿಯಲ್ಲೇ ಅವನ ನಡೆಯಿತ್ತು.

"ಕ್ಷಮಿಸಿ" ಎಂಬ ಮಾತು ಕೇಳಿ ಅವಳು ಮುಗುಳ್ನಕ್ಕಳು. "ಅವನು ಅಂದುಕೊಂಡಷ್ಟೇನೂ ಭಯಂಕರವಾಗಿಲ್ಲ, ಸದ್ಯ" ಅಂದುಕೊಂಡಳು. "ಪರವಾಯಿಲ್ಲ ಬಿಡಿ, ನೀವೇ ನನ್ನನ್ನ ಕ್ಷಮಿಸಿಬೇಕು" ಎಂದಳು ಅವನು ಮುಂದೆ ಹಾದು ಹೋಗಲು ಪ್ರಯತ್ನಿಸಿದಳು. "ನಾನು ಈ ಸಾಹಸಕ್ಕೆ ಕೈಹಾಕಲೇ ಬಾರದಿತ್ತು, ಆದರೇನು ಮಾಡೋದು, ಅಪರೂಪದ ಪರಿಸ್ಥಿತಿ ..." ಎಂದಳು.

"ಸ್ವಲ್ಪ!" ಎಂದ ಅವನು ಅವಳು ಸರಾಗವಾಗಿ ಒಳಹೋಗುವಂತೆ ಹಿಂದಕ್ಕೆ ಸರಿದು ನಿಂತ. ಬಹು ಕಾಲದಿಂದ ಅನುಭವಿಸದಿದ್ದ ಮಧುರವಾದ ಮಾದಕ ಪರಿಮಳ ಅವನನ್ನಾವರಿಸಿತು. ಕಿರಿದಾದ ಮುಂಜೂರಿನ ಮೂಲಕ ಅವಳು ಅವನಿದ್ದ ಕೋಣೆಗೆ ಹೋದಳು. ಕೊಕ್ಕೆ ಭದ್ರಪಡಿಸದೆ ಅವನು ಹೊರಬಾಗಿಲನ್ನು ಮುಚ್ಚಿ ಅವಳನ್ನು ಹಿಂಬಾಲಿಸಿದ.

"ದೇವಪುತ್ರ ಯೇಸು ಪಾಪಿಯಾದ ನನ್ನ ಮೇಲೆ ಕರುಣೆ ತೋರಲಿ!" ಎಂದು ಅವನು ಒಂದೇ ಸಮನೆ ಪ್ರಾರ್ಥಿಸಿದ, ಮನಸ್ಸಿನಲ್ಲಿ ಮಾತ್ರವಲ್ಲ, ಅವನ ತುಟಿ ಅವನಿಗರಿವಿಲ್ಲದೆಯೇ ಈ ಶಬ್ದಗಳನ್ನುರಿಸಿತು. "ಏನೂ ಅಂದುಕೊಳ್ಳದಿದ್ದರೆ ..." ಎಂದ ಅವನು ಮತ್ತೆ. ಅವಳು ಕೋಣೆಯ ಮಧ್ಯೆ ನಿಂತಿದ್ದಳು; ಅವಳ ಮೈಯಿಂದ ನೀರು ನೆಲದ ಮೇಲೆ ತೊಟ್ಟಿಕ್ಕುತ್ತಿತ್ತು, ಅವನೆಡೆ ನೋಡಿದಳು; ಅವಳ ಕಣ್ಣುಗಳಲ್ಲಿ ನಗು ತುಂಬಿತ್ತು.

"ನಿಮ್ಮ ಏಕಾಂತಕ್ಕೆ ಭಂಗ ಉಂಟುಮಾಡಿದ್ದಕ್ಕಾಗಿ ದಯವಿಟ್ಟು ಕ್ಷಮಿಸಿ. ಆದ್ರೆ ನನ್ನ ಪರಿಸ್ಥಿತಿ ನಿಮಗೇ ಕಾಣಿಸ್ತಿದೆಯಲ್ಲ. ಇದೆಲ್ಲ ಆದದ್ದು ಸ್ಲೆಜ್‌ನಲ್ಲಿ ಊರಿಂದ ವಿಹಾರ ಹೊರಟದ್ದರಿಂದಲೇ, ಅಲ್ದೆ ವೊರೋಬೆವ್‌ಕದಿಂದ ಊರಿಗೆ ನಾನು ನಡಕೊಂಡೇ ಬರ್ತೀನಿ ಅಂತ ಪಂತ ಕಟ್ಟಿದ್ದರಿಂದ. ಆದ್ರೆ ನನಗೆ ದಾರಿ ತಪ್ಪಿಹೋಯ್ತು, ನಿಮ್ಮ ಈ ಕೋಣೆಗೆ ನಾನು ಬರದೇ ಹೋಗಿದ್ದಿದ್ರೆ ..." ಎಂದು ಹಸಿ ಸುಳ್ಳುಗಳನ್ನು ಪೋಣಿಸತೊಡಗಿದಳು. ಆದರೆ ಅವನ ಮುಖ ಅವಳಲ್ಲಿ ಗೊಂದಲವನ್ನುಂಟುಮಾಡಿತು,

ಹೀಗಾಗಿ ಅದನ್ನು ಮುಂದುವರಿಸುವುದು ಅವಳಿಗೆ ಸಾಧ್ಯವಾಗದೆ ಸುಮ್ಮನಾದಳು. ಅವನು ತನ್ನ ಮುಂದೆ ಇರೋ ಹಾಗೆ ಇರಬಹುದು ಎಂದು ಅವಳು ಊಹಿಸಿರಲಿಲ್ಲ. ಅವಳು ಕಲ್ಪಿಸಿಕೊಂಡಷ್ಟೇನೂ ಅವನು ಸುಂದರನಾಗಿರಲಿಲ್ಲ, ಆದರೆ ಅವಳ ಕಣ್ಣಿಗೆ ಚೆಲುವನಾಗಿಯೇ ಕಾಣಿಸಿದ. ಕೊಂಚ ಗುಂಗುರುಗುಂಗುರಾಗಿದ್ದ ಬೂದು ಬಣ್ಣದ ಕೂದಲು-ಗಡ್ಡಗಳು, ಅಂದವಾದ ನೀಳ ಮೂಗು, ತನ್ನ ಕಡೆ ದೃಷ್ಟಿ ಹಾಯಿಸಿದಾಗ ಕೆಂಡದುಂಡೆಗಳಂತೆ ನಿಗಿ ನಿಗಿ ಹೊಳೆಯುತ್ತಿದ್ದ ಅವನ ಕಣ್ಣುಗಳು ಅವಳ ಮೇಲೆ ತುಂಬ ಪ್ರಭಾವ ಬೀರಿದವು.

ಅವಳು ಸುಳ್ಳಿನ ಕಂತೆ ಬಿಚ್ಚಿರುವುದು ಅವನಿಗೆ ಗೊತ್ತಾಯಿತು.

"ಆಗಲಿ... ಹಾಗಾದ್ರೆ ನಾನು ಒಳಗೆ ಹೋಗ್ತೀನಿ. ಈ ಜಾಗದಲ್ಲಿ ನೀವು ಇರಬಹುದು" ಎಂದ ಅವಳ ಕಡೆ ಮತ್ತೆ ದೃಷ್ಟಿ ಬೀರಿ ನೋಟ ಕೆಳಗಿಳಿಸುತ್ತ.

ಅಲ್ಲಿದ್ದ ಸಣ್ಣ ದೀಪವನ್ನು ತೆಗೆದುಕೊಂಡು, ಅಲ್ಲೊಂದು ಮೋಂಬತ್ತಿ ಹಚ್ಚಿಸಿಟ್ಟು, ಅವಳ ಕಡೆ ನಸುಬಾಗಿ ಬೇರ್ಪಡೆಯ ಆಚೆಗಿನ ಕಿರು ಕೋಣೆಯತ್ತ ನಡೆದ. ಹೋಗಿ ಅವನು ಏನನ್ನೋ ಎಳೆದ ಸದ್ದು ಅವಳ ಕಿವಿಗೆ ಬಿತ್ತು. 'ಪ್ರಾಯಶಃ ನನ್ನ ಅವರ ನಡುವೆ ಬೇಲಿ ಹಾಕ್ಕೋತಿದಾರೆ ಅಂತ ಕಾಣತ್ತೆ' ಎಂದವಳು ಯೋಚಿಸಿದಾಗ ಅವಳ ಮುಖದ ಮೇಲೆ ಮುಗುಳ್ನಗೆ ಮೂಡಿತು. ತಾನು ತೊಟ್ಟಿದ್ದ ಡಾಗ್‌ಸ್ಕಿನ್ ಕೋಟನ್ನು ತೆಗೆದು, ಟೋಪಿಯನ್ನೂ ತೆಗೆಯಲು ಪ್ರಯತ್ನಿಸಿದಳು. ಆದರದು ಅವಳ ಕೂದಲು ಮತ್ತು ಅದರ ಕೆಳಗೆ ಹಾಕಿಕೊಂಡಿದ್ದ ನೆಯ್ಗೆಯ ಕರವಸ್ತ್ರಕ್ಕೆ ಸಿಕ್ಕಿಹಾಕಿಕೊಂಡಿತ್ತು. ಕಿಟಕಿಯ ಬಳಿ ನಿಂತಿದ್ದಾಗ ಅವಳು ಕೊಂಚವೂ ನೆನೆದಿರಲಿಲ್ಲ, ಆದರೆ ಒಳಗೆ ಬರಲು ಅವಕಾಶ ಮಾಡಿಕೊಡಲೆಂದು ಹಾಗೆ ಹೇಳಿದ್ದಳು, ಅಷ್ಟೆ. ಆದರೆ ಬಾಗಿಲ ಹತ್ತಿರವಿದ್ದ ನೀರಿನ ಗುಂಡಿಗೆ ಕಾಲಿಟ್ಟಿದ್ದುದಂತೂ ನಿಜ; ಹೀಗಾಗಿ ಅವಳ ಎಡಪಾದ ಹಿಮ್ಮಡಿಯವರೆಗೂ ನೆನೆದಿತ್ತು, ಅವಳ ಓವರ್‌ಶೂ ಒಳಗೆ ನೀರು ತುಂಬಿಕೊಂಡಿತ್ತು. ಅವನ ಹಾಸಿಗೆಯ-ಅಂದರೆ ಒಂದು ಬೆಂಚಿನ ಮೇಲೆ ಹಾಸಿದ್ದ ಜಮಖಾನೆ - ಮೇಲೆ ಕುಳಿತುಕೊಂಡ ಅವಳು ತನ್ನ ಶೂಗಳನ್ನು ತೆಗೆಯಲಾರಂಭಿಸಿದಳು. ಆ ಪುಟ್ಟ ಕೋಣೆ ಆಕರ್ಷಕವಾಗಿತ್ತು. ಸುಮಾರು ಒಂಬತ್ತಡಿ ಉದ್ದ ಏಳಡಿ ಅಗಲದ ಕಿರಿದಾದ ಆ ಕೋಣೆ ಗಾಜಿನಂತೆ ಪರಿಶುಭ್ರವಾಗಿತ್ತು. ತಾನು ಕೂತಿದ್ದ ಆ ಬೆಂಚು ಮತ್ತದರ ಮೇಲುಭಾಗದಲ್ಲಿನ ಪುಸ್ತಕಗಳ ಕಪಾಟು ಮತ್ತು ಮೂಲೆಯಲ್ಲಿದ್ದ ನಿಲುಮೇಜುಗಳ ಹೊರತಾಗಿ ಅಲ್ಲಿ ಬೇರೇನೂ ಇರಲಿಲ್ಲ. ಕುರಿಚರ್ಮದ ಕೋಟು ಮತ್ತು ಪಾದ್ರಿಯ ಟೋಪಿಗಳನ್ನು ಬಾಗಿಲ ಮೊಳೆಗೆ ಸಿಕ್ಕಿಸಲಾಗಿತ್ತು. ನಿಲುಮೇಜಿನ ಮೇಲೆ ದೀಪ ಉರಿಯುತ್ತಿತ್ತು, ಅದರ ಪಕ್ಕದಲ್ಲಿ ಮುಳ್ಳಿನ ಕಿರೀಟ ಧರಿಸಿದ್ದ ಯೇಸುಕ್ರಿಸ್ತನ ಸಣ್ಣ ವಿಗ್ರಹವಿತ್ತು. ಕೋಣೆಯ ತುಂಬ ವಿಚಿತ್ರವಾದ ಬೆವರು ಮತ್ತು ಮಣ್ಣ ವಾಸನೆಗಳು ತುಂಬಿದ್ದವು. ಅವೆಲ್ಲ ಅವಳಿಗೆ ಇಷ್ಟವಾದುವು, ವಾಸನೆ ಕೂಡ. ಒದ್ದೆಯಾಗಿದ್ದ ಅವಳ ಪಾದಗಳು, ಅದರಲ್ಲೂ ಎಡಪಾದ, ಕಸಿವಿಸಿಯುಂಟುಮಾಡಿತ್ತು. ಹೀಗಾಗಿ ತನ್ನ ಬೂಟು ಸ್ಟಾಕಿಂಗ್‌ಗಳನ್ನು ಬೇಗ ಬೇಗ

ತೆಗೆಯತೊಡಗಿದಳು; ಆದರೆ ಮುಖದ ಮೇಲಿನ ಮಂದಸ್ಮಿತ ಅರಳಿಕೊಂಡೇ ಇತ್ತು, ತನ್ನ ಗುರಿ ಸಾಧಿಸಿದ್ದ ತೃಪ್ತಿಯಿಂದಾಗಿ ಅಲ್ಲ, ಈ ಆಕರ್ಷಕ, ಅಪರಿಚಿತ, ಪ್ರಭಾವಶಾಲೀ, ಚೆಲುವನನ್ನು ಲಜ್ಜೆಗೊಳ್ಳುವ ಹಾಗೆ ಮಾಡಿದ್ದಕ್ಕಾಗಿ. 'ಅವನೇನೂ ಪ್ರತಿಕ್ರಿಯಿಸಲಿಲ್ಲ, ಆದರೆ ಅಷ್ಟರಿಂದಲೇ ಏನು?' ಎಂದುಕೊಂಡಳು.

"ಫಾದರ್ ಸರ್ಜಿಯಸ್! ಫಾದರ್ ಸರ್ಜಿಯಸ್! ಜನ ಹೇಗೆ ಕರೀತಾರೆ ನಿಮ್ಮನ್ನ?"

"ನಿಮಗೇನು ಬೇಕಾಗಿದೆ?" ಎಂದಿತು ಉತ್ತರ ನೀಡಿದ ಕಂಪಿಸುವ ದನಿ.

"ನಿಮ್ಮ ಏಕಾಂತ ಕೆಡಿಸಿದ್ದಕ್ಕಾಗಿ ಕ್ಷಮೆಯಿರಲಿ, ಆದರೆ ಹಾಗೆ ಮಾಡದೆ ವಿಧಿಯಿರಲಿಲ್ಲ. ಇಲ್ದಿದ್ರೆ ಹಾಸಿಗೆ ಹಿಡೀಬೇಕಾಗಿತ್ತು. ಈಗಲೂ ಕಾಯಿಲೆ ಮಲಗಲ್ಲ ಅಂತ ಖಂಡಿತವಾಗಿ ಹೇಳಕ್ಕಾಗಲ್ಲ. ಯಾಕಂದ್ರೆ ನಾನು ನೆಂದು ತೊಪ್ಪೆಯಾಗೀದೀನಿ, ಪಾದಗಳಂತೂ ಮಂಜುಗಡ್ಡೆ ಹಾಗಾಗಿವೆ."

"ಕ್ಷಮಿಸಿ, ನಾನು ಯಾವ ರೀತೀಲೂ ನಿಮಗೆ ಸಹಾಯ ಮಾಡಲಾರೆ."

"ಅನಿವಾರ್ಯವಾಗದೇ ಇದ್ದಿದ್ರೆ ಖಂಡಿತ ನಿಮಗೆ ತೊಂದ್ರೆ ಕೊಡ್ತಿರಲಿಲ್ಲ. ಬೆಳಕು ಹರಿಯೋವರೆಗೆ ಮಾತ್ರ ನಾನಿಲ್ಲಿರ್ತೀನಿ."

ಅವನಿಂದ ಪ್ರತ್ಯುತ್ತರ ಬರಲಿಲ್ಲ, ಅವನೇನೋ ಗೊಣಗುಟ್ಟಿಕೊಳ್ಳುತ್ತಿರುವಂತೆ ಕೇಳಿಸಿತು, ಪ್ರಾರ್ಥನೆಯಿರಬಹುದು.

"ನೀವಿಲ್ಲಿಗೆ ಬರಲ್ಲವಾ? ಯಾಕಂದ್ರೆ ಬಟ್ಟೆ ಬಿಚ್ಚಬೇಕಾಗಿದೆ" ಎಂದಳು ತನ್ನಲ್ಲೇ ಮುಸಿಮುಸಿ ನಗುತ್ತ.

ಮತ್ತೆ ಅವನಿಂದ ಉತ್ತರವಿಲ್ಲ, ಅದರ ಬದಲು ಪ್ರಾರ್ಥನೆಯನ್ನು ಗೊಣಗುಟ್ಟಿಕೊಳ್ಳುವ ಧ್ವನಿ.

ನೀರಿನಿಂದ ತುಂಬಿದ್ದ ಬೂಟುಗಳನ್ನು ಪ್ರಯಾಸದಿಂದ ತೆಗೆಯುತ್ತ ಯೋಚಿಸಿದಳು: 'ನಿಜ, ಅವನು ಗಂಡಸು!' ಬೂಟುಗಳನ್ನು ಬಲವಾಗಿ ಎಳೆದಳು, ಆದರೆ ತೆಗೆಯಲಾಗಲಿಲ್ಲ. ಇದರಿಂದ ಅವಳಿಗೆ ವಿಚಿತ್ರವೆನ್ನಿಸಿ ಅವನಿಗೆ ಕೇಳಿಸದಂತೆ ನಗತೊಡಗಿದಳು. ಆದರೆ ಅವನು ತನ್ನ ನಗು ಕೇಳಿ ಅವನು ವಿಚಲಿತನಾಗಬಹುದು ಎನ್ನಿಸಿ ಜೋರಾಗಿ ನಕ್ಕಳು. ಉಲ್ಲಾಸದಿಂದ ಕೂಡಿದ ಅವಳ ಮೃದುಲವಾದ ಸಹಜ ನಗು ಅವನ ಮೇಲೆ ಬಲವಾದ ಪರಿಣಾಮವನ್ನೇ ಉಂಟುಮಾಡಿತು, ಅದೂ ಅವಳು ಬಯಸಿದ್ದ ರೀತಿಯಲ್ಲಿಯೇ.

'ಇಂಥ ಗಂಡಸನ್ನು ನಾನು ಒಲಿಯಬಹುದು, ಅಂತ ಹೊಳಪು ಕಣ್ಣುಗಳು, ಸರಳ ಮುಗ್ಧ ಮುಖ, ತಾನು ಹೇಳಿಕೊಳ್ಳುವ ಪ್ರಾರ್ಥನೆಯ ಹೊರತಾಗಿಯೂ ತೀವ್ರ ಭಾವನೆಗೊಳಗಾಗುವ ವ್ಯಕ್ತಿ!' ಎಂದುಕೊಂಡಳು. 'ಈ ವಿಷಯದಲ್ಲಿ ನೀನು ಹೆಣ್ಣನ್ನು

ವಂಚಿಸಲಾರೆ. ಕಿಟಕಿಯ ಕಡೆ ಮುಖ ಒತ್ತಿ ತನ್ನನ್ನು ಅವನು ಕಂಡ ಕ್ಷಣವೇ ಅವನಿಗೆ ಗೊತ್ತಾಯಿತು, ಅರ್ಥವಾಯಿತು. ಅದರಿಂದಾಗಿ ಅವನ ಕಣ್ಣು ಮಿಂಚಿ ಸ್ಥಿರವಾಗಿ ನೆಲಸಿತು. ಅವನಿಗೆ ನನ್ನ ಮೇಲೆ ಒಲವುಂಟಯಿತು, ನನ್ನ ಬಗ್ಗೆ ಬಯಕೆ ಉಕ್ಕಿತು. ಹೌದು, ಬಯಕೆ!' ಎಂದುಕೊಂಡು ಕೊನೆಗೂ ತನ್ನ ಓವರ್‌ಶೂಗಳನ್ನು ಕಳಚಿ ಸ್ಟಾಕಿಂಗ್‌ಗಳನ್ನು ತೆಗೆಯುತೊಡಗಿದಳು. ಇಲಾಸ್ಟಿಕ್‌ನಿಂದಾಗಿ ಬಿಗಿಯಾಗಿ ಮಂಡಿಯವರೆಗೂ ಇದ್ದ ಅವುಗಳನ್ನು ತೆಗೆಯಲು ತನ್ನ ಸ್ಕರ್ಟನ್ನು ಮೇಲೆತ್ತುವುದು ಅನಿವಾರ್ಯವಾಗಿತ್ತು. ಏನೋ ಇರಿಸುಮುರಿಸು ಅನ್ನಿಸಿ, "ಬರಬೇಡಿ!" ಎಂದು ಕೂಗಿದಳು.

ಆದರೆ ಗೋಡೆಯ ಆ ಕಡೆಯಿಂದ ಇದಕ್ಕೂ ಉತ್ತರ ಬರಲಿಲ್ಲ. ಗೊಣಗುಟ್ಟುವಿಕೆ ಒಂದೇ ಸಮನೆ ಮುಂದುವರಿಯಿತು, ಜೊತೆಗೆ ಓಡಾಡಿದ ಸದ್ದು.

'ಬಹುಶಃ ನೆಲದ ಮೇಲೆ ಸಾಷ್ಟಾಂಗ ಎರಗಿರಬೇಕು ಅವನು, ಅನುಮಾನವೇ ಇಲ್ಲ' ಅಂದುಕೊಂಡಳು. 'ಆದ್ರೆ ಅವನು ಪಾರಾಗಲಾರ, ನಾನು ಅವನ ಬಗ್ಗೆ ಯೋಚನೆ ಮಾಡ್ತಿರೋ ಹಾಗೆಯೇ ಅವನೂ ನನ್ನ ಬಗ್ಗೆ ಯೋಚಿಸುತ್ತಿರ್ತಾನೆ. ಈ ನನ್ನ ಪಾದಗಳ ಬಗ್ಗೆ ನನಗೆ ಹೇಗನ್ನಿಸ್ತಿದೆಯೋ ಹಾಗೆ ಅವನಿಗೂ ಅನ್ನಿಸ್ತಿರೋದು ಖಚಿತ' ಎಂದುಕೊಳ್ಳುತ್ತ ತನ್ನ ಒದ್ದೆ ಮುದ್ದೆ ಸ್ಟಾಕಿಂಗ್‌ಗಳನ್ನು ತೆಗೆದು ಹಾಕಿ ಕಾಲುಗಳನ್ನು ಒತ್ತುತ್ತಿದ್ದ ಬೆಂಚಿನ ಮೇಲಿರಿಸಿಕೊಂಡಳು. ಮೊಣಕಾಲುಗಳ ಸುತ್ತ ತನ್ನ ತೋಳುಗಳನ್ನಿರಿಸಿಕೊಂಡು ಮುಂದುಗಡೆಯೇ ಯೋಚನಾಮಗ್ನಳಾಗಿ ಕೊಂಚ ಹೊತ್ತು ಕುಳಿತಿದ್ದಳು. 'ಇದೊಂದು ಮರಳುಗಾಡು, ನೀರವ ಮೌನ ಬೇರೆ. ಯಾರಿಗೂ ಗೊತ್ತಾಗೋದಿಲ್ಲ .. ..'

ಮೇಲೆದ್ದು ಅಗ್ಗಿಷ್ಟಿಕೆಯ ಬಳಿ ತನ್ನ ಸ್ಟಾಕಿಂಗ್‌ಗಳನ್ನು ತೆಗೆದುಕೊಂಡು ಹೋಗಿ ಅದರ ಮೇಲೆ ಒಣಗಿ ಹಾಕಿದಳು. ಆಮೇಲೆ ಈ ಕಡೆ ತಿರುಗಿ ತನ್ನ ಬರಿಗಾಲುಗಳಿಂದ ಮೆಟ್ಟಿಂಗಾಲಿಡುತ್ತ ಬೆಂಚಿನ ಕಡೆ ಸಾಗಿ ತನ್ನ ಪಾದಗಳನ್ನು ಅದರ ಮೇಲಿರಿಸಿಕೊಂಡು ಮತ್ತೆ ಕೂತಳು.

ಗೋಡೆಯ ಆ ಕಡೆ ದಟ್ಟ ನೀರವತೆ. ತನ್ನ ಕೊರಳ ಸುತ್ತ ನೇತಾಡುತ್ತಿದ್ದ ಸಣ್ಣ ಗಡಿಯಾರದ ಕಡೆ ನೋಡಿಕೊಂಡಳು. ಎರಡು ಗಂಟೆಯಾಗಿತ್ತು. 'ನಮ್ಮ ತಂಡ ಮೂರು ಗಂಟೆಗೆ ಇಲ್ಲಿಗೆ ತಲುಪಬಹುದು!' ತನ್ನೆದುರಿಗಿದ್ದು ಕೇವಲ ಒಂದು ಗಂಟೆ ಸಮಯ, ಅಷ್ಟೆ. 'ಹೀಗೇ ನಾನೊಬ್ಬಳೆ ಸುಮ್ನೆ ಕೂತಿರ್ಬೇಕಾ? ಸಾಧ್ಯವಿಲ್ಲ. ಕೂರಲಾರೆ. ಈಗಲೇ ಅವನನ್ನ ಕರೀತೀನಿ'

"ಫಾದರ್ ಸರ್ಜಿಯಸ್! ಫಾದರ್ ಸರ್ಜಿಯಸ್! ಸರ್ಗೀ ಡಿಮಿಟ್ರಿಚ್! ಪ್ರಿನ್ಸ್ ಕಸಾಟ್‌ಸ್ಕಿ!"

ಗೋಡೆಯಾಚೆ ಯಥಾಪ್ರಕಾರ ನೀರವತೆ.

"ಇಲ್ಲಿ ಕೇಳಿ, ಇದು ತುಂಬ ಕ್ರೂರವಾದ ರೀತಿ. ಅವಶ್ಯಕವಲ್ಲದಿದ್ದರೆ ನಾನು

ನಿಮ್ಮನ್ನ ಕರೀತಾನೇ ಇರ್ಲಿಲ್ಲ. ಹುಷಾರಿಲ್ಲದೆ ನಾನು ನರಳ್ತಿದ್ದೀನಿ. ಸಂಗೇನಾಗಿದ್ಯೋ ಗೊತ್ತಾಗದೆ ಒದ್ದಾಡ್ತಾ ಇದ್ದೀನಿ!" ಎಂದು ನರಳಿಕೆಯ ಧ್ವನಿಯಲ್ಲಿ ಮುಲುಕಾಡಿದಳು. ಬೆಂಚಿನ ಮೇಲೆ ಬಿದ್ದುಕೊಂಡು "ಆ ಆ!" ಎಂದು ನರಳಿದಳು. ವಿಚಿತ್ರ ಅಂದರೆ, ತನ್ನ ಶಕ್ತಿ ಸೋರಿಹೋಗ್ತಿದೆಯೇನೋ ಎಂಬ, ಕೈಯಲ್ಲಾಗದ ಅನುಭವ ಅವಳಿಗಾಗುತ್ತಿತ್ತು. ಜ್ವರದಿಂದ ಅವಳ ಮೈ ತಲ್ಲಣಿಸುತ್ತಿತ್ತು.

"ಇಲ್ಲಿ ಕೇಳಿ, ಸಹಾಯ ಮಾಡಿ! ಸುಮ್ಮಸುಮ್ಮನೆ ನಾನು ನಿಮ್ಮನ್ನ ಕರೀತಿರ್ಲಿಲ್ಲ. ನನಗೇನಾಗಿದೆಯೋ ಗೊತ್ತಾಗ್ತಿಲ್ಲ. ನನ್ನ ಮೈಲಿ ಹುಷಾರಿಲ್ಲ!" ತನ್ನ ಉಡುಪನ್ನವಳು ಸಡಿಲಿಸಿದಳು, ಮೊಲೆಗಳು ಕಾಣುವಂತೆ. ಮೊಳಕೈವರೆಗೂ ಬತ್ತಲಾಗಿದ್ದ ತೋಳುಗಳನ್ನು ಮೇಲೆತ್ತಿ, "ಆ ಆ" ಎಂದು ನರಳಿದಳು.

ಇಷ್ಟೆಲ್ಲ ನಡೆಯುತ್ತಿದ್ದರೂ ಅವನು ಮಾತ್ರ ಗೋಡೆಯ ಆ ಕಡೆ ನಿಂತು ಪ್ರಾರ್ಥನೆ ಸಲ್ಲಿಸುವುದರಲ್ಲಿ ನಿರತನಾಗಿದ್ದ. ಸಂಜೆಯ ಪ್ರಾರ್ಥನೆಗಳನ್ನೆಲ್ಲ ಮುಗಿಸಿಯಾದ ಮೇಲೆ, ನಿಶ್ಚಲನಾಗಿ ನಿಂತ, ಅವನ ಕಣ್ಣುಗಳು ಮೂಗಿನ ತುದಿಯತ್ತಲೇ ಕೇಂದ್ರೀಕರಿಸಿದ್ದವು. ಮನಸ್ಸಿನಲ್ಲೇ ತನ್ನ ಆತ್ಮದ ಜೊತೆ ಪುನರುಚ್ಚರಿಸಿದ: "ದೇವ ಯೇಸುವೇ, ದೇವಪುತ್ರನೇ, ನನ್ನ ಮೇಲೆ ಕೃಪೆ ತೋರು!"

ಆದರೆ ಅವನು ಎಲ್ಲವನ್ನೂ ಕೇಳಿಸಿಕೊಂಡಿದ್ದ. ತನ್ನ ಉಡುಪುಗಳನ್ನವಳು ತೆಗೆಯುತ್ತಿದ್ದಾಗ ಆದ ಸರಪರ ಸದ್ದನ್ನಾಲಿಸಿದ್ದ, ಬರಿಗಾಲಲ್ಲಿ ಅವಳು ನಡೆಯುವಾಗಿನ ಶಬ್ದ ಕೇಳಿಸಿತ್ತು, ಕೈಗಳಿಂದ ಅವಳು ತನ್ನ ಪಾದಗಳನ್ನು ತಿಕ್ಕಿಕೊಂಡಾಗಿನ ಶಬ್ದ- ಎಲ್ಲ ಕೇಳಿಸಿತ್ತು. ಅವನಿಗೆ ತನ್ನ ದೌರ್ಬಲ್ಯದ ಅನುಭವವಾಯಿತು, ಯಾವ ಕ್ಷಣದಲ್ಲಿ ಬೇಕಾದರೂ ತಾನು ಪತನಗೊಳ್ಳಬಹುದಾದ ಭಾವನೆಯುಂಟಾಯಿತು. ಆ ಕಾರಣಕ್ಕಾಗಿಯೇ ಅವನು ಒಂದೇ ಸಮನೆ ಪ್ರಾರ್ಥನೆಯಲ್ಲಿ ತೊಡಗಿದ್ದುದು. ಕಲ್ಪಕ ಕತೆಯಲ್ಲಿನ ಆ ಕಡೆ ಈ ಕಡೆ ನೋಡದೆ ಒಂದೇ ಸಮನೆ ಮುಂದೆ ಸಾಗಬೇಕಾದ ಸ್ಥಿತಿಯ ನಾಯಕನ ಸ್ಥಿತಿ ತನ್ನದು ಎಂದುಕೊಂಡ. ಹೀಗಾಗಿ ಸರ್ಜಿಯಸ್‌ಗೆ ತನ್ನ ಸುತ್ತಲೂ ಸುತ್ತುತ್ತಿರುವ ಅಪಾಯ ಮತ್ತು ವಿನಾಶಗಳ ಸದ್ದು ಕೇಳಿಸಿದಂತಾಯಿತು, ಆ ಕಡೆ ಒಂದು ಕ್ಷಣವಾದರೂ ನೋಡದೆ ಇರುವುದರಿಂದ ಮಾತ್ರವೇ ತನ್ನನ್ನು ತಾನು ಪಾರುಮಾಡಿಕೊಳ್ಳಬಹುದೆಂದು ಅವನಿಗನ್ನಿಸಿತು. ಆದರೆ ಇದ್ದಕ್ಕಿದ್ದಂತೆ ಆ ಕಡೆ ನೋಡುವ ಬಯಕೆ ತೀವ್ರವಾಯಿತು. ಆ ಕ್ಷಣಕ್ಕೆ ಆ ಕಡೆ ಅವಳು ಹೇಳುತ್ತಿದ್ದಳು: "ಇದು ಅಮಾನವೀಯತೆ, ನಾನು ಸತ್ತೇ ಹೋಗಿಬಿಡಬಹುದು..."

'ಇಲ್ಲ, ನಾನವಳಿರೋ ಜಾಗಕ್ಕೆ ಹೋಗ್ಬೇಕು, ಆದರೆ ಹಾದರಗಿತ್ತಿಯ ಮೇಲೆ ತನ್ನ ಕೈಯೊಂದನ್ನಿಟ್ಟು ಮತ್ತೊಂದನ್ನು ಒಲೆಯ ಮೇಲಿಟ್ಟ ಸಂತನ ಹಾಗೆ. ಆದರೆ ಇಲ್ಲಿ ಒಲೆ ಇಲ್ಲವಲ್ಲ.' ಸುತ್ತ ಕಣ್ಣಾಡಿಸಿದ, ದೀಪ ಉರಿಯುತ್ತಿತ್ತು! ತನ್ನ ಬೆರಳೊಂದನ್ನು ದೀಪದ ಕುಡಿಯ ಮೇಲಿಟ್ಟುಕೊಂಡು ಉರಿಯುಂಟಾಗುವ ನಿರೀಕ್ಷೆಯಿಂದ ಮುಖ ಕಿವುಚಿಕೊಂಡ.

ಆದರೆ ಬಹಳ ಹೊತ್ತಾದರೂ ತನಗೇನೂ ಆಗುತ್ತಲೇ ಇಲ್ಲವೆನಿಸಿತು. ಅದು ಸಾಕಷ್ಟು ಉರಿಯಾಗುತ್ತಿದೆ ಎನ್ನಿಸುವ ಮುಂಚೆಯೇ ಇದ್ದಕ್ಕಿದ್ದಂತೆ ತನ್ನ ಕೈಯನ್ನು ಎಳೆದುಕೊಂಡು ಗಾಳಿಯಲ್ಲಿ ಬೀಸಾಡಿದ. 'ಉಹ್ಞೂ, ಇನ್ನು ತಡೆದುಕೊಳ್ಳಲಾರೆ!' ಅನ್ನಿಸಿತು.

"ದೇವರ ಮೇಲಾಣೆ, ದಯವಿಟ್ಟು ಬನ್ನಿ! ನಾನಿಲ್ಲಿ ಸಾಯ್ತಾ ಇದ್ದೀನಿ, ಆ!"

'ಇನ್ನು ನಾನು ಹಾಳಾದಂತೆಯೇ ಅಲ್ಲವೇ? ಉಹ್ಞೂ, ಹಾಗೇನಿಲ್ಲ' ಅಂದುಕೊಂಡ.

"ಇಗೋ ಬಂದೆ" ಎನ್ನುತ್ತ ಬಾಗಿಲನ್ನು ತೆರೆದು ಅವಳ ಕಡೆ ಕಣ್ಣು ಹಾಯಿಸದೆಯೇ ತಾನು ಸೌದೆ ಕತ್ತರಿಸುತ್ತಿದ್ದ ಹೊರಾಂಗಣದ ಕಡೆ ಸಾಗಿದ. ಅಲ್ಲಿ ದಿಮ್ಮಿ ಮತ್ತು ಕೊಡಲಿಗಳಿಗಾಗಿ ತಡಕಾಡಿದ.

"ಈಗಲೇ!" ಎನ್ನುತ್ತ ತನ್ನ ಬಲಗೈಲಿ ಕೊಡಲಿಯನ್ನು ತೆಗೆದುಕೊಂಡು ತನ್ನ ಎಡಗೈಯ ತೋರುಬೆರಳನ್ನು ದಿಮ್ಮಿಯ ಮೇಲಿರಿಸಿಕೊಂಡು ಕೊಡಲಿಯನ್ನು ಮೇಲೆತ್ತಿ ಬೆರಳಿನ ಎರಡನೇ ಗಿಣ್ಣಿನ ಕೆಳಗೆ ಬೀಸಿದ. ತನ್ನ ಗಾತ್ರದ ಸೌದೆಯ ಚೂರಿಗಿಂತ ಹಗುರವಾಗಿ ಬೆರಳು ತುಂಡಾಗಿ ಮೇಲೆ ಚಿಮ್ಮಿ ಆ ಕಡೆ ದಿಮ್ಮಿಯ ಪಕ್ಕದಲ್ಲಿ ನೆಲದ ಮೇಲೆ ಬಿತ್ತು.

ನೋವಿನ ಅನುಭವವಾಗುವ ಮುಂಚೆಯೇ ಅದು ಬಿದ್ದ ಸದ್ದು ಅವನಿಗೆ ಕೇಳಿಸಿತು. ಅಚ್ಚರಿಯಾಗುವ ಮುಂಚೆಯೇ ಅವನಿಗೆ ಉರಿಯ ನೋವು, ರಕ್ತ ಚಿಮ್ಮುವ ಬಿಸುಪುಗಳ ಅನುಭವವುಂಟಾದವು. ಅವಸರವಸರವಾಗಿ ಬೆರಳ ಕೂಳೆಯ ಮೇಲೆ ಟೋಪಿಯಿಂದ ಸುತ್ತಿ ಪಿರ್ರೆಯ ಮೇಲೆ ಒತ್ತಿಕೊಂಡು ಕೋಣೆಯೊಳಕ್ಕೆ ವಾಪಸು ಹೋಗಿ ಆ ಹೆಣ್ಣಿನ ಮುಂದೆ ನಿಂತು ದೃಷ್ಟಿಯನ್ನು ಕೆಳಕ್ಕೆ ಹಾಕಿ ಮೆಲುದನಿಯಲ್ಲಿ ಕೇಳಿದ: "ನಿಮಗೇನು ಬೇಕು?"

ಅವನ ಬಿಳಿಚಿಕೊಂಡ ಮುಖ ಮತ್ತು ನಡುಗುವ ತುಟಿಗಳ ಕಡೆ ಅವಳು ದೃಷ್ಟಿ ಬೀರಿದಳು, ತಕ್ಷಣವೇ ಅವಳಿಗೆ ನಾಚಿಕೆಯಾಯಿತು. ದೀಡೀರನೆ ಮೇಲೆದ್ದು ತನ್ನ ಕೋಟನ್ನು ತೆಗೆದುಕೊಂಡು ತನ್ನ ಭುಜಗಳ ಸುತ್ತ ಹಾಕಿಕೊಂಡು ತನ್ನ ಮೈಯ್ಯನ್ನು ಮರೆಮಾಚಿಕೊಂಡಳು.

"ನನಗೆ ಸಂಕಟವಾಗ್ತಿತ್ತು ... ನನಗೆ ಶೀತವಾಗಿದೆ ... ನಾನು ... ಫಾದರ್ ಸರ್ಜಿಯಸ್ ... ನಾನು ..."

ಆನಂದದ ತಂಪು ಕಿರಣಗಳಿಂದ ಹೊಳೆಯುತ್ತಿದ್ದ ತನ್ನ ಕಣ್ಣುಗಳನ್ನವನು ಈಗ ಅವಳ ಮೇಲಿರಿಸಿ ಹೇಳಿದ: "ತಂಗಿ, ನಿನ್ನ ಅಮರ ಆತ್ಮವನ್ನು ಯಾಕೆ ನಾಶಮಾಡಿಕೊಳ್ಳಲು ಇಷ್ಟಪಟ್ಟೆ? ಪ್ರಪಂಚದಲ್ಲಿ ಆಮಿಷಗಳಿರಲೇ ಬೇಕು, ಆದರೆ ಯಾರಿಂದ ಅಂತಹ ಆಮಿಷವುಂಟಾಗುತ್ತೋ ಅವನು ಹಾಳಾಗಲಿ! ನಮ್ಮನ್ನು ಕ್ಷಮಿಸು ಎಂದು ದೇವರಲ್ಲಿ ಪ್ರಾರ್ಥಿಸು!"

ಅವನ ಮಾತನ್ನವಳು ಕೇಳಿದಳು, ಅವನತ್ತ ನೋಡಿದಳು. ಇದ್ದಕ್ಕಿದ್ದಂತೆ ಏನೋ ತೊಟ್ಟಿಕ್ಕುವ ಸದ್ದು ಕೇಳಿಸಿತು. ಕೆಳಗೆ ನೋಡಿದರೆ, ಅವನ ಕೈಗೆ ಸುತ್ತಿದ್ದ ಟೋಪಿಯಿಂದ ರಕ್ತ ಸುರಿದು ಹೋಗುತ್ತಿತ್ತು!

"ನಿಮ್ಮ ಕೈಗೆ ಏನು ಮಾಡಿಕೊಂಡ್ರಿ?" ತಾನು ಕೇಳಿದ ಸದ್ದನ್ನವಳು ನೆನಪಿಸಿಕೊಂಡಳು, ಸಣ್ಣ ದೀಪವನ್ನು ಹಿಡಿದು ಹೊರಗಡೆಗೆ ಧಾವಿಸಿದಳು. ಅಲ್ಲಿ ನೆಲದ ಮೇಲೆ ಬೆರಳಿನ ತುಂಡು ಬಿದ್ದಿರುವುದು ಕಾಣಿಸಿತು. ಅವನದಕ್ಕಿಂತ ಹೆಚ್ಚಾದ ಬಣ್ಣಗೆಟ್ಟ ಮುಖ ಹೊತ್ತ ಅವಳು ಅಲ್ಲಿಂದ ಕೋಣೆಗೆ ವಾಪಸಾಗಿ ಅವನಿಗೆ ಏನೋ ಹೇಳಬೇಕೆಂದು ತವಕಪಟ್ಟಳು, ಆದರೆ ಅವನು ಮಾತಿಲ್ಲದೆ ಹಿಂಬದಿಯ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡ.

"ದಯವಿಟ್ಟು ಕ್ಷಮಿಸಿ! ನನ್ನ ಪಾಪಕ್ಕೆ ಹೇಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಲಿ ನಾನು?" ಎಂದಳು.

"ದಯವಿಟ್ಟು ಹೊರಟು ಹೋಗಿ" ಅವನ ಉತ್ತರ.

"ನಿಮ್ಮ ಕೈಗೆ ಬಟ್ಟೆಯಾದರೂ ಕಟ್ತೀನಿ."

"ಇಲ್ಲಿಂದ ಹೊರಟು ಹೋಗಿ" ಮತ್ತದೇ ಮಾತು.

ಅವಳು ತರಾತುರಿಯಿಂದ ಬಟ್ಟೆಗಳನ್ನು ಹಾಕಿಕೊಂಡಳು, ಸಿದ್ಧವಾಗಿ ತನ್ನ ತುಪ್ಪಳದ ಕೋಟು ಧರಿಸಿ ಕುಳಿತುಕೊಂಡಳು. ಹೊರಗೆ ಸ್ಲೆಜ್‌ನ ಗಂಟೆಗಳ ದನಿ ಕೇಳಿಸಿತು.

"ಫಾದರ್ ಸರ್ಜಿಯಸ್, ನನ್ನ ಕ್ಷಮಿಸಿ!"

"ಹೊರಟು ಹೋಗಿ, ದೇವರು ನಿಮ್ಮನ್ನ ಕ್ಷಮಿಸ್ತಾನೆ."

"ಫಾದರ್ ಸರ್ಜಿಯಸ್! ನನ್ನ ಬದುಕನ್ನು ಬದಲಿಸಿಕೊಳ್ತೀನಿ. ನನ್ನ ಕೈಬಿಡಬೇಡಿ!"

"ಹೊರಟು ಹೋಗಿ."

"ನನ್ನ ಕ್ಷಮಿಸಿ, ನನಗೆ ಆಶೀರ್ವಾದ ಮಾಡಿ."

"ತಂದೆ ದೇವಪುತ್ರ ಹಾಗೂ ಪವಿತ್ರಾತ್ಮಗಳ ಮೇಲಾಣೆ, ಹೊರಡಿ" ಎಂಬ ಗೋಡೆಯಾಚೆಗಿನ ಕೋಣೆಯಿಂದ ಅವನ ಮಾತು ಕೇಳಿಬಂತು.

ಅವಳು ಬಿಕ್ಕತೊಡಗಿ ಅಲ್ಲಿಂದ ಹೊರನಡೆದಳು. ಅವಳನ್ನು ವಕೀಲ ಎದುರುಗೊಂಡ.

"ನಾನು ಪಂತದಲ್ಲಿ ಸೋತ ಹಾಗೆ ಕಾಣತ್ತೆ. ಏನು ಮಾಡಕ್ಕಾಗತ್ತೆ. ನೀವೆಲ್ಲಿ ಕೂತ್ಕೋತೀರಿ?"

"ನನಗೆ ಎಲ್ಲಾದರೂ ಒಂದೇ."

ಅವಳು ಸ್ಲೆಜ್ ಹತ್ತಿ ಒಂದೆಡೆ ಕುಳಿತುಕೊಂಡಳು, ಆದರೆ ಕೊನೆಯತನಕ ಒಂದು

ಮಾತನ್ನೂ ಆಡಲಿಲ್ಲ.

ಒಂದು ವರ್ಷ ಸರಿಯಿತು. ಸನ್ಯಾಸಿನಿ ದೀಕ್ಷೆ ಪಡೆದು ಅವಳು ಒಂದು ಕಾನ್ವೆಂಟ್ ಸೇರಿ, ಆಗಾಗ್ಗೆ ಕಾಗದಗಳನ್ನು ಬರೆದು ಮಾರ್ಗದರ್ಶನ ಮಾಡುತ್ತಿದ್ದ ಮುನಿ ಆರ್ಸೆನಿಯವರ ನೇತೃತ್ವದಲ್ಲಿ ಬಹು ನಿಷ್ಠುರದ ಜೀವನ ನಡೆಸತೊಡಗಿದಳು.

## 4

ಫಾದರ್ ಸರ್ಜಿಯಸ್ ಮತ್ತೂ ಏಳು ವರ್ಷಗಳ ಕಾಲ ಏಕಾಂತಜೀವನವನ್ನು ಮುಂದುವರಿಸಿದ.

ಮೊದಮೊದಲು ತನಗಾಗಿ ಜನರು ತರುತ್ತಿದ್ದ ಕಾಣಿಕೆಗಳನ್ನು- ಟೀ, ಸಕ್ಕರೆ, ಬ್ರೆಡ್, ಹಾಲು, ಬಟ್ಟೆಬರೆ ಮತ್ತು ಸೌದೆ- ಸ್ವೀಕರಿಸುತ್ತಿದ್ದ. ಆದರೆ ಬರಬರುತ್ತ ಹೆಚ್ಚೆಚ್ಚು ಏಕಾಂತದಲ್ಲಿ, ನಿಷ್ಠುರತೆಯಲ್ಲಿ ವಾಸಿಸತೊಡಗಿದ; ಆವಶ್ಯಕತೆಗಿಂತ ಹೆಚ್ಚಾದುದನ್ನು ನಿರಾಕರಿಸುತ್ತಿದ್ದ; ಕೊನೆಯಲ್ಲಿ ಅವನು ಸ್ವೀಕರಿಸುತ್ತಿದ್ದುದು ಕೇವಲ ರೈ ಬ್ರೆಡ್ ಅನ್ನು, ಅದೂ ವಾರಕ್ಕೊಮ್ಮೆ ಮಾತ್ರ. ಜನರು ಅರ್ಪಿಸುತ್ತಿದ್ದ ಮಿಕ್ಕುಳಿದುದನ್ನು ತನ್ನನ್ನು ನೋಡಲು ಬರುತ್ತಿದ್ದ ಬಡವರಿಗೆ ಹಂಚಿಬಿಡುತ್ತಿದ್ದ. ಸದಾ ತನ್ನ ಕಿರುಕೋಣೆಯಲ್ಲೇ ಇರುತ್ತಿದ್ದ ಅವನು ಪ್ರಾರ್ಥನೆಯಲ್ಲಿಯೋ ತನ್ನನ್ನು ಕಾಣಬಂದವರೊಡನೆ ಚರ್ಚಿಸು ವುದರಲ್ಲಿಯೋ ನಿರತನಾಗಿರುತ್ತಿದ್ದ. ದಿನೇ ದಿನೇ ಅವನನ್ನು ಕಾಣಲು ಬರುವವರ ಸಂಖ್ಯೆ ಹೆಚ್ಚತೊಡಗಿತ್ತು. ವರ್ಷದಲ್ಲಿ ಮೂರು ಬಾರಿ ಮಾತ್ರ ಅವನು ಚರ್ಚ್‌ಗೆ ಹೋಗುತ್ತಿದ್ದ, ಅನಿವಾರ್ಯವಾದಾಗ ಮಾತ್ರ ನೀರು ಸೌದೆಗಳನ್ನು ತರಲು ಹೊರಗೆ ಹೋಗುತ್ತಿದ್ದ.

ಮಕೋವ್‌ಕಿನಳೊಡನೆ ನಡೆದ ಪ್ರಸಂಗ ಅವನು ಆಶ್ರಮವಾಸಿಯಾದ ಐದು ವರ್ಷಗಳ ಬಳಿಕ ನಡೆದಿತ್ತು. ಆ ವಿಷಯ ಬಹುಬೇಗ ಜನಜನಿತವಾಯಿತು - ಅವಳು ರಾತ್ರಿ ಬಂದದ್ದು, ಅವಳಲ್ಲಾದ ಪರಿವರ್ತನೆ, ಅವಳು ಕಾನ್ವೆಂಟ್ ಸೇರಿಕೊಂಡದ್ದು - ಎಲ್ಲ. ಆಗಿನಿಂದ ಫಾದರ್ ಸರ್ಜಿಯಸ್‌ನ ಖ್ಯಾತಿ ಹೆಚ್ಚತೊಡಗಿತ್ತು. ಅವನನ್ನು ಕಾಣಲು ಅಧಿಕ ಸಂಖ್ಯೆಯ ಸಂದರ್ಶಕರು ಬರತೊಡಗಿದ್ದರು, ಅವನ ಕಿರು ಕೋಣೆಯ ಬಳಿ ಇತರ ಸನ್ಯಾಸಿಗಳು ವಾಸಿಸತೊಡಗಿದ್ದರು, ಅಲ್ಲಿಯೇ ಒಂದು ಚರ್ಚ್ ಮತ್ತು ವಸತಿಗೃಹವನ್ನು ನಿರ್ಮಿಸಲಾಗಿತ್ತು. ಯಥಾಪ್ರಕಾರ ಅವನ ವರ್ತನೆಯನ್ನು ಪವಾಡ ಸದೃಶವಾಗಿಸಿ ದ್ದರಿಂದಾಗಿ ಎಲ್ಲಡೆ ಪ್ರಚಾರಗೊಂಡಿತ್ತು. ದೂರದೂರುಗಳಿಂದ ಅವನನ್ನು ಕಾಣಲು ಜನ ಬರುತ್ತಿದ್ದರು, ವಾಸಿಯಾಗದ ಕಾಯಿಲೆಯವರನ್ನು ಅವನ ಬಳಿ ಕರೆತಂದರೆ ಅವನು ವಾಸಿಮಾಡುವನೆಂಬ ಪ್ರತೀತಿ ಹಬ್ಬಿತ್ತು.

ಆಶ್ರಮವಾಸಿಯಾದ ಎಂಟನೆಯ ವರ್ಷದಲ್ಲಿ ಅವನು ಕಾಯಿಲೆ ವಾಸಿಮಾಡಿದ ಮೊದಲ ಪ್ರಸಂಗ ನಡೆಯಿತು. ಹದಿನಾಲ್ಕು ವರ್ಷದ ಒಬ್ಬ ಹುಡುಗನನ್ನು ಅವನ ತಾಯಿ ಫಾದರ್ ಸರ್ಜಿಯಸ್ ಬಳಿ ಕರೆತಂದು ಅವನ ತಲೆಯ ಮೇಲೆ ಕೈಯಿಟ್ಟು

ಹರಸಬೇಕೆಂದು ಕೇಳಿಕೊಂಡಳು. ತನಗೆ ಕಾಯಿಲೆಕಸಾಲೆಗಳನ್ನು ವಾಸಿಮಾಡುವ ಶಕ್ತಿಯಿದೆಯೆಂಬ ಕಲ್ಪನೆಯೇ ಫಾದರ್ ಸರ್ಜಿಯಸ್‌ಗೆ ಇರಲಿಲ್ಲ. ಹಾಗೆ ಮಾಡುತ್ತೇನೆಂಬ ಭಾವನೆಯೇ ಅಕ್ಷಮ್ಯ ಅಹಂಕಾರವೆಂದು ಅವನು ಭಾವಿಸಿದ್ದ; ಆದರೆ ಹುಡುಗನ ತಾಯಿ ಅವನ ತಲೆಯ ಮೇಲೆ ಕೈಯಿಟ್ಟು ಹರಸಬೇಕೆಂದು ಒಂದೇ ಸಮನೆ ಕೇಳಿಕೊಂಡಳು. "ಇತರರ ಕಾಯಿಲೆ ವಾಸಿಮಾಡುವ ತಾವೇಕೆ ನನ್ನ ಮಗನಿಗೆ ಸಹಾಯ ಮಾಡಲು ನಿರಾಕರಿಸುತ್ತಿದ್ದೀರಿ?" ಎಂದು ಕಾಲಿಗೆ ಬಿದ್ದು ಕೇಳಿಕೊಂಡಳು. ಕ್ರಿಸ್ತನ ಮೇಲೆ ಆಣೆಯಿಟ್ಟು ಬೇಡಿಕೊಂಡಳು. ದೇವರು ಮಾತ್ರವೇ ಹಾಗೆ ವಾಸಿಮಾಡಬಲ್ಲವನೆಂದು ಫಾದರ್ ಸರ್ಜಿಯಸ್ ಹೇಳಿದಾಗ ಆಕೆ ತಾನು ಕೇಳಿಕೊಳ್ಳುತ್ತಿರುವುದು ಮಗನ ತಲೆಯ ಮೇಲೆ ಕೈಯಿಟ್ಟು ಅವನಿಗಾಗಿ ದೇವರಲ್ಲಿ ಪ್ರಾರ್ಥಿಸಲು ಮಾತ್ರ ಎಂದು ವಾದಿಸಿದಳು. ಫಾದರ್ ಸರ್ಜಿಯಸ್ ಹಾಗೆ ಮಾಡಲು ಒಪ್ಪದೆ ತನ್ನ ಕೋಣೆಗೆ ವಾಪಸಾಗಿದ್ದ. ಆದರೆ ಮಾರನೆಯ ದಿನ (ಅದು ಮಾಗಿಯ ಕಾಲ, ರಾತ್ರಿಯೆಲ್ಲ ವಿಪರೀತ ಚಳಿ) ಅವನು ನೀರು ತರಲೆಂದು ಹೊರಗೆ ಬಂದಾಗ ಅದೇ ತಾಯಿ ತನ್ನ ಹದಿನಾಲ್ಕು ವರ್ಷದ ಪೇಲವ ಮಗನೊಡನೆ ಅದೇ ಕರುಣಾಜನಕ ಸ್ಥಿತಿಯಲ್ಲಿರುವುದನ್ನು ಕಂಡ.

ನ್ಯಾಯವಿರೋಧಿ ನ್ಯಾಯಾಧಿಪತಿಯ ಸಾಮತಿ ಅವನ ನೆನಪಿಗೆ ಬಂತು, ತಾನು ನಿರಾಕರಿಸುವುದೇ ಸಮಂಜಸ ಎಂದು ಹಿಂದೆ ಭಾವಿಸಿದ್ದ ಅವನು ಈಗ ಹಿಂದೆ ಮುಂದೆ ನೋಡತೊಡಗಿದ; ಹೀಗಾಗಿ ನಿರಂತರ ಪ್ರಾರ್ಥನೆಯಲ್ಲಿ ತೊಡಗಿ ಆ ಬಗ್ಗೆ ಒಂದು ತೀರ್ಮಾನ ಮನಸ್ಸಿನಲ್ಲಿ ಉದಯಿಸುವುದನ್ನು ಕಾಣಲು ತವಕಿಸಿದ. ಕೊನೆಗೊಂದು ತೀರ್ಮಾನ ಬಂತು: ತಾಯಿಯ ನಂಬಿಕೆಯೇ ಮಗನನ್ನು ಉಳಿಸುವುದು, ಆದರೂ ತಾನು ಹೆಂಗಸಿನ ಪ್ರಾರ್ಥನೆಯನ್ನು ಒಪ್ಪಿಕೊಳ್ಳುವುದು ಎಂಬುದು. ತನ್ನಷ್ಟಕ್ಕೆ ಅವನು ಅಂದುಕೊಂಡದ್ದೆಂದರೆ ಈ ವಿಷಯದಲ್ಲಿ ತಾನು ದೇವರು ಆರಿಸಿಕೊಂಡ ನಿಕೃಷ್ಟ ಸಾಧನ ಮಾತ್ರ ಎಂದು.

ತೀರ್ಮಾನ ಬಂದ ಮೇಲೆ ಅವನು ಕೋಣೆಯಿಂದ ಹೊರಬಂದು ತಾನೇನು ಮಾಡಬೇಕೆಂದು ತಾಯಿಯನ್ನು ಕೇಳಿದ; ಅವಳೆಂದ ಹಾಗೆ ಹುಡುಗನ ತಲೆಯ ಮೇಲೆ ತನ್ನ ಕೈಯನ್ನಿಟ್ಟು ಅವನಿಗಾಗಿ ಕಣ್ಮುಚ್ಚಿ ಪ್ರಾರ್ಥಿಸಿದ.

ಆ ಬಳಿಕ ತಾಯಿ ಮಗನೊಡನೆ ಹೊರಟು ಹೋದಳು. ಒಂದು ತಿಂಗಳ ಬಳಿಕ ಹುಡುಗ ಚೇತರಿಸಿಕೊಂಡಿದ್ದ. ಹೀಗಾಗಿ ಗುರು (ಜನ ಅವನನ್ನು ಈಗ ಹೀಗೆ ಕರೆಯತೊಡಗಿದ್ದರು) ಸರ್ಜಿಯಸ್‌ನ ರೋಗನಿವಾರಣ ಸಾಮರ್ಥ್ಯ ಇಡೀ ಆ ಪ್ರದೇಶದಲ್ಲೆಲ್ಲ ಜನಜನಿತವಾಯಿತು. ಅದಾದ ಮೇಲೆ ಇನ್ನೂ ವಾರ ಕೂಡ ಕಳೆದಿರಲಿಲ್ಲ, ರೋಗಿಗಳು ಅವನ ಬಳಿ ತಂಡಗಳಲ್ಲಿ ಬರತೊಡಗಿದರು. ಒಬ್ಬರ ಕೋರಿಕೆಯಂತೆ ನಡೆದ ಮೇಲೆ ಉಳಿದವರದನ್ನು ಅವನು ನಿರಾಕರಿಸುವಂತಿರಲಿಲ್ಲ. ಹೀಗಾಗಿ ಕೇಳಿಕೊಂಡವರ ತಲೆಯ ಮೇಲೆ ತನ್ನ ಕೈಯನ್ನಿಟ್ಟು ಫಾದರ್ ಸರ್ಜಿಯಸ್ ಪ್ರಾರ್ಥಿಸುತ್ತಿದ್ದ. ಅವನ ಗಡ್ಡ ಉದ್ದವಾಗಿತ್ತು, ಹೆಚ್ಚು ಬೆಳ್ಳಗಾಗಿತ್ತು; ಆದರೆ ಅವನ

ತಲೆಗೂದಲು ಮಾತ್ರ ಕಡಿಮೆಯಾಗಿತ್ತೇ ಹೊರತು ಬೆಳಗಾಗಿರಲಿಲ್ಲ, ಕಪ್ಪಗೂ ಇತ್ತು ಗುಂಗುರಾಗಿಯೂ ಉಳಿದಿತ್ತು.

## 5

ಕಳೆದ ಕೆಲವು ವಾರಗಳಿಂದ ಫಾದರ್ ಸರ್ಜಿಯಸ್‌ನ ಮನಸ್ಸಿನಲ್ಲಿ ಒಂದು ಯೋಚನೆ ಕೊರೆಯುತ್ತಿದೆ: ಮಠದ ಮಹಂತರು ಅಥವಾ ಧರ್ಮಗುರುಗಳು ಪಡೆದಿರುವ ಸ್ಥಾನವನ್ನು ತಾನು ಒಪ್ಪಿಕೊಂಡಿರುವುದು ಸರಿಯೇ ಎಂಬುದೇ ಆ ಯೋಚನೆ. ಹದಿನಾಲ್ಕು ವರ್ಷದ ಆ ಹುಡುಗ ಚೇತರಿಸಿಕೊಂಡದ್ದೇ ತನ್ನ ಈ ಹೊಸ ಸ್ಥಾನಕ್ಕೆ ಕಾರಣವಾದುದು. ಉದಾಹರಣೆಗೆ, ತಾನು ಯಾವ ದೈಹಿಕ ಕೆಲಸ ಮಾಡುವುದಕ್ಕೂ ಜನ ಬಿಡುವುದೇ ಇಲ್ಲ. ಅದು ಆದ ಹೊತ್ತಿನಿಂದ ದಿನಗಳು, ತಿಂಗಳುಗಳು ಕಳೆದಿವೆ, ತನ್ನ ಅಂತರಂಗಿಕ ಸಾಧನೆಯು ಕೊರತೆಯಿಂದ ತುಂಬಿದೆ ಎಂದವನ ಮನಸ್ಸಿನಲ್ಲಿ ಕೊರೆಯುತ್ತಿದೆ, ಅದರ ಜಾಗವನ್ನೀಗ ಹೊರ ಚಟುವಟಿಕೆಗಳೇ ಆಕ್ರಮಿಸಿವೆ, ಒಳಗಿನದನ್ನು ಹೊರಗೆ ಚೆಲ್ಲಿಬಿಟ್ಟ ಹಾಗೆ.

ತಾನು ಸಂದರ್ಶಕರನ್ನು ಸೆಳೆಯುವ ಸಾಧನವಾಗಿ ಮಠಕ್ಕೆ ಅಪಾರ ಕಾಣಿಕೆ ಬರುವ ಸಾಧನವಾಗಿಬಿಟ್ಟಿದ್ದೇನೆ, ಅದಕ್ಕಾಗಿಯೇ ಮಠದ ಅಧಿಕಾರಿಗಳು ಆದಷ್ಟೂ ಅದರ ಉಪಯೋಗ ಪಡೆದುಕೊಳ್ಳಲು ಸಾಧ್ಯವಾಗುವಂತೆ ಕ್ರಮವನ್ನು ಬದಲಾಯಿಸಿಬಿಟ್ಟಿದ್ದಾರೆ ಎಂದು ಸರ್ಜಿಯಸ್‌ಗೆ ಅನ್ನಿಸಹತ್ತಿದೆ. ಉದಾಹರಣೆಗೆ, ತನಗೀಗ ಯಾವ ದೈಹಿಕ ಶ್ರಮದ ಕೆಲಸ ಮಾಡಲೂ ಆಸ್ಪದವಿಲ್ಲವಾಗಿದೆ. ಅವನಿಗೆ ಬೇಕಾಗಬಹುದಾದ ಎಲ್ಲವನ್ನೂ ಪೂರೈಸುವ ವ್ಯವಸ್ಥೆಯಾಗಿದೆ, ಅವನಿಂದ ನಿರೀಕ್ಷಿಸುತ್ತಿರುವ ಒಂದೇ ಅಂಶವೆಂದರೆ ತನ್ನ ಬಳಿಗೆ ಆಶೀರ್ವಾದವನ್ನು ಬಯಸಿ ಬರುವವರಿಗೆ ಅದನ್ನು ನಿರಾಕರಿಸಬಾರದು ಎಂಬುದು. ಅವನ ಅನುಕೂಲಕ್ಕಾಗಿ ಸಂದರ್ಶಕರನ್ನು ಬರಮಾಡಿ ಕೊಳ್ಳುವ ದಿನವನ್ನವರು ನಿಗದಿಪಡಿಸುತ್ತಿದ್ದಾರೆ. ಗಂಡಸರು ಬಂದು ಕಾದಿರಲು ಸ್ವಾಗತ ಕೋಣೆಯೊಂದನ್ನು ಏರ್ಪಡಿಸಲಾಗಿದೆ; ಹೆಂಗಸರು ನೂಕುನುಗ್ಗಲಿನಿಂದ ಅವನನ್ನು ದಬ್ಬಿಬಿಡದಂತೆ ಕಟಕಟೆಯನ್ನು ನಿರ್ಮಾಣ ಮಾಡಲಾಗಿದೆ; ಇದರಿಂದ ಅವನು ಸಾವಧಾನವಾಗಿ ಬಂದವರಿಗೆ ಆಶೀರ್ವಾದ ಮಾಡಲು ಸಾಧ್ಯವಾಗಿದೆ.

ಜನರಿಗೆ ಅವನ ಆವಶ್ಯಕತೆಯಿದೆ ಎಂಬುದು ಮಠದ ಅಧಿಕಾರಿಗಳ ಅಂಬೋಣ. ಯೇಸುಕ್ರಿಸ್ತನ ಪ್ರೇಮದ ನಿಯಮವನ್ನು ಪಾಲಿಸಲೋಸುಗ ತನ್ನನ್ನು ಕಾಣಬಂದವರನ್ನು ಬರಮಾಡಿಕೊಳ್ಳಲು ಅವನು ನಿರಾಕರಿಸುವಂತಿಲ್ಲ, ಹಾಗೆ ಮಾಡಿದರೆ ಅದು ಕ್ರೌರ್ಯ ವಾಗುತ್ತದೆ ಎಂಬುದು ಅವರ ವಾದ. ಇದಕ್ಕೆ ಅವನು ಒಪ್ಪಲೇಬೇಕಾಗಿ ಬಂದಿದೆ: ಆದರೆ ಇದಕ್ಕೆ ಹೆಚ್ಚೆಚ್ಚು ಅವಕಾಶವಿತ್ತಂತೆಲ್ಲ ತನ್ನ ಅಂತರಂಗದ ಬದುಕು ಬಹಿರಂಗಕ್ಕೆ ಬರುತ್ತಿದೆ ಎಂದವನ ಅನಿಸಿಕೆ. ಹೀಗಾಗಿ ಅವನ ಒಳಬದುಕಿನ ಕಾರಂಜಿ ಒಣಗಿ ಗರಲಾಗಿದೆ, ತಾನೀಗ ಮಾಡುತ್ತಿರುವುದು ಹೆಚ್ಚು ಹೆಚ್ಚಾಗಿ ಜನರ ಸೇವೆಯನ್ನೇ ಹೊರತು ದೇವರ

ಸೇವೆಯನ್ನಲ್ಲ ಎಂಬ ಕೊರಗು ಅವನನ್ನಾವರಿಸಿದೆ.

ಜನರನ್ನು ಝುಂಕಿಸಲಿ, ಬರಿದೆ ಆಶೀರ್ವಾದ ಮಾಡಲಿ, ರೋಗಿಗಳ ಪರವಾಗಿ ಪ್ರಾರ್ಥನೆ ಮಾಡಲಿ, ಜನರಿಗೆ ಅವರ ಬದುಕಿನ ಬಗ್ಗೆ ಉಪದೇಶ ಮಾಡಲಿ, ಬೋಧನೆ ಭಿಕ್ಷೆಯ ಮೂಲಕವೋ (ಜನರು ಭಾವಿಸಿದಂತೆ) ಕಾಯಿಲೆಗಳನ್ನು ಗುಣಪಡಿಸುವ ಮೂಲಕವೋ ಮಾಡಿದ ಉಪಕಾರಕ್ಕಾಗಿ ಜನ ಕೃತಜ್ಞತೆಯನ್ನು ಸೂಚಿಸುವುದನ್ನು ಕೇಳಲಿ - ಸಂತೋಷಿಸುವುದರ ಹೊರತು ಅವನಿಗೆ ಅನ್ಯಮಾರ್ಗವಿಲ್ಲವಾಗಿದೆ; ತನ್ನ ಕಾರ್ಯಗಳ ಫಲಿತಾಂಶದ ಬಗ್ಗೆ ಮತ್ತು ತಾನು ಬೀರುವ ಪ್ರಭಾವದ ಬಗ್ಗೆ ಉದಾಸೀನತೆಯಿಂದಿರಲು ಅಸಾಧ್ಯವಾಗಿದೆ. ತಾನು ಹೊಳೆಯುವ ದೀಪ್ತಿ ಎಂಬ ಭಾವನೆ ಅವನಿಗೆ ಬಂದಿದೆ, ಅದು ತೀವ್ರವಾದಷ್ಟೂ ತಾನು ದುರ್ಬಲನಾಗುತ್ತಿದ್ದೇನೆಂಬ ಪ್ರಜ್ಞೆ ಕಾಡುತ್ತದೆ, ತನ್ನಲ್ಲಿ ದೇದೀಪ್ಯಮಾನವಾದ ದಿವ್ಯ ದೀಪ್ತಿಯು ಕ್ಷೀಣವಾಗುತ್ತಿದೆಯೆಂಬ ಕೊರಗು ಕೊರೆಯುತ್ತದೆ.

'ನಾನು ಮಾಡುತ್ತಿರುವುದರಲ್ಲಿ ದೇವರಿಗಾಗಿ ಎಷ್ಟು ಪಾಲು, ಜನರಿಗಾಗಿ ಎಷ್ಟು ಪಾಲು?' ಈ ಪ್ರಶ್ನೆ ಅವನ ಅಂತರಂಗವನ್ನು ಒಂದೇ ಸಮನೆ ಹಿಂಡುತ್ತದೆ; ಅದಕ್ಕೆ ತಾನು ಉತ್ತರಿಸಲಾರದುದಕ್ಕಿಂತ ಉತ್ತರವನ್ನು ಎದುರಿಸಲಾರದ ಬಲಹೀನತೆ ಅವನನ್ನು ಕಾಡುತ್ತದೆ.

ಹಿಂದೆ ತಾನು ಮಾಡುತ್ತಿದ್ದ ದೈವೋಪಾಸನೆಯ ಜಾಗವನ್ನು ಜನೋಪಾಸನೆಯ ದೆವ್ವ ಆಕ್ರಮಿಸಿಬಿಟ್ಟಿದೆಯೆಂಬುದು ಅವನ ಮನದಾಳದ ಅನಿಸಿಕೆ. ಈ ಅನಿಸಿಕೆಗೆ ಕಾರಣ, ಏಕಾಂತದಿಂದ ಹೊರಬರುವುದು ಹಿಂದೆ ತನಗೆ ಹೇಗೆ ಅಸಾಧ್ಯವಾಗಿತ್ತೋ ಹಾಗೆ ಈಗ ಏಕಾಂತವೇ ಅಸಾಧ್ಯವೆನ್ನಿಸುವುದು. ಸಂದರ್ಶಕರಿಂದಾಗಿ ಅವನು ನಜ್ಜುಗುಜ್ಜಾಗುತ್ತಾನೆ, ದಣಿಯುತ್ತಾನೆ, ಆದರೆ ಅವನ ಹೃದಯದಾಳದಲ್ಲಿ ಜನ ತನ್ನ ಸುತ್ತ ನೆರೆಯುವುದು ಅವನಿಗೆ ಸಂತಸ ತರುತ್ತದೆ, ತನ್ನ ಮೇಲವರು ಸುರಿಸುವ ಹೊಗಳಿಕೆಯ ಮಳೆ ತಂಪೆನಿಸುತ್ತದೆ.

ತಾನೆಲ್ಲಿಯಾದರೂ ಓಡಿ ಹೋಗಿ ಅಡಗಿಕೊಂಡುಬಿಡಬೇಕು ಎಂದು ಹಿಂದೊಮ್ಮೆ ಅವನು ಯೋಚಿಸುತ್ತಿದ್ದ; ಅಷ್ಟೇ ಅಲ್ಲ, ಅದಕ್ಕೆ ಆವಶ್ಯವಾದ ಸಿದ್ಧತೆಯನ್ನೂ ನಡೆಸಿದ್ದ. ರೈತನೊಬ್ಬನ ಉಡುಪನ್ನು ಕಲೆಹಾಕಿದ್ದ; ಆದರೆ ಅದಕ್ಕೆ ಕೊಟ್ಟ ಕಾರಣವೆಂದರೆ ಬಯಸಿದವರಿಗೆ ಅದನ್ನು ನೀಡುವುದು. ಈ ಉಡುಪನ್ನವನು ತನ್ನ ಕೋಣೆಯಲ್ಲಿ ಭದ್ರವಾಗಿರಿಸಿ, ಅದನ್ನು ಧರಿಸುವುದು ಹೇಗೆ ಎಂಬುದನ್ನು ಅಭ್ಯಾಸ ಮಾಡಿಕೊಂಡು, ತಲೆಗೂದಲನ್ನು ಗಿಡ್ಡದಾಗಿ ಕತ್ತರಿಸಿಕೊಂಡು ಹೊರಟುಹೋಗಲು ಬಯಸಿದ್ದ. ಮೊದಲು ಆ ಜಾಗದಿಂದ ಸುಮಾರು ಇನ್ನೂರು ಮೈಲಿಗಳಷ್ಟು ದೂರ ರೈಲಿನಲ್ಲಿ ಪ್ರಯಾಣ ಮಾಡಿ, ಆನಂತರ ಕಾಲ್ನಡಿಗೆಯಲ್ಲಿ ಹಳ್ಳಿ ಹಳ್ಳಿ ತಿರುಗಲು ಯೋಚನೆ ಮಾಡಿದ್ದ. ಹಿಂದೆ ಸೈನಿಕನಾಗಿದ್ದ ಮುದುಕನೊಬ್ಬನನ್ನು 'ಹೇಗೆ ನಡೆದುಕೊಂಡು ಹೋಗುತ್ತೀ' 'ಜನ ಏನು ಕೊಡುತ್ತಾರೆ' 'ಇಳಿದುಕೊಳ್ಳುವ ಜಾಗ ಯಾವುದು' ಎಂಬ ವಿವರಗಳನ್ನು ಕೇಳಿದ್ದ. ಜನರು

ತುಂಬ ಉದಾರಿಗಳೆಂದೂ, ದಾರಿಹೋಕನನ್ನು ಕಂಡರೆ ರಾತ್ರಿ ಉಳಿಯಲು ಸ್ಥಳಾವಕಾಶ ಮಾಡಿಕೊಡುವವರೆಂದೂ ಆ ಮುದುಕ ಉತ್ತರಿಸಿದಾಗ, ತಾನು ಅಂತಹವನ್ನು ಬಳಸಿಕೊಳ್ಳಲು ಫಾದರ್ ಸರ್ಜಿಯಸ್ ಆಲೋಚಿಸಿದ್ದ. ಹೊರಟು ಹೋಗುವ ಉದ್ದೇಶದಿಂದ ಅವನು ಒಂದು ರಾತ್ರಿ ಈ ಉಡುಪನ್ನು ಧರಿಸಿದ್ದರೂ, ಹೋಗುವುದೇ ಇರುವುದೇ - ಯಾವುದು ಸರಿ ಎಂದು ಅವನಿಗೆ ನಿರ್ಧರಿಸಲಾಗಿರಲಿಲ್ಲ. ಮೊದಲು ಅವನಿಗೆ ಸಂದೇಹವುಂಟಾದರೂ, ಆನಂತರ ಅವನ ಅನಿಶ್ಚಿತತೆ ಕೊನೆಗಂಡಿತು. ಅವನು ಸಂಪ್ರದಾಯಕ್ಕೆ ಶರಣಾಗಿ, ದೈವದ ವಶಕ್ಕೆ ತನ್ನನ್ನೊಪ್ಪಿಸಿಕೊಂಡಿದ್ದ. ರೈತನ ಉಡುಪು ಅವನ ಬಳಿ ಉಳಿದು ಹಿಂದಿನ ಅವನ ಆಲೋಚನೆ ಮತ್ತು ಭಾವನೆಗಳನ್ನು ನೆನಪಿಸುತ್ತಿತ್ತು.

ಅವನನ್ನು ಕಾಣಬರುವ ಜನಗಳ ಸಂಖ್ಯೆ ದಿನೇ ದಿನೇ ಹೆಚ್ಚಾಗತೊಡಗಿತು; ಹೀಗಾಗಿ ಪ್ರಾರ್ಥನೆ ಮತ್ತು ತನ್ನ ಆಧ್ಯಾತ್ಮಿಕ ಸಾಮರ್ಥ್ಯವನ್ನು ವೃದ್ಧಿಗೊಳಿಸಿಕೊಳ್ಳುವ ಕಾರ್ಯಗಳಿಗೆ ಕಾಲ ಸಾಕಷ್ಟು ಸಿಗದಾಯಿತು. ಮನಸ್ಸು ತಿಳಿಗೊಂಡ ಕೆಲವೊಮ್ಮೆ ತಾನು ಒಮ್ಮೆ ಪುಟಿಯುತ್ತಿದ್ದ ಚಿಲುಮೆ ಬರಡಾದ ಪ್ರದೇಶದಂತೆ ಎಂದವನಿಗೆ ಅನ್ನಿಸುತ್ತಿತ್ತು: 'ಕ್ಷೀಣವಾದ ಚಿಲುಮೆಯ ತಿಳೀನೀರು ಸದ್ದಿಲ್ಲದೆ ನನ್ನಿಂದ ಮತ್ತು ನನ್ನ ಮೂಲಕ ಹರಿಯುತ್ತಿದ್ದ ಕಾಲವೊಂದಿತ್ತು. ಅದೇ ನಿಜವಾದ ಬದುಕು, ಅವಳು ನನ್ನನ್ನು ಆಕರ್ಷಣೆಯಿಂದ ಸೆಳೆಯಲು ಪ್ರಯತ್ನಿಸಿದ ಕ್ಷಣ!' (ಆ ರಾತ್ರಿಯನ್ನವನು ನೆನಪಿಸಿಕೊಂಡಾಗ ಸಂತೋಷ ಉಕ್ಕುತ್ತಿತ್ತು, ಈಗ ಮದರ್ ಆಗ್ನಿಸ್ ಆಗಿರುವ ಅವಳ ನೆನಪು ಆಗಾಗ ಬರುತ್ತಿತ್ತು). ಅವಳಿಗೆ ಆ ತಿಳೀನೀರಿನ ರುಚಿ ಸಿಕ್ಕಿತ್ತು, ಆದರೆ ಬಾಯಾರಿದ ಜನಸಂದಣಿ ಒಬ್ಬರನ್ನೊಬ್ಬರು ತಳ್ಳುತ್ತ ತನ್ನನ್ನು ಕಾಣಲು ಬರಲು ತೊಡಗಿದ ಅಂದಿನಿಂದ ಆ ನೀರನ್ನು ಸಂಗ್ರಹಿಸಲು ಸಮಯವೇ ಸಿಕ್ಕದಾಗಿದೆ, ಜನ ಎಲ್ಲವನ್ನೂ ತುಳಿದು ತುಳಿದು ಕೇವಲ ರಾಡಿ ಮಾತ್ರ ಉಳಿದಿದೆ.

ಮನಸ್ಸು ತಿಳಿಯಾಗಿರುವ ಅಪರೂಪದ ಚಣಗಳಲ್ಲಿ ಅವನಲ್ಲಿ ಹರಿಯುತ್ತಿದ್ದ ಯೋಚನಾಲಹರಿಯಿದು. ಆದರೆ ಈಗಿನ ಸಾಮಾನ್ಯ ಮನಃಸ್ಥಿತಿಯೆಂದರೆ ದಣಿವು ಮತ್ತು ಅದರಿಂದ ಉಕ್ಕುತ್ತಿದ್ದ ಸ್ವಾನುಕಂಪ.

ವಸಂತಕಾಲದ ಪೆಂಟೆಕೋಸ್ಟಲ್ ಹಬ್ಬದ ಹಿಂದಿನ ದಿನ ಅಂದು. ಫಾದರ್ ಸರ್ಜಿಯಸ್ ತನ್ನ ಆಶ್ರಮದ ಚರ್ಚ್‌ನಲ್ಲಿ ಜಾಗರಣೆಯ ಆರಾಧನೆಯ ನೇತೃತ್ವ ವಹಿಸಿದ್ದ; ಅಲ್ಲಿ ಸೇರಿದ್ದ ಜನ ಆ ಪುಟ್ಟ ಚರ್ಚ್ ಅನ್ನು ತುಂಬಿದ್ದರು, ಸುಮಾರು ಇಪ್ಪತ್ತು ಮಂದಿ. ಅವರೆಲ್ಲ ಶ್ರೀಮಂತ ದಣಿಗಳು ಅಥವಾ ವ್ಯಾಪಾರಿಗಳು. ಫಾದರ್ ಸರ್ಜಿಯಸ್ ಯಾರನ್ನು ಬೇಕಾದರೂ ಸೇರಿಸಿಕೊಳ್ಳುತ್ತಿದ್ದ; ಆದರೆ ಆಯ್ಕೆ ಮಾಡುತ್ತಿದ್ದವರು ತನ್ನ ಕೈಕೆಳಗಿನ ಸನ್ಯಾಸಿ ಮತ್ತು ತನ್ನ ಆಶ್ರಮಕ್ಕೆ ಮಠವು ಪ್ರತಿದಿನ ಕಳಿಸುತ್ತಿದ್ದ ಒಬ್ಬ ಸಹಾಯಕ. ಯಾತ್ರಿಕರು ಮತ್ತು ರೈತರು ಮತ್ತು ವಿಶೇಷವಾಗಿ ರೈತಮಹಿಳೆಯರಿಂದ ಕೂಡಿದ್ದ ಸುಮಾರು ಎಂಬತ್ತು ಮಂದಿಯ ಗುಂಪೊಂದು ಚರ್ಚ್ ಹೊರಗೆ ಫಾದರ್ ಸರ್ಜಿಯಸ್‌ನ ಆಶೀರ್ವಾದಕ್ಕಾಗಿ ಕಾಯುತ್ತಿದ್ದರು. ಈ ನಡುವೆ ಅವನು ಆರಾಧನೆಯನ್ನು

ಮುಗಿಸಿ ತನ್ನ ಮುನ್ನಿನ ಅಧಿಕಾರಿಯ ಸಮಾಧಿಯ ಬಳಿ ಹೋದಾಗ ಎಡವಿ ಬೀಳುವುದರಲ್ಲಿದ್ದ, ಆದರೆ ಹಿಂದೆ ನಿಂತಿದ್ದ ಒಬ್ಬ ವ್ಯಾಪಾರಿ ಮತ್ತು ಸಹಾಯಕ ಅಧಿಕಾರಿ ಅವನನ್ನು ಹಿಡಿದುಕೊಂಡರು.

"ಏನಾಯ್ತು ಫಾದರ್ ಸರ್ಜಿಯಸ್, ಅಯ್ಯೋ ದೇವರೇ!" ಎಂದು ಅಲ್ಲಿ ನೆರೆದಿದ್ದ ಹೆಂಗಸರು ಚೀರಿದರು; "ಕಾಗದದ ಹಾಳೆಯ ಹಾಗೆ ಬಿಳಿಚಿಕೊಂಡುಬಿಟ್ಟಿದ್ದಾರಲ್ಲ!" ಎಂದು ಆತಂಕ ವ್ಯಕ್ತಪಡಿಸಿದರು.

ಆದರೆ ಫಾದರ್ ಸರ್ಜಿಯಸ್ ಬೇಗ ಚೇತರಿಸಿಕೊಂಡ. ಬಿಳಿಚಿಕೊಂಡಿದ್ದರೂ ವ್ಯಾಪಾರಿ ಮತ್ತು ಸಹಾಯಕ ಅಧಿಕಾರಿಯನ್ನು ದೂರಸರಿಯುವಂತೆ ಕೈಯಾಡಿಸಿ ಆರಾಧನೆಯ ಮಂತ್ರ ಹೇಳುವುದನ್ನು ಮುಂದುವರಿಸಿದ.

ಸಹಾಯಕ ಫಾದರ್ ಸೆರಾಫೆನ್, ಪಾದ್ರಿ ಪರಿಚಾರಕರು ಮತ್ತು ಆಶ್ರಮದ ಬಳಿಯೇ ವಾಸಿಸುತ್ತ ಫಾದರ್ ಸರ್ಜಿಯಸ್‌ನ ಸೇವೆ ಮಾಡುತ್ತಿದ್ದ ಮಹಿಳೆ ಸೋಫ್ಯಾ ಇವಾನೋವ್‌ನ ಆರಾಧನೆಯನ್ನು ಮುಗಿಸುವಂತೆ ಕೇಳಿಕೊಂಡರು.

"ಬೇಡ, ಏನೂ ಆಗಿಲ್ಲ" ಎಂದ ಫಾದರ್ ಸರ್ಜಿಯಸ್ ತನ್ನ ಮೀಸೆಯಡಿ ನವಿರಾಗಿ ಮುಗುಳ್ನಗುತ್ತ; ತನ್ನ ಆರಾಧನೆಯನ್ನು ಮುಂದುವರಿಸಿದ. "ಹ್ಞೂ, ಸಂತರೂ ಈ ರೀತಿಯೇ ನಡೆದುಕೊಂಡದ್ದಲ್ಲವೇ!" ಎಂದುಕೊಂಡ.

ಅವನ ಹಿಂದೆಯೇ ನಿಂತಿದ್ದ ಸೋಫ್ಯಾ ಇವಾನೋವ್‌ನ "ದೈವಾಂಶ ಸಂಭೂತ, ದೇವರು ಕಳಿಸಿದ ದೂತ" ಎಂದು ಅವನನ್ನೂ ಅವನನ್ನು ಹಿಡಿದುಕೊಂಡ ವ್ಯಾಪಾರಿಯನ್ನೂ ಕುರಿತು ಉದ್ಗರಿಸಿದಳು. ಫಾದರ್ ಸರ್ಜಿಯಸ್ ಅವರ ಮನವಿಗಳನ್ನು ಪುರಸ್ಕರಿಸದೆ ತನ್ನ ಆರಾಧನೆಯನ್ನು ಮುಂದುವರಿಸಿದ. ಮತ್ತೆ ಎಲ್ಲರೂ ಗುಂಪಾಗಿ ಇಕ್ಕಟ್ಟಿನ ದಾರಿಯಲ್ಲಿ ನಡೆದು ಆ ಪುಟ್ಟ ಚರ್ಚ್ ಆವರಣಕ್ಕೆ ಬಂದರು. ಅಲ್ಲಿ ಕೊಂಚ ಹ್ರಸ್ವಗೊಳಿಸಿದರೂ ಆರಾಧನೆಯನ್ನು ಪೂರ್ತಿ ಮಾಡಿದ.

ಆರಾಧನೆಯ ವಿಧಿಗಳೆಲ್ಲ ಮುಗಿದ ತಕ್ಷಣವೇ ಫಾದರ್ ಸರ್ಜಿಯಸ್ ನೆರೆದಿದ್ದವರಿಗೆ ಆಶೀರ್ವಾದ ಮಾಡಿ ಗುಹೆಯ ಮುಂಭಾಗದ ಎಲ್ಮ್ ಮರದಡಿಯಿದ್ದ ಬೆಂಚಿನ ಕಡೆ ಸಾಗಿದ. ಕೊಂಚ ಹೊತ್ತು ವಿಶ್ರಾಂತಿ ಪಡೆಯಬೇಕು, ಹೊಸ ಗಾಳಿ ಸೇವಿಸಬೇಕೆಂಬುದು ಅವನ ಇರಾದೆಯಾಗಿತ್ತು. ಆದರೆ ಅವನು ಚರ್ಚ್‌ನ ಆವರಣವನ್ನು ಬಿಟ್ಟ ತಕ್ಷಣವೇ ಜನರ ಗುಂಪು ಅವನ ಆಶೀರ್ವಾದ, ಬೋಧನೆ ಮತ್ತವನ ನೆರವಿಗಾಗಿ ತವಕಿಸುತ್ತ ಅವನತ್ತ ಧಾವಿಸಿತು. ಅವರೆಲ್ಲ ಯಾತ್ರಾರ್ಥಿಗಳು, ಒಂದು ಪವಿತ್ರ ಕ್ಷೇತ್ರದಿಂದ ಮತ್ತೊಂದನ್ನು, ಒಬ್ಬ ಧರ್ಮಗುರುವಿನಿಂದ ಮತ್ತೊಬ್ಬನನ್ನು ಸಂದರ್ಶಿಸುತ್ತ ಹೋದೆಡೆಯಲ್ಲೆಲ್ಲ ಪುಣ್ಯಕ್ಷೇತ್ರವನ್ನೂ ಧರ್ಮಗುರುವನ್ನೂ ಕಂಡು ಆನಂದತುಂದಿಲರಾಗುತ್ತಿದ್ದವರು. ಈ ಸಾಮಾನ್ಯವಾದ ಈ ನಿರ್ಭಾವುಕ, ಸಂಪ್ರದಾಯಬದ್ಧ ಹಾಗೂ ತೀರ ಅಧಾರ್ಮಿಕರಾದ ಜನರ ಬಗ್ಗೆ ಫಾದರ್ ಸರ್ಜಿಯಸ್‌ಗೆ ಅರಿವಿತ್ತು. ಅವರೆಲ್ಲ

ಯಾತ್ರಾರ್ಥಿಗಳು, ಬಹುತೇಕ ಸೈನ್ಯದಿಂದ ನಿವೃತ್ತರು, ಸ್ಥಿರಜೀವನಕ್ಕೆ ಹೊರತಾದವರು, ಬಡವರು; ಅವರಲ್ಲಿ ಅನೇಕರು ಕುಡುಕರು, ಊಟದ ಆಸೆಯಿಂದ ಮಠದಿಂದ ಮಠಕ್ಕೆ ಹೋಗುತ್ತಿದ್ದವರು. ತಮ್ಮ ಸ್ವಾರ್ಥದ ಕಾರಣದಿಂದ ಬಂದ ಒರಟು ರೈತಾಪಿ ಜನರೂ, ಹೆಂಗಸರೂ. ತಮ್ಮ ಪರಿಹಾರ ಕಾಣದ ಲೌಕಿಕ ವ್ಯವಹಾರಗಳ ಬಗ್ಗೆ, ಮಗಳ ಮದುವೆಯ ಅನಿಶ್ಚತತೆಯ ಬಗ್ಗೆ, ಅಂಗಡಿಯನ್ನು ಬಾಡಿಗೆಗೆ ಪಡೆಯುವ ಬಗ್ಗೆ, ಜಮೀನು ಕೊಳ್ಳುವ ಬಗ್ಗೆ, ಬೇಕಿರದ ಮಗುವಿನ ಬಗ್ಗೆ, ಅಥವಾ ಅನೈತಿಕ ಸಂಬಂಧದ ಬಗ್ಗೆ ಸಂಶಯ ಹೊಂದಿದ್ದವರೂ ಅಲ್ಲಿ ಸೇರಿದ್ದರು,

ಇದೆಲ್ಲ ಹಳೆಯ ಕತೆ, ಅದರ ಬಗ್ಗೆ ಅವನಿಗೆ ಕೊಂಚವಾದರೂ ಆಸಕ್ತಿಯಿಲ್ಲ. ಈ ಜನರು ಹೊಸದೇನನ್ನೂ ಹೇಳುವುದಿಲ್ಲವೆಂಬುದು ಅವನಿಗೆ ಗೊತ್ತು, ತನ್ನಲ್ಲವರು ಯಾವುದೇ ಹೊಸ ಧಾರ್ಮಿಕ ಭಾವನೆಯನ್ನುಂಟುಮಾಡಲಾರರು. ಆದರೆ ತನ್ನ ಆಶೀರ್ವಾದವು ಆವಶ್ಯಕವೂ ಅಮೂಲ್ಯವೂ ಆದ ಈ ಮಂದಿಯನ್ನು ಕಂಡರೆ ಅವನಿಗೆ ಇಷ್ಟ, ಅವರು ತನ್ನನ್ನು ನೂಕುವುದೂ ಅವನಿಗೆ ಹಿತಕರವೇ. ಫಾದರ್ ಸರ್ಜಿಯಸ್ ಅವರನ್ನು ಹಿಂದೆ ಕಳಿಸಲು ಮೊದಲುಮಾಡಿದ, ತನಗೆ ದಣಿವಾಗಿದೆ ಎಂದ. ಆಗವನಿಗೆ ಸುವಾರ್ತೆಯ ಮಾತು ನೆನಪಿಗೆ ಬಂತು: 'ಅವರು ನನ್ನೆಡೆಗೆ ಬರುವುದನ್ನು ತಡೆಯಬೇಡಿ'. ಇದರಿಂದ ಮಿದು ಭಾವವುಂಟಾಗಿ ಅವರು ತನ್ನೆಡೆ ಬರಲು ಅವಕಾಶವೀಯಲು ಹೇಳಿದ.

ಮೇಲೆದ್ದ ಅವನು ಕಟಕಟೆಯ ಬಳಿ ಹೋದ, ಅದರಾಚೆಗೆ ಜನರ ಗುಂಪು ಸೇರಿತ್ತು. ಅವರಿಗೆ ಆಶೀರ್ವಾದ ಮಾಡುತ್ತ, ಅವರ ಪ್ರಶ್ನೆಗಳಿಗೆ ಉತ್ತರಿಸುತ್ತಲಿದ್ದ. ಆದರೆ ಅವನ ದನಿ ಕ್ಷೀಣವಾಗಿತ್ತು, ಇದನ್ನು ಗಮನಿಸಿದ ಅವನಿಗೆ ತನ್ನ ಮೇಲೆಯೇ ಕನಿಕರ ಮೂಡಿತು. ಅವರೆಲ್ಲರನ್ನೂ ಬರಮಾಡಿಕೊಳ್ಳುವ ಇಚ್ಛೆಯಿದ್ದರೂ ಅವನಿಗೆ ಹಾಗೆ ಮಾಡಲು ಸಾಧ್ಯವಾಗಲಿಲ್ಲ. ಮತ್ತೆ ಕಣ್ಣಿಗೆ ಕತ್ತಲಿಟ್ಟುಕೊಂಡು ಬಂದಂತಾಯಿತು, ದಡದಡಿಸುವಂತಾಯಿತು, ಕಟಕಟೆಯನ್ನು ಹಿಡಿದುಕೊಂಡ. ತಲೆಯ ಕಡೆ ರಕ್ತವೆಲ್ಲ ರೊಯ್ಯನೆ ನುಗ್ಗಿದಂತಾಯಿತು; ಮೊದಲು ನಿರ್ವಿಣ್ಣನಾದ. ಆನಂತರ ಮುಖ ಕೆಂಪಾಯಿತು.

"ನಾನು ನಾಳೆಯವರೆಗೂ ವಿಶ್ರಾಂತಿ ತೆಗೆದುಕೊಳ್ಳಬೇಕು. ಇವತ್ತು ಹೆಚ್ಚೇನೂ ಮಾಡಲಾರೆ" ಎನ್ನುತ್ತ ಎಲ್ಲರಿಗೂ ಅನ್ವಯಿಸುವಂತೆ ಆಶೀರ್ವಾದದ ಮಾತುಗಳನ್ನಾಡಿ ಬೆಂಚಿನೆಡೆಗೆ ಹಿಂದಿರುಗಿದ. ಮತ್ತೆ ಅವನ ಸಹಾಯಕ್ಕೆ ಧಾವಿಸಿದವನು ವ್ಯಾಪಾರಿಯೇ, ಅವನ ತೋಳು ಹಿಡಿದುಕೊಂಡು ಕರೆದೊಯ್ದು ಕೂರಿಸಿದ.

"ಫಾದರ್! ಫಾದರ್! ನಮ್ಮ ಕೈಬಿಡಬೇಡಿ. ನೀವಿಲ್ಲದೆ ನಮಗೆ ಗತಿಯಿಲ್ಲ" ಎಂದು ಜನ ಕೂಗಿದರು.

ಫಾದರ್ ಸರ್ಜಿಯಸ್‌ನನ್ನು ಎಲ್ಮ್ ಮರದಡಿಯಿದ್ದ ಬೆಂಚಿನ ಮೇಲೆ ಕೂರಿಸಿದ ಬಳಿಕ ವ್ಯಾಪಾರಿಯು ಪೊಲೀಸ್ ಕೆಲಸವನ್ನು ಕೈಗೆತ್ತಿಕೊಂಡು ಜನರನ್ನು ಅವನಿಂದ ದೂರ

ದೂಡಿದ. ಫಾದರ್ ಸರ್ಜಿಯಸ್‌ಗೆ ಕೇಳಿಸಬಾರದೆಂದು ಅವನು ಮೆಲು ದನಿಯಿಂದ ಮಾತಾಡುತ್ತಿದ್ದರೂ ಅವನ ಮಾತು ಗಡುಸಾಗಿ ಕೋಪದಿಂದ ಕೂಡಿತ್ತು.

"ದೂರ ಹೋಗಿ, ದೂರ ಹೋಗಿ! ಫಾದರ್ ನಿಮ್ಮನ್ನಾಗಲೇ ಆಶೀರ್ವದಿಸಿದಾರೆ, ಮತ್ತೇನು ಬೇಕು? ಹೊರಟು ಹೋಗಿ, ಇಲ್ಲದಿದ್ರೆ ಕತ್ತು ಮುರೀತೀನಿ! ಆ ಕಡೆ ಸರೀರಿ! ಹ್ಞೂ ಹೊರಡಿ. ಏ, ಕಾಲಿಗೆ ಕೊಳಕು ಪಟ್ಟಿ ಕಟ್ಕೊಂಡಿರೋ ಮುದುಕಮ್ಮ, ಹೋಗು! ಎಲ್ಲಿಗೆ ಹೋಗ್ತಿದ್ದೀ ನೀನು? ಎಲ್ಲ ಮುಗೀತು ಅಂತ ಆಗಲೇ ಹೇಳಲಿಲ್ಲವಾ? ದೇವರ ಕೃಪೆ ಇದ್ರೆ, ನಾಳೆ ಮುಂದಿನದು, ಇವತ್ತಿಂದು ಎಲ್ಲ ಮುಗಿದಿದೆ!"

"ಫಾದರ್! ಅವರ ದಯಾಮಯ ಮುಖವನ್ನು ಒಂದು ಸಾರಿ ನೋಡ್ತೀನಿ, ಬಿಡು!" ಎಂದಳು ಒಬ್ಬ ಮುದುಕಿ.

"ಮುಖದ ಮೇಲೆ ಗುದ್ತೀನಿ, ಎಲ್ಲಿಗೆ ಹೋಗ್ತೀ, ಹಿಂದೆ ಹೋಗು!"

ಆ ವ್ಯಾಪಾರಿ ಕಟುವಾಗಿ ನಡೆದುಕೊಳ್ಳುತ್ತಿರುವುದನ್ನು ಫಾದರ್ ಸರ್ಜಿಯಸ್ ಗಮನಿಸಿ, ಜನರನ್ನು ದೂಡಬಾರದು ಅಂತ ಹೇಳೋದಕ್ಕೆ ಕ್ಷೀಣ ದನಿಯಲ್ಲಿ ಸಹಾಯಕನೊಬ್ಬನಿಗೆ ಸೂಚನೆ ನೀಡಿದ. ಇಷ್ಟಾದರೂ ಜನರನ್ನು ಹಿಂದೆ ನೂಕುತ್ತಾರೆ ಅಂತ ಅವನಿಗೆ ಗೊತ್ತು; ತನಗೀಗ ಒಬ್ಬನೇ ಇದ್ದು ವಿಶ್ರಾಂತಿ ಪಡೆಯುವುದು ಬೇಕಾಗಿತ್ತು. ಆದರೆ ಹಾಗೆ ಹೇಳಿ ಕಳಿಸಿದ್ದು ಜನಗಳಿಗೆ ತನ್ನ ಬಗ್ಗೆ ಒಳ್ಳೆ ಅಭಿಪ್ರಾಯ ಬರಲಿ ಅಂತ.

"ಆಗಲಿ, ನಾನು ಅವರನ್ನು ಹಿಂದಕ್ಕೆ ನೂಕ್ತಾ ಇಲ್ಲ, ನುಗ್ಗೋದನ್ನು ತಡೀತಾ ಇದೀನಿ ಅಷ್ಟೆ. ಜನ ಒಬ್ಬನ ಕಡೆ ನೂಕ್ಕೊಂಡು ಬಂದು ತುಳಿದುಹಾಕಿಬಿಡ್ತಾರೆ, ಗೊತ್ತಲ್ಲ. ಅವರಿಗೆ ಕರುಣೆ ಅನ್ನೋದೇ ಇಲ್ಲ, ತಮ್ಮ ಬಗ್ಗೆ ಮಾತ್ರ ಅವರ ಗಮನ ... ಫಾದರ್ ಅವರನ್ನ ನೋಡೋಕೆ ಸಾಧ್ಯ ಇಲ್ಲಾಂತ ಆಗ್ಲೇ ಹೇಳಿದ್ದಾಯ್ತಲ್ಲ, ಹೊರಟು ಹೋಗಿ! ನಾಳೆ ಬನ್ನಿ!" ಎಂದುತ್ತರಿಸಿದ ವ್ಯಾಪಾರಿ.

ಅವನು ಇಷ್ಟೆಲ್ಲ ತೊಂದರೆ ತೆಗೆದುಕೊಂಡದ್ದಕ್ಕೆ ಕಾರಣ ಸುವ್ಯವಸ್ಥೆಯನ್ನು, ತಾನು ಮುಖ್ಯನೆನಿಸಿ ಇತರರನ್ನು ದೂಡಲು ಅವನು ಇಷ್ಟಪಡುತ್ತಿದ್ದುದು ನಿಜವಾದರೂ, ಮುಖ್ಯವಾದ ಕಾರಣ ಎಂದರೆ ಅವನಿಗೆ ಫಾದರ್ ಸರ್ಜಿಯಸ್ ತನ್ನ ಕಡೆ ಮಾತ್ರ ಗಮನ ಕೊಡಬೇಕು ಎಂಬ ಬಯಕೆ. ಅವನೊಬ್ಬ ವಿಧುರ, ಅವನಿಗೊಬ್ಬಳು ಮಗಳಿದ್ದಾಳೆ, ಅವಳು ಅಂಗವಿಕಲೆ ಹೀಗಾಗಿ ಮದುವೆಯಾಗದವಳು. ಅವಳ ಅಂಗವಿಕಲತೆಯನ್ನು ವಾಸಿಮಾಡಲು ಫಾದರ್ ಸರ್ಜಿಯಸ್‌ನ ಹರಕೆ ಪಡೆಯಲು ಅವನು ಮಗಳೊಂದಿಗೆ ಏಳುನೂರು ಮೈಲಿಗಳಿಂದ ಬಂದಿದ್ದಾನೆ. ಕಳೆದೆರಡು ವರ್ಷಗಳಿಂದ ತನ್ನ ಮಗಳನ್ನವನು ಹತ್ತಾರು ಕಡೆ ಕರೆದೊಯ್ದು ನೋಡಿದ್ದಾನೆ; ಮೊದಲು ತನ್ನ ಜಿಲ್ಲೆಯ ಮುಖ್ಯ ಪಟ್ಟಣದಲ್ಲಿನ ವಿಶ್ವವಿದ್ಯಾನಿಲಯದ ಆಸ್ಪತ್ರೆಗೆ, ಆದರೇನೂ ಪ್ರಯೋಜನವಾಗಿರಲಿಲ್ಲ; ಆ ಬಳಿಕ ಸಮಾರ ಪ್ರಾಂತ್ಯದ ಒಬ್ಬ ರೈತನ ಬಳಿಗೆ ಹೋದ, ಅಲ್ಲೇನೂ ಹುಡುಗಿ ಕೊಂಚ ಚೇತರಿಸಿಕೊಂಡಳು; ಆ ನಂತರ ಅವನು ಹೋದದ್ದು

ಮಾಸ್ಕೋದಲ್ಲಿದ್ದ ಒಬ್ಬ ವೈದ್ಯರ ಬಳಿಗೆ, ಅವನಿಗೆ ಸಾಕಷ್ಟು ದುಡ್ಡು ತೆತ್ತರೂ ಅದರಿಂದೇನೂ ಉಪಯೋಗವಾಗಿರಲಿಲ್ಲ. ಫಾದರ್ ಸರ್ಜಿಯುಸ್ ಗುಣಪಡಿಸುವರೆಂದು ಈಚೆಗೆ ತಿಳಿದು ಬಂದು ಮಗಳನ್ನು ಇಲ್ಲಿಗೆ ಕರೆತಂದಿದ್ದ. ಹೀಗಾಗಿ, ಎಲ್ಲ ಜನರನ್ನು ದೂರ ಅಟ್ಟಿದ ಬಳಿಕ ಅವನು ಫಾದರ್ ಸರ್ಜಿಯಸ್ ಬಳಿ ಬಂದು ಕಾಲ್ಗಳೆಡೆ ನಡೆದು ಜೋರಾಗಿ, "ದಿವ್ಯ ಪ್ರಭುವೇ! ನನ್ನ ಅಂಗವಿಕಲ ಕುಡಿಯನ್ನು ಹರಸಿ ಅವಳ ಕಾಯಿಲೆಯನ್ನು ಗುಣಪಡಿಸಿ. ನಿಮ್ಮ ಪಾದಗಳ ಮೇಲೆ ಬಿದ್ದಿದ್ದೇನೆ" ಎಂದು ಗೋಗರೆದ.

ತನ್ನೆರಡೂ ಕೈಗಳನ್ನು ಬಟ್ಟಲಾಗಿಸಿ ಒಂದರ ಮೇಲೊಂದನ್ನಿರಿಸಿಕೊಂಡ. ಇದನ್ನೆಲ್ಲ ತಾನು ಕಾನೂನಿಗೂ ಸಂಪ್ರದಾಯಕ್ಕೂ ಅನುಗುಣವಾಗಿ ಮಾಡುತ್ತಿರುವವನಂತೆ, ಇದರ ಹೊರತು ಬೇರೆ ರೀತಿಯಲ್ಲಿ ಮಗಳ ವಿಕಲತೆಯನ್ನು ವಾಸಿಮಾಡುವಂತೆ ಕೇಳಿಕೊಳ್ಳಲು ಸಾಧ್ಯವಿಲ್ಲವೇನೋ ಎಂಬಂತೆ, ಮಾಡಿದ. ಅವನದನ್ನು ಎಂಥ ಮನವರಿಕೆಯಿಂದ ಮಾಡಿದನೆಂದರೆ ಫಾದರ್ ಸರ್ಜಿಯಸ್ ಕೂಡ ಇದೇ ರೀತಿ ಕೇಳಿಕೊಳ್ಳಬೇಕೇನೋ ಎನ್ನಿಸಿತು. ಆದರೂ ಅವನನ್ನು ಮೇಲೆಬ್ಬಿಸಿ ಬಂದ ಸಂಕಷ್ಟ ಏನೆಂದು ವಿವರಿಸಲು ಕೇಳಿದ. ಇಪ್ಪತ್ತೆರಡರ ಪ್ರಾಯದ ತನ್ನ ಮಗಳು ಎರಡು ವರ್ಷದ ಹಿಂದೆ ತನ್ನ ತಾಯಿಯ ಅನಿರೀಕ್ಷಿತ ಸಾವಿನ ನಂತರ ಕಾಯಿಲೆ ಬಿದ್ದಳೆಂದು ವಿವರಿಸಿದ; ಗೋಳಾಟದ ನಂತರ ಅವಳು ಹಿಂದಿನಂತೆ ಉಳಿಯಲಿಲ್ಲವೆಂದ. ಅವಳನ್ನು ತಾನೀಗ ಏಳುನೂರು ಮೈಲುಗಳ ದೂರದೂರಿಂದ ಕರೆತಂದಿರುವುದಾಗಿಯೂ ಫಾದರ್ ಸರ್ಜಿಯಸ್ ಅನುಮತಿ ಕೊಟ್ಟರೆ ವಸತಿಗೃಹದಿಂದ ತಾನವಳನ್ನಿಲ್ಲಿಗೆ ಕರೆತರುವುದಾಗಿ ತಿಳಿಸಿದ. ಬೆಳಕಿಗೆ ಹೆದರುವ ಅವಳು ಹಗಲು ಹೊತ್ತು ಹೊರಗೇ ಹೋಗುವುದಿಲ್ಲವೆಂದೂ ಸೂರ್ಯ ಮುಳುಗಿದ ನಂತರ ಬರುವಳೆಂದೂ ಹೇಳಿದ.

"ಅವಳು ತುಂಬ ಶಕ್ತಿಗುಂದಿದ್ದಾಳಾ?"

"ಇಲ್ಲ, ಅವಳಿಗೆ ಹೇಳಿಕೊಳ್ಳಬಹುದಾದ ಯಾವುದೇ ದೌರ್ಬಲ್ಯವಿಲ್ಲ, ಸಾಕಷ್ಟು ಮೈಕೈ ತುಂಬಿಕೊಂಡಿದ್ದಾಳೆ, ಆದರೆ ವೈದ್ಯರ ಪ್ರಕಾರ ಅದು "ನ್ಯೂರಾಸ್ತೇನಿಯ" ಅಷ್ಟೆ. ತಾವು ಅಪ್ಪಣೆ ಕೊಟ್ಟರೆ ಇವತ್ತು ಸಾಯಂಕಾಲ ಅವಳನ್ನ ಕರ್ಕೊಂಡು ಬರ್ತೀನಿ. ದೈವಾಂಶಸಂಭೂತರೇ! ತಂದೆಯೊಬ್ಬನ ಹೃದಯವನ್ನು ಬದುಕಿಸಿರಿ, ಅವನ ವಂಶವನ್ನುಳಿಸಿರಿ, ತನ್ನ ಪ್ರಾರ್ಥನೆಗಳಿಂದ ರೋಗಿಷ್ಠ ಮಗಳನ್ನು ಗುಣಪಡಿಸಿ!" ಎನ್ನುತ್ತ ಆ ವ್ಯಾಪಾರಿ ಮತ್ತೆ ಫಾದರ್ ಸರ್ಜಿಯಸ್ ಮುಂದೆ ಮಂಡಿಯೂರಿ ತನ್ನ ಬಿಗಿಹಿಡಿದ ಮುಷ್ಟಿಗಳನ್ನು ನೆಲದ ಮೇಲಿಟ್ಟು ತಲೆಯನ್ನದರ ಮೇಲಿರಿಸಿಕೊಂಡು ನಮಸ್ಕಾರ ಮಾಡಿ ನಿಶ್ಚಲನಾಗುಳಿದ. ಮೇಲೇಳಲು ಅವನಿಗೆ ಮತ್ತೆ ಫಾದರ್ ಸರ್ಜಿಯಸ್ ಹೇಳಿದ. ತನ್ನ ಕಾರ್ಯಭಾರ ಎಷ್ಟು ದೊಡ್ಡದು, ತುಂಬ ತಾಳ್ಮೆಯಿಂದ ಅದನ್ನು ತಾನು ಹೇಗೆ ನಿಭಾಯಿಸುತ್ತಿದ್ದೇನೆ ಎಂದು ಯೋಚಿಸುತ್ತ ನೀಳ ಉಸಿರೊಂದನ್ನು ಬಿಟ್ಟು ಕೆಲವು ಕ್ಷಣಗಳ ಬಳಿಕ ಹೇಳಿದ: "ಆಗಲಿ, ಇವತ್ತು ಸಂಜೆ ಮಗಳನ್ನು ಕರೆತಾ. ಅವಳಿಗಾಗಿ ನಾನು

ಪ್ರಾರ್ಥಿಸ್ತೀನಿ, ಈಗಂತೂ ನನಗೆ ತುಂಬ ಆಯಾಸವಾಗಿದೆ... ನಿಂಗೆ ಹೇಳಿಕಳಿಸ್ತೀನಿ" ಎನ್ನುತ್ತ ತನ್ನ ಕಣ್ಣುಗಳನ್ನು ಮುಚ್ಚಿಕೊಂಡ.

ಟಪ್ ಟಪ್ ಎಂದು ಹೆಜ್ಜೆಗಳನ್ನಿರಿಸಿಕೊಂಡು ತನ್ನ ಬೂಟುಗಳು ಕಿರುಗುಟ್ಟುತ್ತಿರಲು ವ್ಯಾಪಾರಿ ಹೊರಟು ಹೋದ, ಫಾದರ್ ಸರ್ಜಿಯಸ್ ಒಂಟಿಯಾಗುಳಿದ.

ಅವನ ಬದುಕೆಲ್ಲ ಚರ್ಚ್‌ನ ವಿಧಿಗಳು ಮತ್ತು ತನ್ನನ್ನು ನೋಡಲು ಬಂದ ಜನಗಳಿಂದಲೇ ತುಂಬಿ ಹೋಗಿತ್ತು; ಆದರೆ ಇವತ್ತು ತೀರ ಕಷ್ಟಕರವಾಗಿತ್ತು. ಬೆಳಿಗ್ಗೆ ಒಬ್ಬ ಪ್ರಮುಖ ಅಧಿಕಾರಿ ಬಂದು ತನ್ನೊಡನೆ ದೀರ್ಘ ಕಾಲ ಮಾತಿನಲ್ಲಿ ತೊಡಗಿದ್ದ; ಆನಂತರ ಒಬ್ಬ ಮಹಿಳೆ, ತನ್ನ ಮಗನೊಡನೆ ಬಂದಿದ್ದಳು, ಈ ಮಗನೋ ಒಬ್ಬ ಸಂಶಯವಾದಿ ಪ್ರಾಧ್ಯಾಪಕ, ತಾಯಿ ಮಹಾ ಭಗವದ್ಭಕ್ತೆ, ಫಾದರ್ ಸರ್ಜಿಯಸ್‌ನ ಅನುಯಾಯಿ; ತನ್ನೊಡನೆ ಮಾತಾಡಲು ಈಕೆ ಮಗನನ್ನು ಕರೆತಂದಿದ್ದಳು. ಅವರೊಡನೆ ನಡೆಸಿದ ಮಾತುಕತೆ ತೀರ ಬಳಲಿಸಿತ್ತು. ಸನ್ಯಾಸಿಯೊಡನೆ ವಾದ ಬೆಳೆಸಲು ಇಷ್ಟವಿಲ್ಲದೆ ಆ ಮಗ ತನಗಿಂತ ಬೌದ್ಧಿಕವಾಗಿ ಕೆಳಸ್ತರದವನೊಂದಿಗೆ ಮಾಡುವಂತೆ ತಾನು ಹೇಳಿದ್ದಕ್ಕೆಲ್ಲ ಹ್ಞೂಗುಟ್ಟಿದ್ದ. ಅವನು ನಂಬದಿದ್ದರೂ ತೃಪ್ತಿಗೊಂಡ ಹಾಗೆ ಪ್ರಶಾಂತನಾಗಿ ಸರಳವಾಗಿ ಫಾದರ್ ಸರ್ಜಿಯಸ್‌ಗೆ ಕಾಣಿಸಿದ್ದ: ಅವನೊಡನೆ ಮಾಡಿದ ಸಂಭಾಷಣೆಯ ನೆನಪು ಕಿರಿಕಿರಿಯುಂಟುಮಾಡಿತು.

"ಏನಾದ್ರೂ ಸ್ವಲ್ಪ ತಿನ್ನಿ, ಫಾದರ್" ಎಂದ ಸಹಾಯಕ.

"ಆಗಲಿ, ಏನಾದ್ರೂ ತಗೊಂಡು ಬಾ."

ಸಹಾಯಕ ಗುಹೆಯಿಂದ ಸುಮಾರು ಹತ್ತು ಹೆಜ್ಜೆ ದೂರದಲ್ಲಿ ನಿರ್ಮಿಸಿದ್ದ ಒಂದು ಗುಡಿಸಲೊಳಗೆ ಹೋದ. ಈಗ ಫಾದರ್ ಸರ್ಜಿಯಸ್ ಒಬ್ಬನೇ ಉಳಿದ.

ಏಕಾಂತದಲ್ಲಿದ್ದುಕೊಂಡು ತನ್ನ ಕೆಲಸವನ್ನೆಲ್ಲ ತಾನೇ ಮಾಡಿಕೊಳ್ಳುತ್ತಿದ್ದು ಬರೀ ರೈಬ್ರೆಡ್ ಅನ್ನೋ ಅಥವಾ ಚರ್ಚ್‌ಗೆಂದು ತಯಾರಿಸಿರುತ್ತಿದ್ದ ಉರುಳಿರೊಟ್ಟಿಯನ್ನೋ ತಿನ್ನುತ್ತ ಇದ್ದ ಕಾಲ ಹೋಗಿ ತುಂಬ ದಿನಗಳಾಗಿದ್ದವು. ಆರೋಗ್ಯವನ್ನು ಕಾಪಾಡಿ ಕೊಳ್ಳಬೇಕೆಂದು ಹಿಂದೆಯೇ ಹೇಳಲಾಗಿತ್ತು; ಅವನೀಗೀಗ ಪುಷ್ಟಿಕರವಾದ ಆದರೆ ಸಪ್ಪೆ ಆಹಾರವನ್ನು ನೀಡಲಾಗುತ್ತಿತ್ತು. ಅವನು ತಿನ್ನುತ್ತಿದ್ದುದು ಸ್ವಲ್ಪ ಸ್ವಲ್ಪವೇ, ಆದರೆ ಹಿಂದಿಗಿಂತ ಹೆಚ್ಚಾಗಿ ತಿನ್ನುತ್ತಿದ್ದ; ಕೆಲವೇಳೆ ಬಾಯಿ ಚಪ್ಪರಿಸಿಕೊಂಡು ಊಟಮಾಡುತ್ತಿದ್ದ, ಹಿಂದಿನಂತೆ ಬೇಸರಿಕೆಯಿಂದಲೋ ಪಾಪಪ್ರಜ್ಞೆಯಿಂದಲೋ ಅಲ್ಲ. ಈಗ ಆದದ್ದೂ ಹಾಗೆಯೇ: ಸ್ವಲ್ಪ ಗಂಜಿ ಹೀರಿ, ಟೀ ಕುಡಿದು ಅರ್ಧ ಉರುಳಿರೊಟ್ಟಿ ತಿಂದ.

ಸಹಾಯಕ ಹೊರಟು ಹೋದ, ಫಾದರ್ ಸರ್ಜಿಯಸ್ ಎಲ್ಮ್ ಮರದ ಕೆಳಗೆ ಏಕಾಂಗಿಯಾದ ಆಗ ಸುಂದರವಾದ ಮೇ ಸಂಜೆಯ ಹೊತ್ತು; ಬರ್ಚ್, ಆಸ್ಪೆನ್, ವೈಲ್ಡ್ ಚೆರಿ, ಎಲ್ಮ್, ಓಕ್ ಮರಗಳೆಲ್ಲ ಚಿಗುರಿ ಎಲೆಗಳಿಂದ ನಳನಳಿಸುತ್ತಿದ್ದವು. ಎಲ್ಮ್ ಮರದ ಹಿಂಬದಿಯಿದ್ದ ವೈಲ್ಡ್ ಚೆರಿ ಪೊದೆ ಹೂಬಿಟ್ಟು ಕಂಗೊಳಿಸುತ್ತಿತ್ತು; ಹೂಗಳಿನ್ನೂ

ಉದುರಲು ತೊಡಗಿರಲಿಲ್ಲ. ನೈಟಿಂಗೇಲ್‌ಗಳು- ಒಂದು ಸಮೀಪದಲ್ಲೂ, ಮತ್ತೆರಡೋ ಮೂರೋ ನದಿಯ ಆಚೆ ಬದಿಗಿದ್ದ ಪೊದೆಗಳಿಂದಲೋ- ಮೊದಲೊಂದೆರಡು ಬಾರಿ ಚಿಲಿಪಿಲಿಗುಟ್ಟಿ ತಾರಕದಲ್ಲಿ ಹಾಡುತ್ತಿದ್ದವು. ರೈತರು ತಮ್ಮ ಕೆಲಸ ಮುಗಿಸಿಕೊಂಡು ವಾಪಸಾಗುವಾಗ ಹಾಡುತ್ತಿದ್ದ ದನಿ ನದಿಯ ಮೇಲಿಂದ ತೇಲಿಬರುತ್ತಿದ್ದವು. ಅರಣ್ಯದಲ್ಲಿ ಹಿಂಬದಿಯಲ್ಲಿ ಸೂರ್ಯ ಕೆಳಗಿಳಿಯುತ್ತಿದ್ದ, ಅವನ ಕೊನೆ ನಿಮಿಷದ ಹೊಂಗಿರಣಗಳು ಅಲೆಗಳ ಮೇಲೆ ಚಿನ್ನದ ಹೊಳಪನ್ನು ಮೂಡಿಸಿದ್ದವು. ಆ ಕಡೆಯಲ್ಲೆಲ್ಲ ಮನದುಂಬುವ ಹಸಿರ ರಾಶಿ, ಮತ್ತೊಂದು ಬದಿಯಲ್ಲಿ ಎಲ್ಮ್ ಮರ ಕಪ್ಪಾಗಿತ್ತು. ಜೀರುಂಡೆಗಳು ಸುತ್ತಲೂ ಕಿರಿಕಿರಿಯುಂಟುಮಾಡುತ್ತ ಹಾರಾಡುತ್ತಿದ್ದವು, ಯಾವುದಕ್ಕಾದರೂ ಡಿಕ್ಕಿ ಹೊಡೆದಾಗ ತುಪುಕ್ಕನೆ ಕೆಳಗುರುಳುತ್ತಿದ್ದವು.

ರಾತ್ರಿ ಊಟದ ನಂತರ ಫಾದರ್ ಸರ್ಜಿಯಸ್ ಮೌನವಾಗಿ ಪ್ರಾರ್ಥಿಸತೊಡಗಿದ: "ಯೇಸು ಪ್ರಭುವೇ, ದೇವಪುತ್ರನೇ, ನಮ್ಮ ಮೇಲೆ ಕರುಣೆಯಿರಿಸು" ಆಮೇಲೆ ಒಂದು ಸ್ತುತಿಗೀತೆಯನ್ನೋದಿದ. ಅದನ್ನು ಹೇಳುತ್ತಿರುವಾಗ ಮಧ್ಯದಲ್ಲಿ ಇದ್ದಕ್ಕಿದ್ದಂತೆ ಗುಬ್ಬಚ್ಚಿಯೊಂದು ಪೊದೆಯಿಂದ ಪುಳಿಂಗನೆ ಹಾರಿಹೋಗಿ, ನೆಲದ ಮೇಲೆ ಕೂತು ಚಿಲಿಪಿಲಿಗುಟ್ಟುತ್ತ ತನ್ನೆಡೆಗೆ ಹೆಜ್ಜೆಗಳನ್ನಿರಿಸಿಕೊಂಡು ಬಂತು, ಆದರೆ ಏನನ್ನೋ ಕಂಡು ಹೆದರಿ ಹಾರಿಹೋಯಿತು. ತನ್ನ ಐಹಿಕತೆಯ ತ್ಯಾಗಕ್ಕೆ ಸಂಬಂಧಿಸಿದ ಪ್ರಾರ್ಥನೆಯನ್ನು ಮಾಡಿ, ರೋಗಿಷ್ಠ ಮಗಳೊಂದಿಗೆ ಬರಲು ವ್ಯಾಪಾರಿಗೆ ಹೇಳಿಕಳಿಸಲೆಂದು ಆತುರಾತುರವಾಗಿ ಪ್ರಾರ್ಥನೆಯನ್ನು ಮುಗಿಸಿದ. ತನ್ನ ವಿಭಿನ್ನ ಸ್ವರೂಪದಿಂದಾಗಿ ಆ ಹುಡುಗಿ ಅವನ ಗಮನವನ್ನು ಸೆಳೆದಿದ್ದಳು, ಅಲ್ಲದೆ ಅವಳೂ ತಂದೆಯೂ ತನ್ನನ್ನು ಸಂತನೆಂದು ಭಾವಿಸಿ ತನ್ನ ಪ್ರಾರ್ಥನೆಯು ಪರಿಣಾಮಕಾರಿಯೆಂದುಕೊಂಡಿದ್ದರು. ಹೊರಗಡೆಯೇನೋ ಅದನ್ನವನು ನಿರಾಕರಿಸುತ್ತಿದ್ದ, ಆದರೆ ಮನದಂತರಾಳದಲ್ಲಿ ಅದು ನಿಜವೆಂದೇ ನಂಬಿದ್ದ.

ಇದು ಅನೇಕ ಸಾರಿ ನಿಜವಾದುದಕ್ಕೆ ಅವನಿಗೆ ಅಚ್ಚರಿ ಎನಿಸಿತ್ತು. ಸ್ಟೀಫನ್ ಕಸಾಟ್‌ಸ್ಕಿಯಾಗಿದ್ದ ತಾನು ಇಂತಹ ಸಂತನಾಗಿ, ಪವಾಡಪುರುಷನಾಗಿ, ಪರಿವರ್ತಿತವಾಗಿದ್ದುದರಲ್ಲಿ ಎಳ್ಳಷ್ಟೂ ಅನುಮಾನವಿಲ್ಲವೆಂದೇ ಭಾವಿಸಿದ್ದ. ರೋಗಿ ಹುಡುಗನಿಂದ ಹಿಡಿದು ತಾನು ಪ್ರಾರ್ಥಿಸಿದ ನಂತರ ಮುದುಕಿ ಕಳೆದುಕೊಂಡಿದ್ದ ದೃಷ್ಟಿಯನ್ನು ಕಂಡಿದ್ದ ಪ್ರಸಂಗದವರೆಗೆ ತಾನೇ ಕಣ್ಣಾರೆ ಕಂಡಿದ್ದ ಪವಾಡಗಳನ್ನು ನಂಬದಿರಲು ಸಾಧ್ಯವಿರಲಿಲ್ಲ.

ವಿಚಿತ್ರವೆನಿಸಿದರೂ ಇದು ನಿಜವಾಗಿತ್ತು. ಅದರಿಂದಾಗಿ ವ್ಯಾಪಾರಿಯ ಮಗಳ ಪ್ರಸಂಗವು ತನ್ನಲ್ಲಿ ನಂಬಿಕೆಯಿಟ್ಟ ಹೊಸ ಸನ್ನಿವೇಶವಾಗಿ ಕಂಡಿತ್ತು, ಜೊತೆಗೆ ಇದರಿಂದಾಗಿ ತನ್ನ ರೋಗನಿವಾರಣಾ ಸಾಮರ್ಥ್ಯವನ್ನು ಸ್ಥಿರೀಕರಿಸುವ ಒಂದು ಅವಕಾಶ, ಇದರಿಂದ ತನ್ನ ಕೀರ್ತಿ ಪಸರಿಸಲು ಹೊಚ್ಚ ಹೊಸ ಅವಕಾಶವೊದಗುತ್ತದೆ ಎಂದು ಭಾವಿಸಿದ. 'ನೂರಾರು ಮೈಲಿಗಳ ದೂರದಿಂದ ಜನರು ಬರುತ್ತಾರೆ, ಪತ್ರಿಕೆಗಳಲ್ಲಿ ತನ್ನ

ವಿಷಯ ಬರೆಯುತ್ತಾರೆ. ಚಕ್ರವರ್ತಿಗೆ ಈ ವಿಷಯ ತಿಳಿಯುತ್ತದೆ, ನಂಬಿಕೆ ಹೊಂದದ ಯೂರೋಪಿನಲ್ಲೆಲ್ಲ ತನ್ನ ಬಗ್ಗೆ ನಂಬಿಕೆ ಬೆಳೆಯುತ್ತದೆ' ಎಂದುಕೊಂಡ. ತಕ್ಷಣವೇ ತನ್ನ ಡೌಲಿನ ಬಗ್ಗೆ ನಾಚಿಕೆಯೆನಿಸಿ ಮತ್ತೆ ಪ್ರಾರ್ಥನೆಗೆ ಕುಳಿತ. 'ದೇವರೆ, ಸ್ವರ್ಗದ ಪ್ರಭುವೇ, ನೆಮ್ಮದಿಯೀಯುವವನೇ, ಸತ್ಯಾತ್ಮವೇ, ಬಂದು ನನ್ನಲ್ಲಿ ಸೇರಿ ನನ್ನೆಲ್ಲ ಪಾಪಗಳನ್ನೂ ತೊಳೆದು ನನ್ನ ಆತ್ಮವನ್ನು ಕಾಪಾಡು! ನನ್ನನ್ನು ಕಾಡುವ ಲೌಕಿಕ ಡೌಲಿನಿಂದ ರಕ್ಷಿಸು!' ಎಂದು ಹೇಳಿಕೊಂಡ. ಎಷ್ಟೋ ಬಾರಿ ಹೀಗೆ ಪ್ರಾರ್ಥನೆ ಮಾಡಿದ್ದರೂ ಇಲ್ಲಿಯವರೆಗೂ ಅವೆಲ್ಲ ವ್ಯರ್ಥವಾದುದನ್ನು ನೆನಪಿಸಿಕೊಂಡ. ಅವನ ಪ್ರಾರ್ಥನೆಗಳು ಇತರರಿಗಾಗಿ ಪವಾಡಗಳನ್ನು ಮಾಡಿದರೂ ದೇವರು ತನಗಿನ್ನೂ ಈ ಕೀಳು ಆಸೆಯಿಂದ ಪಾರುಮಾಡುವ ಕೃಪೆ ತೋರಿಸಿಲ್ಲವಲ್ಲ.

ಆಶ್ರಮದಲ್ಲಿನ ಸನ್ಯಾಸಿ ಬದುಕಿನ ಆರಂಭದಲ್ಲಿ ತಾನು ಮಾಡುತ್ತಿದ್ದ ಪ್ರಾರ್ಥನೆಯ ನೆನಪಾಯಿತು; ಅವನು ಆಗ ಪ್ರಾರ್ಥಿಸುತ್ತಿದ್ದುದು ಪರಿಶುದ್ಧತೆಗಾಗಿ, ವಿನಯವಂತಿಕೆಗಾಗಿ ಮತ್ತು ಪ್ರೇಮಕ್ಕಾಗಿ. ದೇವರು ತನ್ನ ಪ್ರಾರ್ಥನೆಗೆ ಕಿವಿಗೊಟ್ಟಿದ್ದಾನೆ ಎಂದವನಿಗೆ ಆಗೆಲ್ಲ ಅನ್ನಿಸುತ್ತಿತ್ತು. ತನ್ನ ಪರಿಶುದ್ಧತೆಯನ್ನವನು ಕಾಪಾಡಿಕೊಂಡಿದ್ದ, ತನ್ನ ಬೆರಳನ್ನೇ ಕತ್ತರಿಸಿಕೊಂಡಿದ್ದ. ಮಿಸುಕಾಡುತ್ತಿದ್ದ ಬೆರಳ ಕೂಳೆಯನ್ನವನು ತನ್ನ ತುಟಿಗೆ ತಂದು ಮುತ್ತಿಕ್ಕಿದ್ದ. ಪಾಪಗಳ ಕಾರಣದಿಂದ ತನ್ನ ಬಗ್ಗೆ ಅಸಹ್ಯಭಾವನೆಯಿಂದಿದ್ದ ತಾನಾಗ ವಿನೀತನಾಗಿದ್ದೆ ಎನ್ನಿಸಿತವನಿಗೆ. ಕುಡುಕ ಸೈನಿಕ ಮಗನೊಂದಿಗೆ ಬಂದಿದ್ದ ಒಬ್ಬ ಮುದಿ ತಂದೆ ತನ್ನನ್ನು ಭಿಕ್ಷೆ ಬೇಡಿದಾಗ ತನ್ನಲ್ಲಿ ಉದಿಸಿದ್ದ ಕೋಮಲ ಭಾವನೆಗಳು ನೆನಪಾದವು. ತಾನವಳನ್ನು ಬರಮಾಡಿಕೊಂಡದ್ದು, ಅವಳ ಬಗೆಗಿನ ವ್ಯಾಮೋಹ ತನ್ನನ್ನಾವರಿಸಿದ್ದುದು ನೆನಪಾಯಿತು. ಆದರೀಗ? ತಾನೀಗ ಯಾರನ್ನಾದರೂ ಪ್ರೇಮದಿಂದ ಕಾಣಬಲ್ಲೆನೇ, ಸೋಫ್ಯಾ ಇವನೋವ್‌ನಳ ಬಗ್ಗೆಯಾಗಲೀ ಫಾದರ್ ಸೆರಾಫಿನ್ ಬಗ್ಗೆಯಾಗಲೀ ಪ್ರೇಮ ತಾಳಬಲ್ಲೆನೇ, ಅಥವಾ ಅವತ್ತು ತನ್ನನ್ನು ಕಾಣಲು ಬಂದಿದ್ದವರಲ್ಲಿ ಯಾರದೇ ಬಗ್ಗೆ ತನ್ನಲ್ಲಿ ಪ್ರೇಮಭಾವನೆಯಿದೆಯೇ ಎಂದು ಕೇಳಿಕೊಂಡ. ತನ್ನ ಬುದ್ಧಿಮತ್ತೆಯನ್ನು ಮತ್ತು ಜ್ಞಾನದಲ್ಲಿ ತಾನು ಹಿಂದೆಬಿದ್ದಿಲ್ಲವೆಂದು ತೋರಿಸಿಕೊಳ್ಳಲು ತನ್ನೊಡನೆ ವಾದ ಮಾಡಿದ್ದ ಆ ಯುವ ವಿದ್ವಾಂಸನ ಬಗ್ಗೆ? ಅವನಿಗೆ ಅವರೆಲ್ಲರ ಪ್ರೇಮದ ಆವಶ್ಯಕತೆಯಿತ್ತು, ಆದರೆ ಅವರಾರೂ ತನ್ನ ಬಗ್ಗೆ ಪ್ರೇಮಭಾವನೆ ತಾಳಲಾರರು. ತನ್ನಲ್ಲೀಗ ಪ್ರೇಮವೂ ಇಲ್ಲ, ವಿನಯವಂತಿಕೆಯೂ ಇಲ್ಲ, ಪರಿಶುದ್ಧತೆಯೂ ಇಲ್ಲ.

ವ್ಯಾಪಾರಿಯ ಮಗಳು ಇಪ್ಪತ್ತೆರಡರ ಯುವತಿ ಎಂಬ ವಿಷಯ ಅವನಲ್ಲಿ ಸಂತಸ ಮೂಡಿಸಿತು, ಅವಳು ಸುಂದರಿಯೂ ಹೌದೇ ಎಂದು ಯೋಚಿಸಿದ. ಅವಳು ಶಕ್ತಿಹೀನಳೇ ಎಂದು ಕೇಳಿದಾಗ ಅವನ ಮನಸ್ಸಿನಲ್ಲಿದ್ದುದು ಅವಳಿಗೆ ಹೆಣ್ಣಿನ ಆಕರ್ಷಣೆಯಿದೆಯೇ ಎಂಬ ಆಸಕ್ತಿ. 'ನಾನಿಷ್ಟು ಕೀಳುಮಟ್ಟಕ್ಕಿಳಿದುಬಿಟ್ಟೆನೇ!' ಎನ್ನಿಸಿ, "ಪ್ರಭುವೇ, ಕಾಪಾಡು! ನನ್ನನ್ನು ಮೇಲೆತ್ತು, ದೇವರೇ, ದೊರೆಯೇ!" ಎಂದು ಕೈಗಳನ್ನು ಜೋಡಿಸಿ ಪ್ರಾರ್ಥಿಸಿದ.

ನೈಟಿಂಗೇಲ್‌ಗಳ ಇನಿದನಿ ಬಾಂದಳವನ್ನು ತುಂಬಿತ್ತು, ಜೀರುಂಡೆಯೊಂದು ಅವನಿಗಪ್ಪಳಿಸಿ ಕತ್ತಿನ ಹಿಂಬದಿಯಿಂದ ನುಸುಳಿ ಬಂತು, ಅವನದನ್ನು ಆಕಡೆ ಸರಿಸಿದ. "ಅವನು ಇದ್ದಾನೆಯೇ? ಹೊರಗೆ ಭದ್ರಪಡಿಸಿರುವ ಬಾಗಿಲನ್ನೇನಾದರೂ ನಾನು ಬಡಿಯುತ್ತಿದ್ದೇನೆಯೇ? ಬಾಗಿಲ ಮೇಲಿನ ಅಡ್ಡಕಂಬಿ ಎಲ್ಲರಿಗೂ ಕಾಣುಂಥದ್ದೇ. ನಿಸರ್ಗ, - ನೈಟಿಂಗೇಲ್‌ಗಳು, ಜೀರುಂಡೆಗಳು ಎಲ್ಲ ಆ ಅಡ್ಡಕಂಬಿಯಲ್ಲಿ ಸೇರಿವೆ. ಪ್ರಾಯಶಃ ಆ ಯುವ ವಿದ್ವಾಂಸ ಹೇಳಿದ್ದೇ ನಿಜವೇನೋ!" ಜೋರಾಗಿ ಪ್ರಾರ್ಥನೆಗಳನ್ನುಸುರಿದ. ತನ್ನಲ್ಲಿ ಹಾದುಬಂದ ಆಲೋಚನೆಗಳೆಲ್ಲ ಕಣ್ಮರೆಯಾಗುವವರೆಗೂ ಪ್ರಾರ್ಥಿಸಿದ; ಮತ್ತೆ ಅವನಲ್ಲಿ ಆತ್ಮವಿಶ್ವಾಸ ಮೂಡಿತು. ಅವನು ಕರೆಗಂಟೆಯ ಶಬ್ದ ಮಾಡಿದ, ಎದುರು ನಿಂತ ಸಹಾಯಕನಿಗೆ - ತನ್ನನ್ನು ಕಾಣಲು ಮಗಳೊಂದಿಗೆ ವ್ಯಾಪಾರಿ ಈಗ ಬರಬಹುದು- ಎಂದು ಹೇಳಿದ.

ವ್ಯಾಪಾರಿ ಬಂದ, ತೋಳು ಹಿಡಿದು ತನ್ನ ಮಗಳನ್ನೂ ನಡೆಸಿಕೊಂಡು ಬಂದ. ಅವಳನ್ನು ಕೋಣೆಯೊಳಗೆ ಕೊಂಡೊಯ್ದು ಅಲ್ಲಿ ಬಿಟ್ಟು ಹೋದ.

ಅವಳು ತುಂಬ ಚೆಲುವೆ, ದಷ್ಟಪುಷ್ಟವಾಗಿದ್ದಳು, ಸ್ವಲ್ಪ ಕುಳ್ಳ. ಭಯದಿಂದ ತುಂಬಿದ ಮಗುವಿನದರಂತಿದ್ದ ಅವಳ ಮುಖ ಪೇಲವವಾಗಿತ್ತು, ಆದರೆ ಅವಳಲ್ಲಿನ ಹೆಣ್ತನ ಎದ್ದು ಕಾಣುತ್ತಿತ್ತು.

"ನಾನು ಅಪ್ಪನ ಹತ್ತಿರ ಹೋಗ್ತೀನಿ" ಎಂದಳು.

"ಭಯಪಡಬೇಡ, ನಿನಗಿರೋ ತೊಂದರೆ ಏನು" ಎಂದು ಕೇಳಿದ.

"ಮೈಯೆಲ್ಲ ನೋವು" ಎಂದಳು, ಇದ್ದಕ್ಕಿದ್ದಂತೆ ಅವಳ ಮುಖದ ಮೇಲೆ ಮುಗುಳ್ನಗೆಯ ಬೆಳ್ಳಿಗೆರೆ ಮೂಡಿತು.

"ಎಲ್ಲ ವಾಸಿಯಾಗಿಬಿಡತ್ತೆ, ಪ್ರಾರ್ಥನೆ ಮಾಡು" ಎಂದ.

"ಪ್ರಾರ್ಥನೆಯಿಂದ ಏನು ಪ್ರಯೋಜನ? ಎಷ್ಟೋ ಸಲ ಪ್ರಾರ್ಥನೆ ಮಾಡಿದ್ದೀನಿ, ಅದರಿಂದೇನೂ ಉಪಯೋಗವಿಲ್ಲ. ತಾವು ನನಗಾಗಿ ಪ್ರಾರ್ಥಿಸ್ಬೇಕು, ತನ್ನ ತಲೆ ಮೇಲೆ ತಮ್ಮ ಕೈಯಿಡಬೇಕು. ನೀವು ನನ್ನ ಕನಸಲ್ಲಿ ಬಂದಿದ್ದಿರಿ" ಎಂದಳು ಮುಗುಳ್ನಗೆಯಿಂದ ಕೂಡಿಯೇ.

"ನನ್ನ ಹೇಗೆ ನೋಡಿದೆ?"

"ನೀವು ನನ್ನ ಎದೆ ಮೇಲೆ ಈ ರೀತಿ ಕೈಯಿಟ್ಟ ಹಾಗೆ, ಇಲ್ಲೇ."

ತನ್ನ ಬಲಗೈಯ್ಯನ್ನವನು ಅವಳೆಡೆಗೆ ಚಾಚಿದ.

"ನಿನ್ನ ಹೆಸರೇನು?" ಎಂದು ಕೇಳಿದ. ತನ್ನ ಮೈಮೇಲೆ ಬಂದಂತೆ, ತನ್ನ ಬಯಕೆ ಹತೋಟಿಯನ್ನು ಮೀರಿ ಆವರಿಸಿದಂತೆ ಅವನು ನಡುಗುತ್ತಿದ್ದ.

"ಮೇರಿ. ಯಾಕೆ?"

ಅವಳು ಚಾಚಿದ ಅವನ ಕೈಯನ್ನು ಹಿಡಿದು ಮುತ್ತಿಟ್ಟಳು; ಆನಂತರ ತನ್ನ ತೋಳಿನಿಂದ ಅವನ ಸೊಂಟವನ್ನು ಬಳಸಿಕೊಂಡು ತನ್ನೆದೆಗೆ ಒತ್ತಿಕೊಂಡಳು.

"ಏನು ಮಾಡ್ತಾ ಇದ್ದೀಯಾ ಮೇರಿ, ನೀನೊಂದು ಪಿಶಾಚಿ!" ಎಂದ

"ಇರಬಹುದು. ಅದರಿಂದೇನೀಗ?" ಎಂದು ಅವನನ್ನು ಅಪ್ಪಿಕೊಂಡು ಹಾಸಿಗೆಯ ಮೇಲೆ ಕುಳಿತುಕೊಂಡಳು.

ಬೆಳಗಿನ ಜಾವ ಅವನು ಹೊರಕೋಣೆಗೆ ಹೋದ.

'ಇಷ್ಟೆಲ್ಲ ನಡೆದುಹೋಯಿತೇ? ತಂದೆ ಬಂದಾಗ ಅವಳು ಅವನಿಗೆ ಎಲ್ಲವನ್ನೂ ಹೇಳಿಬಿಡುತ್ತಾಳೆ. ಅವಳೊಬ್ಬ ಪಿಶಾಚಿ! ನಾನೇನು ಮಾಡಲಿ? ನನ್ನ ಬೆರಳನ್ನು ಕತ್ತರಿಸಿಕೊಂಡ ಕೊಡಲಿ ಇಲ್ಲೇ ಬಿದ್ದಿದೆ' ಎಂದು ಕೊಡಲಿಯನ್ನು ತೆಗೆದುಕೊಂಡು ಮನೆಯೊಳಕ್ಕೆ ನಡೆದ.

ಆ ಹೊತ್ತಿಗೆ ಸಹಾಯಕ ಬಂದ.

"ಸೌದೆ ಸೀಳಬೇಕಾ? ಕೊಡಲಿ ಇಲ್ಲಿ ಕೊಡಿ" ಎಂದ

ಸರ್ಜಿಯಸ್ ಕೊಡಲಿಯನ್ನು ಕೊಟ್ಟು ಮನೆಯೊಳಕ್ಕೆ ನಡೆದ. ಅಲ್ಲಿ ಅವಳು ನಿದ್ದೆ ಮಾಡುತ್ತಿದ್ದಳು. ಅವಳ ಕಡೆ ಗಾಬರಿಯಿಂದ ನೋಡಿದ, ಆನಂತರ ವಿಭಜಕ ಗೋಡೆಯಾಚೆಗೆ ಹೋದ. ರೈತನ ಉಡುಪುಗಳನ್ನು ಹೊರತೆಗೆದು ಹಾಕಿಕೊಂಡ. ಕತ್ತರಿಯೊಂದನ್ನು ತೆಗೆದುಕೊಂಡು ತನ್ನ ನೀಳಗೂದಲನ್ನು ಕತ್ತರಿಸಿಕೊಂಡ. ಆನಂತರ ಹೊರ ನಡೆದು ಬೆಟ್ಟ ಇಳಿದು ಕಳೆದ ಮೂರು ವರ್ಷಗಳು ತಾನು ಕಾಲಿಡದೇ ಇದ್ದ ನದಿಯೆಡೆಗೆ ಸಾಗಿದ.

ನದಿಯ ದಡದ ಗುಂಟ ಒಂದು ದಾರಿಯಿತ್ತು; ಅವನು ಅದರಲ್ಲಿ ಮಧ್ಯಾಹ್ನದವರೆಗೂ ನಡೆಯುತ್ತ ಹೋದ. ಸನಿಹವಿದ್ದ ರೈ ಹೊಲದಲ್ಲಿ ಮಲಗಿಕೊಂಡ. ಸಾಯಂಕಾಲದ ವೇಳೆಗೆ ಅವನೊಂದು ಹಳ್ಳಿಯನ್ನು ತಲುಪಿದ. ಆದರೆ ಅದರೊಳಕ್ಕೆ ಕಾಲಿಡದೆ ನದಿಯ ಮೇಲೆ ಚಾಚಿಕೊಂಡಿದ್ದ ಬಂಡೆಯತ್ತ ಬಂದು ಮತ್ತೆ ಅದರ ಮೇಲೆ ಮಲಗಿಕೊಂಡ.

ಬೆಳಗಿನ ಜಾವ, ನೇಸರು ಮೂಡಲು ಇನ್ನು ಅರ್ಧ ಗಂಟೆಯಿತ್ತು. ಎಲ್ಲೆಡೆ ತೇವ, ತಂಪು ಮತ್ತು ಎಲ್ಲೆಡೆ ಮಸುಕು ಮಸುಕು. ಪಡುವಲ ದಿಕ್ಕಿಂದ ನಸುಕಿನ ಕುಳಿರ್ಗಾಳಿ ಬೀಸುತ್ತಿತ್ತು. "ಹೌದು, ಇದಕ್ಕೆಲ್ಲ ಒಂದು ಮಂಗಳವನ್ನು ಹಾಡಬೇಕು. ಆದರೆ ಹೇಗೆ? ನದಿಗೆ ಹಾರಿಕೊಂಡೇ? ಆದರೆ ನಂಗೆ ಈಜು ಬರುತ್ತದೆ, ಮುಳುಗಲಾರೆ. ನೇಣು ಹಾಕಿಕೊಳ್ಳಲೇ? ಹೌದು, ಈ ನಡುಪಟ್ಟಿಯನ್ನು ಮರದ ಕೊಂಬೆಗೆಸೆದು ಹಾಗೆ ಮಾಡಬಹುದು." ಇದು ಸರಳವೂ ಸುಲಭವೂ ಆದ ಮಾರ್ಗವೆಂದೆನಿಸಿ ಭಯವಾಯಿತು. ಹತಾಶೆಯ ಸಂದರ್ಭಗಳಲ್ಲಿ ಸಾಮಾನ್ಯವಾದಂತೆ ಪ್ರಾರ್ಥನೆ ಮಾಡಬೇಕೆನ್ನಿಸಿತು. ಆದರೆ

ಯಾರನ್ನು ಕುರಿತು ಪ್ರಾರ್ಥಿಸುವುದು? ಯಾರೂ ಇಲ್ಲವಲ್ಲ! ದೇವರೇ ಇಲ್ಲ! ತೋಳ ಮೇಲೆ ತಲೆಯಿಟ್ಟುಕೊಂಡು ಮಗ್ನುಲಾದ; ತಟಕ್ಕನೆ ನಿದ್ದೆ ಹೇಗೆ ಗಾಢವಾಗಿ ಆವರಿಸಿಕೊಂಡು ಬಂತೆಂದರೆ ತೋಳ ಮೇಲೆ ತಲೆಯಿಟ್ಟುಕೊಳ್ಳಲಾರದೆ ಅದನ್ನು ನೀಡಿಕೊಂಡು ನಿದ್ದೆ ಹೋದ. ತಕ್ಷಣವೇ ಎಚ್ಚರಾಯಿತು; ಕನಸು ಕಾಣಲಲ್ಲ, ನೆನಪಿಸಿಕೊಳ್ಳಲು ತೊಡಗಿದ.

ಹಳ್ಳಿಯ ತಾಯಿಯ ಮನೆಯಲ್ಲಿ ತಾನು. ಒಂದು ಗಾಡಿ ಬರುತ್ತದೆ, ನೀಳವಾದ ಸನಿಕೆಯಾಕಾರದ ಗಡ್ಡ ಬಿಟ್ಟುಕೊಂಡ ನಿಕೋಲಸ್ ಸರ್ಜೀವಿಚ್ ಮಾಮ ಗಾಡಿಯಿಂದ ಕೆಳಗಿಳಿಯುತ್ತಾರೆ. ಜೊತೆ ಪಾಶೆಂಕಾ. ಅವಳೊಬ್ಬ ಪುಟ್ಟ ಹುಡುಗಿ, ಕಮಲದಳದಂತೆ ನೀಳವಾದ ಕೋಮಲ ಕಣ್ಣುಗಳು ಅವಳವು, ಆದರೆ ಅವಳ ಮುಖ ಭಯದಿಂದ ಕೂಡಿ ಬಣ್ಣಗೆಟ್ಟಿದೆ. ಗಂಡು ಹುಡುಗರ ಜೊತೆಯಲ್ಲಿ ಪಾಶೆಂಕಾ ಆಟಕ್ಕೆ ಸೇರುತ್ತಾಳೆ, ಆದರೆ ಅವಳ ಮುಖ ಮಂಕಾಗುತ್ತದೆ. ಪೆದ್ದುಪೆದ್ದಾಗಿದ್ದ ಅವಳನ್ನು ನೋಡಿ ಉಳಿದವರೆಲ್ಲ ಹಾಸ್ಯ ಮಾಡುತ್ತಾರೆ, ಹೇಗೆ ಈಜುತ್ತೀ ಎಂದು ತೋರಿಸಲು ಬಲವಂತ ಮಾಡುತ್ತಾರೆ. ನೆಲದ ಮೇಲೆ ಮಲಗಿ ಈಜುವುದನ್ನು ತೋರಿಸುತ್ತಾಳೆ; ಅದನ್ನು ಕಂಡು ಹುಡುಗರೆಲ್ಲ ನಕ್ಕು ಅವಳನ್ನು ಪೆಚ್ಚು ಮಾಡುತ್ತಾರೆ. ಇದರಿಂದ ಅವಳ ಕೆನ್ನೆ ಕೆಂಪಾಗಿ ಮತ್ತಷ್ಟು ಪೆಚ್ಚಾದಂತೆ ಕಾಣುತ್ತಾಳೆ. ಅವಳ ಕರುಣಾಜನಕ ರೂಪನ್ನು, ಮಿದು ಶರಣಾಗತಿಯ ಮುಗುಳ್ನಗೆಯನ್ನು ಕಂಡು ಅವನಿಗೆ ಅವಮಾನವಾಗುತ್ತದೆ. ಆನಂತರ ತಾನವಳನ್ನು ಎಲ್ಲಿ ನೋಡಿದೆ ಎಂದು ಸರ್ಜಿಯಸ್ ನೆನಪಿಸಿಕೊಳ್ಳುತ್ತಾನೆ. ಬಹಳ ದಿನಗಳ ಬಳಿಕ, ಆದರೆ ತಾನು ಸನ್ಯಾಸ ಸ್ವೀಕರಿಸುವ ಮುಂಚೆ, ಅವಳು ಜಮೀನ್ದಾರನೊಬ್ಬನನ್ನು ಮದುವೆಯಾಗುತ್ತಾಳೆ; ಆದರೆ ಅವಳ ಗಂಡ ತನ್ನ ಆಸ್ತಿಯನ್ನೆಲ್ಲ ಪೋಲು ಮಾಡಿ ಅವಳನ್ನು ಹೊಡೆಯುತ್ತಿರುತ್ತಾನೆ. ಅವಳಿಗೆ ಇಬ್ಬರು ಮಕ್ಕಳು: ಒಂದು ಗಂಡು, ಒಂದು ಹೆಣ್ಣು. ಆದರೆ ಗಂಡು ಮಗು ಎಳವೆಯಲ್ಲಿಯೇ ತೀರಿಕೊಳ್ಳುತ್ತದೆ. ಆಗ ಅವಳ ನತದೃಷ್ಟ ರೂಪವನ್ನು ಕಂಡದ್ದನ್ನು ನೆನಪಿಸಿಕೊಳ್ಳುತ್ತಾನೆ. ಆಮೇಲೆ ಅವಳನ್ನು ಕಂಡದ್ದು ತನ್ನ ಆಶ್ರಮದಲ್ಲಿ; ಆಗವಳು ವಿಧವೆ. ಆದರೆ ಅವಳು ಹಿಂದಿನಂತೆಯೇ ಇದ್ದಳು, ಮೂರ್ಖಳಂತಲ್ಲದಿದ್ದರೂ ನಿರ್ವಿಣ್ಣಳಾಗಿ, ಯಾರೂ ಗಮನಿಸದಂತೆ ಕರುಣಾಜನಕ ಮುಖ ಹೊತ್ತು. ತನ್ನ ಮಗಳು ಮತ್ತವಳು ಮದುವೆಯಾಗಲಿರುವ ಹುಡುಗನೊಡನೆ ಅವಳು ಬಂದಿದ್ದಳು. ಅವರಾಗ ಬಡತನದಲ್ಲಿದ್ದರು, ಮುಂದೆಯೂ ಅವಳು ಸಣ್ಣ ಪಟ್ಟಣವೊಂದರಲ್ಲಿ ಬಡವಳಾಗಿಯೇ ಇದ್ದಳೆಂಬ ವಿಚಾರವನ್ನವನು ಕೇಳಿದ್ದ.

'ನನಗೇಕೆ ಅವಳ ನೆನಪು ಬರುತ್ತಿದೆ?' ಎಂದು ಕೇಳಿಕೊಂಡ, ಆದರೆ ನೆನಪು ಮಾತ್ರ ಕೊನೆಯಾಗಲಿಲ್ಲ. 'ಈಗೆಲ್ಲಿದ್ದಾಳೆ ಅವಳು? ಹಿಂದಿನಂತೆಯೇ, ಅಂದರೆ ನೆಲದ ಮೇಲೆ ಮಲಗಿ ಈಜುವುದನ್ನು ತೋರಿಸಿದ್ದಳಲ್ಲ ಆಗಿನಂತೆಯೇ ಅವಳಿನ್ನೂ ಅಸುಖಿಯೇ? ಆದರೆ ಅವಳ ಬಗ್ಗೆ ನಾನ್ಯಾಕೆ ಯೋಚಿಸಬೇಕು? ಏನು ಮಾಡ್ತಾ ಇದ್ದೀನಿ ನಾನು? ಇದಕ್ಕೆ ಕೊನೆ ಹಾಡ್ಬೇಕು' ಅಂದುಕೊಂಡ.

ಅವನನ್ನು ಮತ್ತೆ ಭಯ ಆವರಿಸಿತು; ಅದನ್ನು ಹೋಗಲಾಡಿಸಿಕೊಳ್ಳಲೆಂದು ಅವನು ಮತ್ತೆ ಪಾಶೆಂಕಾ ಬಗ್ಗೆಯೇ ಯೋಚನೆಯನ್ನು ಮುಂದುವರಿಸಿದ.

ಹೀಗೆಯೇ ತುಂಬ ಹೊತ್ತು ಬಿದ್ದುಕೊಂಡಿದ್ದ. ಈಗವನ ಯೋಚನೆ ಒಮ್ಮೆ ತನ್ನ ಅನಿವಾರ್ಯ ಕೊನೆಯ ಬಗ್ಗೆ, ಮತ್ತೊಮ್ಮೆ ಪಾಶೆಂಕಾ ಬಗ್ಗೆ. ಅವನಿಗವಳು ಪರಿಹಾರದ ಸಾಧನವಾಗಿ ಕಾಣಿಸಿಕೊಂಡಳು. ಕೊನೆಗೂ ಅವನಿಗೆ ನಿದ್ದೆ ಹತ್ತಿತು. ಕನಸಿನಲ್ಲಿ ಅಪ್ಸರೆಯೊಬ್ಬಳು ಕಾಣಿಸಿಕೊಂಡು ತನ್ನೆಡೆಗೆ ಬಂದು ಹೀಗೆಂದಳು: "ಪಾಶೆಂಕಾ ಹತ್ತಿರ ಹೋಗು, ನೀನೀಗ ಏನು ಮಾಡಬೇಕು, ನಿನ್ನ ಪಾಪಕಾರ್ಯ ಯಾವುದು, ಅದಕ್ಕೆಲ್ಲ ಪರಿಹಾರ ಎಲ್ಲಿದೆ ಅನ್ನೋದನ್ನ ಅವಳ ಹತ್ತಿರ ಕಲಿತುಕೋ."

ಅವನಿಗೆ ಎಚ್ಚರವಾಯಿತು. ತಾನು ಕಂಡದ್ದು ದೇವರು ದಯಪಾಲಿಸಿದ ದರ್ಶನ ಅನ್ನಿಸಿ ಅದರಲ್ಲಿ ಬಂದ ಸೂಚನೆಯಂತೆ ನಡೆದುಕೊಳ್ಳಲು ಅವನು ನಿರ್ಧರಿಸಿದ. ಅವಳು ಇದ್ದ ಊರು ಯಾವುದೆಂಬುದು ಅವನಿಗೆ ತಿಳಿದಿತ್ತು. ತಾನಿದ್ದ ಕಡೆಯಿಂದ ಸುಮಾರು ಇನ್ನೂರು ಮೈಲಿ ದೂರ. ಅಲ್ಲಿಗೆ ನಡೆದು ಹೋಗಲು ನಿರ್ಧರಿಸಿದ.

## 6

ಪಾಶೆಂಕಾ, ಈಗ ಪಾಶೆಂಕಾ ಆಗಿ ಉಳಿದಿಲ್ಲ; ಬಹು ಹಿಂದೆಯೇ ಅವಳು ಪ್ರಸ್ಕೋವ್ಯಾ ಮಿಖಲ್ಯೊವ್ನಾ ಆಗಿ ಬದಲಾಗಿದ್ದಳು; ಈಗವಳು ಮುದುಕಿಯಾಗಿ ಮುಖವೆಲ್ಲ ಸುಕ್ಕುಗಟ್ಟಿತ್ತು; ಅವಳೀಗ ಕುಡುಕ ನೌಕರ ಮಾವ್ರಿಖ್ಯೆವ್‌ನ ಅತ್ತೆ. ಅವನು ತನ್ನ ಕೆಲಸವನ್ನು ಕಳೆದುಕೊಂಡ ಊರಿನಲ್ಲೇ ಅವಳೀಗ ವಾಸವಾಗಿದ್ದಳು; ತನ್ನ ದುಡಿಮೆಯಿಂದಲೇ ಸಂಸಾರವನ್ನು ನಿಭಾಯಿಸುತ್ತಿದ್ದಳು. ಅವಳ ಜಗತ್ತು ಎಂದರೆ ಈಗ ಮಗಳು, ನರದೌರ್ಬಲ್ಯದಿಂದ ನರಳುವ ಅಳಿಯ ಮತ್ತು ಐದು ಮಂದಿ ಮೊಮ್ಮಕ್ಕಳು. ವ್ಯಾಪಾರಸ್ಥರ ಮಕ್ಕಳಿಗೆ ಸಂಗೀತ ಪಾಠ ಹೇಳಿಕೊಟ್ಟು ಅವಳು ಸಂಸಾರದ ಹೊರೆ ಹೊರುವ ದಂದುಗದಲ್ಲಿದ್ದಳು, ಪ್ರತಿದಿನ ಒಂದು ಗಂಟೆಯ ಅವಧಿಯ ನಾಲ್ಕು ಪಾಠಗಳು, ಕೆಲವೊಮ್ಮೆ ಐದು. ಇದಕ್ಕಾಗಿ ಅವಳಿಗೆ ಬರುತ್ತಿದ್ದುದು ತಿಂಗಳಿಗೆ ಅರುವತ್ತು ರೂಬಲ್‌ಗಳು. ಇಷ್ಟರಲ್ಲಿಯೇ ಹೇಗೋ ಸದ್ಯದ ಜೀವನ ಸಾಗುತ್ತಿತ್ತು. ಮುಂದೆಂದಾದರೂ ಒಂದು ದಿನ ಮತ್ತೊಂದು ನೌಕರಿ ಸಿಕ್ಕೀತೇ ಎಂಬ ಹಂಬಲ. ತನ್ನ ಅಳಿಯನಿಗೊಂದು ಕೆಲಸ ಹುಡುಕಿಕೊಡಿ ಎಂದವಳು ತನ್ನ ನೆಂಟರಿಗೂ ಪರಿಚಯಸ್ಥರಿಗೂ ಕಾಗದಗಳನ್ನು ಬರೆದಿದ್ದಳು, ಹಾಗೆ ಕಾಗದ ಹಾಕಿದ್ದವರಲ್ಲೊಬ್ಬನೆಂದರೆ ಸರ್ಜಿಯಸ್ ಕೂಡ; ಆದರೆ ಆ ಪತ್ರ ಅವನನ್ನು ತಲುಪಿರಲೇ ಇಲ್ಲ.

ಅವತ್ತು ಶನಿವಾರ; ಪ್ರಸ್ಕೋವ್ಯಾ ಮಿಖಲ್ಯೊವ್ನಾ ಒಣದ್ರಾಕ್ಷಿ ಹಾಕಿದ ಬ್ರೆಡ್ ಮಾಡಲು ಕಣಕವನ್ನು ನಾದುತ್ತಿದ್ದಳು; ಇಂಥ ಬ್ರೆಡ್ ಅನ್ನು ತನ್ನ ತಂದೆಯ ಮನೆಯಲ್ಲಿ ಕೆಲಸಕ್ಕಿದ್ದ ಅಡುಗೆಯವನು ತುಂಬ ಚೆನ್ನಾಗಿ ಮಾಡುತ್ತಿದ್ದ. ಮಾರನೆಯ ದಿನ ಭಾನುವಾರ

ತನ್ನ ಮೊಮ್ಮಕ್ಕಳಿಗೆ ಸಿಹಿಯೂಟ ಮಾಡಿ ಹಾಕಬೇಕೆಂಬುದು ಅವಳಿ ಇಚ್ಛೆಯಾಗಿತ್ತು.

ಅವಳ ಮಗಳು ಮಾಶಾ ತನ್ನ ಕಿರಿಯ ಮಗುವನ್ನು ಎತ್ತಿಕೊಂಡಿದ್ದಳು. ಹಿರಿಯ ಮಗ ಮತ್ತು ಮಗಳು ಶಾಲೆಗೆ ಹೋಗಿದ್ದರು, ಇಡೀ ರಾತ್ರಿ ನಿದ್ದೆಗೆಟ್ಟಿದ್ದ ಅಳಿಯ ನಿದ್ದೆ ಹೊಡೆಯುತ್ತಿದ್ದ. ತನ್ನ ಗಂಡನ ಮೇಲೆ ಹರಿಹಾಯುತ್ತಿದ್ದ ಮಗಳನ್ನು ಸಮಾಧಾನ ಮಾಡುತ್ತ ಪ್ರಸ್ಕೋವ್ಯಾ ಮಿಖಲ್ಯೊವ್ನಾ ಕೂಡ ರಾತ್ರಿ ಬಹು ಹೊತ್ತು ಎಚ್ಚರವಾಗಿಯೇ ಇದ್ದಳು.

ದುರ್ಬಲನಾಗಿದ್ದ ತನ್ನ ಅಳಿಯ ಈಗಿರುವ ಸ್ಥಿತಿಗಿಂತ ಉತ್ತಮವಾಗುವ ಸಾಧ್ಯತೆಯೇ ಉಳಿದಿರಲಿಲ್ಲ; ತನ್ನ ಹೆಂಡತಿಯ ಬೈಗುಳು ಯಾವ ಪ್ರಯೋಜನಕ್ಕೂ ಬಾರದೆಂಬುದು ಅವನಿಗೆ ತುಂಬ ಚೆನ್ನಾಗಿ ತಿಳಿದಿತ್ತು; ಹೀಗಾಗಿಯೇ ಪ್ರಸ್ಕೋವ್ಯಾ ಮಿಖಲ್ಯೊವ್ನಾ ಮಗಳನ್ನು ಸಮಾಧಾನ ಮಾಡುತ್ತ ಜರೆಯುವಿಕೆಯ ತೀವ್ರತೆಯನ್ನು ಕಡಿಮೆ ಮಾಡಲು ಪ್ರಯತ್ನಿಸುತ್ತಿದ್ದುದು. ಜನಗಳ ನಡುವಣ ಕ್ರೂರ ಸಂಬಂಧಗಳು ಅವಳಿಗೆ ತೀವ್ರ ಯಾತನೆಯನ್ನುಂಟುಮಾಡುತ್ತಿತ್ತು. ಮಗಳ ನಿಷ್ಠುರ ನುಡಿಗಳು ಪರಿಸ್ಥಿತಿಯನ್ನು ಉತ್ತಮಪಡಿಸಲು ಸಾಧ್ಯವೇ ಇಲ್ಲದ್ದು ಮಾತ್ರವಲ್ಲ ಅದನ್ನು ಇನ್ನಷ್ಟು ಹದಗೆಡಿಸುತ್ತಿತ್ತು. ಈ ಬಗ್ಗೆ ಎಲ್ಲ ಅವಳು ವಾಸ್ತವವಾಗಿ ಯೋಚಿಸುತ್ತಲೇ ಇರಲಿಲ್ಲ: ಕೋಪೋದ್ರಿಕ್ತ ಸನ್ನಿವೇಶವನ್ನು ಕಂಡರೆ ಅವಳಿಗೆ ಯಾತನೆಯಾಗುತ್ತಿತ್ತು, ಕಿಮಟು ವಾಸನೆ ಮೂಗಿಗೆ ಬಡಿದಾಗಲೋ, ಕರ್ಕಶ ಧ್ವನಿ ಕಿವಿಗೆ ಬಿದ್ದಾಗಲೋ, ತನ್ನ ಮೈಮೇಲೇ ಏಟುಗಳು ಬಿದ್ದಾಗಲೋ ಉಂಟಾಗುವಂತೆ.

ಒಂದು ಬಗೆಯ ಆತ್ಮತೃಪ್ತಿಯ ಭಾವನೆಯಿಂದಲೇ ಅವಳು ಮಗಳು ಲುಕೇರ್ಯಾಳಿಗೆ ಕಣಕವನ್ನು ಮಿದಿಯಬೇಕಾದ ರೀತಿಯನ್ನು ಹೇಳಿಕೊಡುತ್ತಿದ್ದಳು; ಆಗ ತನ್ನ ಆರು ವರ್ಷದ ಮೊಮ್ಮಗಳು ಮಿಶಾ ಏಪ್ರಿನ್ ಧರಿಸಿ ತೇಪೆ ಹಾಕಿದ ಸ್ಟಾಕಿಂಗ್ ತೊಟ್ಟು ಭಯಗ್ರಸ್ತ ಕಣ್ಣುಗಳಿಂದಲೇ ಅಡುಗೆ ಮನೆಯಲೊಳಕ್ಕೆ ಓಡಿಬಂದಳು.

"ಅಜ್ಜಿ ... ಒಬ್ಬ ಭಯಹುಟ್ಟಿಸೋ ಅಂಥ ಮುದುಕ ನಿನ್ನ ನೋಡ್ಬೇಕೂಂತ ಬಂದಿದಾನೆ."

ಲುಕೇರ್ಯಾ ಬಾಗಿಲ ಹೊರಗೆ ಇಣುಕಿಹಾಕಿ ನೋಡಿದಳು.

"ಯಾರೋ ಒಬ್ಬ ಯಾತ್ರಾರ್ಥಿ ಹಾಗೆ ಕಾಣಿಸೋ ಮನುಷ್ಯ" ಅಂದಳು.

ಪ್ರಸ್ಕೋವ್ಯಾ ಮಿಖಲ್ಯೊವ್ನಾ ತನ್ನ ಕೃಶವಾದ ಮೊಣಕೈಗಳನ್ನು ಒಂದರೊಡನೊಂದನ್ನು ಉಜ್ಜಿಕೊಂಡು, ಅಂಗೈಗಳನ್ನು ಏಪ್ರಿನ್‌ಗೆ ಒರೆಸಿಕೊಳ್ಳುತ್ತ ಮಹಡಿ ಮೇಲಕ್ಕೆ ಹೋಗಿ, ತನ್ನ ಪರ್ಸ್‌ನಿಂದ ಐದು ಕೊಪೆಕ್ ನಾಣ್ಯವೊಂದನ್ನು ತೆಗೆದುಕೊಳ್ಳಲು ತಡಕಾಡಿದಳು. ಆದರೆ ಅದರಲ್ಲಿ ಹತ್ತು ಕೊಪೆಕ್ ನಾಣ್ಯವೊಂದನ್ನು ಬಿಟ್ಟು ಬೇರೇನೂ ಇರಲಿಲ್ಲ. ಹೀಗಾಗಿ ಅವಳು ಬಂದವನಿಗೆ ಒಂದಷ್ಟು ಬ್ರೆಡ್ಡನ್ನೇ ಕೊಡಲು ನಿರ್ಧರಿಸಿದಳು. ಗೂಡಿನ ಕಡೆ ಹೆಜ್ಜೆ ಹಾಕತೊಡಗಿದವಳಿಗೆ ಹತ್ತು ಕೊಪೆಕ್

ನಾಣ್ಯ ಕೊಡಲಾರದ ತನ್ನ ವರ್ತನೆಯಿಂದ ನಾಚಿಕೆಯೆನಿಸಿತು. ಆನಂತರ ಒಂದು ತುಣುಕು ಬ್ರೆಡ್ ತರಲು ಹೇಳಿ, ನಾಣ್ಯವನ್ನು ತರಲು ಮತ್ತೆ ಮಹಡಿಯ ಮೇಲಕ್ಕೆ ಹೋದಳು. "ಇದು ನಿನಗೆ ತಕ್ಕ ಶಿಕ್ಷೆ; ನೀನೀಗ ಎರಡರಷ್ಟು ಕೊಡ್ಬೇಕು" ಎಂದುಕೊಂಡಳು.

ಬಂದ ಯಾತ್ರಾರ್ಥಿಯಲ್ಲಿಗೆ ಹೋಗಿ ಬ್ರೆಡ್ ತುಣುಕು ಹಾಗೂ ನಾಣ್ಯ- ಎರಡನ್ನೂ ನೀಡಿದಳು. ಹಾಗೆ ಮಾಡುವಾಗ, ತನ್ನ ಔದಾರ್ಯದ ಬಗ್ಗೆ ಅವಳಿಗೆ ಹೆಮ್ಮೆಯ ಭಾವನೆ ಉಂಟಾಗದೆ, ತಾನು ಇಷ್ಟು ಕಡಿಮೆ ನೀಡುತ್ತಿರುವುದಕ್ಕೆ ನಾಚಿಕೆಯೆನಿಸಿತು. ಯಾಕೆಂದರೆ ತನ್ನ ಮುಂದೆ ನಿಂತಿದ್ದ ಯಾತ್ರಾರ್ಥಿಯ ಮುಖ ಅಷ್ಟು ತೇಜಸ್ವಿಯಾಗಿತ್ತು.

ಭಿಕ್ಷುಕನಾಗಿ ಈಗಾಗಲೇ ಇನ್ನೂರು ಮೈಲು ದೂರವನ್ನು ಕಾಲ್ನಡಿಗೆಯಲ್ಲಿ ಸಾಗಿ ಬಂದಿದ್ದ ಅವನ ದೇಹ ಬಳಲಿ ಕೃಶವಾಗಿದ್ದರೂ, ಮೈಯೆಲ್ಲ ಗಾಳಿಬಿಸಿಲುಗಳಿಂದ ಒರಟಾಗಿದ್ದರೂ, ತನ್ನ ನೀಳ ಕೂದಲನ್ನು ಕತ್ತರಿಸಿಕೊಂಡು ರೈತಾಪಿಗಳ ಟೋಪಿ ಹಾಗೂ ಬೂಟುಗಳನ್ನು ಧರಿಸಿಕೊಂಡು ವಿನಯದಿಂದ ಬಾಗುತ್ತಿದ್ದರೂ, ಅವನ ಮುಖದ ವರ್ಚಸ್ಸು ನೋಡಿದವರ ಮೇಲೆ ಗಾಢ ಪರಿಣಾಮ ಬೀರುತ್ತಿತ್ತು. ಆದರೆ ಪ್ರಸ್ಕೋವ್ಯಾ ಮಿಖಿಲ್ಯೊವ್ನಾ ಅವನನ್ನು ಗುರುತಿಸಲಿಲ್ಲ. ಅವಳಿಗೆ ಸಾಧ್ಯವೂ ಇರಲಿಲ್ಲ; ಯಾಕೆಂದರೆ ಅವಳು ಅವನನ್ನು ನೋಡಿದ್ದುದು ಸುಮಾರು ಇಪ್ಪತ್ತು ವರ್ಷಗಳಷ್ಟು ಹಿಂದೆ.

"ನನ್ನ ಬಗ್ಗೆ ತಪ್ಪು ತಿಳೀಬೇಡಿ, ತಂದೆ, ನಿಮಗೆ ತಿನ್ನಕ್ಕೆ ಏನಾದ್ರೂ ಬೇಕೂಂತ ಕಾಣತ್ತೆ" ಅಂದಳು.

ಅವನು ಬ್ರೆಡ್ ಮತ್ತು ಹಣವನ್ನೇನೋ ಈಸಿಕೊಂಡ; ಆದರೆ ಅವನು ಹೋಗದೆ, ತನ್ನತ್ತಲೇ ನೋಡುತ್ತ ಇನ್ನೂ ಅಲ್ಲೇ ನಿಂತದ್ದು ಕಂಡು ಪ್ರಸ್ಕೋವ್ಯಾ ಮಿಖಿಲ್ಯೊವ್ನಾಳಿಗೆ ಅಚ್ಚರಿಯೆನಿಸಿತು.

"ಪಾಶೆಂಕಾ, ನಾನು ಬಂದಿದ್ದೀನಿ, ಮನೆ ಒಳಕ್ಕೆ ಕರೆಯೊಲ್ಲವಾ?"

ಇನ್ನೇನು ಹೊಮ್ಮಲೆಂದು ಕಾಣಿಸಿಕೊಂಡ ಕಣ್ಣೀರಿನ ಹನಿಯಿಂದ ಹೊಳೆಯುತ್ತಿದ್ದ ಅವನ ಕಪ್ಪು ಕಣ್ಣುಗಳು ಅವಳ ಮೇಲೇಯೇ ಬೇಡುವ ಭಾವದಲ್ಲಿ ನಟ್ಟಿದ್ದುವು; ಬೂದಾಗುತ್ತಿದ್ದ ಮೀಸೆಯ ಹಿಂಬದಿಯ ತುಟಿಗಳು ಕರುಣಾರ್ದ್ರವಾಗಿ ಕಂಪಿಸುತ್ತಿದ್ದವು.

ಪ್ರಸ್ಕೋವ್ಯಾ ಮಿಖಿಲ್ಯೊವ್ನಾ ತನ್ನ ಸಣಕಲು ಕೈಗಳನ್ನು ಎದೆಯ ಮೇಲೆ ತಂದುಕೊಂಡು, ಬಾಯಿ ತೆರೆದು, ಮರವಟ್ಟವಳಂತೆ, ಯಾತ್ರಾರ್ಥಿಯ ಕಡೆ ಬಿಟ್ಟ ಕಣ್ಣಿನಿಂದ ನೋಡುತ್ತ ನಿಂತುಬಿಟ್ಟಳು.

"ಅಯ್ಯೋ ದೇವರೇ! ಸ್ಟೆಪಾ! ಸರ್ಜಿಯಸ್! ಫಾದರ್ ಸರ್ಜಿಯಸ್!"

"ಹೌದು, ನಾನೇ" ಎಂದ ಸರ್ಜಿಯಸ್ ಮೆಲುದನಿಯಲ್ಲಿ. "ನಾನೀಗ ಬರೀ ಸರ್ಜಿಯಸ್, ಫಾದರ್ ಸರ್ಜಿಯಸ್ ಅಲ್ಲ, ಮಹಾ ಪಾಪಿ, ಸ್ಟೇಪನ್ ಕಸಾಟ್‌ಸ್ಕಿ, ಮಹಾ ಪಾಪಿ, ಪತಿತಗೊಂಡವನು. ನನ್ನನ್ನ ಒಳಕ್ಕೆ ಕರೆದು ಸಹಾಯ ಮಾಡು!"

"ಅಧ್ವೇಗಾಯ್ತು! ನಿನ್ನನ್ನ ನೀನು ಹೇಗೆ ಈ ಸ್ಥಿತಿಗೆ ತಂದುಕೊಂಡೆ? ಮೊದಲು ಒಳಕ್ಕೆ ಬಾ."

ತನ್ನ ಕೈಯನ್ನು ನೀಡಿದಳು. ಅವನು ಅದನ್ನು ಹಿಡಿದುಕೊಳ್ಳದೆ ಅವಳನ್ನು ಸುಮ್ಮನೆ ಹಿಂಬಾಲಿಸಿದ.

ಆದರೆ ಸಮಸ್ಯೆ ಅಂದರೆ, ಅವನನ್ನು ಎಲ್ಲಿ ಕೂರಿಸುವುದು? ಮನೆಯೋ ತೀರ ಕಿಷ್ಕಿಂಧವಾದುದು. ಮೊದಲು, ಅವಳಿಗಾಗಿಯೇ ಒಂದು ಪುಟ್ಟ ಕೋಣೆಯಿತ್ತು, ಗೂಡು ಅಂತ ಹೇಳಬೇಕು, ಅಂಥದು. ಆದರೆ ಆಮೇಲೆ ಅದನ್ನವಳು ತನ್ನ ಮಗಳಿಗಾಗಿ ಬಿಟ್ಟುಕೊಟ್ಟಿದ್ದಳು. ಈಗಲ್ಲಿ ಮಾಶಾ ಕೂತು ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಮೆಲುವಾಗಿ ತೂಗುತ್ತಿದ್ದಳು.

"ಸದ್ಯಕ್ಕೆ ಈಗ ಇಲ್ಲಿ ಕೂತುಕೋ" ಎಂದು ಅಡುಗೆಯ ಮನೆಯಲ್ಲಿದ್ದ ಬೆಂಚೊಂದರ ಕಡೆಗೆ ತೋರಿಸುತ್ತ ಹೇಳಿದಳು.

ಅವನು ತಕ್ಷಣವೇ ಕೂತುಕೊಂಡು ನಿಧಾನವಾಗಿ ತನ್ನ ಚೀಲದ ಪಟ್ಟಿಯನ್ನು ಮೊದಲು ಒಂದು ತೋಳಿನಿಂದ, ಆನಂತರ ಇನ್ನೊಂದನ್ನು ಜಾರಿಸಿದ.

"ದೇವರೇ, ಇದೆಂಥ ಸ್ಥಿತಿ ಬಂತು ನಿಂಗೆ, ಫಾದರ್! ನಿನ್ನ ಕೀರ್ತಿ ಎಂಥದು, ಈಗ ನೋಡಿದರೆ ಹೀಗೆ ..."

ಸರ್ಜಿಯಸ್ ಈ ಮಾತಿಗೆ ಉತ್ತರಿಸಲಿಲ್ಲ, ಆದರೆ ಮೆಲುವಾಗಿ ಮುಗುಳ್ನಕ್ಕು, ತನ್ನ ಕೈಚೀಲವನ್ನು ತಾನು ಕುಳಿತಿದ್ದ ಬೆಂಚಿನಡಿಯಲ್ಲಿರಿಸಿದ.

"ಮಾಶಾ, ಇವರು ಯಾರೂಂತ ಗೊತ್ತಾ ನಿಂಗೆ" ಎಂದು ಪ್ರಸ್ಕೋವ್ಯಾ ಮಿಖಲ್ಯೊವ್ನಾ ತನ್ನ ಮಗಳನ್ನು ಪಿಸುಮಾತಲ್ಲಿ ಕೇಳಿದಳು. ಆನಂತರ ತಾನೇ ಅವನು ಯಾರು ಎಂದು ವಿವರಿಸಿದಳು. ಇಬ್ಬರೂ ಸೇರಿ ತೊಟ್ಟಿಲನ್ನು ಕೋಣೆಯಿಂದ ಹೊರಕ್ಕೆ ತಂದು ಸರ್ಜಿಯಸ್‌ಗೆ ಎಡೆಮಾಡಿಕೊಟ್ಟರು.

ಆಮೇಲೆ ಪ್ರಸ್ಕೋವ್ಯಾ ಮಿಖಲ್ಯೊವ್ನಾ ಅವನನ್ನು ಕೋಣೆಗೆ ಕರೆದೊಯ್ದಳು.

"ಇಲ್ಲಿ ನೀನು ಸುಧಾರಿಸಿಕೋ, ಸಂಕೋಚಪಟ್ಟುಕೋಬೇಡ ... ಆದ್ರೆ ನಂಗೆ ಕೆಲಸ ಇದೆ, ಸಂಗೀತ ಪಾಠಕ್ಕೆ ಹೋಗ್ಬೇಕು."

"ಎಲ್ಲಿಗೆ?"

"ಒಂದು ಕಡೆ ಈಗ ಪಾಠ ಹೇಳಿಕೊಡಕ್ಕೆ ಹೋಗಬೇಕು. ನಿನ್ನ ಹತ್ರ ಹೇಳಕ್ಕೆ ನಾಚಿಕೆಯಾಗತ್ತೆ, ಸಂಗೀತ ಪಾಠ ಮಾಡ್ತೀನಿ ನಾನು!"

"ಸಂಗೀತವಾ? ಬಹಳ ಒಳ್ಳೇದಾಯ್ತು. ಆದ್ರೆ ಒಂದು ವಿಷಯ ಪ್ರಸ್ಕೋವ್ಯಾ ಮಿಖಲ್ಯೊವ್ನಾ. ನಾನು ನಿನ್ನ ಹತ್ರ ಬಂದಿರೋದು ಒಂದು ಉದ್ದೇಶ ಇಟ್ಟುಕೊಂಡು. ನನ್ನ ಜೊತೆ ಮಾತಾಡಕ್ಕೆ ನಿಂಗೆ ಯಾವಾಗ ಬಿಡುವಾಗಬಹುದು?"

"ತುಂಬ ಸಂತೋಷ. ಇವತ್ತು ಸಾಯಂಕಾಲ ಆಗ್ಬಹುದಾ?"

"ಸರಿ. ಇನ್ನೂ ಒಂದು ವಿಷಯ: ನನ್ನ ಬಗ್ಗೆಯಾಗಲೀ, ನಾನು ಯಾರೂ ಅಂತಲಾಗಲೀ ಯಾರಿಗೂ ಹೇಳಬಾರದು. ನಾನು ನಿನ್ನ ಹತ್ರ ಮಾತ್ರ ಯಾರೂಂತ ತೋರಿಸಿಕೊಂಡಿದ್ದೀನಿ. ನಾನೆಲ್ಲಿ ಹೋಗಿದ್ದೀನಿ ಅಂತ ಯಾರಿಗೂ ಗೊತ್ತಿಲ್ಲ. ಅದು ಹಾಗೆಯೇ ಉಳೀಬೇಕು."

"ಓ, ಆದ್ರೆ ನನ್ನ ಮಗಳಿಗೆ ಹೇಳಿಬಿಟ್ಟಿದ್ದೀನಲ್ಲ."

"ಅವಳಿಗೂ ಹೇಳು, ಯಾರ ಹತ್ರವೂ ಬಾಯಿಬಿಡ್ಬೇಡ ಅಂತ."

ಹೀಗೆ ಹೇಳಿ ಸರ್ಜಿಯಸ್ ತನ್ನ ಬೂಟುಗಳನ್ನು ತೆಗೆದಿರಿಸಿ, ಕಾಲು ಚಾಚಿ ಮಲಗಿದ, ತಕ್ಷಣವೇ ನಿದ್ದೆ ಹತ್ತಿತು, ಹಿಂದಿನ ರಾತ್ರಿ ನಿದ್ದೆ ಇರಲಿಲ್ಲ, ಜೊತೆಗೆ ಮೂವತ್ತು ಮೈಲಿಗಳು ನಡೆದು ಬಂದಿದ್ದ ದಣಿವು ಬೇರೆ.

ಪ್ರಸ್ಕೋವ್ಯಾ ಮಿಖಲ್ಯೋವ್ನಾ ವಾಪಸಾದಾಗ, ಸರ್ಜಿಯಸ್ ಆ ಕಿರು ಕೋಣೆಯಲ್ಲಿ ಅವಳಿಗಾಗಿಯೇ ಕಾಯುತ್ತ ಕುಳಿತಿದ್ದ. ಅವನು ಊಟಕ್ಕೂ ಹೊರಗೆ ಬರಲಿಲ್ಲ, ತನಗೋಸ್ಕರ ಲೂಕೇರ್ಯಾ ತಂದಿದ್ದ ಒಂದಿಷ್ಟು ಸೂಪ್ ಅನ್ನೂ ಅಂಬಲಿಯನ್ನೂ ಕುಡಿದ.

"ಅದೇನು, ನೀನು ಹೇಳಿದ್ದ ಸಮಯಕ್ಕಿಂತ ಮುಂಚೇನೇ ಬಂದ್ಬಿಟ್ಟಿದ್ದೀಯಲ್ಲಾ? ಈಗ ನಾನು ಮಾತಾಡಬಹುದಾ?" ಎಂದು ಕೇಳಿದ ಸರ್ಜಿಯಸ್.

"ಇಂಥ ಅತಿಥಿ ನಮ್ಮ ಮನೆಗೆ ಬಂದಿದ್ದಾದ್ರೂ ಹೇಗೇಂತ! ನಾನಿವತ್ತು ಒಂದು ಪಾಠ ರದ್ದು ಮಾಡಿದೆ. ಅದು ಕಾಯುತ್ತೆ ಬಿಡು ... ನಿನ್ನನ್ನ ನೋಡಕ್ಕೆ ಬರ್ಬೇಕು ಅಂತ ತುಂಬ ದಿನದಿಂದ ಲೆಕ್ಕಾಚಾರ ಹಾಕ್ತಿದ್ದೆ. ನನ್ನ ಅದೃಷ್ಟಕ್ಕೆ ನೀನೇ ಬಂದ್ಬಿಟ್ಟೆ."

"ಪಾಶೆಂಕಾ, ದಯವಿಟ್ಟು ಈಗ ನಾನು ಹೇಳೋದನ್ನ ಕೇಳು, ನಾನು ಹಿಂದಿನ ಸಲ ದೇವರ ಮುಂದೆ ಮಂಡಿಯೂರಿ ತಪ್ಪೊಪ್ಪಿಕೊಂಡ ಹಾಗೆ ಈಗ ನಿನ್ನ ಮುಂದೆ ಹೇಳ್ತಾ ಇದ್ದೀನಿ. ಪಾಶೆಂಕಾ, ಈಗ ನಾನು ಪಾವನ ವ್ಯಕ್ತಿಯಲ್ಲ, ಅಷ್ಟೇ ಯಾಕೆ, ಒಬ್ಬ ಸಾಮಾನ್ಯ ಒಳ್ಳೇ ವ್ಯಕ್ತಿಯೂ ಅಲ್ಲ. ನಾನೊಬ್ಬ ಅಸಹ್ಯಕರ, ದುಷ್ಟ ಮತ್ತು ಗರ್ವಿಯಾದ ದಾರಿ ತಪ್ಪಿದ ಪಾಪಿ; ಬೇರೆ ಯಾರಿಗಿಂತ ಹೆಚ್ಚು ಪಾಪಿಯಲ್ಲ ಅಂತ ಇಟ್ಟುಕೊಂಡರೂ ನಾನೀಗ ಬಹು ಪಾಲು ಕೆಟ್ಟ ಜನರಿಗಿಂತ ಕೀಳಾದವನು."

ಮೊದಲು ಪಾಶೆಂಕಾ ಅವನ ಕಡೆ ನಟ್ಟ ನೋಟದಿಂದ ನೋಡಿದಳು. ಆದರೆ ಅವನು ಹೇಳಿದ್ದನ್ನು ಅವಳು ನಂಬಿದ್ದಳು, ಅವನ ಭಾವನೆ ತನ್ನ ಮನಸ್ಸಿಗೆ ಬಂದಾಗ ಅವಳು ಅವನ ಕೈಯನ್ನು ಮುಟ್ಟಿ ಕರುಣೆಯಿಂದ ನೋಡಿದಳು. "ನೀನು ಎಲ್ಲವನ್ನೂ ಉತ್ಪ್ರೇಕ್ಷೆ ಮಾಡಿ ಹೇಳ್ತಾ ಇದ್ದೀ ಅಂತ ಕಾಣತ್ತೆ, ಸ್ಟಿವಾ!" ಅಂದಳು.

"ಇಲ್ಲ, ಪಾಶೆಂಕಾ. ನಾನೊಬ್ಬ ಹಾದರಿಗ, ಕೊಲೆಗಾರ, ಧರ್ಮದ್ರೋಹಿ,

ವಂಚಕ."

"ಅಯ್ಯೋ ದೇವರೇ! ಇದೆಲ್ಲ ಹೇಗಾಯ್ತು?" ಎಂದ ಪ್ರಸ್ಕೋವ್ಯಾ ಮಿಖಲ್ಯೊವ್ನಾ ಅಚ್ಚರಿ ವ್ಯಕ್ತಪಡಿಸಿದಳು.

"ಆದರೆ ನಾನು ಬದುಕಬೇಕಲ್ಲ. ನನಗೆಲ್ಲ ಗೊತ್ತಿದೆ ಅಂತ ಭಾವಿಸಿದ್ದ ನಾನು, ಹೇಗೆ ಬದುಕಬೇಕೂಂತ ಇತರರಿಗೆ ಹೇಳ್ತಿದ್ದವನು ಈಗ ಹೇಗೆ ಬದುಕಬೇಕು ಅಂತ ನಿನ್ನ ಕೇಳ್ತಾ ಇದ್ದೀನಿ."

"ಏನು ಹೇಳ್ತಾ ಇದ್ದೀ, ಸ್ಟಿವಾ? ನನ್ನ ನೋಡಿ ತಮಾಷೆ ಮಾಡ್ತಿದ್ದೀಯಾ. ನನ್ನ ರೇಗಿಸೋದು ಅಂದ್ರೆ ನಿನಗೆ ಯಾವಾಗ್ಲೂ ಇಷ್ಟ ತಾನೇ?"

"ತಮಾಷೆ ಮಾಡ್ತಿದ್ದೀನಿ ಅಂತ ನಿನಗನ್ನಿಸಿದ್ರೆ ಹಾಗೇ ತಿಳುಕೋ, ಆದ್ರೆ ಈಗ ನೀನು ಹೇಗೆ ಬದುಕ್ತಿದ್ದೀ, ನಿನ್ನ ಜೀವನವೆಲ್ಲ ಹೇಗೆ ಸಾಗಿತು ಅನ್ನೋದನ್ನ ತಿಳಿಸು."

"ನಾನಾ? ನನ್ನದು ಕ್ಷುದ್ರವಾದ, ಭಯಂಕರವಾದ ಬದುಕು, ಈಗ ನನಗೆ ದೇವರು ತಕ್ಕ ಶಿಕ್ಷೆ ಕೊಡ್ತಿದಾನೆ. ನನ್ನದು ಮಹಾ ದರಿದ್ರ ಬದುಕು, ದರಿದ್ರ ಬದುಕು ..."

"ನಿನ್ನ ಮದುವೆ ಹೇಗೆ ನಡೀತು? ನಿನ್ನ ಗಂಡನ ಜೊತೆ ಸಂಸಾರ ಹೇಗಿತ್ತು?"

"ಎಲ್ಲ ಕೆಟ್ಟದಾಗಿತ್ತು. ನಾನು ಮದುವೆ ಯಾಕೆ ಅಂದ್ರೆ ಮಹಾ ಕೊಳಕು ರೀತೀಲಿ ಪ್ರೀತಿಸಿದೆ. ಅಪ್ಪನಿಗೆ ಅದು ಇಷ್ಟ ಇರ್ಲಿಲ್ಲ. ಆದ್ರೆ ನಾನು ಯಾವುದನ್ನೂ ಕೇಳೋ ಸ್ಥಿತೀಲಿರಲಿಲ್ಲ, ಹಾಗಾಗಿ ಮದುವೆ ಆಗೇ ಬಿಟ್ಟೆ. ಆಮೇಲೆ ಗಂಡನಿಗೆ ಸಹಾಯ ಮಾಡೋದನ್ನ ಬಿಟ್ಟು ತಡೆದುಕೊಳ್ಳಕ್ಕೆ ಆಗದೇ ಇರೋ ಅಷ್ಟು ಹೊಟ್ಟೆಕಿಚ್ಚಿಂದ ಅವರಿಗೆ ಹಿಂಸೆ ಕೊಟ್ಟೆ."

"ಅವರು ತುಂಬ ಕುಡೀತಾ ಇದ್ರು ಅಂತ ಕೇಳಿದ್ದೆ ?"

"ಹೌದು. ಆದ್ರೆ ನಾನವರಿಗೆ ಮನಶ್ಶಾಂತಿಯಿಂದಿರಕ್ಕೆ ಬಿಡಲೇ ಇಲ್ಲ, ಅವರನ್ನು ಯಾವಾಗಲೂ ಹೀಯಾಳಿಸ್ತಾ ಇದ್ದೆ. ನಿಂಗೊತ್ತು ಅದೊಂದು ರೋಗ ಅಂತ! ಆದ್ರೆ ಅವರಿಗೆ ಅದನ್ನ ಬಿಡಕ್ಕೆ ಸಾಧ್ಯವಾಗಲಿಲ್ಲ. ಅವರು ಕುಡಿಯೋದನ್ನ ತಪ್ಪಿಸೋದಕ್ಕೆ ಹೇಗೆ ಪ್ರಯತ್ನಪಟ್ಟೆ ಅನ್ನೋದು ಈಗ್ಲೂ ನಂಗೆ ಚೆನ್ನಾಗಿ ಜ್ಞಾಪಕ ಇದೆ. ನಮ್ಮಿಬ್ಬರ ಮಧ್ಯೆ ನಡೆದದ್ದು ಎಂಥ ಭಯಂಕರ ಸನ್ನಿವೇಶಗಳೂಂತ!"

ತನ್ನ ಸುಂದರ ಕಣ್ಣುಗಳಿಂದ ಕಸಾಟ್‌ಸ್ಕಿಯ ಕಡೆ ನೋಡಿದಾಗ ಅವು ನೆನಪಿನಿಂದ ನರಳುತ್ತಿದ್ದವು.

ಪಾಶೆಂಕಾಳನ್ನು ಅವಳ ಗಂಡ ಹೇಗೆ ಹೊಡೆಯುತ್ತಿದ್ದ ಎಂಬ ವಿಷಯ ತಾನು ಕೇಳಿದ್ದು ಕಸಾಟ್‌ಸ್ಕಿಗೆ ನೆನಪಾಯಿತು. ಈಗವಳ ಸಣಕಲಾದ ಒಣಕಲು ಕತ್ತು, ಕಿವಿಗಳ ಹಿಂಭಾಗದಲ್ಲಿ ಎದ್ದು ಕಾಣುತ್ತಿದ್ದ ನರಗಳು, ಹಾಗೂ ತಲೆಯಲ್ಲಿ ಜಡೆಗಟ್ಟಿದ್ದ ಅಲ್ಪಸ್ವಲ್ಪ ಕೂದಲನ್ನು ಕಂಡಾಗ ಅದೆಲ್ಲ ಹೇಗಾಯಿತು ಅವನಿಗೆ ಮನವರಿಕೆಯಾದಂತೆ ತೋರಿತು.

"ಆಮೇಲೆ ನನಗೆ ಇಬ್ಬರು ಮಕ್ಕಳ ಹೊರತಾಗಿ ಬೇರೇನೂ ಉಳಿಯಲಿಲ್ಲ"

"ಆದ್ರೆ ನಿನಗೆ ಸ್ವಲ್ಪ ಜಮೀನಿತ್ತಲ್ಲ?"

"ಓ, ವಾಸ್ಯಾ ಬದುಕಿದ್ದಾಗಲೇ ನಾವದನ್ನ ಮಾರಿಬಿಟ್ವಿ, ಬಂದ ದುಡ್ಡೆಲ್ಲ ಖರ್ಚಾಗಿ ಹೋಯಿತು. ಆದರೆ ಬದುಕಲೇಬೇಕಾಗಿತ್ತಲ್ಲ, ಆದರೆ ನಮ್ಮ ಯುವತಿಯರಿಗೆ ಗೊತ್ತಿರೋ ಹಾಗೆ ಸಂಪಾದನೆ ಮಾಡೋದು ಹೇಗೆ ಅನ್ನೋದು ನಂಗೆ ಗೊತ್ತಿರಲಿಲ್ಲ. ನಾನೋ ಯಾವ ಕೆಲಸಕ್ಕೂ ಬಾರದೋಳು, ನಿಸ್ಸಹಾಯಕಳು. ಹೀಗಾಗಿಯೇ ಎಲ್ಲ ಖರ್ಚಾಗಿ ಹೋಯಿತು. ನಾನು ಪಾಠ ಹೇಳಿಕೊಟ್ಟೆ, ನನ್ನ ವಿದ್ಯಾಭ್ಯಾಸಾನೂ ಕೊಂಚಮಟ್ಟಿಗೆ ಉತ್ತಮಪಡಿಸ್ಕೊಂಡೆ. ಆಮೇಲೆ ಮಿತ್ಯಾ ನಾಲ್ಕನೇ ಫಾರಂನಲ್ಲಿದ್ದಾಗಲೇ ಕಾಯಿಲೆ ಬಿದ್ದ, ಸ್ವಲ್ಪ ದಿನದಲ್ಲೇ ದೇವರು ಅವನನ್ನ ಕರೆಸ್ಕೊಂಡುಬಿಟ್ಟ. ಮಾಶಾ ವಾನ್ಯಾನನ್ನು ಪ್ರೀತಿಸಿದಳು, ಈಗ ಅವನೇ ನನ್ನ ಅಳಿಯ. ಅಲ್ಲದೆ, ಅವನೇನೋ ಒಳ್ಳೆಯೋನೇ, ಆದರೆ ನತದೃಷ್ಟ. ಅವನಿಗೆ ಮೈಲಿ ಹುಷಾರಿರಲ್ಲ."

"ಮಾಮಾ!" ಎಂದು ಕೂಗಿದ ಅವಳ ಮಗಳ ದನಿ ಇವರಿಬ್ಬರ ಸಂಭಾಷಣೆಯನ್ನು ತುಂಡರಿಸಿತು. "ಮಿತ್ಯಾನನ್ನು ಎತ್ತಿಕೋ, ಎರಡು ಕಡೆ ನಾನು ಹೇಗಿರಕ್ಕಾಗತ್ತೆ?"

ಪ್ರಸ್ಕೋವ್ಯಾ ಮಿಖಲ್ಯೊವ್ನಾ ನಡುಗಿದಳು, ಆದರೂ ಮೇಲೆದ್ದು ತನ್ನ ತೇಪೆ ಹಾಕಿದ್ದ ಷೂಗಳಲ್ಲಿಯೇ ರೂಮಿನಿಂದ ಹೊರಗೆ ನಡೆದಳು. ಆದರೆ ಬೇಗ ವಾಪಸಾದಳು, ಎರಡು ವರ್ಷದ ಮಗುವನ್ನು ಕಂಕುಳಲ್ಲಿ ಹೊತ್ತು. ಅದೋ ಆ ಕಡೆ ಈ ಕಡೆ ಜಗ್ಗಾಡುತ್ತ ಅಜ್ಜಿಯ ಶಾಲನ್ನು ತನ್ನ ಪುಟ್ಟ ಕೈಗಳಿಂದ ಎಳೆದಾಡುತ್ತಿತ್ತು.

"ಎಲ್ಲಿದ್ದೆ ನಾನು? ಆ, ಅಳಿಯನ ವಿಷಯ. ಅವನಿಗೆ ಇಲ್ಲೇ ಒಳ್ಳೆ ಕೆಲಸ ಸಿಕ್ತು, ಅವನ ಮೇಲಧಿಕಾರಿ ತುಂಬ ಒಳ್ಳೆಯೋನು. ಆದರೆ ವಾಸ್ಯಾ ಹೀಗೆ ಹೆಚ್ಚು ದಿನ ಇರಕ್ಕಾಗಲಿಲ್ಲ, ತನ್ನ ಕೆಲಸ ಬಿಡಬೇಕಾಯ್ತು."

"ಯಾಕೆ, ಅವನದು ಏನು ವಿಷಯ?"

"ನರದೌರ್ಬಲ್ಯ, ಮಹಾ ರೋಗ. ನಾವು ವೈದ್ಯರೊಬ್ಬರ ಹತ್ತಿರ ತೋರಿಸಿದಿವಿ, ಅವನು ಬೇರೆ ಕಡೆ ಹೋಗಬೇಕು ಅಂತ ಹೇಳಿದ್ರು. ನಮಗೆ ಕೈ ನಡೀಬೇಕಲ್ಲ ... ಯಾವತ್ತಾದ್ರೂ ಅದು ವಾಸಿಯಾಗತ್ತೆ ಅನ್ನೋ ಭರವಸೆ ನಂದು. ಯಾವುದೋ ಒಂದು ಕಡೆ ನೋವು ಅಂತ ಅಲ್ಲ, ಆದರೆ ..."

"ಲುಕೇರ್ಯಾ!" ಒಂದು ದುರ್ಬಲ ಕೋಪೋದ್ರಿಕ್ತ ಧ್ವನಿ ಕೂಗಿತು. "ನನಗೆ ಬೇಕಾದಾಗಲೆಲ್ಲ ಅವಳನ್ನು ಎಲ್ಲೋ ಕಳ್ಸಿರ್ತಾರೆ. ಮಾಮಾ ... "

ಮತ್ತೆ ಪ್ರಸ್ಕೋವ್ಯಾ ಮಿಖಲ್ಯೊವ್ನಾಳ ಮಾತಿಗೆ ಅಡ್ಡಿ ಬಂತು. "ಬಂದೆ! ಅವನದಿನ್ನೂ ಊಟ ಆಗಿಲ್ಲ, ನಮ್ಮ ಜೊತೇಲಿ ಅವನು ಊಟ ಮಾಡಕ್ಕೇ ಆಗಲ್ಲ" ಎಂದು ಮೇಲೆದ್ದಳು.

ಅವಳು ಹೊರಗೆ ಹೋಗಿ, ಏನೇನೋ ಸಿದ್ಧತೆ ಮಾಡಿ, ತನ್ನ ಸಣಕಲು ಕಪ್ಪು ಕೈಗಳನ್ನು ಒರೆಸಿಕೊಳ್ಳುತ್ತ ಮತ್ತೆ ಕೋಣೆಯೊಳಕ್ಕೆ ಬಂದಳು.

"ನನ್ನ ಬದುಕು ಸಾಗ್ತಿರೋದು ಹೀಗೇನೇ. ಯಾವಾಗ್ಲೂ ದೂರೋದು, ಯಾವಾಗಲೂ ಅತೃಪ್ತಿಯಿಂದ ನರಳೋದು. ಆದರೆ ದೇವರ ದಯೆಯಿಂದ ನನ್ನ ಮೊಮಕ್ಕಳೆಲ್ಲ ಒಳ್ಳೆ ಮಕ್ಕಳು, ಆರೋಗ್ಯವಂತರು; ಹೀಗಾಗಿಯೇ ಇನ್ನೂ ಬದುಕಿರ್ಬಹುದು ಅನ್ನಿಸಿರೋದು. ಆದರೆ ನನ್ನ ಬಗ್ಗೇನೇ ಯಾಕೆ ಹೇಳ್ಕೋಬೇಕು?"

"ಆದ್ರೆ ಜೀವನೋಪಾಯ ಹೇಗೆ?"

"ನಾನು ಸ್ವಲ್ಪ ಸಂಪಾದನೆ ಮಾಡ್ತಿನಿ. ನಂಗೆ ಸಂಗೀತ ಅಂದ್ರೆ ಆಗ್ತಿರಲಿಲ್ಲ ಅನ್ನೋದು ನಿಂಗೇ ಗೊತ್ತು. ಆದ್ರೆ ಈಗದು ನಂಗೆ ಎಷ್ಟು ಸಹಾಯಕ್ಕೆ ಬರ್ತಿದೇಂತ!" ಆಮೇಲೆ ತನ್ನ ಪಕ್ಕದಲ್ಲಿದ್ದ ಒಂದು ಬೀರುವಿನ ಡ್ರಾಯರ್ ತೆಗೆದು ಒಂದು ಎಕ್ಸರ್ಸೈಜ್ ತೆಗೆದು ತನ್ನ ಕಡ್ಡಿಯಾಗಿದ್ದ ಬೆರಳುಗಳಿಂದ ಅದರ ಹಾಳೆಗಳನ್ನು ತೆಗೆದಳು.

"ಒಂದು ಪಾಠಕ್ಕೆ ನಿಂಗೆ ಎಷ್ಟು ಹಣ ಸಿಕ್ಕತ್ತೆ?"

"ಕೆಲವು ಸಲ ಒಂದು ರೂಬಲ್, ಮತ್ತೆ ಕೆಲವು ಸಲ ಐವತ್ತು ಕೊಪೆಕ್‌ಗಳು, ಅಥವಾ ಮೂವತ್ತೇ. ಎಲ್ಲರೂ ನನ್ನ ಕಂಡ್ರೆ ಪ್ರೀತಿಯಿಂದಿದಾರೆ."

"ನಿನ್ನ ವಿದ್ಯಾರ್ಥಿಗಳು ಚೆನ್ನಾಗಿ ಕಲಿತುಕೋತಾರಾ?" ಎಂದು ಕಸಾಟ್‌ಸ್ಕಿ ತೆಳುವಾಗಿ ಮುಗುಳ್ನಕ್ಕು ಕೇಳಿದ.

ಅವನು ಗಂಭೀರವಾಗಿ ಈ ಪ್ರಶ್ನೆಯನ್ನು ಕೇಳುತ್ತಿದ್ದಾನೆ ಅಂತ ಪ್ರಸ್ಕೋವ್ಯಾ ಮಿಖಲ್ಯೊವ್ನಾಗೆ ಮೊದಲು ನಂಬಿಕೆ ಬರಲಿಲ್ಲ; ಹೀಗಾಗಿ ಅವನ ಕಡೆ ಪ್ರಶ್ನಾರ್ಥಕವಾದ ನೋಟ ಬೀರಿದಳು.

"ಕೆಲವರು ಚೆನ್ನಾಗೇ ಕಲೀತಾರೆ. ಒಂದು ಹುಡುಗಿಯಂತೂ ಅದ್ಭುತವಾದೋಳು - ಅವಳೊಬ್ಬ ಕಸಾಯಿಯ ಮಗಳು - ಎಂಥ ಒಳ್ಳೇ ಹುಡುಗಿ ಅಂತೀಯಾ! ಇರಬೇಕಾದಷ್ಟು ಬುದ್ಧಿವಂತಿಕೆ ನನಗಿದ್ದಿದ್ರೆ, ಜೊತೆಗೆ ಅಪ್ಪನಿಗಿದ್ದಂಥ ಪರಿಚಯಗಳೂ ಇದ್ದುಬಿಟ್ಟಿದ್ರೆ, ನನ್ನ ಅಳಿಯನಿಗೆ ಒಂದು ನೌಕರಿ ದೊರಕಿಸಿಕೋಬಹುದಾಗಿತ್ತು. ಆದರೆ ಈಗಿರೋ ಸ್ಥಿತೀಲಿ ನಾನು ಏನೂ ಮಾಡಲಾರದವಳಾಗಿದ್ದೀನಿ, ಇಷ್ಟುಮಟ್ಟಿಗೆ ಅವರನ್ನು ನಿಭಾಯಿಸ್ಕೊಂಡು ಬಂದೀದೀನಿ. ನೀನೇ ನೋಡ್ತಿದ್ದೀಯಲ್ಲ."

"ಹೌದ್ಹೌದು" ಎಂದ ಕಸಾಟ್‌ಸ್ಕಿ ತಲೆ ತಗ್ಗಿಸಿ, ಆಮೇಲೆ, "ಅಂದ ಹಾಗೆ, ಪಾಶೆಂಕಾ, ನೀನು ಚರ್ಚ್ ಚಟುವಟಿಕೆಗಳಲ್ಲಿ ಹೇಗೆ ಭಾಗವಹಿಸ್ತೀಯಾ?"

"ಓ, ಆ ವಿಷಯ ಮಾತ್ರ ಕೇಳ್ಬೇಡ. ಆ ವಿಷಯದಲ್ಲಿ ನಾನು ತೀರ ಕೆಟ್ಟೋಳು, ಅಷ್ಟರಮಟ್ಟಿಗೆ ಅದನ್ನ ನಾನು ಕಡೆಗಣಿಸಿದ್ದೀನಿ! ಉಪವಾಸಗಳನ್ನೇನೋ ಮಕ್ಕಳ ಜೊತೆಯಲ್ಲಿ ನಡಿಸ್ತೀನಿ, ಕೆಲವು ಸಲ ಚರ್ಚ್‌ಗೂ ಹೋಗ್ತೀನಿ, ಆದರೆ ಇನ್ನೂ ಎಷ್ಟೋ

ಸಲ ತಿಂಗಳುಗಟ್ಟಳೆ ಹೋಗೋದೇ ಇಲ್ಲ. ಮಕ್ಕಳನ್ನು ಮಾತ್ರ ಕಳಿಸಿಕೊಡ್ತೀನಿ."

"ನೀನೇ ಯಾಕೆ ಹೋಗೋದಿಲ್ಲಾ?"

'ನಿಜ ಹೇಳ್ಬೇಕೂಂದ್ರೆ' ಎಂದು ನಾಚಿಕೆಯಿಂದ, "ನನಗೆ ಹೇಳಕ್ಕೆ ನಾಚಿಕೆಯಾಗತ್ತೆ, ಮಗಳ ಜೊತೆ, ಮೊಮ್ಮಕ್ಕಳ ಜೊತೆ ಹರಿದ ಬಟ್ಟೆ ಹಾಕಿಕೊಂಡು ಅವರಿಗೆ ಮುಜುಗರ ತರೋದು ನಂಗಿಷ್ಟ ಇಲ್ಲ. ಅಷ್ಟು ಹೊರತು ಬೇರೆ ಕಾರಣ ಏನೂ ಇಲ್ಲ. ಜೊತೆಗೆ, ನಾನು ಸ್ವಲ್ಪ ಸೋಮಾರಿ ಬೇರೆ."

"ಮನೇಲೇ ಪ್ರಾರ್ಥನೆ ಮಾಡ್ತೀಯಾ?"

"ಹ್ಞೂ. ಆದ್ರೆ ಅದೆಂಥ ಪ್ರಾರ್ಥನೆ ಅಂತ? ಬರೀ ಯಾಂತ್ರಿಕವಾದ್ದು. ಹಾಗಿರಬಾರ್ದು ಅಂತ ನನ್ನಾಸೆ, ಆದ್ರೆ ನನಗೇ ಅಂಥ ಧಾರ್ಮಿಕ ಮನೋಭಾವ ಇಲ್ಲ. ನನಗೆ ಗೊತ್ತಿರೋದು ಅಂದ್ರೆ ನಾನೆಷ್ಟು ಕೆಲಸಕ್ಕೆ ಬಾರ್ದೋಳು ಅನ್ನೋದು ಮಾತ್ರ ..."

"ನಿಜ, ನಿಜ, ನೀನು ಹೇಳೋದು ಸರಿ" ಅಂದ ಕಸಾಟ್‌ಸ್ಕಿ ಅವಳ ಮಾತನ್ನು ಅನುಮೋದಿಸುವವನಂತೆ.

"ಬಂದೆ, ಬಂದೆ" ಎನ್ನುತ್ತ ಅವಳು ಮೇಲೆದ್ದಳು, ತನ್ನ ಅಳಿಯನ ಕರೆಗೆ ಓಗೊಟ್ಟು. ಸ್ವಲ್ಪವೇ ಇದ್ದ ತನ್ನ ತಲೆಗೂದಲನ್ನು ಸರಿಪಡಿಸಿಕೊಳ್ಳುತ್ತ ಹೊರಟಳು.

ಆದರೆ ಈ ಸಲ ಅವಳು ವಾಪಸು ಬರುವುದು ಸಾಕಷ್ಟು ಹೊತ್ತಾದ ಮೇಲೆ. ಅವಳು ವಾಪಸಾದಾಗ, ಕಸಾಟ್‌ಸ್ಕಿ ಹಿಂದಿನ ಭಂಗಿಯಲ್ಲೇ ಕುಳಿತಿದ್ದ: ಮೊಣಕಾಲುಗಳ ಮೇಲೆ ಮೊಳಕೈ ಊರಿಕೊಂಡು, ತಲೆ ತಗ್ಗಿಸಿಕೊಂಡು. ಆದರೆ ಅವನ ಚೀಲದ ಪಟ್ಟಿಗಳನ್ನು ಭುಜಕ್ಕೆ ತಗುಲಿಸಿಕೊಂಡಿದ್ದ.

ಅವಳು ವಾಪಸು ಬರುವಾಗ ಕೈಯಲ್ಲೊಂದು ಸಣ್ಣ ದೀಪ ಹಿಡಿದಿದ್ದಳು, ಅದಕ್ಕೆ ಮರೆ ಏನೂ ಇರಲಿಲ್ಲ. ಆಗ ಅವನು ತನ್ನ ತಲೆ ಎತ್ತಿ ನೀಳವಾಗಿ ಉಸಿರುಬಿಟ್ಟ.

"ನೀನು ಯಾರೂಂತ ನಾನು ಅವರ್ಯಾರಿಗೂ ಹೇಳಲಿಲ್ಲ" ಎಂದು ಅಂಜುತ್ತಲೇ ಪಿಸುಗುಟ್ಟಿದ ಅವಳು, "ನೀನೊಬ್ಬ ಯಾತ್ರಾರ್ಥಿ ಅಂತಲೇ ಹೇಳಿದ್ದು, ಶ್ರೇಷ್ಠ ವ್ಯಕ್ತಿ, ನಿನ್ನನ್ನ ತುಂಬ ದಿನದಿಂದ ಬಲ್ಲೆ ಎಂದಷ್ಟೇ ಹೇಳಿದ್ದೇನೆ. ಬಾ ಊಟದ ಮನೆಗೆ ಹೋಗೋಣ, ಸ್ವಲ್ಪ ಟೀ ತೆಗೆದುಕೊಳ್ಳುವೆಯಂತೆ."

"ಉಹ್ಞೂ ..."

"ಸರಿ ಹಾಗಾದ್ರೆ, ನಾನಿಲ್ಲೇ ತಂದುಕೊಡ್ತೀನಿ."

"ಬೇಡ, ನನಗೇನೂ ಬೇಕಾಗಿಲ್ಲ. ದೇವರು ನಿಂಗೆ ಒಳ್ಳೇದು ಮಾಡಲಿ, ಪಾಶೆಂಕಾ! ನಾನು ಹೊರಡ್ತೀನಿ. ನಿನಗೆ ನನ್ನ ಬಗ್ಗೆ ಮರುಕ ಇದ್ರೆ, ನನ್ನನ್ನ ನೀನು ನೋಡಿದೆ ಅಂತ ದಯವಿಟ್ಟು ಯಾರಿಗೂ ಹೇಳ್ಬೇಡ. ದೇವರ ಮೇಲಿನ ಪ್ರೀತಿಯಿಂದ ಯಾರಲ್ಲೂ ಬಾಯಿಬಿಡಬೇಡ. ಥ್ಯಾಂಕು ಯೂ. ನಾನು ನಿನ್ನ ಪಾದ ಮುಟ್ಟಿ ನಮಸ್ಕಾರ

ಮಾಡ್ಬೇಕೂಂತ ಆಸೆ, ಆದರೆ ಅದರಿಂದ ನಿನಗೆ ಮುಜುಗರವಾಗತ್ತೇಂತ ಹಾಗೆ ಮಾಡಲ್ಲ. ಥ್ಯಾಂಕ್ ಯೂ. ದೇವರ ಹೆಸರಲ್ಲಿ ನನ್ನನ್ನ ಕ್ಷಮಿಸಿಬಿಡು!"

"ನೀನು ನನಗೆ ಆಶೀರ್ವಾದ ಮಾಡು."

"ದೇವರು ಒಳ್ಳೇದು ಮಾಡಲಿ, 'ಅವನ' ಹೆಸರಲ್ಲಿ ನನ್ನನ್ನ ಕ್ಷಮಿಸಿಬಿಡು!"

ಅವನು ಮೇಲೆದ್ದ; ಆದರೆ ತಾನು ಕೊಟ್ಟ ಸ್ವಲ್ಪ ಬ್ರೆಡ್, ಬೆಣ್ಣೆ ಮತ್ತು ರಸ್ಕ್‌ಗಳನ್ನು ತಗೊಳ್ಳೋವರೆಗೂ ಬಿಡಲಿಲ್ಲ. ಅದನ್ನೆಲ್ಲ ತೆಗೆದುಕೊಂಡ ಅವನು ಹೊರಟು ಹೋದ.

ಇಷ್ಟು ಹೊತ್ತಿಗಾಗಲೇ ಕತ್ತಲಾಗುತ್ತಿತ್ತು. ಎರಡು ಮನೆಗಳನ್ನು ದಾಟುವಷ್ಟರಲ್ಲಿ ಅವನು ಕಣ್ಮರೆಯಾದ. ಆದರೆ ಅವನಿಲ್ಲೇ ಹತ್ತಿರದಲ್ಲಿದ್ದಾನೆ ಅಂತ ಅವಳಿಗೆ ಗೊತ್ತಾಯಿತು, ಯಾಕಂದರೆ ಪೂಜಾರಿ ಮನೆಯ ನಾಯಿ ಬೊಗಳುತ್ತಿತ್ತು.

"ಅಂದ್ರೆ, ನನ್ನ ಕನಸಿನ ಅರ್ಥ ಯಾವುದು ಅಂತ ಈಗ ಗೊತ್ತಾಯಿತು. ನಾನು ಆಗಬೇಕಾಗಿದ್ದದ್ದು ಪಾಶೆಂಕಾ ಥರ, ಆದರೆ ಅದರಲ್ಲಿ ನಾನು ಸೋತೆ. ನಾನು ದೇವರಿಗಾಗಿ ಬದುಕ್ತಿದ್ದೀನಿ ಅನ್ನೋ ಹೆಸರಲ್ಲಿ ಮನುಷ್ಯರಿಗಾಗಿ ಬದುಕ್ತಿದ್ದೆ; ಆದ್ರೆ ಅವಳು ತಾನು ಮನುಷ್ಯರಿಗೋಸ್ಕರ ಬದುಕ್ತಿದ್ದೀನಿ ಅಂದುಕೊಂಡು ದೇವರಿಗಾಗಿ ಬದುಕ್ತಿದಾಳೆ. ನಿಜ, ಒಂದು ಒಳ್ಳೆ ಕೆಲಸ - ಪ್ರತಿಫಲಾಪೇಕ್ಷೆ ಇಲ್ಲದೆ ಕೊಟ್ಟ ಒಂದು ಲೋಟ ನೀರು - ನಾನು ಜನಗಳ ಮೇಲೆ ಸುರಿಸ್ತಿದ್ದೀನಿ ಅಂದ್ಕೊಂಡಿದ್ದ ಯಾವುದೇ ಉಪಕಾರಕ್ಕಿಂತ ದೊಡ್ಡದು. ಆದ್ರೂ, ದೇವರ ಸೇವೆ ಮಾಡ್ಬೇಕೂನ್ನೋ ಒಂದಷ್ಟು ಪ್ರಾಮಾಣಿಕ ಆಸೆ ನನ್ನಲ್ಲಿ ಇರಲಿಲ್ಲವೇ?" ಎಂದು ಕೇಳಿಕೊಂಡ. ಅದಕ್ಕೆ ಸಿಕ್ಕ ಉತ್ತರ ಅಂದರೆ: "ಹೌದು ಇತ್ತು, ಆದ್ರೆ ಅದೆಲ್ಲ ಜನಗಳ ಹೊಗಳಿಕೆಯ ಆಸೆಯಿಂದಾಗಿ ಹಾಳಾಯ್ತು. ನಾನು ಅಂದುಕೊಂಡ ಹಾಗೆ, ಮನುಷ್ಯರ ಹೊಗಳಿಕೆಗಾಗಿ ಬದುಕಿದೋನಿಗೆ ದೇವರು ಸಿಕ್ಕಲ್ಲ. ಈಗ ನಾನು ಅವನನ್ನು ಹುಡುಕ್ತೀನಿ!"

ಪಾಶೆಂಕಾಳನ್ನು ಕಾಣುವುದಕ್ಕೆ ನಡೆದು ಬಂದಿದ್ದ ಹಾಗೆಯೇ ಅವನು ಹಳ್ಳಿಯಿಂದ ಹಳ್ಳಿಗೆ ಕಾಲ್ನಡಿಗೆಯಲ್ಲಿ ಪಯಣ ಬೆಳೆಸಿದ. ಜನಗಳನ್ನು, ಯಾತ್ರಾರ್ಥಿಗಳನ್ನು ಭೇಟಿಯಾಗೋದು, ಸಿಕ್ಕಿದ ಗಂಡಸು ಹೆಂಗಸನ್ನು ತುಣುಕು ಬ್ರೆಡ್‌ಗಾಗಿಯೋ ರಾತ್ರಿ ತಂಗುವುದಕ್ಕಾಗಿಯೋ ದೇವರ ಹೆಸರಲ್ಲಿ ಬೇಡುವುದು, ಆಮೇಲೆ ಅಲ್ಲಿಂದ ಹೊರಡುವುದು - ಹೀಗೆ ಸಾಗಿದ. ಕೆಲವು ಸಲ ಯಾರೋ ಕೋಪಿಷ್ಠ ಗೃಹಿಣಿ ಅವನ ಮೇಲೆ ರೇಗಿರಬಹುದು, ಅಥವಾ ಕುಡುಕ ರೈತನೊಬ್ಬ ಅವನನ್ನು ಅಣಕಿಸಿರಬಹುದು, ಆದರೆ ಬಹುತೇಕ ಅವನಿಗೆ ಜನ ಆಹಾರ ಕೊಡುತ್ತಿದ್ದರು, ಕುಡಿಯೋದಕ್ಕೆ ನೀರು ಕೊಡುತ್ತಿದ್ದರು, ಜೊತೆಗೆ ಎಷ್ಟೋ ಸಲ ಹೆಚ್ಚಿಗೆ ಇನ್ನೇನನ್ನಾದರೂ ಕೊಟ್ಟು ಕಳಿಸುತ್ತಿದ್ದರು. ಅವನ ತೇಜೋವಂತ ಮುಖ ಕಂಡ ಅನೇಕರು ಅವನಿಗೆ ಅನುಕೂಲಕರವಾಗಿ ನಡೆದುಕೊಳ್ಳುತ್ತಿದ್ದರು, ಆದರೆ ಎಷ್ಟೋ ಸಲ ಅದಕ್ಕೆ ಮಿಗಿಲಾಗಿ ಅವನಂಥ ತೇಜೋವಂತ ತಮ್ಮ ಹತ್ತಿರ ಬೇಡುವುದಕ್ಕೆ ಬಂದ ಅಂತ ಸಂತೋಷ ಪಡುತ್ತಿದ್ದರು.

ಆದರೆ ಅವನ ನಯವಂತಿಕೆ ಎಲ್ಲರ ಮನಸ್ಸನ್ನೂ ಗೆಲ್ಲುತ್ತಿತ್ತು.

ಎಷ್ಟೋಸಲ, ಯಾರದಾದರೂ ಗುಡಿಸಿಲಿನಸಲ್ಲಿ ಸುವಾರ್ತೆಗಳ ಪುಸ್ತಕ ಕಣ್ಣಿಗೆ ಬಿದ್ದರೆ ಅವನದನ್ನು ಗಟ್ಟಿಯಾಗಿ ಓದುತ್ತಿದ್ದ, ಅವನು ಓದುವ ರೀತಿಯು ಜನರ ಹೃದಯಕ್ಕೆ ನೇರವಾಗಿ ನಾಟುತ್ತಿತ್ತು, ಏನೋ ಪರಿಚಿತವಾದರೂ ಹೊಸತೊಂದು ಸಂಭವಿಸಿದೆ ಎಂಬಂತೆ ಅಚ್ಚರಿಗೊಳ್ಳುತ್ತಿದ್ದರು.

ತನ್ನ ಹಿತವಚನದಿಂದಲೋ, ತನ್ನ ಓದುಬರಹದ ಜ್ಞಾನದಿಂದಲೋ, ಜಗಳಗಳನ್ನು ಪರಿಹರಿಸಿಯೋ ಜನರಿಗೆ ನೆರವು ನೀಡುವುದರಲ್ಲಿ ಸಫಲನಾದಾಗ ಜನ ತಮ್ಮ ಕೃತಜ್ಞತೆ ಸಲ್ಲಿಸುವುದಕ್ಕಿಂತ ಮುಂಚೆಯೇ ನೇರವಾಗಿ ಅಲ್ಲಿಂದ ಕಾಲುತೆಗೆಯುತ್ತಿದ್ದ. ನಿಧಾನವಾಗಿ, ಕೊಂಚಕೊಂಚವಾಗಿ ತನ್ನಲ್ಲಿಯೇ ಇದ್ದ ಭಗವಂತ ಅವನಿಗೆ ಗೋಚರವಾಗತೊಡಗಿದ. ಒಮ್ಮೆ ಇಬ್ಬರು ಮುದುಕಿಯರು ಹಾಗೂ ಸೈನಿಕನೊಬ್ಬನ ಜೊತೆ ಅವನು ನಡೆದು ಹೋಗುತಿದ್ದ. ಆಗ ಒಂಟಿ ಕುದುರೆಗಾಡಿಯಲ್ಲಿ ಕೂತಿದ್ದ ಗಂಡೊಂದು ಹೆಣ್ಣೊಂದು ಹಾಗೂ ಕುದುರೆಯ ಮೇಲಿದ್ದ ಗಂಡು ಹೆಣ್ಣುಗಳಿಂದ ಕೂಡಿದ್ದ ತಂಡವೊಂದು ಅವನನ್ನು ತಡೆಯಿತು. ಗಂಡ ತನ್ನ ಮಗಳೊಡನೆ ಕುದುರೆಯ ಮೇಲೆ ಕೂತಿದ್ದ, ಕುದುರೆಗಾಡಿಯಲ್ಲಿ ಅವನ ಹೆಂಡತಿ ಒಬ್ಬ ಗಂಡಸಿನ ಜೊತೆ ಕೂತಿದ್ದಳು, ಅವನು ಸಹಪ್ರಯಾಣಿಕ ಎಂಬುದು ಸ್ಪಷ್ಟವಾಗಿತ್ತು.

ಜನಜನಿತವಾದ ರಷ್ಯನ್ ನಂಬಿಕೆಯಂತೆ ಕೆಲಸಗಳನ್ನು ಬಿಟ್ಟು ತೀರ್ಥಕ್ಷೇತ್ರಗಳನ್ನು ಸಂದರ್ಶನ ಮಾಡುತ್ತ ಓಡಾಡುತ್ತಿದ್ದ ಯಾತ್ರಾರ್ಥಿಗಳನ್ನು ನೋಡಲೆಂದು ಫ್ರೆಂಚ್ ಮಂದಿ ತಂಡ ನಿಂತಿತು.

"ತೀರ್ಥಕ್ಷೇತ್ರಗಳ ಸಂದರ್ಶನ ಮಾಡಿದ್ರೆ ದೇವರಿಗೆ ಪ್ರೀತಿಯಾಗತ್ತೆ ಅಂತ ಅವರಿಗೆ ಖಾತ್ರಿಯಾಗಿ ಗೊತ್ತಾ? ಕೇಳು ಅವರನ್ನ" ಎಂದು ಫ್ರೆಂಚ್‌ಮನ್ ಕೇಳಿದ.

ಈ ಪ್ರಶ್ನೆಗೆ ಒಬ್ಬ ಮುದುಕಿ ಹೀಗೆಂದು ಉತ್ತರಿಸಿದಳು: "ಅದು ದೇವರಿಗೇ ಗೊತ್ತು. ನಮ್ಮ ಕಾಲುಗಳು ಪವಿತ್ರ ತೀರ್ಥಕ್ಷೇತ್ರಗಳಲ್ಲಿ ಸುತ್ತಾಡಿವೆ, ಆದರೆ ನಮ್ಮ ಹೃದಯ ಹಾಗೆ ಮಾಡಿದ್ಯೋ ಇಲ್ಲವೋ."

ಅವರು ಅದೇ ಪ್ರಶ್ನೆಯನ್ನು ಸೈನಿಕನಿಗೆ ಕೇಳಿದರು. ತಾನು ಈ ಪ್ರಪಂಚದಲ್ಲಿ ಒಂಟಿಯಾಗಿರೋನು, ಹೋಗಕ್ಕೆ ಎಲ್ಲಿಯೂ ಎಡೆಯೇ ಇಲ್ಲ ಎಂದ.

ನೀನು ಯಾರು ಎಂದು ಅವರು ಕಸಾಟ್‌ಸ್ಕಿಯನ್ನು ಕೇಳಿದರು.

"ದೇವರ ಸೇವಕ."

"ಏನು ಹೇಳಿದ ಅವನು? ಉತ್ತರವನ್ನೇ ಕೊಡೋದಿಲ್ಲವಲ್ಲ"

"ತಾನು ದೇವರ ಸೇವಕ ಅಂತ ಅವನು ಹೇಳಿದ್ದು. ಅವನು ಪೂಜಾರಿ ಮಗ ಇರ್ಬೇಕು. ಅಥವಾ ಆ ಪಂಗಡದೋನು. ನಿನ್ನ ಹತ್ರ ಚಿಲ್ಲರೆ ಇದ್ಯಾ?"

ಫ್ರೆಂಚ್‌ಮನ್ ಹತ್ತಿರ ಒಂದಷ್ಟು ಚಿಲ್ಲರೆ ನಾಣ್ಯಗಳಿದ್ದವು, ಪ್ರತಿ ಯಾತ್ರಾರ್ಥಿಗೆ ಇಪ್ಪತ್ತು ಕೊಪೆಕ್‌ಗಳಂತೆ ಕೊಟ್ಟ.

"ಆದ್ರೆ ನಾನು ಕೊಟ್ಟದ್ದು ಮೇಣದ ಬತ್ತಿ ಹಚ್ಚಿಡಕ್ಕಲ್ಲ, ನನ್ನ ಹಾಗೆ ಟೀ ಕುಡಿಯೋಕ್ಕೆ. ಇಗೋ ಇದು ನಿಂಗೆ, ಯಜಮಾನಪ್ಪ" ಎಂದು ಕಸಾಟ್‌ಸ್ಕಿಯ ಬೆನ್ನು ತಟ್ಟಿದ.

"ದೇವರು ನಿಮಗೆ ಒಳ್ಳೆಯದನ್ನು ಮಾಡಲಿ" ಎಂದ ಕಸಾಟ್‌ಸ್ಕಿ, ತನ್ನ ತಲೆಯ ಮೇಲಿಂದ ತೆಗೆದಿದ್ದ ಟೋಪಿಯನ್ನು ಮತ್ತೆ ಇರಿಸಿಕೊಳ್ಳದೆ, ಬಕ್ಕ ತಲೆ ತೋರಿಸಿ ಬಾಗಿ.

ಈ ಭೇಟಿಯು ಅವನಿಗೆ ನಿಜವಾದ ಸಂತೋಷವನ್ನು ತಂದಿದ್ದಿತು. ಯಾಕೆಂದರೆ ಜನ ತನ್ನ ಬಗ್ಗೆ ಹೊಂದಿದ್ದ ಅಭಿಪ್ರಾಯವನ್ನು ತಿರಸ್ಕರಿಸಿ, ಅತ್ಯಂತ ಸರಳವಾದುದನ್ನು ಮಾಡಿದ್ದ, ತನಗೆ ನೀಡಿದ್ದ ಇಪ್ಪತ್ತು ಕೊಪೆಕ್‌ಗಳನ್ನು ವಿನಯದಿಂದ ಸ್ವೀಕರಿಸಿ ಅದನ್ನು ತನ್ನ ಸಂಗಾತಿಯಾದ ಒಬ್ಬ ಕುರುಡ ಭಿಕ್ಷುಕನಿಗೆ ಕೊಟ್ಟುಬಿಟ್ಟಿದ್ದ. ಜನ ತನ್ನ ಬಗ್ಗೆ ಹೊಂದಿದ್ದ ಅಭಿಪ್ರಾಯಗಳಿಗೆ ಪ್ರಾಮುಖ್ಯ ನೀಡದೆ ಹೋದಷ್ಟೂ ತನ್ನಲ್ಲಿನ ದೇವರನ್ನು ಅವನು ಅನುಭವಿಸಬಲ್ಲವನಾಗಿದ್ದ.

ಎಂಟು ತಿಂಗಳ ಕಾಲ ಕಸಾಟ್‌ಸ್ಕಿ ಈ ಬಗೆಯಲ್ಲಿ ಸುತ್ತಾಡಿದ, ಅವನ ಬಳಿ ಪಾಸ್‌ಪೋರ್ಟ್ ಇಲ್ಲದ ಕಾರಣದಿಂದಾಗಿ ಒಂಬತ್ತನೇ ತಿಂಗಳಲ್ಲಿ ಅವನನ್ನು ಬಂಧಿಸಲಾಯಿತು. ಇದು ನಡೆದದ್ದು ಇತರ ಕೆಲವು ಸಂಗಾತಿಗಳೊಡನೆ ಯಾವುದೋ ಒಂದು ಪ್ರಾಂತೀಯ ನಗರದಲ್ಲಿ ತಂಗಿ ರಾತ್ರಿಯನ್ನು ಕಳೆದಿದ್ದ ಕಡೆ. ಅವನನ್ನು ಪೊಲೀಸ್ ಠಾಣೆಗೆ ಕರೆದೊಯ್ದು ಪಾಸ್‌ಪೋರ್ಟ್ ಎಲ್ಲಿ ಎಂದು ವಿಚಾರಿಸಿದಾಗ, ತನ್ನ ಬಳಿ ಪಾಸ್‌ಪೋರ್ಟ್ ಇಲ್ಲವೆಂದೂ, ತಾನೊಬ್ಬ ದೇವರ ಸೇವಕನೆಂದೂ ಅವನು ಉತ್ತರಿಸಿದ. ಅವನನ್ನು ಅನಧಿಕೃತ ಸಂಚಾರಿಯೆಂದು ಪರಿಗಣಿಸಿ ಶಿಕ್ಷೆ ವಿಧಿಸಿ ಸೈಬೀರಿಯಕ್ಕೆ ಕಳಿಸಲಾಯಿತು.

ಸೈಬೀರಿಯದಲ್ಲಿ ಅವನೀಗ ಒಬ್ಬ ಹಣವಂತ ರೈತನ ಕೂಲಿಯ ಆಳಾಗಿ, ಕೈತೋಟದಲ್ಲೆ ಕೆಲಸ ಮಾಡುತ್ತ, ಮಕ್ಕಳಿಗೆ ಪಾಠ ಹೇಳುತ್ತ, ರೋಗಿಗಳ ಸೇವೆಗೈಯುತ್ತ ನೆಲೆಸಿದ್ದಾನೆ.

(1898)

ಜಗತ್ತಿನ ಎಲ್ಲ ಕಾಲದ ಅತ್ಯಂತ ಮೇಧಾವಿ ಕಥನಕಾರರಲ್ಲಿ ಮುಖ್ಯನೆನಿಸಿದ ಲಿಯೋ ಟಾಲ್‌ಸ್ಟಾಯ್‌ನ ನಾಲ್ಕು ನೀಳ್ಗತೆಗಳ ಅನುವಾದ ಈ ಸಂಕಲನದಲ್ಲಿದೆ: 'ಸಂಸಾರ ಸುಖ' (1859), 'ಕ್ರೂಸರ್ ಸೊನಾಟ' (1889), 'ಯಜಮಾನ-ಆಳು' (1895) ಮತ್ತು 'ಫ಼ಾದರ್ ಸರ್ಜಿಯಸ್' (1898). ಮೊದಲೆರಡು ಕತೆಗಳು ಮದುವೆಯಾದ ಗಂಡು-ಹೆಣ್ಣುಗಳ ಹೊಂದಾಣಿಕೆಗೆ ಸಂಬಂಧಪಟ್ಟಿದ್ದರೆ, ಉಳಿದೆರಡು ಬದುಕಿನ ಮೂಲ ಮೌಲ್ಯಗಳನ್ನು ಕುರಿತು ಶೋಧಿಸುವಂಥವು. 'ಸಂಸಾರ ಸುಖ'ವನ್ನು ಟಾಲ್‌ಸ್ಟಾಯ್ ತನ್ನ ಮದುವೆಗೆ ಮುಂಚೆ ರಚಿಸಿದ್ದರೂ, ಗಂಡ-ಹೆಂಡಿರ ಪರಸ್ಪರರ ಅರಿವಿನ ಸೂಕ್ಷ್ಮಗಳ ವಿವಿಧ ನೆಲೆಗಳನ್ನು ಚಿತ್ರಿಸುತ್ತದೆ. 'ಕ್ರೂಸರ್ ಸೊನಾಟ' ರೈಲಿನಲ್ಲಿ ವಿವಿಧ ಪ್ರಯಾಣಿಕರ ನಡುವೆ ನಡೆಯುತ್ತಿದ್ದ ಗಂಡು ಹೆಣ್ಣುಗಳ ಬಗೆಗಿನ ಚರ್ಚೆಯ ಹಿನ್ನೆಲೆಯಲ್ಲಿ ಮೂಡಿಬಂದಿರುವ ಕತೆ. ಪ್ರಾಯಶಃ ಟಾಲ್‌ಸ್ಟಾಯ್ ಪ್ರಕಾರ ನಂಬಿಕೆಯೇ ವೈವಾಹಿಕ ಜೀವನದ ಸುಖಕ್ಕೆ ನೆಲೆಗಟ್ಟು; ಅದಿಲ್ಲದೆ ಸಂಶಯ ತಲೆದೋರಿದರೆ ಅದು ಹುತ್ತದಂತೆ ನಾನಾ ಹಾವುಗಳಿಗೆ ಎಡೆಗೊಟ್ಟು ದುರಂತವನ್ನು ಕಾಣುತ್ತದೆ ಎಂಬುದನ್ನು ಈ ಕಥಾನಕ ಸೂಚಿಸುತ್ತದೆ. 'ಯಜಮಾನ-ಆಳು' ಮನಕಲಕುವ ಕತೆ. ಪೇರಾಸೆಯ ಸಾಹುಕಾರ ತನ್ನ ಕೈಬಿಟ್ಟು ಹೋಗಬಹುದಾದ ಜಮೀನು ಖರೀದಿಗೆಂದು ವಿಪರೀತ ಹಿಮ ಬೀಳುವ ಕಾಲದಲ್ಲಿ ಅನತಿ ದೂರದ ಪಟ್ಟಣಕ್ಕೆ ಕುದುರೆ ಎಳೆಯುವ ಸ್ಲೆಜ್‌ನಲ್ಲಿ ತನ್ನ ಆಳಿನೊಡನೆ ಹೊರಟು, ರಾತ್ರಿ ದಾರಿ ತಪ್ಪಿ, ಮೈ ಸೆಡೆತು ಹೋಗುವಂಥ ಚಳಿಯಲ್ಲಿ ಹಿಮಗಾಡಿನಲ್ಲಿ ಬದುಕುಳಿಯಲು ಹೆಣಗಾಡುತ್ತಲೇ ತಡವಾಗಿಯಾದರೂ ತನಗಿಂತ ಆಳನ್ನು ಬದುಕಿಸಲು ಪ್ರಯತ್ನಿಸಿ ತಾನು ಸಾವಿಗೀಡಾಗುತ್ತಾನೆ. ಪಡೆಯುವುದಕ್ಕಿಂತ ನೀಡುವುದರಲ್ಲಿ ಬದುಕಿನ ಧನ್ಯತೆಯಿದೆ ಎಂಬ ದರ್ಶನ ಇಲ್ಲಿದ್ದಂತಿದೆ. ನಾಲ್ಕನೆಯ ಕತೆ 'ಫ಼ಾದರ್ ಸರ್ಜಿಯಸ್' ಮಾನವನ ಸಹಜ ಸ್ವಭಾವವು ಅವನ ಸಂಕಲ್ಪಕ್ಕಿಂತ ಆಳವಾದುದು ಎಂಬುದನ್ನು ಮನಂಬುಗುವಂತೆ ಕಥಿಸುತ್ತದೆ. ತಾನು ಮದುವೆಯಾಗಲಿರುವ ಹುಡುಗಿಯ ನಡತೆಯಿಂದ ನೊಂದ ಯುವಕ ವೈರಾಗ್ಯದಿಂದ ಧರ್ಮಬೋಧಕನಾಗಿ ನಿಷ್ಠೆಯಿಂದ ಕಾರ್ಯ ನಿರ್ವಹಿಸಿ ಬಹು ಪ್ರಸಿದ್ಧನೆನಿಸಿದರೂ, ಸಹಜ ಪ್ರವೃತ್ತಿಗೆ ಬಲಿಯಾದ ಕ್ಷಣದಲ್ಲಿ ತನ್ನಿಂದ ಜನರಿಗೆ ವಂಚನೆಯಾಯಿತೆಂಬ ಭಾವನೆಯಿಂದ ಯಾರ ಕಣ್ಣಿಗೂ ಬೀಳದಂತೆ ಹೊರಬಂದು, ವಯಸ್ಸಾದರೂ ತನ್ನ ಸಂಸಾರದ ಒಳಿತಿಗಾಗಿ ದುಡಿದು ಜೀವ ತೇಯುತ್ತಿದ್ದ ಬಂಧುವೊಬ್ಬಳಲ್ಲಿ ಬದುಕಬೇಕಾದ ರೀತಿಯನ್ನು ಕಂಡುಕೊಂಡು, ಕೊನೆಗೆ ಸೈಬೀರಿಯದ ಹೊಲದಲ್ಲಿ ಅಜ್ಞಾತನಾಗಿ ದುಡಿಯುತ್ತ ನೆಮ್ಮದಿಯನ್ನು ಕಾಣುತ್ತಾನೆ. ಕತೆ ಹೃದಯವನ್ನು ಹಿಂಡುವಷ್ಟು ಪರಿಣಾಮಕಾರಿಯಾಗಿದೆ.

ಚಿತ್ರ: ಅಂಜಾರಿ

ವಸಂತ ಎಂಟರ್‌ಪ್ರೈಸಸ್
ನಂ. 265, ಬೇಸ್‌ಮೆಂಟ್, 3ನೇ ಮುಖ್ಯರಸ್ತೆ
ಚಾಮರಾಜಪೇಟೆ, ಬೆಂಗಳೂರು – 560 018.

ನೀಳ್ಗತೆಗಳು
Novellas
ಬೆಲೆ : ₹ 220